# ಜಯರೇಖೆಗಳು: ಸಾಂಸ್ಕೃತಿಕ ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು

ಸ್ಮಿತಾ. ಡಿ

ಮಾರ್ಗದರ್ಶಕರು

ಡಾ|| ಕಲವೀರ ಮನ್ವಾಚಾರ

ಪ್ರಾಧ್ಯಾಪಕರು




ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - 583276



2019

# ಜಯರೇಖೆಗಳು: ಸಾಂಸ್ಕೃತಿಕ ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

**ಸ್ಮಿತಾ. ಡಿ**

ಮಾರ್ಗದರ್ಶಕರು

**ಡಾ॥ ಕಲವೀರ ಮನ್ವಾಚಾರ**

ಪ್ರಾಧ್ಯಾಪಕರು





ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ – ೫೮೩೨೭೬



೨೦೧೯

## ಮಾರ್ಗದರ್ಶಕರ ದೃಢೀಕರಣ ಪ್ರಮಾಣಪತ್ರ

**ಜಯರೇಖೆಗಳು: ಸಾಂಸ್ಕೃತಿಕ ಸಂಕಥನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಸ್ಮಿತಾ.ಡಿ ಇವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ ಪದವಿಗಾಗಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು

(ಡಾ. ಕಲವೀರ ಮನ್ವಾಚಾರ)
ಪ್ರಾಧ್ಯಾಪಕರು
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ

ದಿನಾಂಕ: 19.08.2019

## ಸಂಶೋಧಕರ ಪ್ರಮಾಣಪತ್ರ

**ಜಯರೇಖೆಗಳು: ಸಾಂಸ್ಕೃತಿಕ ಸಂಕಥನ** ಎಂಬ ವಿಷಯವನ್ನು ಕುರಿತ ಮಹಾಪ್ರಬಂಧವನ್ನು ಡಾ॥ ಕಲವೀರ ಮನ್ವಾಚಾರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸ್ಥಳ :** ವಿದ್ಯಾರಣ್ಯ
**ದಿನಾಂಕ :** 19.08.2019

(ಸ್ಮಿತಾ. ಡಿ)
ಸಂಶೋಧನಾ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

## ಜಯರೇಖೆಗಳು: ಸಾಂಸ್ಕೃತಿಕ ಸಂಕಥನ

## ಪರಿವಿಡಿ

******

## ಸಂಕ್ಷಿಪ್ತಗಳ ಸೂಚಿ

**ಎ.ಇಂ :** ಎಪಿಗ್ರಾಫಿಯಾ ಇಂಡಿಕಾ

**ಎ.ಕ :** ಎಪಿಗ್ರಾಫಿಯಾ ಕರ್ಣಾಟಿಕಾ/ ಎಪಿಗ್ರಾಫಿಯ ಕರ್ನಾಟಿಕ

**ಎಂಎಆರ್ :** ಮೈಸೂರು ಪುರಾತತ್ತ್ವ ಇಲಾಖೆಯ ವಾರ್ಷಿಕ ವರದಿ

**ಎಸ್.ಐ.ಐ :** ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್

**ಕ.ವಿ.ವಿ.ಶಾ.ಸಂ :** ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಹಂಪಿ

**ARE :** Annual Report on Epigraphy

**JBORS :** ಜರ್ನಲ್ಸ್ ಆಫ್ ದಿ ಬಿಹಾರ್ ಅಂಡ್ ಒರಿಸ್ಸಾ ರಿಸರ್ಚ್ ಸೊಸೈಟಿ

**JAHRS :** ಜರ್ನಲ್ಸ್ ಆಫ್ ದಿ ಆಂಧ್ರ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿ, ಕಾಕಿನಾಡ

# ಅಧ್ಯಾಯ-೧

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೨.೧ ಕಾಲ ವ್ಯಾಪ್ತಿ

೧.೨.೨ ಆಕರ ವ್ಯಾಪ್ತಿ

೧.೩ ಅಧ್ಯಯನದಲ್ಲಿ ಎದುರಾದ ಸವಾಲುಗಳು ಮತ್ತು ಪರಿಹರಿಸಿಕೊಂಡ ಬಗೆ

೧.೪ ಅಧ್ಯಯನದ ವೈಧಾನಿಕತೆ

೧.೫ ಅಧ್ಯಯನದ ಮಹತ್ವ

೧.೬ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

## ಅಧ್ಯಾಯ-೧

### ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

ಕರ್ನಾಟಕದಲ್ಲಿ ದೊರೆಯುವ ವೈವಿಧ್ಯಮಯ ಶಾಸನಗಳ ಬಗ್ಗೆ ಬಹುಮುಖ ದೃಷ್ಟಿಕೋನಗಳಿಂದ ಅಧ್ಯಯನಗಳನ್ನು ನಡೆಸಲಾಗಿದೆ ಹಾಗೂ ಆ ಪ್ರಕ್ರಿಯೆ ಇನ್ನೂ ಮುಂದುವರಿಯುತ್ತಲೇ ಇದೆ. ಆದರೂ, ಇನ್ನೂ ಹಲವಾರು ಪ್ರಕಾರದ ಶಾಸನಗಳು ಅಧ್ಯಯನಗಳ ವ್ಯಾಪ್ತಿಯಿಂದ ದೂರವೇ ಉಳಿದಿವೆ. ಕರ್ನಾಟಕದ ಮಧ್ಯಕಾಲೀನ ಹಾಗೂ ಮಧ್ಯಕಾಲೀನೋತ್ತರ ಸಮುದಾಯಗಳ ಜೀವನ ವಿಧಾನವನ್ನು ಗರ್ಭೀಕರಿಸಿಕೊಂಡಿರುವ ಜಯರೇಖೆ ಶಾಸನಗಳು ಅಂಥ ಉಪೇಕ್ಷೆಗೆ ಒಳಗಾದ ವಿಷಯವಾಗಿದೆ. ನಾವು ಸಾಹಿತ್ಯದಲ್ಲಿ ಮಾತ್ರ ಶಿಷ್ಟ-ಪರಿಶಿಷ್ಟ, ದೇಸೀ-ಮಾರ್ಗದ ಪ್ರಭೇಧಗಳನ್ನು ಗುರುತಿಸುತ್ತೇವೆ. ಆದರೆ, ಶಾಸನಗಳಲ್ಲೂ ಅದೇ ರೀತಿಯ ಪ್ರವೃತ್ತಿ ಇರುತ್ತದೆಂಬ ಅಂಶವನ್ನು ಇಲ್ಲಿಯವರೆಗೆ ಗುರುತಿಸುವ ಪ್ರಯತ್ನಗಳು ನಡೆದಿರುವುದಿಲ್ಲ. ಶಾಸನಗಳಲ್ಲೂ ಸಹ ದೇಸಿ ಪ್ರಜ್ಞೆ ಮತ್ತು ಮಾರ್ಗಪ್ರಜ್ಞೆ ಪ್ರಕಟಗೊಂಡಿರುವುದನ್ನು ಗುರುತಿಸಬಹುದಾಗಿದೆ. ರಾಜನಿಂದ, ರಾಜನ ಆಸ್ಥಾನದಿಂದ, ಪಂಡಿತಮಂಡಳಿಗಳಿಂದ, ವಂದಿ-ಮಾಗಧರಿಂದ ಬರೆಯಲ್ಪಟ್ಟ ಮತ್ತು ಬರೆಸಲ್ಪಟ್ಟ ಶಾಸನಗಳು ಶಿಷ್ಟ ರೂಪದಲ್ಲಿ, ಮಾರ್ಗ ಪ್ರಜ್ಞೆಯಿಂದ ರೂಪುಗೊಂಡರೆ, ಅಂಚಿಗೆ ಸರಿಸಲ್ಪಟ್ಟ ಸಾಮಾನ್ಯ ಸಮುದಾಯಗಳ ಒಡಲಾಳದ ದನಿಯಾಗಿ ದಾಖಲುಗೊಂಡ ಶಾಸನಗಳು ಪರಿಶಿಷ್ಟ ರೂಪದಲ್ಲಿ ದೇಸೀ ಪ್ರಜ್ಞೆಯನ್ನು ಅಭಿವ್ಯಕ್ತಿಸುವ ಮಾದರಿಗಳಾಗಿವೆ. ರಾಜನಿಂದ ಅಥವಾ ಪ್ರಭುತ್ವದಿಂದ ಅಥವಾ ಪ್ರಭುತ್ವದ ಪ್ರತಿನಿಧಿಗಳ ಧ್ವನಿಯಾಗಿ ರಚನೆಗೊಳ್ಳುವ ಶಾಸನಗಳಲ್ಲಿ ಒಂದು ಕ್ರಮಬದ್ಧತೆ ಇರುತ್ತದೆ. ಯಥಾರೂಪತೆ ಇರುತ್ತದೆ. ಆದರೆ ಜನಪದರ ಶಾಸನಗಳಲ್ಲಿ ಆ ಕ್ರಮಬದ್ಧತೆ, ಯಥಾರೂಪತೆ ಗೈರು ಹಾಜರಾಗಿರುತ್ತದೆ. ಪ್ರಭುತ್ವದ ಆದೇಶವಿಲ್ಲದೆ, ನಿಯಂತ್ರಣವಿಲ್ಲದೆ ಜನಪದರಿಂದಲೇ ರೂಪುಗೊಂಡಿರುವ ಶಾಸನಗಳು ಇವಾಗಿವೆ. ಆದರೂ ಪ್ರಭುತ್ವದ ಅಂಕೆಗೊಳಪಡದಿದ್ದರೂ, ಪ್ರಭುತ್ವದ ಅಧೀನದಲ್ಲಿ ಲಭ್ಯವಾಗಬಹುದಾದ ಲಾಭ/ಪ್ರಯೋಜನಗಳನ್ನು ಪಡೆದುಕೊಳ್ಳುವ ಆಶಯವನ್ನು ಈ ಶಾಸನಗಳು ಹೊಂದಿವೆ ಎಂಬುದೂ ಸಹ ಸತ್ಯ.

ಈವರೆಗಿನ ಶಾಸನಾಧಾರಿತ ಅಧ್ಯಯನಗಳು ಮೊದಲ ಶಿಷ್ಟ ಪ್ರವರ್ಗದ ಶಾಸನಗಳನ್ನು ಆಧರಿಸಿಯೇ ನಡೆದಿರುವುದು ಸ್ಪಷ್ಟವಾಗಿದೆ. ಆದರೆ, ಇತರೆ ಶಾಸನಗಳನ್ನು ಅವು ಐತಿಹಾಸಿಕ ದಾಖಲೆಗಳೆಂಬ ಅಂಶವನ್ನು ಪರಿಗಣನೆಗೆ ತೆಗೆದುಕೊಳ್ಳದೇ ಇರುವಾಗ, ಇನ್ನು ಅವುಗಳ ಅಧ್ಯಯನವೆಂಬುದು ದೂರದ ಮಾತಾಗಿಯೇ ಉಳಿದಿದೆ.

ಮೂಲ ಶಿಷ್ಟ ಶಾಸನಗಳನ್ನು ಸಂಗ್ರಹ ಮಾಡಿ ಸಂಪಾದಿಸಿರುವ ಮಟ್ಟಿಗೆ ಇಂಥ ಶಾಸನಗಳನ್ನು ಸಂಪಾದಿಸುವ ಪ್ರಯತ್ನಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಆದರೆ ಇತ್ತೀಚೆಗೆ ಅಂಥ ಪ್ರಯತ್ನಗಳು ನಡೆಯುತ್ತಿರುವುದು ಆಶಾದಾಯಕ ಬೆಳವಣಿಗೆಯಾಗಿದೆ. ಹಿಂದೆ ಶಾಸನಗಳ ಸಂಪಾದನಾ ಕಾರ್ಯ ಕೈಗೊಂಡಾಗ ಎಷ್ಟೋ ಸಂದರ್ಭಗಳಲ್ಲಿ ಜಯರೇಖೆಗಳನ್ನು ಶಾಸನಗಳೇ ಅಲ್ಲವೆಂದು ನಿರ್ಧರಿಸಿ ಕೈಬಿಡಲಾಗಿತ್ತು. ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳನ್ನು ಪರಿಷ್ಕರಿಸಿ ಸಂಪಾದಿಸುವ ಸಂದರ್ಭದಲ್ಲಿ ಪರಿಷ್ಕೃತ ಸಂಪುಟಗಳಲ್ಲಿ ಅವುಗಳನ್ನು ಶಾಸನಗಳಲ್ಲವೆಂದು ಕೈಬಿಟ್ಟಿರುವ ಉದಾಹರಣೆಗಳಿವೆ.

ಜಯರೇಖೆ ಶಾಸನಗಳು ಕರ್ನಾಟಕದ ಒಳ ಹಾಗೂ ತಳ ಸಮುದಾಯಗಳ ಸಾಂಸ್ಕೃತಿಕ ಅನನ್ಯತೆಯ ದ್ಯೋತಕಗಳಾಗಿವೆ. ಸಮುದಾಯಗಳ ಒಳಮಿಡಿತಗಳನ್ನು, ಸಾಂಸ್ಕೃತಿಕ ಸಂಘರ್ಷಗಳನ್ನು, ಆರ್ಥಿಕ ಪಲ್ಲಟಗಳನ್ನು ಇವುಗಳಷ್ಟು ಸಮರ್ಥವಾಗಿ ಇತರ ಶಾಸನಗಳು ಬಿಂಬಿಸಲಾರವು. ಶಾಸನ ಸಂಬಂಧಿ ಅಧ್ಯಯನಗಳನ್ನು ಪರಿಶೀಲಿಸಿದಾಗ, ಈವರೆಗೂ ಶಾಸನಗಳನ್ನು ಏಕರೇಖಾತ್ಮಕವಾಗಿ, ಒಂದೇ ಸರಳರೇಖೆಯಲ್ಲಿರಿಸಿ ಅಧ್ಯಯನ ಮಾಡಿರುವುದನ್ನು ಕಾಣುತ್ತೇವೆ. ಹೊಸ ಹೊಸ ಜಯರೇಖೆಗಳು ಶೋಧನೆಯಾದಾಗ ಅವು ಪ್ರಕಟಗೊಂಡಿರುವ ಲೇಖನಗಳಲ್ಲಿ ಅಥವಾ ಇತರೆ ಅಧ್ಯಯನಗಳಲ್ಲಿ ಪ್ರಾಸಂಗಿಕವಾಗಿ ಧರ್ಮ, ಧಾರ್ಮಿಕ ಸಂಘರ್ಷದಂತಹ ಅಂಶಗಳ ಹಿನ್ನೆಲೆಯಲ್ಲಿ ಮಾತ್ರ ಜಯರೇಖೆ ಶಾಸನಗಳ ಅಧ್ಯಯನ ನಡೆದಿದೆ. ಆದರೆ, ಇಂಥ ಅಧ್ಯಯನಗಳು ಅದಕ್ಕೆ ಕಾರಣವಾದ ಅಥವಾ ಪೂರಕವಾದ ಅಂಶಗಳ ಗೊಡವೆಗೆ ಹೋಗದೆ ವಿಷಯವನ್ನು ತೇಲಿಸಿಕೊಂಡು ಸರಳೀಕರಿಸಿಕೊಂಡು ಹೋಗಿವೆ. ಇನ್ನು ಶಾಸನಗಳ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಅಧ್ಯಯನಗಳೆಂದು ಹೇಳಿಕೊಂಡ ಬಹುತೇಕ ಅಧ್ಯಯನಗಳೂ ಸಹ ರಾಜಕೀಯ ಪಾತಳಿಯಲ್ಲೇ ನಡೆದಿರುವುದನ್ನು ಕಾಣಬಹುದು.

ಹನ್ನೆರಡು–ಹದಿಮೂರನೆಯ ಶತಮಾನದವರೆಗಿದ್ದ ಧಾರ್ಮಿಕ ಪಲ್ಲಟಗಳು ಹದಿನೈದನೆಯ ಶತಮಾನದ ವೇಳೆಗೆ ಸಾಮಾಜಿಕ ಪಲ್ಲಟಗಳಿಗೆ, ಕೆಳಸ್ತರದ ಸಮಾಜದ ಚಲನಶೀಲತೆಗೆ ದಾರಿಮಾಡಿಕೊಡುತ್ತವೆ. ಆದರೆ, ಇಂಥ ಪಲ್ಲಟಗಳಿಗೆ ಕಾರಣವಾದ ಅಂಶಗಳ ಮೌಲ್ಯೀಕರಣ ನಡೆದಿಲ್ಲ. ಬಹುಶಃ ಅಲ್ಲಲ್ಲಿ ಚದುರಿಹೋಗಿರುವ ಆಕರಗಳ ಎದ್ದು ಕಾಣುವ ಸಂಖ್ಯಾ ಬಾಹುಳ್ಯದ ಕೊರೆತೆಯೇ ಇಂಥ ಅಧ್ಯಯನಗಳ ಅವಜ್ಞತೆಗೆ ಕಾರಣವಿರಬಹುದು.

ಪ್ರಸ್ತುತ ಅಧ್ಯಯನದಲ್ಲಿ, ಇತರೆ ಶಾಸನಗಳ ಮೂಲಕ ನಡೆದ ಅಧ್ಯಯನಗಳಲ್ಲಿ ಕಟ್ಟಿಕೊಡಲಾಗದಂತಹ ಕರ್ನಾಟಕದ ಮಧ್ಯಕಾಲೀನ ಸಮಾಜದ ಚಿತ್ರಣವನ್ನು ಜಯರೇಖೆ ಶಾಸನಗಳ ಮೂಲಕ ಹೊಸ ದೃಷ್ಟಿಕೋನದೊಂದಿಗೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

### ೧.೧ ಅಧ್ಯಯನದ ಉದ್ದೇಶ

ಶಾಸನ ಪ್ರಕಾರಗಳಲ್ಲಿ ವಿಶಿಷ್ಟವಾದ ಜಯರೇಖೆಗಳ ಅಧ್ಯಯನವನ್ನು ಹಲವಾರು ಉದ್ದೇಶಗಳನ್ನಿಟ್ಟುಕೊಂಡು ನಡೆಸಲಾಗಿದೆ.

ಕನ್ನಡ ಶಾಸನ ಕ್ಷೇತ್ರದ ಅಧ್ಯಯನದಲ್ಲಿ ಜಯರೇಖೆಗಳ ಕುರಿತ ಈ ಅಧ್ಯಯನ ಪ್ರಪ್ರಥಮ ಪ್ರಯತ್ನವಾಗಿದೆ. ಈವರೆಗೆ ಇವುಗಳ ಬಗ್ಗೆ ನಡೆದಿರಬಹುದಾದಂತಹ ಚರ್ಚೆಗಳು ಮತ್ತು ಅಧ್ಯಯನಗಳು, ಅವುಗಳ ಸ್ವರೂಪ, ಮಹತ್ವಗಳ ಬಗ್ಗೆ ವಿಶ್ಲೇಷಣಾತ್ಮಕವಾಗಿ ನಿರೂಪಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದು.

ಜಯರೇಖೆಗಳು ಮಧ್ಯಕಾಲೀನ ಹಾಗೂ ಮಧ್ಯಕಾಲೀನೋತ್ತರ ಸಮುದಾಯಗಳು ಹಾಗೂ ಅವುಗಳ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಪಲ್ಲಟಗಳನ್ನು ಹಾಗೂ ಚಿಂತನೆಗಳನ್ನು ಕಾಲಾನುಕ್ರಮವಾಗಿ ಹಂತ ಹಂತವಾಗಿ ಅನಾವರಣಗೊಳಿಸುವ ದಿಕ್ಸೂಚಿಗಳಾಗಿವೆ. ಇವುಗಳ ಬಗ್ಗೆ ಈವರೆಗೆ ಅಧ್ಯಯನವನ್ನು ನಡೆಸಿದ ನಿದರ್ಶನಗಳು ಇಲ್ಲ. ಕೇವಲ 'ವಾದ-ವಿವಾದಗಳಲ್ಲಿ ಗೆದ್ದವರಿಗೆ ನೀಡುವ ಪತ್ರಗಳೆಂಬ' ಸರಳೀಕೃತ ತಾತ್ವಿಕ ವ್ಯಾಖ್ಯಾನಕ್ಕೆ ಒಳಗುಮಾಡಿ ಅಷ್ಟಕ್ಕೆ ಅವುಗಳ ಅಧ್ಯಯನಕ್ಕೆ ವಿರಾಮ ಹಾಕಲಾಗಿದೆ. ಇವುಗಳ ಬಗ್ಗೆ ಆಗಿರುವ ಕ್ವಚಿತ್ತಾದ ಚರ್ಚೆಗಳು ಸಹ ಕೇವಲ ಧಾರ್ಮಿಕ ಸಂಘರ್ಷದ ಪರಿಮಿತಿಯಲ್ಲೇ ನಡೆದಿವೆ.

ಕರ್ನಾಟಕದಲ್ಲಿ ಮೊಟ್ಟಮೊದಲ ಪ್ರಕಟಿತ ಜಯರೇಖೆ ಕ್ರಿ.ಶ. ಸುಮಾರು ೧೨೦೦ರ ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನವಾಗಿದೆ. ಇದಕ್ಕೆ ಮೊದಲು ಜಯರೇಖೆಗಳು ಕರ್ನಾಟಕದಲ್ಲಿ, ಹಾಗೆಯೇ ಭಾರತದಲ್ಲಿ ಎಲ್ಲಿ, ಯಾವ ಹೆಸರಿನಲ್ಲಿ ಬಳಕೆಯಲ್ಲಿದ್ದವು? ಯಾವ ಸಂದರ್ಭದಲ್ಲಿ ಅವುಗಳನ್ನು ಬಳಸಲಾಗುತ್ತಿತ್ತು? ಎಂಬ ಬಗ್ಗೆ ವಿಶ್ಲೇಷಣೆ ನಡೆಸಿ, ಜಯರೇಖೆಗಳ ಬೀಜರೂಪಿ ಚಿಂತನೆಗಳ ಹುಡುಕಾಟ ನಡೆಸಲಾಗಿದೆ.

ಜಯರೇಖೆಗಳ ಸ್ವರೂಪವು ಇತರ ಶಾಸನಗಳ ಸ್ವರೂಪಕ್ಕಿಂತ ಹೇಗೆ ಭಿನ್ನವಾಗಿದೆ ಹಾಗೂ ವಿಶಿಷ್ಟವಾಗಿದೆ ಎಂಬ ಬಗ್ಗೆ ಪರಿಶೀಲಿಸುವುದು ಸಮುಚಿತ. ಶಾಸನದ ಇತರೆ ಪ್ರವರ್ಗಗಳ ಅಧ್ಯಯನಗಳ ನಡುವೆ ಜಯರೇಖೆಗಳ ಅಧ್ಯಯನವನ್ನು ಗ್ರಹಿಸುವ ಮತ್ತು ಪರಿಭಾವಿಸುವ ವೈಧಾನಿಕತೆ ಯಾವ ರೀತಿಯಲ್ಲಿ ಭಿನ್ನವಾಗಿದೆ. ಇವುಗಳ ಕುರಿತಂತೆ ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯಗಳು, ಧೋರಣೆಗಳೇನು ಎಂಬ ಸಂಗತಿಗಳನ್ನು ಕುರಿತು ಚರ್ಚಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಜಯಪತ್ರಗಳನ್ನು ಏಕರೂಪತೆಯ ಉದ್ದೇಶಕ್ಕಾಗಿ ಜಯರೇಖೆಗಳೆಂದು ಕರೆಯಲಾಗಿದ್ದರೂ, ಶಾಸನಗಳಲ್ಲಿ ಅವು ಭಿನ್ನ ಭಿನ್ನ ಹೆಸರುಗಳಿಂದ  ಎಂದರೆ, ಜಯಪತ್ರ, ಜಯರೇಖೆ, ಜಯಲೇಖೆ, ಜಯಪತ್ರಿಕಾ ಕ್ರಮ, ಕಂಚಿಪತ್ರ, ಕಂಚಿಶಾಸನ, ಚಪ್ಪೋಡು, ಮುಂತಾದ ಹೆಸರುಗಳಿಂದಲೂ ಇವು ಪರಿಚಿತವಾಗಿವೆ. ಹಾಗಿದ್ದರೆ ಇವೆಲ್ಲ ರಾಚನಿಕವಾಗಿ ಒಂದೇ ಸ್ವರೂಪದಲ್ಲಿವೆಯೇ ಅಥವಾ ಬೇರೆ ರೀತಿಯಲ್ಲಿವೆಯೇ ಎಂಬುದನ್ನು ಅವುಗಳ ವಿವಿಧ ಪರಿಕಲ್ಪನಾತ್ಮಕ ನೆಲೆಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಜಯರೇಖೆಗಳು ಕರ್ನಾಟಕದಲ್ಲಿ ಮೊದಲಿಗೆ ಹನ್ನೆರಡನೆಯ ಶತಮಾನದಲ್ಲಿ ಕಂಡುಬಂದರೂ, ಆನಂತರ ಕಾಣಿಸಿಕೊಳ್ಳುವುದು ಹದಿನೈದನೆಯ ಶತಮಾನದಲ್ಲಿ. ತರುವಾಯ ವಸಾಹತುಶಾಹಿ ಆಡಳಿತದ ಅವಧಿಯಲ್ಲಿ ಅತಿ ಹೆಚ್ಚಿನ ಸಂಖ್ಯೆಯ ಜಯರೇಖೆಗಳು ವಿಭಿನ್ನ ಹೆಸರುಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕರ್ನಾಟಕದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳಿಗೂ, ಜಯರೇಖೆಗಳು ವಿಭಿನ್ನ ಕಾಲಘಟ್ಟದಲ್ಲಿ, ಬೇರೆ ಬೇರೆ ಹೆಸರುಗಳಲ್ಲಿ ಮತ್ತು ಸನ್ನಿವೇಶಗಳಲ್ಲಿ ಕಾಣಿಸಿಕೊಳ್ಳುವುದಕ್ಕೂ

ಇರುವ ಸಂಬಂಧವನ್ನು ಕರ್ನಾಟಕದ ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಹಾಗೂ ನ್ಯಾಯಿಕ ಚರಿತ್ರೆಯ ಹಿನ್ನೆಲೆಯಲ್ಲಿ ಚರ್ಚಿಸುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿವೆ.

ವಿದ್ವಾಂಸರು ಈವರೆಗೆ ಜಯರೇಖೆಗಳನ್ನು ಕರ್ನಾಟಕದ ಧಾರ್ಮಿಕ ಚರಿತ್ರೆಯ ಹಿನ್ನೆಲೆಯಲ್ಲಿಯೇ ಚರ್ಚಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಜಯರೇಖೆಗಳು ಧಾರ್ಮಿಕ ಸಂಘರ್ಷಗಳ ಫಲಿತಗಳೇ ಅಥವಾ ಅವು ಸಮಾಜದ ಸಾಮುದಾಯಿಕ ವ್ಯವಸ್ಥೆಯಲ್ಲಿನ ಸಾಂಸ್ಕೃತಿಕ ಪಲ್ಲಟಗಳ ಪ್ರತಿಬಿಂಬಗಳೇ ಎಂಬ ಬಗ್ಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗುವುದು.

ಅಲ್ಲದೆ, ವಸಾಹತುಶಾಹಿ ಕಾಲಘಟ್ಟದಲ್ಲಿ ಕೈಫಿಯತ್ತು, ತಾಳೆಗರಿ, ತಾಮ್ರಪತ್ರ, ಕಾಗದದಲ್ಲಿ ಹೆಚ್ಚಿನ ಸಂಖ್ಯೆಯ ಜಯರೇಖೆಗಳು ಕಂಡುಬರುತ್ತವೆ. ಇವೆಲ್ಲವೂ ಕೂಟ ರಚನೆಗಳು ಅಥವಾ ಅಸಲಿಗೆ ಸರಿಯಾದ ನಕಲು ಆಗಿರುತ್ತವೆ. ಆದರೆ ಇವುಗಳ ರಚನೆಯ ಕಾಲವನ್ನು ಪ್ರಾಚೀನವೆಂಬಂತೆ ಬಿಂಬಿಸಲಾಗಿದೆ. ಈ ಅವಧಿಯಲ್ಲಿ ಇಂಥ ಕೃತಕ ಪತ್ರಗಳು ಹಿಂದೆ ಯಾವಾಗಲೋ ಆಳಿ ಆಗಿ ಹೋದ ರಾಜರುಗಳ ಮತ್ತು ಪ್ರಧಾನ ವ್ಯಕ್ತಿಗಳ ಹೆಸರಲ್ಲಿ ಅಚಾನಕ್ಕಾಗಿ ಒಮ್ಮೆಲೆ ಹುಟ್ಟಿಕೊಳ್ಳಲು ಕಾರಣಗಳೇನೆಂಬುದನ್ನು ಸಹ ಈ ಅಧ್ಯಯನದಲ್ಲಿ ವಿವೇಚಿಸಲಾಗಿದೆ.

ಜಯರೇಖೆಗಳಲ್ಲಿ ಅಡಕವಾದ ಪ್ರಧಾನ ವಿಷಯವೇ ಸಾಂಸ್ಥಿಕ ಕಲಹ ಹಾಗೂ ಪಣಕಟ್ಟಿನ ವ್ಯಾಜ್ಯಗಳು. ಕರ್ನಾಟಕದ ಧಾರ್ಮಿಕ ಇತಿಹಾಸದ ಕೇಂದ್ರ ಕಾಲಘಟ್ಟವಾದ ಹನ್ನೆರಡನೆಯ ಶತಮಾನ, ಧರ್ಮ-ಧರ್ಮಗಳ ನಡುವಿನ ಘರ್ಷಣೆಗೆ ಸಾಕ್ಷಿಪ್ರಜ್ಞೆಯಾಗಿ ನಿಂತಂತಹ ಕಾಲ. ಹದಿನಾರನೆಯ ಶತಮಾನ ಒಳ/ತಳ ಸಮುದಾಯಗಳ ನಡುವೆ ಪಣ ವ್ಯಾಜ್ಯಗಳಿಗೆ ಇಂಬುಕೊಟ್ಟಿದೆ. ಈ ಕಲಹಗಳು ವಿಭಿನ್ನ ಕಾಲಗಳಲ್ಲಿ ಭಿನ್ನವಾದ ಸ್ವರೂಪ ಹಾಗೂ ಆಯಾಮಗಳನ್ನು ಪಡೆದುಕೊಂಡಿವೆ. ಇದಕ್ಕೆ ಕಾರಣವಾದ ಅಂಶಗಳನ್ನು ವಿವೇಚಿಸುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

ಹತ್ತೊಂಬತ್ತು-ಇಪ್ಪತ್ತನೆಯ ಶತಮಾನದಲ್ಲಿ ಕಂಡು ಬರುವ ಜಯರೇಖೆಗಳ ಪ್ರಧಾನ ವಿಷಯ ಕುಲಕಥನಗಳು. ಹಿಂದೆಂದೂ ಸಾಹಿತ್ಯ ಮತ್ತು ಶಾಸನಗಳಲ್ಲಿ ಕಂಡುಬರದಂತಹ ರೀತಿಯಲ್ಲಿ ಜಾತಿ/ಕುಲಗಳ ಅನನ್ಯತೆಗಾಗಿ ನಡೆದಂತಹ ಕಾದಾಟ-ಮೇಲಾಟಗಳನ್ನು ಈ ಅವಧಿಯ ಜಯರೇಖೆಗಳಲ್ಲಿ ಗುರುತಿಸಬಹುದಾಗಿದೆ. ಈ ಎಲ್ಲ ಜಾತಿ/ಕುಲಕಲಹಗಳಲ್ಲಿ ಪ್ರಮುಖ ಪಾತ್ರ ವಹಿಸಿರುವುದು, ಕೆಳ/ತಳ ಸಮುದಾಯದ ಸಮಾಜಗಳು. ಸಮಾಜದ ಮೇಲ್ಪದರದ ಸಮುದಾಯ ಇಲ್ಲಿ ಬಹುತೇಕ ಗೈರುಹಾಜರಾಗಿದೆ ಅಥವಾ ಈ ಎಲ್ಲ ಸನ್ನಿವೇಶಗಳಿಗೆ ಸಾಕ್ಷಿಪ್ರಜ್ಞೆಯಾಗಿ ನಿಂತಿದೆ. ಈ ಎಲ್ಲ ಕಲಹಗಳ ಮೂಲ ತಿರುಳು ಕುಲದ ಅನನ್ಯತೆಗಾಗಿ, ಕುಲದ ಸಾಂಸ್ಥೀಕರಣಕ್ಕಾಗಿ, ಕುಲದ ದಾಖಲಾತಿಗಳಿಗಾಗಿ ನಡೆದಂತಹ ತಿಕ್ಕಾಟಗಳೇ ಆಗಿವೆ. ಈ ಸಂದರ್ಭದಲ್ಲಿ ಕುಲಕಥನಗಳು ಏಕಾಏಕಿಯಾಗಿ ರೂಪು ಗೊಳ್ಳುವುದಕ್ಕೆ ಕಾರಣವಾದ ಅಂಶಗಳನ್ನು ಇಲ್ಲಿ ಚಿಂತನೆಗೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

ಜಯರೇಖೆಗಳ ರಚನೆಯ ಮೂಲ, ಪ್ರಾಥಮಿಕ ಉದ್ದೇಶ ಮತ್ತು ಆಶಯವೇ ನ್ಯಾಯ ನಿರ್ಣಯವನ್ನು ದಾಖಲೀಕರಣ ಮಾಡುವುದು. ತಾತ್ವಿಕವಾಗಿ ಅಥವಾ ಭೌತಿಕವಾಗಿ ಪಣಗಳನ್ನೊಡ್ಡಿ ಗೆದ್ದಂತಹ ವ್ಯಕ್ತಿಗಳ ವಿಜಯವನ್ನು ದಾಖಲೀಕರಿಸುವುದೇ ಇವುಗಳ ಆರಂಭಿಕ ಆಶಯ. ನ್ಯಾಯ ನಿರ್ಣಯವನ್ನು ದಾಖಲಿಸುತ್ತಲೇ, ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಿಂದ ಎಪ್ಪತ್ತನೆಯ ಶತಮಾನದವರೆಗೆ ಅಸ್ತಿತ್ವದಲ್ಲಿದ್ದ ನ್ಯಾಯ ನಿರ್ಣಯದ ವಿಧಾನವನ್ನು ಸಹ ದಾಖಲಿಸುತ್ತಾ ಸಾಗುತ್ತವೆ. ನ್ಯಾಯ ನಿರ್ಣಯ ಪ್ರಕ್ರಿಯೆಯಲ್ಲಿ ಪಾತ್ರವಹಿಸುವ ವ್ಯಕ್ತಿಗಳು ಮತ್ತು ಕೇಂದ್ರಗಳು ಜಯರೇಖೆಗಳಲ್ಲಿ ವಿಶೇಷ ಗಮನ ಸೆಳೆಯುತ್ತವೆ. ಅದರಲ್ಲೂ ಪಣವ್ಯಾಜ್ಯಗಳ ಅಂತಿಮ ಕೇಂದ್ರವಾಗಿ ಕಂಚಿ ವಹಿಸುವ ಪಾತ್ರವನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಕಂಚಿ ಯಾವ ಸಂದರ್ಭದಲ್ಲಿ ಕೆಳ ಸಮುದಾಯಗಳ ನ್ಯಾಯಕೇಂದ್ರವಾಗಿ ಪರಿವರ್ತನೆಗೊಂಡಿತು? ಈ ಸಮುದಾಯಗಳಿಗೂ, ಕಂಚಿಗೂ ಇರುವಂತಹ ಸಂಬಂಧವೇನು ಎಂಬ ಬಗ್ಗೆ ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಅಲ್ಲದೆ ನ್ಯಾಯದ ವಿವಿಧ ಮಜಲುಗಳು, ಶಿಕ್ಷೆಯ ವಿಧಾನಗಳು ಮತ್ತು ಪ್ರಕಾರಗಳ ಬಗ್ಗೆಯೂ ಸಹ ಈ ಅಧ್ಯಯನದಲ್ಲಿ ವಿವರಿಸಲಾದೆ.

ಜಯರೇಖೆಗಳ ಮುಂದಿನ ಅಧ್ಯಯನಕ್ಕಿರುವ ಸಮಸ್ಯೆಗಳು ಯಾವುವು, ಅವುಗಳ ಸ್ವರೂಪಗಳೇನು, ತತ್ಪರಿಣಾಮವಾಗಿ ಜಯರೇಖೆಗಳ ಮುಂದಿನ ಅಧ್ಯಯನಕ್ಕೆ ಎದುರಾಗುವ ತೊಡಕುಗಳೇನು? ಇವುಗಳಿಗೆ ಸೂಚಿಸಬಹುದಾದ ಸಂಭವನೀಯ ಪರಿಹಾರಗಳೇನಾದರೂ ಇವೆಯೇ? ಸಮಕಾಲೀನ ಸಾಹಿತ್ಯ ಕೃತಿಗಳಲ್ಲಿ ರಾಚನಿಕವಾಗಿ ಜಯರೇಖೆಯಂತಿರುವ ವಿಷಯವನ್ನು ಶಾಸನಕ್ಕೆ ಆಕರವಾಗಿ ಪರಿಗ್ರಹಿಸಬಹುದೇ ಎಂಬುದು ಸವಾಲಾಗಿದೆ. ಹಾಗಿದ್ದರೆ ಸಾಹಿತ್ಯವನ್ನು ಶಾಸನಕ್ಕೆ ಆನುಷಂಗಿಕವಾಗಿಯಲ್ಲದೆ ನೇರ ಆಕರವನ್ನಾಗಿ ಬಳಸಿಕೊಳ್ಳಬಹುದೇ? ಎಂಬಂತಹ ಸಮಸ್ಯೆಗಳನ್ನು ಚರ್ಚಿಸುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ.

**'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ'** ಎಂಬ ವಿಷಯ ಕುರಿತ ಈ ಸಂಶೋಧನಾತ್ಮಕ ಅಧ್ಯಯನದಿಂದ ಕಂಡುಕೊಂಡ ಪ್ರಧಾನ ಫಲಿತಗಳನ್ನು ನೀಡಲಾಗಿದೆ. ಈ ಅಧ್ಯಯನಕ್ಕಾಗಿ ಹಾಕಿಕೊಂಡ ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚೆಗಳ ಮೂಲಕ ಮಥನವಾದ ಹೊಸ ಹೊಸ ವಿಚಾರಗಳನ್ನು ಕಟ್ಟಿಕೊಡಲಾಗುವುದು.

ಅಲ್ಲದೆ ಈ ಅಧ್ಯಯನದ ವ್ಯಾಪ್ತಿಯಾಚೆಗೆ ಅಧ್ಯಯನಕ್ಕೆ ಒದಗಬಹುದಾದ ಹೊಸ ಹೊಸ ಅವಕಾಶಗಳನ್ನು, ಸಾಧ್ಯತೆಗಳನ್ನು ಮತ್ತು ವಿಧಾನಗಳನ್ನು ಕುರಿತು ವಿವೇಚಿಸುವುದೂ ಸಹ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದು.

## ೧.೨ ಅಧ್ಯಯನದ ವ್ಯಾಪ್ತಿ

ನಿರ್ದಿಷ್ಟ ಕಾಲಾವಧಿಯೊಳಗೆ ಜಯರೇಖೆಗಳ ರಚನೆಯಲ್ಲಿ ಆಗಿರುವ ಬದಲಾವಣೆಗಳು ಮತ್ತು ಬೆಳವಣಿಗೆಗಳು ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳ ಬಗ್ಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಜಯರೇಖೆಗಳ ರಚನೆಯ ಉದ್ದೇಶ, ಅವುಗಳ ಸ್ವರೂಪ, ಅವುಗಳ ಕಥನ ಕ್ರಮಗಳಲ್ಲಾಗಿರುವ ಹೊಸ ಹೊಸ ಪಲ್ಲಟಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಈ ಅವಧಿಯಲ್ಲಿ ಜಯರೇಖೆಗಳಲ್ಲಿನ ಆಶಯ, ಧೋರಣೆ ಮತ್ತು ಅವುಗಳ ಅಭಿವ್ಯಕ್ತಿ ಕ್ರಮಗಳಲ್ಲಾದ ತೀವ್ರತರ ಸ್ಥಿತ್ಯಂತರಗಳಿಂದಾಗಿ ಹೊಸ ಹೊಸ ಕಥನಗಳು ಹುಟ್ಟಿಕೊಂಡ ಮತ್ತು ಅದರ ಬಹುರೂಪಿ ಪಠ್ಯಗಳು ಸೃಜನೆಗೊಂಡ ವಿಭಿನ್ನ ದೃಷ್ಟಿಕೋನಗಳ ಸ್ವರೂಪವನ್ನು ಕುರಿತಂತಹ ತಾತ್ವಿಕ ವಿವೇಚನೆಯಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ವ್ಯಾಪ್ತಿಯನ್ನು ವಿಭಿನ್ನವಾಗಿ ರೂಪಿಸಿಕೊಳ್ಳಲಾಗಿದೆ.

### ೧.೨.೧ ಕಾಲ ವ್ಯಾಪ್ತಿ

ಈ ಅಧ್ಯಯನವನ್ನು ಪ್ರಧಾನವಾಗಿ ಮಧ್ಯಕಾಲೀನ ಕಾಲಘಟ್ಟವನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆಸಲಾಗಿದೆ. ಇಲ್ಲಿ 'ಮಧ್ಯಕಾಲೀನ' ಎಂಬ ಪದವನ್ನು ನಾನು ದೀರ್ಘಾವಧಿಯ ಪರಿಕಲ್ಪನೆಯನ್ನಿಟ್ಟುಕೊಂಡು ನಿರ್ವಚಿಸಿಕೊಂಡಿರುತ್ತೇನೆ. ಎಂದರೆ ದ್ವಿತೀಯ ಸಹಸ್ರಮಾನದ ಆರಂಭದಿಂದ ವಸಾಹತುಶಾಹಿಯ ಆಳ್ವಿಯ ಕೊನೆಯ ಘಟ್ಟದವರೆಗೆ ಎಂದರೆ ಕ್ರಿ.ಶ. ೧೯೦೦ರವರೆಗೆ ವಿಸ್ತರಿಸಿಕೊಳ್ಳಲಾಗಿದೆ. ಸಹಸ್ರಮಾನದ ಇಷ್ಟು ದೀರ್ಘಾವಧಿಯನ್ನು 'ಮಧ್ಯಕಾಲೀನ' ಎನ್ನಬಹುದೇ ಎಂಬ ಪ್ರಶ್ನೆ ಸಹಜ. ಆದರೆ ಮೊದಲ ಸಹಸ್ರಮಾನದ ಮೊದಲ ಈ ಅವಧಿ ಚಾರಿತ್ರಿಕವಾಗಿ ಸಾಹಿತ್ಯಕ ವಾಗಿ, ಧಾರ್ಮಿಕವಾಗಿ ಹಲವಾರು ಮಜಲುಗಳನ್ನು ದಾಟಿ ಬಂದಿತೆಂಬುದು ನಿಜ. ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಉಂಟಾದ ಸಮಾಜದ ತಳ ಸಮುದಾಯಗಳ ಚಾರಿತ್ರಿಕ ದಾಖಲೀಕರಣ ಮತ್ತು ಚರಿತ್ರೆಯಲ್ಲಿ ಸ್ವತಃ ಅವರೇ ಭಾಗಿಯಾದ ಪ್ರಕ್ರಿಯೆ ಮುಂದಿನ ಬದಲಾವಣೆಗಳಿಗೆಲ್ಲ ನಾಂದಿ ಯಾಯಿತು. ಹನ್ನೆರಡನೆಯ ಶತಮಾನದಲ್ಲಿ ಮೂಡಿದ ಜನಸಾಮಾನ್ಯರನ್ನೊಳಗೊಂಡ ಭಕ್ತಿ ಅಥವಾ ಅನುಭಾವ ಪಂಥ ಹತ್ತೊಂಬತ್ತನೆಯ ಶತಮಾನದವರೆಗೆ ತನ್ನ ಪ್ರಭಾವ ಬೀರಿತಲ್ಲದೆ, ಅದು ಬೇರೆ ಬೇರೆ ರೂಪಗಳಲ್ಲಿ ಪ್ರಕಟಗೊಳ್ಳುತ್ತಲೇ ಬಂದಿದೆ. ಹಾಗೆಯೇ ಹನ್ನೆರಡನೆಯ ಶತಮಾನದಲ್ಲಿ ವಚನ ಗಳಲ್ಲಿ ಮೂಡಿದ 'ಹೊಸಗನ್ನಡ'ದ ಅವಸ್ಥಾಂತರವು, ನಂತರದ ಜನಸಾಹಿತ್ಯದಲ್ಲಿ ಅದು ವಚನಗಳಿರಲಿ, ಕೀರ್ತನೆಗಳಿರಲಿ ಅಥವಾ ಸರ್ವಜ್ಞನ ತ್ರಿಪದಿಗಳಿರಲಿ ಹಾಗೂ ಅನುಭಾವಿ ಸಂತರ ತತ್ವಪದಗಳಿರಲಿ ಹಾಗೆ ಮುಂದುವರೆದುಕೊಂಡು ಬಂದಿತೆಂಬುದೂ ಅಷ್ಟೇ ವಾಸ್ತವ. ಈ ಹಿನ್ನೆಲೆಯಲ್ಲಿ ನಾನು ದ್ವಿತೀಯ ಸಹಸ್ರಮಾನದ ಅವಧಿಯನ್ನು ಮಧ್ಯಕಾಲೀನ ಅವಧಿಯೆಂದೇ ವ್ಯಾಖ್ಯಾನಿಸಿಕೊಂಡಿರುತ್ತೇನೆ.

ಕನ್ನಡ ಶಾಸನ ಕ್ಷೇತ್ರದಲ್ಲಿ ಜಯರೇಖೆಯ ಮಾದರಿಗಳು ಮೊಟ್ಟ ಮೊದಲಿಗೆ ಕಾಣಿಸಿಕೊಳ್ಳುವುದೇ ಹನ್ನೆರಡನೆಯ ಶತಮಾನದಲ್ಲಿ. ಹನ್ನೆರಡನೆಯ ಶತಮಾನಾನಂತರ ಮತ್ತೆ

ಕಾಣಿಸಿಕೊಳ್ಳುವುದು ಹದಿನೈದನೆಯ ಶತಮಾನದಲ್ಲಿ. ಹದಿನೈದನೆಯ ಶತಮಾನಾನಂತರ ಅಲ್ಲಲ್ಲಿ ಚದುರಿದಂತೆ ಒಂದೆರಡು ಜಯರೇಖೆಗಳು ಕಾಣಿಸಿಕೊಳ್ಳುತ್ತವೆ. ಹದಿನೆಂಟನೆಯ ಶತಮಾನದ ನಂತರ 'ಕಂಚಿಪತ್ರ'ಗಳು ಎಂಬ ಹೆಸರಿನಲ್ಲಿ ಹಾಗು ಕೈಫಿಯತ್ತುಗಳ ರೂಪದಲ್ಲಿ ಕಾಗದ ಪ್ರತಿಗಳಲ್ಲೂ ಸಹ ಜಯರೇಖೆಗಳು ಕಂಡುಬರುತ್ತವೆ. ಆಕರಗಳ ದೃಷ್ಟಿಯಿಂದ ಜಯರೇಖೆಗಳ ಸಂಖ್ಯೆ ತುಂಬಾ ನಗಣ್ಯ ಎನ್ನುವಷ್ಟರ ಮಟ್ಟಿಗಿದೆ. ಅಲ್ಲದೆ, ಜಯರೇಖೆಗಳೆಲ್ಲವೂ ನೈಜ ಕಾಲಾವಧಿಯನ್ನು ಒಳಗೊಂಡಿಲ್ಲ. ಶಿಲಾಮಾಧ್ಯಮಗಳ ಮೇಲೆ ಕೆತ್ತಲಾದ ಜಯರೇಖೆಗಳು ನೈಜ ಶಾಸನಗಳಾಗಿದ್ದರೆ, ತಾಮ್ರ, ಕಾಗದಗಳ ಮೇಲೆ ಬರೆಯಲ್ಪಟ್ಟ ಬಹುಪಾಲು ಸಂಖ್ಯೆಯ ಜಯರೇಖೆಗಳು ಕೂಟ ಪತ್ರಗಳಾಗಿವೆ ಅಥವಾ ಕಾಗದದ ನಕಲು ಪ್ರತಿಗಳಾಗಿವೆ. ಅವುಗಳಲ್ಲಿನ ಕಾಲದ ಉಲ್ಲೇಖ ಹದಿನೈದು, ಹದಿನಾರು ಮತ್ತು ಹದಿನೇಳನೆಯ ಶತಮಾನದ ಅವಧಿಯವಾಗಿದ್ದರೂ, ವಾಸ್ತವವಾಗಿ ಅವು ಯಾವುವೂ ನೈಜ ಸಂಗತಿಗಳಾಗಿರುವುದಿಲ್ಲ. ಕೂಟ ಶಾಸನಗಳನ್ನು ಕಂಡುಹಿಡಿಯುವ ಮಾನದಂಡವಾಗಿ, ಲಿಪಿಯನ್ನು ಅವಲೋಕಿಸಿದಾಗ, ಲಿಪಿದೃಷ್ಟಿಯಿಂದ ಈ ಎಲ್ಲ ಶಾಸನಗಳೂ ಹತ್ತೊಂಬತ್ತನೆಯ ಶತಮಾನಕ್ಕೆ ಸಲ್ಲುತ್ತವೆ. ಅವುಗಳಲ್ಲಿ ಉಲ್ಲೇಖಿಸಿರುವ ಕಾಲ, ರಾಜಮನೆತನ, ಮುಂತಾದ ಸಂಗತಿಗಳೆಲ್ಲವೂ ಅಸಂಗತತೆಯಿಂದ ಕೂಡಿವೆ. ಆದರೆ ಅದರಲ್ಲಿ ಅಡಕವಾದ ವಿಷಯದಲ್ಲಿ ಯಾವುದೇ ಅಸಂಗತಿಗಳಿಲ್ಲದೆ, ಪ್ರಸಕ್ತ ಸಮಾಜದ ಕಥನವನ್ನು ಕಟ್ಟಿಕೊಡುತ್ತದೆ ಎಂಬ ಸಂಗತಿ ಸುಳ್ಳಲ್ಲ. ಹಾಗಾಗಿ, ಯಾವ ಆಕರಗಳಲ್ಲಿ ಇವು ಪ್ರಕಟಗೊಂಡಿವೆಯೋ, ಅವುಗಳ ಅವಧಿಯನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ಹನ್ನೆರಡನೆಯ ಶತಮಾನದಿಂದ ಇಂದಿನವರೆಗೆ ಒಟ್ಟು ಸುಮಾರು ಎಂಟು ಶತಮಾನಗಳ ಕಾಲಾವಧಿಯಲ್ಲಿ ರಚನೆಗೊಂಡ ಜಯರೇಖೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಎಂದರೆ ಕ್ರಿ.ಶ.ಸುಮಾರು ೧೨೦೦ರ ಏಕಾಂತದ ರಾಮಯ್ಯನ ಅಬ್ಬಲೂರು ಶಾಸನದಿಂದ ಅಧ್ಯಯನದ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಇದಲ್ಲದೆ, ನಿಗದಿತ ಕಾಲವ್ಯಾಪ್ತಿಯೊಳಗೆ ಪ್ರಕಟಗೊಂಡ ಶಾಸನಗಳನ್ನು, ಸಾಹಿತ್ಯ ಕೃತಿಗಳನ್ನು ಸಹ ಜಯರೇಖೆಗಳ ಚರ್ಚೆ ಹಾಗೂ ವಿಶ್ಲೇಷಣೆಗಾಗಿ ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

### ೧.೨.೨ ಆಕರ ವ್ಯಾಪ್ತಿ

ಈ ಅಧ್ಯಯನಕ್ಕೆ ಸ್ಪಷ್ಟವಾಗಿ ಶಾಸನಗಳನ್ನೇ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ. ಪ್ರಮುಖವಾಗಿ ಒಂದು ಉದ್ದೇಶಿತ ಕಾಲವ್ಯಾಪ್ತಿಯೊಳಗೆ ಪ್ರಕಟಗೊಂಡಿರುವ ಜಯರೇಖೆಗಳೇ ಈ ಅಧ್ಯಯನಕ್ಕೆ ಆಕರಗಳಾಗಿವೆ. ಈ ಅಧ್ಯಯನಕ್ಕೆ ಬಳಸಿಕೊಂಡ ಆಕರಗಳನ್ನು ನಿರ್ದಿಷ್ಟ ವರ್ಗೀಕರಣದೊಂದಿಗೆ ಸ್ವೀಕರಿಸಲಾಗಿದೆ. ಎಂದರೆ, ಅವು ಪ್ರಕಟಗೊಂಡ ಮಾಧ್ಯಮಗಳನ್ನಾಧರಿಸಿ ಶಿಲಾಶಾಸನ, ತಾಮ್ರಶಾಸನ, ಕೈಫಿಯತ್ತುಗಳು, ಕಾಗದ ಪ್ರತಿ (ಹಸ್ತಪ್ರತಿ)ಗಳೆಂದು ವರ್ಗೀಕರಿಸಿಕೊಳ್ಳಾಗಿದೆ. ಅಲ್ಲದೆ, ಅವು ಪ್ರಕಟಗೊಂಡ ಹೆಸರುಗಳ ಆಧಾರದ ಮೇಲೆ ಜಯಪತ್ರಗಳು, ಜಯರೇಖೆಗಳು ಅಥವಾ ಜಯಲೇಖೆಗಳು, ಕಂಚಿಪತ್ರಗಳು ಅಥವಾ ಕಂಚಿಶಾಸನಗಳು, ಚಪ್ಪೋಡುಗಳೆಂದು ಹೆಸರಿಸಿ ಕೊಳ್ಳಲಾಗಿದೆ. ಏಳು ಅಧ್ಯಾಯಗಳನ್ನೊಳಗೊಂಡ ಈ ಅಧ್ಯಯನಕ್ಕೆ ಮೊದಲ ಮತ್ತು ಕೊನೆಯ ತಾಂತ್ರಿಕ ಅಧ್ಯಾಯಗಳನ್ನು

ಹೊರತುಪಡಿಸಿ ಉಳಿದ ಐದು ಅಧ್ಯಾಯಗಳಿಗೂ ವಿವಿಧ ಕೃತಿಗಳಲ್ಲಿ ಪ್ರಕಟವಾದ ಶಾಸನ ಹಾಗೂ ಜಯಪತ್ರಗಳನ್ನು ಬಳಸಿಕೊಳ್ಳಲಾಗಿದೆ. ಜಯರೇಖೆಗಳು ಇಷ್ಟೆಲ್ಲ ಹೆಸರುಗಳ ರೂಪದಲ್ಲಿ ಪ್ರಯೋಗ ಗೊಂಡಿದ್ದರೂ, ಸುಮಾರು ಎಂಟು ಶತಮಾನಗಳ ಕಾಲವ್ಯಾಪ್ತಿಯನ್ನು ಹೊಂದಿದ್ದರೂ, ಆಕರಗಳ ಲಭ್ಯತೆ ಮಾತ್ರ ಗಣನೀಯವಾಗಿ ಕಡಿಮೆಯಿದೆ. ಹದಿನೆಂಟನೆಯ ಶತಮಾನಾನಂತರ ದೊರೆಯುವ ಜಯರೇಖೆಗಳು ಬಹುಪಠ್ಯಗಳನ್ನು ಒಳಗೊಂಡಿವೆ. ಎಲ್ಲ ಪಠ್ಯಗಳು ರಾಚನಿಕವಾಗಿ ಒಂದೇ ಸ್ವರೂಪ ದಲ್ಲಿವೆ. ಕಥಾನಕದ ವಿಸ್ತರಣೆಯಲ್ಲಿ ಸ್ವಲ್ಪ ಏರುಪೇರಾಗಬಹುದಷ್ಟೇ ವಿನಹ, ಉಳಿದಂತೆ ಎಲ್ಲ ಪಠ್ಯಗಳ ಕಥಾಹಂದರ, ಕಥನ ಸ್ವರೂಪ ಒಂದೇ ಆಗಿದೆ. ಆದ್ದರಿಂದ ಇವುಗಳಲ್ಲಿ ವಿಶ್ವಾಸಾರ್ಹವೆನಿಸುವ ಒಂದೊಂದು ಜಯರೇಖೆಯನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಕೆಲವು ಸಂದರ್ಭಗಳಲ್ಲಿ ಅವುಗಳ ನಡುವೆ ಗಮನಾರ್ಹ ಮಾರ್ಪಾಡುಗಳು ಕಂಡುಬಂದರೆ ಮತ್ತು ಅಧ್ಯಯನಕ್ಕೆ ವೈವಿಧ್ಯತೆ ಮತ್ತು ವಿಶ್ಲೇಷಣೆಯ ದೃಷ್ಟಿಯಿಂದ ಪೂರಕವೆನಿಸಿದರೆ ಅಂಥ ಸಂದರ್ಭದಲ್ಲಿ ವಿಭಿನ್ನ ಪಠ್ಯಗಳನ್ನು ಸಹ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಕರ್ನಾಟಕದ 'ಧರ್ಮ ಸಮನ್ವಯ' ಶಾಸನವೆಂದು ಗುರುತಿಸಲ್ಪಟ್ಟಿರುವ ಬುಕ್ಕರಾಯನ ಶ್ರವಣಬೆಳಗೊಳ ಶಾಸನವನ್ನು 'ಜಯರೇಖೆ' ಯೆಂದು ಪರಿಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಶಾಸನದಲ್ಲಿ ನಿರ್ದಿಷ್ಟವಾಗಿ ಜಯಪತ್ರ/ ಜಯರೇಖೆ ಎಂಬ ಉಲ್ಲೇಖವಿಲ್ಲದಿದ್ದರೂ, ಶಾಸನಾಂತರ್ಗತ ಸಂಗತಿಗಳು, ಸನ್ನಿವೇಶಗಳು, ಕಲಹಗಳು, ನ್ಯಾಯನಿರ್ಣಯ ವಿಧಾನ, ಭಾಗಿಯಾದ ಸಾಕ್ಷಿ/ ಸಾಕ್ಷ್ಯ ಈ ಎಲ್ಲ ಅಂಶಗಳ ಹಿನ್ನಲೆಯಲ್ಲಿ ಇದನ್ನು ಅಧ್ಯಯನಕ್ಕೆ ಜಯರೇಖೆಯೆಂದು ಸ್ವೀಕರಿಸಲಾಗಿದೆ.

ಹಾಗೆಯೇ ಕನಕದಾಸರ ಅದ್ಭುತ ಸಾಹಿತ್ಯ ಸೃಷ್ಟಿಯಾದ 'ರಾಮಧಾನ್ಯ ಚರಿತೆ'ಯನ್ನು ಜಯರೇಖೆಯೆಂದು ಪರಿಗಣಿಸಿ ಅಧ್ಯಯನಕ್ಕೆ ಬಳಸಿಕೊಂಡಿರುತ್ತೇನೆ. ಕಾವ್ಯವೆಂದರೆ ಪುರಾಣ/ ಇತಿಹಾಸ ಪುರುಷರನ್ನೇ ಕೇಂದ್ರವಾಗಿಸಿಕೊಂಡಿರಬೇಕೆಂಬಂತಹ ಸಿದ್ಧ ಮಾದರಿಗಳನ್ನು ಮೀರಿ ಕನಕದಾಸರು ತಮ್ಮ ಕಾಲಾವಧಿಯಲ್ಲಿ ಸಾಹಿತ್ಯವನ್ನೇ ಪ್ರಯೋಗಶೀಲತೆಗೊಡ್ಡಿದಂತೆ ಎಲ್ಲ ಸಿದ್ಧ ಮಾದರಿ ಗಳನ್ನು ಮೀರಿ ರಾಗಿ ಮತ್ತು ವ್ರೀಹಿಯ ಸಂಘರ್ಷದ ಕತೆಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಇದನ್ನು ಈವರೆಗೆ ಬಹುತೇಕ ವಿದ್ವಾಂಸರು ವರ್ಗ ಸಂಘರ್ಷದ ಹಿನ್ನಲೆಯಲ್ಲಿ ಚರ್ಚೆ ಮಾಡಿದ್ದರೂ ಸಹ, ಇಲ್ಲಿ ಕಲಹದ ಸ್ವರೂಪ, ನ್ಯಾಯ ನೀಡಿಕೆ ವಿಧಾನ ಗೆದ್ದವರಿಗೆ ಜಯರೇಖೆ ನೀಡುವಂತೆ ಇಲ್ಲಿ ರಾಗಿಗೂ ವಿವಿಧ ದೇವತೆಗಳು ನೀಡುವ ಬಿರುದಾವಳಿಗಳು ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಇದನ್ನು ಜಯರೇಖೆಯೆಂದು ಪರಿಗಣಿಸಲಾಗಿದೆ. ಮೌಖಿಕ ಪರಂಪರೆಯಲ್ಲಿದ್ದ ಕೇಳಿ, ತಿಳಿದಿದ್ದ ಕತೆಯನ್ನು ರಾಗಿ–ವ್ರೀಹಿಯ ಸಂಕೇತಗಳ ಮೂಲಕ ಕನಕದಾಸರು ಪುನರ್ ನಿರ್ಮಿಸಿದ ರೀತಿಯೇ ಅದರ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ಸ್ವೋಪಜ್ಞತೆಯನ್ನು ಸೂಚಿಸುತ್ತದೆ. ಆದ್ದರಿಂದಲೇ 'ಜಯಪತ್ರ'ಗಳ ಅಧ್ಯಯನದಲ್ಲಿ ರಾಮಧಾನ್ಯ ಚರಿತ್ರೆಯನ್ನು ಆನುಷಂಗಿಕ ಅಕರವಾಗಿ ಬಳಸಿಕೊಳ್ಳಲಾಗಿದೆ.

ಮೂಲ ಆಕರಗಳಾಗಿ ಜಯರೇಖೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲು ಇರುವ ಸವಾಲೆಂದರೆ ಆಕರಗಳ ಅಲಭ್ಯತೆ. ಈ ಅಲಭ್ಯತೆಯೇ ವಿದ್ವಾಂಸರು ಈ ವಿಷಯದ ಬಗ್ಗೆ ಅಧ್ಯಯನ ಮಾಡದಿರುವುದಕ್ಕೆ ಮುಖ್ಯ ಕಾರಣವಾದರೆ, ಆಕರಗಳ ಅಲಭ್ಯತೆಯೇ ಈ ಅಧ್ಯಯನಕ್ಕೊಂದು ವೈಶಿಷ್ಟ್ಯತೆಯನ್ನೂ ತಂದುಕೊಟ್ಟಿದೆ. ಏಕೆಂದರೆ, ಜಯರೇಖೆಗಳ ಸ್ವರೂಪದಲ್ಲಿರುವ ಇತರ ಆಕರಗಳನ್ನು ಸಹ ಅವುಗಳ ರಾಚನಿಕ ಸ್ವರೂಪದ ಆಧಾರದ ಮೇಲೆ ಜಯರೇಖೆಗಳಾಗಿ ಸ್ವೀಕರಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇದರಿಂದ ಈ ಅಧ್ಯಯನಕ್ಕೊಂದು ವಿಶೇಷ ಆಯಾಮ ಹಾಗೂ ದೃಷ್ಟಿಕೋನವನ್ನು ಒದಗಿಸಲಾಗಿದೆ.

ಜಯರೇಖೆಗಳಲ್ಲಿ ಅಂತರ್ಗತವಾದ ವಿಷಯಗಳ ಸ್ವರೂಪದ ಹಿನ್ನೆಲೆಯಲ್ಲಿ ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಅವುಗಳನ್ನು ನಾಲ್ಕು ಪ್ರವರ್ಗಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ.

೧. ಶಾಸನಗಳಲ್ಲಿ ಸ್ಪಷ್ಟವಾಗಿ ಜಯರೇಖೆ, ಜಯಪತ್ರ, ಕಂಚಿಪತ್ರ, ಕಂಚಿಶಾಸನಗಳೆಂದೇ ಉಲ್ಲೇಖಿತವಾದ ಶಾಸನಗಳು.
೨. ಶಾಸನಾಂತರ್ಗತ ವಿಷಯ ಜಯರೇಖೆಗಳ ಸ್ವರೂಪದಲ್ಲೇ ಇರುವಂತಹ ಆದರೆ, ಹಾಗೆಂದು ಉಲ್ಲೇಖಗೊಳ್ಳದ ಶಾಸನಗಳು.
೩. ಜಯರೇಖೆಗಳ ಸ್ವರೂಪದಲ್ಲಿರುವ ಕುಲಕಥನ ಅಥವಾ ಕುಲಪುರಾಣ ಅಥವಾ ಸೃಷ್ಟಿಪುರಾಣಗಳು.
೪. ಜಯರೇಖೆಗಳ ಸ್ವರೂಪದಲ್ಲಿರುವ ಮತ್ತು ಜಯರೇಖೆಗಳ ಉಲ್ಲೇಖವನ್ನು ಒಳಗೊಂಡ ಸಾಹಿತ್ಯ ಕೃತಿಗಳು.

ಎಷ್ಟೆಲ್ಲ ವರ್ಗೀಕರಣ ಮಾಡಿಕೊಂಡರೂ ಸಹ ಅಧ್ಯಯನಕ್ಕೆ ಆಕರಗಳ ಕೊರತೆ ಎದ್ದು ಕಾಣುವಂತಿದೆ. ಅಲ್ಲದೆ, ಪ್ರಕಟವಾಗಿರುವಂತಹ ಜಯರೇಖೆಗಳಲ್ಲಿ ಎಲ್ಲ ಜಯರೇಖೆಗಳೂ ವಿಷಯಗಳನ್ನು ಸಮರ್ಪಕವಾಗಿ ಪ್ರತಿಪಾದಿಸಿರುವುದಿಲ್ಲ. ಹಾಗಾಗಿ ಈ ನ್ಯೂನತೆ, ಕೊರತೆ, ಅಭಾವಗಳನ್ನೆಲ್ಲ ಪರಿಗಣನೆಗೆ ತೆಗೆದುಕೊಂಡು ಪ್ರಾತಿನಿಧಿಕವಾಗಿ ೨೫ ರಿಂದ ೩೦ ಜಯರೇಖೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಇದರಿಂದ ಅಧ್ಯಯನದಲ್ಲಿ ಕೆಲವು ವಿಷಯಗಳು ಪುನರುಕ್ತಿಯಾಗುವ ಸಾಧ್ಯತೆಯಿದೆ. ಇದನ್ನು ಪುನರುಕ್ತಿ ದೋಷವೆಂದು ತಿಳಿಯದೆ, ಆಯಾ ಸಂದರ್ಭಕ್ಕೆ ಅವು ಅಗತ್ಯವೆಂದು ಪರಿಭಾವಿಸಿ ಉಲ್ಲೇಖಿಸಲಾಗಿದೆ. ಆದರೂ ಅಧ್ಯಯನದ ಅವಶ್ಯಕತೆಗನುಗುಣವಾಗಿ ಸಾಂದರ್ಭಿಕವಾಗಿ ಇತರ ಗೌಣ ಜಯರೇಖೆಗಳನ್ನು ಬಳಸಿಕೊಂಡಿರುತ್ತೇನೆ. ಅಲ್ಲದೆ, ಇಷ್ಟು ದೀರ್ಘ ಅವಧಿಯಲ್ಲಿ ರಚನೆಗೊಂಡ ಸಾಹಿತ್ಯವನ್ನು ಸಹ ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

## ೧.೩ ಅಧ್ಯಯನದಲ್ಲಿ ಎದುರಾದ ಸವಾಲುಗಳು ಮತ್ತು ಪರಿಹರಿಸಿಕೊಂಡ ಬಗೆ

'ಜಯಪತ್ರ: ಸಾಂಸ್ಕೃತಿಕ ಸಂಕಥನ' ಅಧ್ಯಯನವು ಮೊದಲ ಪ್ರಯತ್ನವಾಗಿರುವುದರಿಂದ ಇದಕ್ಕೆ ಯಾವುದೇ ಸಿದ್ಧಮಾದರಿಗಳು ಇಲ್ಲದಿದ್ದುದರಿಂದ ಅಧ್ಯಯನದ ಅವಧಿಯಲ್ಲಿ ಹಲವಾರು ರೀತಿಯ ಸವಾಲುಗಳು ಎದುರಾದವು. ಅಂಥ ಸಂದರ್ಭದಲ್ಲಿ ಅಧ್ಯಯನದ ಆಳಕ್ಕೆ ಇಳಿದು ಒಂದು ವಿನ್ಯಾಸವನ್ನು ರೂಪಿಸಿಕೊಂಡು ಎಚ್ಚರಿಕೆಯಿಂದ ಅಂಥ ತೊಡಕನ್ನು ಬಿಡಿಸಿಕೊಳ್ಳಲಾಯಿತು.

ಅಧ್ಯಯನದಲ್ಲಿ ಮೊದಲು ಎದುರಿಸಬೇಕಾಗಿ ಬಂದ ಸವಾಲೇ ಶೀರ್ಷಿಕೆಯದು. ಶೀರ್ಷಿಕೆಯಲ್ಲಿ ವಿಭಿನ್ನ ಪರಿಕಲ್ಪನಾತ್ಮಕ ನೆಲೆಗಳಲ್ಲಿ ಅಧ್ಯಯನಕ್ಕೊಳಪಡಿಸಬೇಕಾದ ಅಧ್ಯಯನದ ಶೀರ್ಷಿಕೆಯನ್ನು ಶಾಸನ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿಗೆ ಪರಿಚಿತವಾಗಿರುವ 'ಜಯಪತ್ರ' ಎಂಬ ಶೀರ್ಷಿಕೆಯಿಂದ ಪ್ರಾರಂಭಿಸಬೇಕೆ ಅಥವಾ 'ಜಯರೇಖೆ' ಎಂಬುದನ್ನು ಬಳಸುವುದು ಸಮುಚಿತವೇ? 'ಜಯರೇಖೆಗಳು' ಎಂಬ ಪದ ಇಡೀ ಅಧ್ಯಯನದ ವಿಷಯ ವ್ಯಾಪ್ತಿಯನ್ನು ಹಾಗೂ ಆಕರವ್ಯಾಪ್ತಿಯನ್ನು ಒಳಗೊಳ್ಳುತ್ತದೆಯೇ ಎಂಬ ಸಮಸ್ಯೆ ಎದುರಾಗಿತ್ತು.

ಜಯರೇಖೆಗಳು 'ಜಯಪತ್ರ'ಗಳ ಸ್ಥಳೀಯ ರೂಪವಾಗಿರುವುದರಿಂದ ಮತ್ತು ಇದೇ ಮುಂದೆ ಕಂಚಿಪತ್ರ, ಚಪ್ಪೋಡು, ಮುಂತಾದ ಪರಿಕಲ್ಪನೆಗಳಿಗೆ ಅವಕಾಶ ಮಾಡಿಕೊಟ್ಟಿರುವುದರಿಂದ ಜಯತ್ರಗಳಿಗಿಂತ ಜಯರೇಖೆ ಎಂಬ ಶೀರ್ಷಿಕೆಯೇ ಸೂಕ್ತವೆಂಬ ನಿರ್ಣಯಕ್ಕೆ ಬರಲಾಯಿತು.

ಎರಡನೆಯದಾಗಿ, ವಿಭಿನ್ನ ಹೆಸರುಗಳಿಂದ ಮಾತ್ರವಲ್ಲದೆ, ಭಿನ್ನ ಪರಿಕಲ್ಪನೆಗಳಲ್ಲಿ ಕಂಡುಬರುವ ಈ ಪತ್ರಗಳನ್ನು ಒಂದರೊಳಗೊಂಡು ಜೋಡಿಸಿ ಅಧ್ಯಾಯಗಳನ್ನು ಮಾಡಿಕೊಳ್ಳಲಾಗಿತ್ತು. ಇದು ವಿಷಯವನ್ನು ಹೆಚ್ಚು ಸಂಕೀರ್ಣಗೊಳಿಬಿಡುವ ಆತಂಕವಿತ್ತು.

ಇದಕ್ಕೆ ಬದಲಾಗಿ ಅವುಗಳನ್ನೇ ಪ್ರತ್ಯೇಕವಾಗಿ ವಿಂಗಡಿಸಿಕೊಂಡು ಆಯಾ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಅಧ್ಯಾಯಗಳಾಗಿ ವರ್ಗೀಕರಿಸಿಕೊಳ್ಳುವ ಪ್ರಯತ್ನ ಮಾಡಲಾಯಿತು. ಇದು ವಿಷಯ ವಿಸ್ತಾರದ ದೃಷ್ಟಿಯಿಂದ ಮಾತ್ರವಲ್ಲದೆ, ಒಂದೊಂದು ವಿಷಯವನ್ನು ವಿಸ್ತೃತವಾಗಿ ಚರ್ಚಿಸಲು ಅನುಕೂಲವಾಯಿತು.

ಜಯಪತ್ರಗಳು: ಸಾಂಸ್ಕೃತಿಕ ಸಂಕಥನ ಅಧ್ಯಯನವು ಶಾಸನಗಳ ವ್ಯಾಪ್ತಿಯಲ್ಲಿ ಬರುವುದರಿಂದ ಶಾಸನಗಳೆಂದು ಪರಿಗಣಿಸದಿರುವ ಕೈಫಿಯತ್ತುಗಳಲ್ಲಿ, ಕಾಗದದ ನಕಲು ಪ್ರತಿಗಳ್ಲಲಿರುವ ಆಕರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಬಹುದೇ ಅಥವ ಬಳಸಿಕೊಳ್ಳಬಾರದೇ? ಎಂಬ ಸಂದಿಗ್ಧತೆ ಎದುರಾಯಿತು. ಭಾರತಕ್ಕೆ ಪಾಶ್ಚಾತ್ಯರ ಪ್ರವೇಶದಿಂದ ಮಾಧ್ಯಮ ಕ್ಷೇತ್ರದಲ್ಲಾದ ಕ್ರಾಂತಿಕಾರಕ ಮತ್ತು ಕ್ಷಿಪ್ರ ಬದಲಾವಣೆಗಳು ಮಾಧ್ಯಮ ಕ್ಷೇತ್ರದಲ್ಲೂ ಹಲವಾರು ಪರಿವರ್ತನೆಗಳನ್ನು ತಂದಿದ್ದವು. ಹದಿನೆಂಟು–ಹತ್ತೊಂಬತ್ತನೆಯ ಶತಮಾನದ ವೇಳೆಗೆ ಶಿಲಾಶಾಸನಗಳ ಮಹತ್ವ ಕಡಿಮೆಯಾಗುತ್ತಾ ಬಂದಿದ್ದು,

ಅವುಗಳ ಸ್ಥಾನವನ್ನು ಕಡತ, ಕೈಫಿಯತ್ತು, ದಫ್ತರು, ಮುಂತಾದ ಮಾಧ್ಯಮಗಳು ಅತಿಕ್ರಮಿಸಿದ್ದವು. ಹೀಗಾಗಿ ಇವುಗಳನ್ನು ಶಾಸನಗಳೆಂದೇ ಪರಿಗಣಿಸಲಾಯಿತು. ಅಲ್ಲದೆ, ಈವರೆಗೆ ಅವಗಣನೆಗೆ ಗುರಿಯಾಗಿರುವ ಮಧ್ಯಕಾಲೀನೋತ್ತರ ಕರ್ನಾಟಕದಲ್ಲಿ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಇಂಥ ಆಕರಗಳೇ ಮಹತ್ವಪೂರ್ಣವಾದ ವಿಷಯಗಳನ್ನು ಒದಗಿಸುತ್ತಿದ್ದವು. ಹೀಗಾಗಿ ಶಿಲಾಶಾಸನ, ತಾಮ್ರ ಶಾಸನಗಳ ಹೊರತಾದ ದಾಖಲೆಗಳನ್ನು ಶಾಸನಗಳೆಂದು ಪರಿಗಣಿಸಲಾಯಿತು.

ಅಧ್ಯಯನದ ಆಳಕ್ಕೆ ಇಳಿದಂತೆಲ್ಲಾ ಲಭ್ಯವಾಗುತ್ತಿರುವ ಆಕರಗಳು ಏಕರೂಪವಾಗಿಲ್ಲ ಎಂಬ ಅಂಶ ಮನವರಿಕೆಯಾಯಿತು. ಎಂದರೆ, ಜಯರೇಖೆಗಳು ವಿಭಿನ್ನ ಪರಿಕಲ್ಪನೆಗಳಲ್ಲಿ ಪ್ರಕಟಗೊಂಡಿರುವುದು ಕಂಡುಬಂದಿತು. ಅಲ್ಲದೆ, ಎಷ್ಟೋ ಶಾಸನಗಳು ರಾಚನಿಕವಾಗಿ ಜಯರೇಖೆಗಳಾಗಿದ್ದರೂ, ಜಯರೇಖೆಗಳ ಸ್ವರೂಪದಲ್ಲಿದ್ದರೂ, ಅಂಥ ಶಾಸನಗಳಲ್ಲಿ ಅವುಗಳನ್ನು 'ಜಯರೇಖೆ' ಎಂದು ಉಲ್ಲೇಖಿಸಿರಲಿಲ್ಲ. ಅಧ್ಯಯನಕ್ಕೆ ಯಾವ ರೀತಿ ಇವುಗಳನ್ನು ಬಳಸಿಕೊಳ್ಳಬೇಕೆಂಬ ಬಗ್ಗೆ ತುಂಬಾ ತೊಡಕುಂಟಾಯಿತು.

ನಂತರ ಲಭ್ಯ ಆಕರಗಳನ್ನು ನಾಲ್ಕು ರೀತಿಗಳಲ್ಲಿ ವರ್ಗೀಕರಿಸಿಕೊಂಡು ಸಂಗ್ರಹಿಸುವುದು ಸೂಕ್ತ ಹಾಗೂ ಅಧ್ಯಯನದ ದೃಷ್ಟಿಯಿಂದ ಸಮುಚಿತ ಮತ್ತು ಸುಗಮವೆನಿಸಿತು. ಅದರಂತೆ ಅವುಗಳನ್ನು ವರ್ಗೀಕರಿಸಿಕೊಂಡು ಬಳಸಿಕೊಳ್ಳಲಾಯಿತು.

ಹೆಚ್ಚಿನ ಕಂಚಿಪತ್ರಗಳು ಮೂಲ ಶಾಸನಗಳಾಗಿರದೆ ನಕಲು ಪ್ರತಿಗಳಾಗಿವೆ. ಇವುಗಳಲ್ಲಿ ನಮೂದಿಸಿದ ವ್ಯಕ್ತಿಗಳು ಶಾಸನಗಳಲ್ಲಿ ದಾಖಲಿಸಿರುವ ಕಾಲಮಾನದ ಪ್ರಕಾರ ತತ್ಕಾಲದ ಸಮಾಜದಲ್ಲಿ ಇರಲೇ ಇಲ್ಲ. ಹಾಗಾಗಿ ಇವು ನೈಜವಲ್ಲ, ಕೃತಕ ಹಾಗೂ ನಕಲು ಶಾಸನಗಳಾಗಿವೆ. ಶಾಸನಗಳು ಕೃತಕ ಹಾಗೂ ನಕಲು ಪ್ರತಿಗಳಾದರೂ, ಅವುಗಳಲ್ಲಿ ದಾಖಲುಗೊಂಡಿರುವ ಸಂಗತಿಗಳು ವಾಸ್ತವ. ಅಂಥ ಸಂಗತಿಗಳಿಗೆ, ವಿಷಯಗಳಿಗೆ ಅಧಿಕೃತತೆಯನ್ನು ನೀಡಲು ಹಳೆಯ ದಿನಾಂಕಗಳನ್ನು, ಆಗಿಹೋಗಿರುವ ರಾಜನ ಹೆಸರುಗಳನ್ನು ಸೇರಿಸಲಾಗಿದೆ. ಆದ್ದರಿಂದ ವಿಷಯದ ದೃಷ್ಟಿಯಿಂದ ಇವು ನೈಜವೆಂದೇ ಪರಿಗಣಿಸಲಾಗಿದೆ.

ಅಧ್ಯಯನದಲ್ಲಿ ಕೆಲವು ಶಾಸನಗಳ ವಿಷಯಗಳು ಅಧ್ಯಯನದುದ್ದಕ್ಕೂ ಅಲ್ಲಲ್ಲಿ ಪುನರಾವರ್ತನೆಯಾಗುತ್ತಲೇ ಬಂದಿವೆ. ಜಯರೇಬೆಗಳನ್ನು ಹಲವಾರು ಮನೆತನಗಳಲ್ಲಿ ವೈಯಕ್ತಿಕ ದಾಖಲೆಗಳಂತೆ ಜತನವಾಗಿ ಗೌಪ್ಯವಾಗಿ ಕಾಪಾಡಿಕೊಂಡು ಬರುತ್ತಿರುವುದರಿಂದ, ಜಯರೇಖೆಗಳು ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟವಾಗಿಲ್ಲ. ಹಾಗಾಗಿ, ಇರುವ ಸರಿಸುಮಾರು ಮೂವತ್ತೈದು ಜಯರೇಖೆಗಳನ್ನು ಆಕರವ್ಯಾಪ್ತಿಯೊಳಗೇ ಎಲ್ಲಾ ಅಧ್ಯಾಯಗಳನ್ನು ಚರ್ಚಿಸಿರುವುದರಿಂದ ಮತ್ತು ಅವು ಆಯಾ ಅಧ್ಯಯನಗಳ ಚರ್ಚೆಗೆ ಅನಿವಾರ್ಯವೂ ಆಗಿರುವುದರಿಂದ ಅಂಥ ಪುನರಾವರ್ತನೆ ಅನಿವಾರ್ಯವೇ ಆಗಿದೆ.

ಜಯರೇಖೆಗಳ ಅಧ್ಯಯನಕ್ಕೆ ತಳಸಮುದಾಯಗಳ ಬಗೆಗೆ ನನಗೆ ಹೆಚ್ಚಿನ ಆಕರಗಳು ಪ್ರತಿ ಸಂಸ್ಕೃತಿ ಮಾಲಿಕೆಯಲ್ಲಿ ಅಲೆಮಾರಿ, ಅರೆ-ಅಲೆಮಾರಿ, ಬುಡಕಟ್ಟು ಪಂಗಡಗಳ ಬಗ್ಗೆ ಪ್ರಕಟಿಸಿರುವ ಕೃತಿಗಳಿಂದ ಕಂಡುಬಂದಿತು. ಇದಲ್ಲದೆ, ಈ ಹಿಂದೆ ವಸಾಹತುಶಾಹಿ ಕಾಲಘಟ್ಟದಲ್ಲಿ ಸುಗಮ ಆಡಳಿತ ಉದ್ದೇಶಕ್ಕಾಗಿ ಸರ್ವೆ ಮಾಡಿ ಬರೆಸಿದ್ದಂತಹ ದಾಖಲೆಗಳಲ್ಲಿ ಕಂಡುಬಂದ ಸಮುದಾಯಗಳ ಚಿತ್ರಣದಿಂದ ಹೆಚ್ಚಿನ ಮಾಹಿತಿ ಲಭ್ಯವಾಯಿತು. ಆದರೆ ಈ ಮಾಹಿತಿಯ ಸ್ವೀಕಾರದಿಂದ ಮತ್ತು ಇದನ್ನಾಧರಿಸಿದ ಅಧ್ಯಯನದಿಂದ ನನ್ನ ಅಧ್ಯಯನ ಜನಾಂಗೀಯ ಅಧ್ಯಯನವಾಗುವ ಆತಂಕವಿತ್ತು. ಹಾಗಾಗಿ ಜಯರೇಖೆ ಶಾಸನಗಳಲ್ಲಿ ಉಲ್ಲೇಖಗೊಂಡ ಕೆಳ ಹಾಗೂ ತಳಸಮುದಾಯಗಳಿಗೆ ಸಂಬಂಧಪಟ್ಟ ಮಾಹಿತಿಗಳನ್ನು ಮಾತ್ರ ಅಂಥ ಕೃತಿಗಳಿಂದ ಹೆಕ್ಕಿ ತೆಗೆದು, ಅದನ್ನು ಜಯರೇಖೆ ಶಾಸನಗಳಿಗೆ ಮಾತ್ರ ಅನ್ವಯವಾಗುವಂತೆ ಒಂದು ನಿರ್ದಿಷ್ಟ ಚೌಕಟ್ಟನ್ನು ಹಾಕಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳುವ ಮೂಲಕ ಅಂಥ ತೊಡಕನ್ನು ನಿವಾರಿಸಿಕೊಳ್ಳಲಾಯಿತು.

### ೧.೪ ಅಧ್ಯಯನದ ವೈಧಾನಿಕತೆ

ಆಯ್ಕೆ ಮಾಡಿಕೊಳ್ಳಲಾದ ಆಕರಗಳು ಏಕರೂಪಿಯಾಗಿಲ್ಲ ಹಾಗೂ ಏಕಪಠ್ಯಾತ್ಮಕವಾಗಿಲ್ಲ. ಅವು ವೈವಿಧ್ಯಮಯ ಸ್ವರೂಪದವುಗಳಾಗಿವೆ. ಆದ್ದರಿಂದ ರೂಪಿಸಿಕೊಂಡ ಅಧ್ಯಾಯ ಸ್ವರೂಪದ ಕಲ್ಪನೆಗಳಿಗನುಸಾರವಾಗಿ ಈ ಆಕರಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿಯೊಂದು ಅಧ್ಯಾಯವೂ ಬೇರೆ ಬೇರೆ ಸ್ವರೂಪದ ಆಕರಗಳ ಅಗತ್ಯತೆಯನ್ನು ಅಪೇಕ್ಷಿಸುತ್ತದೆ. ಈ ಅಧ್ಯಯನವು ಕರ್ನಾಟಕದ ಶಾಸನ ಕ್ಷೇತ್ರದಲ್ಲಿನ ವಿಭಿನ್ನ ಪ್ರಕಾರವಾದ ಜಯರೇಖೆಗಳ ಸಾಂಸ್ಕೃತಿಕ ಸ್ವರೂಪ ಕುರಿತ ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಸ್ವರೂಪದ ಅಧ್ಯಯನವಾಗಿದೆ. ಜಯರೇಖೆಗಳ ಹುಟ್ಟು, ವಿಕಸನ ಅವುಗಳ ವಿವಿಧ ಆಯಾಮಗಳ ಬಗೆಗಿನ ಸಮಗ್ರ ವಿನ್ಯಾಸವನ್ನು ಸಂಶೋಧಿಸುವ ಸ್ವರೂಪದ್ದಾಗಿದೆ. ಆಕರಗಳ ಬಗ್ಗೆಯೇ ಮಾಹಿತಿಯ ಅಭಾವವಿರುವುದರಿಂದ ವಿವರಣಾತ್ಮಕ ವಿಧಾನವನ್ನೇ ಅನುಸರಿಸಿ, ಚರ್ಚಿಸಿ ವಿಶ್ಲೇಷಿಸಲಾಗಿದೆ. ವಿವರಣಾತ್ಮಕ ಮಾದರಿ ಎಂದಾಕ್ಷಣ ಪಠ್ಯಗಳ ವಿವರಣೆ ಮಾತ್ರ ಇರುತ್ತದೆಂದು ಅರ್ಥವಲ್ಲ. ಮಿಗಿಲಾಗಿ ಪಠ್ಯಗಳ ಭಾಗವನ್ನು ವಿವರಿಸುತ್ತಲೇ ಅದಕ್ಕೆ ಕಾರಣವಾದ ಸಂಗತಿಗಳನ್ನು ವಿಶ್ಲೇಷಣೆಗೆ ಗುರಿಪಡಿಸಲಾಗಿದೆ. ಒಟ್ಟಾರೆಯಾಗಿ ಈ ಸಾಂಸ್ಕೃತಿಕ ಸಂಕಥನದ ಅಧ್ಯಯನವು ಶಾಸನ, ಸಾಹಿತ್ಯ ಹಾಗೂ ಸಂಸ್ಕೃತಿಯ ಪಠ್ಯಗಳನ್ನು ಮುಖ್ಯ ಆಕರಗಳನ್ನಾಗಿ ಪರಿಗ್ರಹಿಸುತ್ತದೆಂಬುದು ಈ ಅಧ್ಯಯನದಲ್ಲಿ ತಿಳಿದಿರುವ ಬಹುಮುಖ್ಯ ಗ್ರಹಿಕೆಯಾಗಿದೆ. ಆಧುನಿಕ ಮಾದರಿಯ ಅಧ್ಯಯನಗಳಲ್ಲಿ 'ಸಂಸ್ಕೃತಿ' ಎನ್ನುವುದು ಅನೇಕ ಪರಿಕಲ್ಪನಾತ್ಮಕ ಮಜಲುಗಳನ್ನು ದಾಟಿ, ಬಹುಶಿಸ್ತೀಯವಾದ ಎಂದರೆ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಇತ್ಯಾದಿ ಎಲ್ಲ ಆಯಾಮಗಳನ್ನು ಒಳಗೊಂಡ ಒಂದು ಪರಿಭಾಷೆಯಾಗಿದೆ. ಜಯರೇಖೆಗಳಲ್ಲಿ ಈ ಎಲ್ಲ ಅಂಶಗಳೂ ಮಿಳಿತವಾಗಿರುವುದರಿಂದ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಅಧ್ಯಯನಕ್ಕೊಳಪಡಿಸಲಾಗಿದೆ.

ಜಯರೇಖೆಗಳ ಸಮಾಜ ಸದಾ ಚಲನಶೀಲ ಸಮಾಜವಾಗಿರುವುದರಿಂದ ಯಾವುವೇ ಸಿದ್ಧ ಮಾದರಿಗಳನ್ನಾಗಲೀ, ಅಧ್ಯಯನ ವಿಧಾನಗಳನ್ನಾಗಲೀ ಅನುಸರಿಸದೆ ಮತ್ತು ಒಂದು ಸೀಮಿತ ಸೈದ್ಧಾಂತಿಕ ಚೌಕಟ್ಟಿಗೊಳಪಡದೆ ಚರಿತ್ರೆಯಲ್ಲಿ ನಗಣ್ಯವಾದ ಅಥವಾ ಇತ್ತೀಚಿನ ಹೊಸ ಮಾದರಿಯ ಅಧ್ಯಯನಗಳಲ್ಲಿ ನಗಣ್ಯವೆಂದು ಗುರುತಿಸಲ್ಪಟ್ಟಿರುವ ಜನರ ಜೀವನ ಕ್ರಮವನ್ನು ಅಧ್ಯಯನದ ಸಂದರ್ಭದಲ್ಲಿ ದಕ್ಕಿದ ಗ್ರಹಿಕೆಗನುಗುಣವಾಗಿ ಅವಲೋಕಿಸಲಾಗಿದೆ. ಎಂದರೆ ಇದರರ್ಥ ಅಧ್ಯಯನವನ್ನು ಸಮುದಾಯಗಳಿಗೆ ಸೀಮಿತಗೊಳಿಸಲಾಗಿದೆ ಎಂದಲ್ಲ. ಬದಲಾಗಿ, ಸಮುದಾಯದ ಅಧ್ಯಯನಕ್ಕೆ ಸೀಮಿತಗೊಳಿಸದೆ, ಸಮುದಾಯಗಳ ಸಮಗ್ರ ಲೋಕದೃಷ್ಟಿಯನ್ನು ಕಟ್ಟಿಕೊಡಬಹುದಾದಂತಹ ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ಅಧ್ಯಯನ ನಡೆಸಲಾಗಿದೆ.

ಸಮುದಾಯಗಳ ಚಿತ್ರಣವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಜಯರೇಖೆ ಶಾಸನಗಳಲ್ಲಿ ಅವು ನಿರೂಪಿಗೊಂಡ ಬಗೆಯನ್ನು ತಿಳಿಸುತ್ತಲೇ, ಅದಕ್ಕೆ ಪೂರಕವಾಗಿ ಆಯಾ ಸಮುದಾಯಗಳಲ್ಲಿ ತಮ್ಮ ಕುಲಮೂಲ ಮತ್ತು ವೃತ್ತಿಗೆ ಸಂಬಂಧಿಸಿದಂತೆ ಮೌಖಿಕವಾಗಿ ಬಂದ ವಿಷಯವನ್ನು ಸಹ ಅವಲಂಬಿಸಿದ್ದೇನೆ. ಸಮುದಾಯಗಳ ಕಥನಗಳನ್ನಾಗಿ ಎಡ್ಗರ್ ಥರ್‌ಸ್ಟನ್, ಬುಕಾನನ್, ನಂಜುಂಡಯ್ಯ, ಮೆಕೆಂಜಿ ಮುಂತಾದ ದೇಶೀಯ ಮತ್ತು ವಿದೇಶೀಯ ವಿದ್ವಾಂಸರು ಮೌಖಿಕವಾಗಿ ತಾವು ಕೇಳಿ, ದಾಖಲಿಸಿದ ಮಾಹಿತಿಯನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಶಾಸನಗಳಿಗಿಂತ ಭಿನ್ನವಾಗಿ ಮೌಖಿಕ ಪರಂಪರೆಯು ತಳ ಸಮುದಾಯಗಳ ಬಗ್ಗೆ ಮಹತ್ವದ ವಿಷಯಗಳನ್ನು ಹೊರಹಾಕುತ್ತದೆ. ಆ ಮೂಲಕ ಇತಿಹಾಸದ ಶಿಷ್ಟ ಆಕರಗಳು ದಾಖಲಿಸಿರದ ಹಲವಾರು ವಿಷಯಗಳನ್ನು ಇವು ಒಳಗೊಂಡಿರುತ್ತವೆ. ಆಡು ಮಾತಿನ ಮೂಲಕ ತಮ್ಮ ಸ್ಮೃತಿಪಟಲದಲ್ಲಿರುವ ವಿಷಯವನ್ನು ಪೀಳಿಗೆಯಿಂದ ಪೀಳಿಗೆಗೆ ಒಯ್ಯುವ ವಾಹಕವಾಗಿ ಮೌಖಿಕ ಪರಂಪರೆ ಕಾರ್ಯನಿರ್ವಹಿಸಿದೆ. ಮೌಖಿಕವಾಗಿ ಬಂದ ಐತಿಹ್ಯಗಳು ಇತಿಹಾಸದ ಮರುನಿರ್ಮಾಣ ಮತ್ತು ವಿಸ್ತರಣೆಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿದ್ದರೂ, ಇವುಗಳನ್ನು ತುಂಬಾ ಎಚ್ಚರಿಕೆಯಿಂದ ಬಳಸುವ ಅಗತ್ಯವಿದೆ. ಆದರೆ ಇತಿಹಾಸವನ್ನು ವರ್ತಮಾನದಲ್ಲಿಟ್ಟು ನೋಡಬೇಕೆಂಬ ಆಧುನಿಕ ನಿರ್ವಚನಗಳ ಹಿನ್ನೆಲೆಯಲ್ಲಿ ಮುಖ್ಯವಾಹಿನಿಯಲ್ಲಿಲ್ಲದ ಹಲವಾರು ಸಮುದಾಯಗಳು ಇಂಥ ಐತಿಹ್ಯಗಳಲ್ಲೇ ಜೀವ ಪಡೆಯುತ್ತವೆಂಬುದು ನಿಜ ಸಂಗತಿ.

ಪ್ರಧಾನ ಇತಿಹಾಸದ ಆಕರಗಳಿಂದ ಹೊರಗುಳಿದ ಸಮುದಾಯಗಳ ಕಥನವನ್ನು ಐತಿಹ್ಯಗಳಲ್ಲೇ ಅನ್ವೇಷಿಸಬೇಕಾಗಿದೆ. ಹೀಗಾಗಿ ಇಂಥ ಸಮುದಾಯಗಳ ಇತಿಹಾಸ ಕಟ್ಟಿಕೊಡಲು ಐತಿಹ್ಯಗಳನ್ನು ಪರ್ಯಾಯ ಮಾರ್ಗವಾಗಿ ಸ್ವೀಕರಿಸಲಾಗಿದೆ. ಈವರೆಗೆ ಇತಿಹಾಸದಲ್ಲಿ ಗೈರುಹಾಜರಾಗಿದ್ದ ಮತ್ತು ಮೂಕವಾಗಿದ್ದ ಸಮುದಾಯಗಳು ಸಪ್ಪಳ ಮಾಡಿರುವುದು ಇಂಥ ಐತಿಹ್ಯಗಳ ಮೂಲಕವೇ. ಐತಿಹ್ಯಗಳು ಮತ್ತು ಇತರೆ ಮೌಖಿಕ ಕಥನಗಳು ಇತಿಹಾಸದ ಮೂಲಗಳಾಗಿದ್ದು, ಸಾಂಸ್ಕೃತಿಕ ಇತಿಹಾಸ ಕಥನಗಳ

ಅಧ್ಯಯನಕ್ಕೆ ಪ್ರಧಾನವಾಹಿನಿಯ ಇತಿಹಾಸಕ್ಕೆ ಬದಲಾಗಿ ತಳಸಮುದಾಯಗಳ ಇತಿಹಾಸವನ್ನು ತಿಳಿಯುವ ಈ ಕ್ರಮ ಅತ್ಯಗತ್ಯವೆಂದು ನನ್ನ ಭಾವನೆ. ಶಾಸನಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಕಂಡುಬರುವ ವಿಷಯಗಳೊಂದಿಗೆ ಇವುಗಳನ್ನು ತಳುಕುಹಾಕುವ ಮೂಲಕ ಹಿಂದೆ ನಡೆದಿರಬಹುದಾದ ಸಂಗತಿಗಳನ್ನು ಊಹಿಸಿ ಕಟ್ಟಬಹುದಾಗಿದೆ.

'ಇತಿಹಾಸಕಾರರು ಕತೆಗಳನ್ನು ಹೇಳುತ್ತಾರೆಂಬ' ಟೀಕೆಗೆ ಉತ್ತರವಾಗಿ, ಇಂದು ಇತಿಹಾಸಕಾರರು ಕಥನಗಳನ್ನೇ ಇತಿಹಾಸವಾಗಿ ನೋಡುವ ಪರಿಪಾಠ ಇತ್ತೀಚಿನ ಇತಿಹಾಸ ರಚನೆಯಲ್ಲಿ ಕಂಡು ಬರುತ್ತಿರುವ ಒಂದು ಹೊಸ ಆಲೋಚನಾ ಕ್ರಮವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಆಕರಗಳನ್ನು ಪ್ರಧಾನವಾಗಿ ಶಾಸನ ಕ್ಷೇತ್ರದಿಂದ ಆಯ್ಕೆ ಮಾಡಿಕೊಳ್ಳಲಾಗಿದೆ. 'ಗಟ್ಟಿಯಾದ ವಸ್ತುಗಳ ಮೇಲೆ ಕೊರೆದದ್ದು ಶಾಸನ' ಎಂಬ ಸಾಂಪ್ರದಾಯಿಕ ವ್ಯಾಖ್ಯಾನಕ್ಕೆ ಪ್ರತಿಯಾಗಿ ತಾಮ್ರಪತ್ರಗಳು, ಕಾಗದ ಹಸ್ತಪ್ರತಿಗಳನ್ನು, ಕೈಫಿಯತ್ತುಗಳನ್ನು ಸಹ ಶಾಸನ ಗಳೆಂದೇ ಪರಿಭಾವಿಸಲಾಗಿದೆ. ಈ ಅಭಿಪ್ರಾಯವನ್ನು ಅಂಗೀಕರಿಸುವುದು ಕಷ್ಟವೆನಿಸಿದರೂ, ಹದಿನೇಳನೆಯ ಶತಮಾನಾನಂತರ ಬರವಣಿಗೆ ಮಾಧ್ಯಮದಲ್ಲಾದ ಕ್ರಾಂತಿಕಾರಕ ಬದಲಾವಣೆ ಗಳಿಗನುಗುಣವಾಗಿ ಶಾಸನಗಳ ಪರಿಕರಗಳೂ ಸಹ ಬದಲಾದುವೆಂಬುದು ಚರಿತ್ರೆಯ ವಾಸ್ತವ. ಮೊದಲಿದ್ದ ಬರವಣಿಗೆ ಪರಿಕರಗಳಾದ ಶಿಲೆ ಮತ್ತು ತಾಮ್ರದ ಸ್ಥಾನವನ್ನು ಕಾಗದ ಹಾಗೂ ಕೈಫಿಯತ್ತುಗಳು ಆಕ್ರಮಿಸಿಕೊಂಡವು. ಆದ್ದರಿಂದಲೇ ಹದಿನೆಂಟನೆಯ ಶತಮಾನಾನಂತರ ಶಿಲಾ ಶಾಸನಗಳು ತುಂಬಾ ವಿರಳವಾಗಿವೆ. ಹಾಗಾಗಿ ಜಯರೇಖೆಗಳು ಯಾವುದೇ ಮಾಧ್ಯಮದಲ್ಲಿ ಪ್ರಕಟ ಗೊಂಡಿದ್ದರೂ, ಅವುಗಳನ್ನು ಅಧ್ಯಯನದ ವಿಷಯಕ್ಕೆ ಸುಸಂಗತವಾಗುವ ರೀತಿಯಲ್ಲಿ ಅರ್ಥಪೂರ್ಣ ಕ್ರಮದಲ್ಲಿ ಪ್ರತಿನಿಧಿತವಾಗುವಂತೆ ಆಯ್ಕೆ ಮಾಡಿಕೊಳ್ಳಲಾಗಿದೆ. ವಿಷಯದ ತೌಲನಿಕ ವಿವೇಚನೆಯ ಅಗತ್ಯಕ್ಕನುಸಾರವಾಗಿ ಸಾಹಿತ್ಯಕ ಆಕರಗಳನ್ನು ಸಹ ಬಳಸಿಕೊಳ್ಳಲಾಗಿದೆ. ಆಕರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳುವಾಗ ಶಾಸನಗಳಲ್ಲಿ ಅವುಗಳನ್ನು ಉಲ್ಲೇಖಿಸಲಾದ ಹೆಸರುಗಳಿಂದಲೇ ಪರಿಭಾವಿಸಲಾಗಿದೆ. ಆಕರಗಳನ್ನು ಮುಖ್ಯವಾಗಿ ಪ್ರಧಾನ ಅಥವಾ ಮೂಲ ಆಕರಗಳು ಮತ್ತು ಅನುಷಂಗಿಕ ಅಥವಾ ಪೂರಕ ಆಕರಗಳನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಹಿಂದೆಯೇ ಹೇಳಲಾದಂತೆ ಈ ವಿಷಯದ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆದೇ ಇಲ್ಲದಿರುವುದರಿಂದ ಪೂರಕ ಆಕರಗಳ ಸಂಖ್ಯೆಯೂ ಸಹ ಗಣನೀಯವಾಗಿ ಕಡಿಮೆಯಾಗಿವೆ. ಆದರೂ ಇದಕ್ಕೆ ಪೂರಕವಾಗುವಂತಹ ಎಲ್ಲ ಜ್ಞಾನ ಶಾಖೆಗಳಿಂದ ಆಕರಗಳನ್ನು ಸಂಗ್ರಹಿಸಲಾಗಿದೆ. ಪ್ರಸಕ್ತ **'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ'** ಅಧ್ಯಯನವು ಮೇಲ್ನೋಟಕ್ಕೆ ಶಾಸನ ಕ್ಷೇತ್ರಕ್ಕೆ ಸಂಬಂಧಪಟ್ಟ ವಿಷಯವಾದರೂ ಸಹ ಬಹುಶಿಸ್ತೀಯ ಅಧ್ಯಯನವನ್ನು ಅಪೇಕ್ಷಿಸುವ ವಿಷಯವಾಗಿದೆ. ಹಾಗಾಗಿ ಶಾಸನ ಕ್ಷೇತ್ರವನ್ನು ಮಾತ್ರವಲ್ಲದೆ ಇದಕ್ಕೆ ಪೂರಕವಾಗುವಂತೆ ಸಾಹಿತ್ಯ, ಜಾನಪದ, ಹಸ್ತಪ್ರತಿ, ಸಂಸ್ಕೃತಿ, ಚರಿತ್ರೆ ಅಧ್ಯಯನಗಳು ಹಾಗೂ ಕ್ವಚಿತ್ತಾಗಿ ಸಮಾಜಶಾಸ್ತ್ರ ಹಾಗೂ ಮಾನವಶಾಸ್ತ್ರಗಳ ಕೃತಿಗಳನ್ನೂ ಸಹ ಸಾಂದರ್ಭಿಕವಾಗಿ ಪೂರಕ ವಿಷಯವನ್ನಾಗಿ ಬಳಸಿ

ಕೊಳ್ಳಲಾಗಿದೆ. ಅಲ್ಲದೆ ಜಯರೇಖೆಗಳನ್ನು ಆಕರಗಳಾಗಿ ಪ್ರಕಟಿಸಿರುವ ಸಂದರ್ಭದಲ್ಲಿ ಲೇಖಕರು ನೀಡಿರುವ ಟಿಪ್ಪಣಿಗಳನ್ನು ಸಹ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಆದರೂ ಅದು ಅತಿವ್ಯಾಪ್ತಿಯಾಗದಂತೆ ಎಚ್ಚರಿಕೆ ವಹಿಸಲಾಗಿದೆ. ಇಂಥ ಬಹುಶಿಸ್ತುಗಳ ನೆರವನ್ನು ಅಪೇಕ್ಷಿಸುವ ಹಾಗೂ ಸಂಕೀರ್ಣ ಚಾರಿತ್ರಿಕ, ಸಾಂಸ್ಕೃತಿಕ, ಧಾರ್ಮಿಕ ಸನ್ನಿವೇಶಗಳನ್ನೊಳಗೊಂಡ ವಿಷಯವನ್ನು ಅಧ್ಯಯನ ಮಾಡುವುದು ಶಾಸನಶಾಸ್ತ್ರ ಅಧ್ಯಯನಕಾರರಿಗೆ ಸವಾಲಿನ ವಿಷಯವೇ ಸರಿ. ಹಾಗಾಗಿ ಈ ಅಧ್ಯಯನವು ಆಕರಗಳ ಸಂಗ್ರಹ, ಆಯ್ಕೆಯಿಂದ ಮೊದಲುಗೊಂಡು, ಆಕರಗಳ ವರ್ಗೀಕರಣ, ವಿವರಣೆ ಮತ್ತು ವಿಶ್ಲೇಷಣೆಯೂ ಸೇರಿದಂತೆ ಪ್ರೌಢನಿಬಂಧ ರಚನೆಗೆ ಅಗತ್ಯವಾದ ಅರ್ಥಪೂರ್ಣ ಗ್ರಹಿಕೆಯನ್ನು ರೂಪಿಸಿಕೊಳ್ಳುವವರೆಗೂ ವಿಸ್ತರಿಸಿದೆ.

### ೧.೫ ಅಧ್ಯಯನದ ಮಹತ್ವ

ಇದು ಜಯರೇಖೆಗಳ ಕುರಿತ ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನವಾಗಿದೆ. ಭಾರತದಲ್ಲಿ ಶಾಸನ ರಚನೆ ಪ್ರಾರಂಭಗೊಂಡ ನಂತರ ಎಂದರೆ ಕ್ರಿ.ಪೂ. ಮೂರನೆಯ ಶತಮಾನದ ನಂತರ ಸರಿಸುಮಾರು ೧೫೦೦ ವರ್ಷಗಳ ನಂತರ ಕರ್ನಾಟಕದಲ್ಲಿ ಕಂಡುಬರುವ ಪ್ರಕಾರವಾಗಿದೆ. ಎಂದರೆ ಶಾಸನ ರಚನೆ ಭಾರತ ಹಾಗೂ ಕರ್ನಾಟಕದಲ್ಲಿ ಬಹುಜನಪ್ರಿಯವಾದ ನಂತರ ಎಷ್ಟೋ ವರ್ಷಗಳ ತರುವಾಯ ಕರ್ನಾಟಕದಲ್ಲಿ ಈ ಜಯರೇಖೆಗಳು ಹಠಾತ್ತಾಗಿ ಕಾಣಿಸಿಕೊಳ್ಳುತ್ತವೆ. ಅವು ಹನ್ನೆರಡನೆಯ ಶತಮಾನದಲ್ಲಿ ಪ್ರಪ್ರಥಮ ಬಾರಿಗೆ ಕಂಡುಬಂದರೂ, ನಂತರದ ಬೆಳವಣಿಗೆಯ ಕ್ರಮಗತಿಯೂ ಸಹ ಕುಂಠಿತವಾಗಿ, ಹದಿನೇಳನೆಯ ಶತಮಾನದವರೆಗೆ ಬೆರಳೆಣಿಕೆಯಷ್ಟು ಮಾತ್ರ ರಚನೆಗೊಂಡಿವೆ. ನಂತರವೂ ಬೇರೆ ಬೇರೆ ಹೆಸರುಗಳಲ್ಲಿ ಬೆಳವಣಿಗೆ ಕಂಡಿವೆ. ಈ ಎಂಟು ಶತಕಗಳ ಅವಧಿಯುದ್ದಕ್ಕೂ ಅವು ಪಡೆದುಕೊಂಡ ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ವಿನ್ಯಾಸಗಳ ಬಗ್ಗೆ ಚರ್ಚಿಸುವುದು ಈ ಅಧ್ಯಯನದ ಪ್ರಮುಖ ಸ್ವರೂಪವಾಗಿದೆ.

#### ಚಾರಿತ್ರಿಕ ಮಹತ್ವ

ಜಯರೇಖೆಗಳ ಬಗ್ಗೆ ಈವರೆಗೆ ಯಾವುದೇ ಪೂರ್ಣಪ್ರಮಾಣದ ಅಧ್ಯಯನವಿರಲಿ, ಗಂಭೀರ ಪ್ರಮಾಣದ ಲೇಖನಗಳೂ ಪ್ರಕಟವಾಗಿಲ್ಲ. ಹೀಗಾಗಿ ಇದೊಂದು ಪ್ರಪ್ರಥಮ ಪ್ರಯತ್ನವೆಂದು ಗ್ರಹಿಸಲಾಗಿದೆ. ಕರ್ನಾಟಕದಲ್ಲಿ ಜಯರೇಖೆಗಳ ಉಗಮ, ಅವುಗಳ ಸಂರಚನೆ, ವಿಭಿನ್ನ ಆಯಾಮಗಳು, ಬೇರೆ ಬೇರೆ ಮಾದರಿಗಳು ಹಾಗೂ ಎದುರಾಗುವ ಸಮಸ್ಯೆಗಳು, ಮುಂತಾದ ವಿಷಯಗಳ ಚರ್ಚೆಯನ್ನು ಪ್ರಸಕ್ತ ಅಧ್ಯಯನದಲ್ಲಿ ನಡೆಸಲಾಗಿದೆ. ಹೀಗಾಗಿ ಇದು ಜಯರೇಖೆಗಳ ಬಗ್ಗೆ ಸಮಗ್ರವಾಗಿ ಮೊಟ್ಟಮೊದಲನೆಯದಾಗಿ ಕೈಗೊಂಡ ಅಧ್ಯಯನವಾಗಿರುವುದರಿಂದ ಇದಕ್ಕೆ ಚಾರಿತ್ರಿಕ ಮಹತ್ವ ಪ್ರಾಪ್ತವಾಗುತ್ತದೆ.

ಅಧ್ಯಯನಕ್ಕೆ ಬಳಸಿಕೊಂಡ ಸುಮಾರು ಎಂಟು ಶತಮಾನಗಳ ಅವಧಿ ಕರ್ನಾಟಕದ ಜಯರೇಖೆಗಳ ಚರಿತ್ರೆಯಲ್ಲಿ ಒಂದು ಮಹತ್ವಪೂರ್ಣವಾದ ಮತ್ತು ವ್ಯಾಪಕವಾದ ಕಾಲಘಟ್ಟ, ಒಟ್ಟಾರೆ ಶಾಸನ ರಚನೆಯ ಕಾಲಘಟ್ಟದ ಅರ್ಧದಷ್ಟು ಅವಧಿಯನ್ನು ಇದು ಆಕ್ರಮಿಸಿಕೊಳ್ಳುತ್ತದೆ. ಇದು ಕರ್ನಾಟಕದ ರಾಜಕೀಯ ಚರಿತ್ರೆಯ ದೃಷ್ಟಿಯಿಂದ ಮಾತ್ರವಲ್ಲದೆ, ಮಧ್ಯಕಾಲೀನ ಕರ್ನಾಟಕದ ಜನಸಮುದಾಯಗಳ ಚರಿತ್ರೆಯ ದೃಷ್ಟಿಯಿಂದಲೂ ಅತ್ಯಂತ ಮಹತ್ವವಾದ ಕಾಲಘಟ್ಟ, ಈ ಅವಧಿ ಯುದ್ದಕ್ಕೂ ಸಮಾಜ, ಸಂಸ್ಕೃತಿ, ಧರ್ಮ, ಅರ್ಥ ಮತ್ತು ಕುಲ ಮುಂತಾದ ವಿಚಾರಗಳು ಪರಸ್ಪರ ತೀವ್ರವಾಗಿ ಮುಖಾಮುಖಿಗೊಂಡಿವೆ, ಸಮನ್ವಯಿಸಿವೆ ಮತ್ತು ಸಂಘರ್ಷಗಳಿಗೂ ಎಡೆ ಮಾಡಿಕೊಟ್ಟಿವೆ.

**ಸಾಂಸ್ಕೃತಿಕ ಮಹತ್ವ**

ಇದು ಪ್ರಧಾನವಾಗಿ ಅಧ್ಯಯನದ ಕಾಲವ್ಯಾಪ್ತಿಯಲ್ಲಿ ಮಧ್ಯಕಾಲೀನಯುಗದ ಸಮಾಜ, ಸಮುದಾಯ, ಧರ್ಮ, ಸಂಸ್ಕೃತಿ, ಭಾಷೆ, ಮುಂತಾದ ಕ್ಷೇತ್ರಗಳಲ್ಲಿ ಆದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಹಾಗೂ ಆರ್ಥಿಕ ವಿದ್ಯಮಾನಗಳಲ್ಲಿನ ಬದಲಾವಣೆಯನ್ನು ಜಯರೇಖೆಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗುವುದು.

ಈ ಅವಧಿಯಲ್ಲಿ ಕರ್ನಾಟಕದಲ್ಲಿ ಸಾಹಿತ್ಯ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹಲವಾರು ಸ್ಥಿತ್ಯಂತರಗಳು ಸಂಭವಿಸಿವೆ. ಸಾಹಿತ್ಯಕವಾಗಿ ಈ ಅವಧಿಯು ಹಲವಾರು ಪ್ರಯೋಗಗಳಿಗೆ ಒಡ್ಡಿಕೊಂಡಿದ್ದ ಕಾಲ. ಈವರೆಗೆ ಸರ್ವ ಆದರಣೆಗಳಿಂದ ಅಸ್ತಿತ್ವದಲ್ಲಿದ್ದ ಚಂಪೂ ಪರಂಪರೆಯ ಜೊತೆಗೆ ವಚನ, ರಗಳೆ, ಷಟ್ಪದಿ, ತ್ರಿಪದಿ, ಕೀರ್ತನೆಗಳಂತಹ ಹೊಚ್ಚ ಹೊಸ ಪ್ರಯೋಗಗಳು ಪ್ರಕಟಗೊಂಡವು.

ಧಾರ್ಮಿಕವಾಗಿ ವೀರಶೈವ ಹಾಗೂ ವೈಷ್ಣವ ಧರ್ಮ ಪ್ರಬಲವಾಗುತ್ತಾ ಬಂದಿತು. ಈವರೆಗೆ ರಾಜಾಶ್ರಯದಲ್ಲಿದ್ದ ಜೈನಧರ್ಮ ಇವುಗಳೊಂದಿಗೆ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ತೀವ್ರವಾಗಿ ಹೆಣಗಾಡಬೇಕಾಯಿತು. ಸಾಹಿತ್ಯಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಾದ ಪಲ್ಲಟಗಳ ಮಾದರಿಯಲ್ಲಿಯೇ ಇತರ ಕ್ಷೇತ್ರಗಳು ಹಲವಾರು ಸ್ಥಿತ್ಯಂತರಗಳಿಗೆ ಗುರಿಯಾದವು.

ಅಲ್ಲದೆ, ವಸಾಹತುಶಾಹಿ ಕಾಲಘಟ್ಟದಲ್ಲಿ ಕರ್ನಾಟಕದಲ್ಲಾದ ರಾಜಕೀಯ ಹಾಗೂ ಅಧಿಕಾರದ ಪಲ್ಲಟಗಳು ಕುಲಕಥನಗಳು ಹುಟ್ಟಿಕೊಳ್ಳುವುದಕ್ಕೆ ಯಾವ ರೀತಿಯಲ್ಲಿ ವೇದಿಕೆಯನ್ನು ಸಿದ್ಧಪಡಿಸಿದವು ಎಂಬುದನ್ನು ಸಹ ಇಲ್ಲಿ ಚರ್ಚಿಸಲಾಗಿದೆ. ಈ ಕಾಲವ್ಯಾಪ್ತಿಯುದ್ದಕ್ಕೂ ವಿಭಿನ್ನ ಸಮುದಾಯಗಳು ತಮ್ಮ ತಮ್ಮ ಸಾಂಸ್ಕೃತಿಕ ಮೇಲ್ಮೈಗಾಗಿ, ಕುಲಚಹರೆಗಳ ಸ್ವಾಧೀನಕ್ಕಾಗಿ, ಕುಲಗಳ ಅನನ್ಯತೆಗಾಗಿ ನಡೆಸಿದ ಹೋರಾಟಗಳು, ಎದುರಿಸಿದ ಬಿಕ್ಕಟ್ಟುಗಳು, ಪರಿಹಾರಗಳಿಗಾಗಿ ಕಂಡುಕೊಂಡ ಮಾರ್ಗಗಳ ಬಗ್ಗೆ ಚರ್ಚಿಸುವುದು ಈ ಅಧ್ಯಯನದ ಮಹತ್ವವಾಗಿದೆ.

## ೧.೬ ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ' ಎಂಬ ವಿಷಯದ ಬಗ್ಗೆ ಈವರೆಗೆ ಪೂರ್ಣ ಪ್ರಮಾಣದ ಅಧ್ಯಯನವಿರಲಿ, ವಿಶ್ಲೇಷಣಾತ್ಮಕ ಲೇಖನವೂ ಸಹ ಪ್ರಕಟಗೊಂಡಿರುವುದಿಲ್ಲ. ಜಯರೇಖೆಗಳ ಬಗ್ಗೆ ಅಲ್ಲಲ್ಲಿ ಮಾಡಿರುವ ವ್ಯಾಖ್ಯಾನಗಳು ಸಹ 'ಧರ್ಮ' ಮತ್ತು 'ದಾನ' ಎಂಬ ಏಕರೇಖಾತ್ಮಕ ನೆಲೆಯಲ್ಲೇ ಸಾಗಿವೆ. ಜಯರೇಖೆಗಳ ಬಹುರೂಪಿ ಸ್ವರೂಪದ ಬಗ್ಗೆ ಈವರೆಗೆ ಗಮನಹರಿಸಿರುವ ನಿದರ್ಶನಗಳು ತುಂಬಾ ವಿರಳವಾಗಿವೆ. ಆ ಮಟ್ಟಿಗೆ ಪ್ರಸ್ತುತ, 'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ' ಎಂಬ ಅಧ್ಯಯನವು ಕರ್ನಾಟಕದ ಶಾಸನಶಾಸ್ತ್ರದಲ್ಲಿ ಮಾತ್ರವಲ್ಲದೆ ಕರ್ನಾಟಕದ ಸಂಶೋಧನಾ ಕ್ಷೇತ್ರದಲ್ಲಿಯೇ ಪ್ರಪ್ರಥಮ ಪ್ರಯತ್ನವೆಂದು ಪರಿಭಾವಿಸಲಾಗಿದೆ.

ಕರ್ನಾಟಕದ ಶಾಸನಗಳು ತಮ್ಮ ವಿಷಯ ವಿಸ್ತಾರ ಹಾಗೂ ವೈವಿಧ್ಯತೆಯ ದೃಷ್ಟಿಯಿಂದ ಭಾರತದ ಶಾಸನ ಕ್ಷೇತ್ರದಲ್ಲಿಯೇ ಅತ್ಯಂತ ಹೆಚ್ಚು ವೈಶಿಷ್ಟ್ಯಪೂರ್ಣವಾಗಿವೆ. ಶಾಸನಗಳ ವಿವಿಧ ಪ್ರಕಾರಗಳಾದ ದಾನ ಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳು, ಸ್ಮಾರಕ ಶಿಲ್ಪಗಳು, ಮುಂತಾದವುಗಳ ಬಗ್ಗೆ ಈವರೆಗೆ ವ್ಯಾಪಕವಾದ ಮತ್ತು ವಿಸ್ತೃತವಾದ ಅಧ್ಯಯನಗಳು ನಡೆದಿವೆ. ಪ್ರಭುತ್ವದ ನೆಲೆಯಲ್ಲಿ, ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ, ಧಾರ್ಮಿಕ ಆಯಾಮಗಳ ಹಿನ್ನೆಲೆಯಲ್ಲಿ, ಸಮಾಜೋ-ಸಾಂಸ್ಕೃತಿಕ-ಆರ್ಥಿಕ ಪರಿಕಲ್ಪನೆಗಳಡಿ ಅಧ್ಯಯನಗಳು ನಡೆದಿವೆ. ಆದರೆ, ಇಷ್ಟೆಲ್ಲ ಆಯಾಮಗಳಡಿ ಅಧ್ಯಯನಗಳು ನಡೆದರೂ, ಭಾರತೀಯ ಸಂದರ್ಭದಲ್ಲಿ ನ್ಯಾಯಿಕ ಪ್ರಕ್ರಿಯೆ ಹಾಗೂ ಕರ್ನಾಟಕದ ಸಂದರ್ಭದಲ್ಲಿ ಧಾರ್ಮಿಕ ಆಯಾಮಗಳ ಹಿನ್ನೆಲೆಯಲ್ಲಿ ನಡೆದ ಅಧ್ಯಯನಗಳ ಸಂದರ್ಭದಲ್ಲಿ ಮಾತ್ರ ಜಯರೇಖೆಗಳನ್ನು ಸಾಂದರ್ಭಿಕವಾಗಿ ಉಲ್ಲೇಖಿಸಿ ಪ್ರಸ್ತಾಪಿಸಲಾಗಿದೆ. ಇಂಥ ಸಂದರ್ಭದಲ್ಲೆಲ್ಲಾ ಜಯರೇಖೆಗಳನ್ನು ಕರ್ನಾಟಕದ ಧಾರ್ಮಿಕ ಚರಿತ್ರೆಯ ಭಾಗವಾಗಿ ಹಾಗೂ ಭಾರತದ ನ್ಯಾಯಾಂಗದ ಚರಿತ್ರೆಯ ಅಂಗವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ.

ಜಯಪತ್ರಗಳ ಹೊರತಾಗಿ ಜಯರೇಖೆಗಳು, ಜಯಪತ್ರಿಕೆಗಳು, ಕಂಚಿಪತ್ರಗಳ ಹಿನ್ನೆಲೆಯಲ್ಲಿ ಅಧ್ಯಯನಗಳು ನಡೆದಿಲ್ಲ. ಆಗಿರುವ ಅಧ್ಯಯನಗಳೂ ಸಹ ಮಾನವಶಾಸ್ತ್ರ, ಬುಡಕಟ್ಟು ಅಧ್ಯಯನ, ಉಪ-ಸಂಸ್ಕೃತಿ ಮತ್ತು ನ್ಯಾಯಪದ್ಧತಿಯ ಹಿನ್ನೆಲೆಯಲ್ಲಿ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ಪರಿಧಿಯಾಚೆ ನಡೆದಿವೆ.

ಶಾಸನಶಾಸ್ತ್ರ ಕುರಿತ ಅಧ್ಯಯನಗಳಲ್ಲಿ ಜಯರೇಖೆಗಳು ಉಪೇಕ್ಷೆಗೆ, ನಿರ್ಲಕ್ಷ್ಯಕ್ಕೆ ಗುರಿಯಾಗಿರುವುದು ವಾಸ್ತವ ಸಂಗತಿ. ಈ ಉಪೇಕ್ಷೆಗೆ ಅವುಗಳ ಅಲಭ್ಯತೆ ಹಾಗೂ ಅವು ಲಿಖಿತಗೊಂಡ ಮಾಧ್ಯಮವೂ ತಕ್ಕಮಟ್ಟಿಗೆ ಕಾರಣವಾಗಿದೆ. ಇವುಗಳ ಕಾಲವ್ಯಾಪ್ತಿ ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ವಿಸ್ತರಿಸಿದೆ. ಪ್ರಾರಂಭದಲ್ಲಿ ಶಿಲಾ ಹಾಗೂ ತಾಮ್ರ ಮಾಧ್ಯಮಗಳ ಮೇಲೆ ಶಾಸನಗಳನ್ನು ಬರೆಸಲಾಗುತ್ತಿತ್ತು. ಹಾಗಾಗಿ ಪ್ರಾರಂಭದ ಜಯರೇಖೆಗಳು ಈ

ಮಾಧ್ಯಮಗಳಲ್ಲಿ ದೊರೆಯುವುದು ಸಹಜವೇ. ಆದರೆ, ಹದಿನೇಳನೆಯ ಶತಮಾನದ ನಂತರ ಬರವಣಿಗೆ ಮಾಧ್ಯಮಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳಾದವು. ಶಿಲೆ ಮತ್ತು ತಾಮ್ರಗಳ ಸ್ಥಾನವನ್ನು ಕಾಗದ, ಕಡತ, ಕೈಫಿಯತ್ತುಗಳು ಆಕ್ರಮಿಸಿಕೊಂಡು ಅವುಗಳ ಮೇಲೆ ಬರವಣಿಗೆ ಆರಂಭವಾಯಿತು. ಶಾಸನಗಳನ್ನು ವರ್ಗೀಕರಿಸುವಾಗ ಕಾಗದ, ಕೈಫಿಯತ್ತುಗಳಲ್ಲಿರುವ ಬರಹಗಳನ್ನು ಶಾಸನಗಳೇ ಅಲ್ಲವೆಂದು ತೀರ್ಮಾನಿಸಲಾಯಿತು. ಈ ಹಿನ್ನೆಲೆಯಲ್ಲಿ ರೈಸ್‌ರವರ ಸಂಪಾದಕತ್ವದಲ್ಲಿ ಬಂದ ಅಂಥ ಬರಹಗಳನ್ನು ನಂತರ ಮೈಸೂರು ವಿಶ್ವವಿದ್ಯಾನಿಲಯದ ಪರಿಷ್ಕೃತ ಆವೃತ್ತಿಗಳಲ್ಲಿ ಅವು ಶಾಸನಗಳಲ್ಲವೆಂಬ ನಿರ್ಣಯಕ್ಕೆ ಬಂದು ಕೈಬಿಟ್ಟಂತಹ ನಿದರ್ಶನಗಳೂ ಇವೆ. ಅಲ್ಲದೆ ತಾಮ್ರಪತ್ರಗಳಲ್ಲಿರುವ ಹಲವಾರು ಶಾಸನ, ಜಯರೇಖೆಗಳನ್ನು ಕಾಗದ, ಕೈಫಿಯತ್ತುಗಳಲ್ಲಿ ನಕಲು ಮಾಡಲಾಗಿದೆ ಎಂಬ ಅಂಶವನ್ನು ಪರಿಗಣನೆಗೆ ತೆಗೆದುಕೊಂಡಿದ್ದರೂ, ಅವು ಕೂಟ ಅಥವಾ ಕೃತಕ ಬರಹಗಳೆಂಬ ಕಾರಣದ ಮೇಲೆ ಅಧ್ಯಯನದ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಹೀಗಾಗಿ ಇವುಗಳನ್ನು ಇತಿಹಾಸದ ಆಕರಗಳೆಂದು ಪರಿಗಣಿಸದೆ ಇರುವುದರಿಂದ ಮತ್ತು ಇವುಗಳನ್ನು ಆಕರಗಳನ್ನಾಗಿ ದಾಖಲಿಸುವ ಕೆಲಸವನ್ನೂ ಸರಿಯಾಗಿ ನಿರ್ವಹಿಸದಿರುವುದರಿಂದ ಇವುಗಳ ಅಧ್ಯಯನಕ್ಕೆ ಭಾರೀ ಹಿನ್ನೆಡೆ ಉಂಟಾಗಿರುವುದಲ್ಲದೆ, ಜಯರೇಖೆಗಳ ಅಧ್ಯಯನಕ್ಕೆ ತೀವ್ರ ಆಕರಗಳ ಕೊರತೆಯೂ ಎದುರಾಗಿದೆ.

ವಾಸ್ತವವಾಗಿ ಕಲಬುರ್ಗಿಯವರು ಅಭಿಪ್ರಾಯಪಡುವಂತೆ "ಕಾಲದೃಷ್ಟಿಯಿಂದ ಶಾಸನಗಳು ನಿಂತಲ್ಲಿಂದ ಮುಂದುವರೆಯುವ ಇವು (ಕೈಫಿಯತ್ತುಗಳು), ವಸ್ತುದೃಷ್ಟಿಯಿಂದಲೂ ಅವು ನಿಂತಲ್ಲಿಂದ ಮುಂದುವರೆಯುತ್ತವೆ".[೧] ಈವರೆಗಿನ ಇತಿಹಾಸವನ್ನು ಗಮನಿಸಿದಾಗ ಈ ಮಾತು ಸತ್ಯವೆನಿಸುತ್ತದೆ. ಕ್ರಿ.ಪೂ. ಮೂರನೆಯ ಶತಮಾನದಿಂದ ಕ್ರಿ.ಶ. ಹದಿನೇಳನೆಯ ಶತಮಾನದವರೆಗೆ ಪ್ರಧಾನವಾಗಿ ಶಿಲೆ ಹಾಗೂ ತಾಮ್ರ ಮಾಧ್ಯಮದ ಬರಹಗಳನ್ನಾಧರಿಸಿ ಚರಿತ್ರೆ ರಚಿಸಲ್ಪಟ್ಟಿದ್ದರೆ, ವಿಜಯನಗರೋತ್ತರ ಚರಿತ್ರೆ ಕಾಗದ, ಕೈಫಿಯತ್ತು, ಕಡತ, ಮುಂತಾದವುಗಳ ಮೇಲಿನ ಬರಹಗಳನ್ನಾಧರಿಸಿ ರಚನೆಯಾಗಿದೆ. ಬರಹದ ಮಾಧ್ಯಮ ಬದಲಾದರೂ ಚಾರಿತ್ರಿಕ ಅಂಶಗಳ ದಾಖಲಾತಿ ಪ್ರಕ್ರಿಯೆ ಬೇರೆ ಬೇರೆ ಬರಹದ ಮಾಧ್ಯಮಗಳಲ್ಲಿ ಮುಂದುವರೆಯುತ್ತಾ ಬಂದಿದೆ.

ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯಲ್ಲಿ ಜಯರೇಖೆಗಳು ಪ್ರಕಟವಾದ ಗ್ರಂಥಗಳು, ಅವುಗಳ ಬಗ್ಗೆ ಚರ್ಚೆ ಹಾಗೂ ವಿಶ್ಲೇಷಣೆಯನ್ನು ಮಾಡಿರುವಂತಹ ಆಕರಗಳನ್ನಾಧರಿಸಿ ವಿಶ್ಲೇಷಿಸಲಾಗಿದೆ.

**ಆಕರಮುಖಿ ನೆಲೆ**

ಸಂಶೋಧನೆಗೆ ಆಕರಗಳ ಲಭ್ಯತೆ ಅತ್ಯಗತ್ಯ. ಪ್ರಮಾಣಾತ್ಮಕವಾಗಿ ಮತ್ತು ಪರಿಮಾಣಾತ್ಮಕವಾಗಿ ಆಕರಗಳು ಹೆಚ್ಚೆಚ್ಚು ಲಭ್ಯವಾದಷ್ಟೂ ಸಂಶೋಧನೆಯ ಗುಣಾತ್ಮಕತೆಯೂ ಹೆಚ್ಚಾಗುತ್ತದೆ ಮತ್ತು ವಿಷಯ

ಹೆಚ್ಚು ನಿಖರತೆಯಿಂದ ಕೂಡಿರುತ್ತದೆ. ಕರ್ನಾಟಕದಲ್ಲಿ ಶಾಸನಶಾಸ್ತ್ರದ ಅಧ್ಯಯನ ಪ್ರಾರಂಭವಾಗಿದ್ದೇ ಹತ್ತೊಂಬತ್ತನೆಯ ಶತಮಾನದ ಆದಿ ಭಾಗದಲ್ಲಿ. ಕರ್ನಲ್ ಮೆಂಕೆಂಜಿ ಕರ್ನಾಟಕದಾದ್ಯಂತ ಸುತ್ತಾಡಿ ದೇವಚಂದ್ರ, ಕವೆಲ್ಲಿ ವೆಂಕಟಬೋರಯ್ಯ ಸಹೋದರರು ಮುಂತಾದ ದೇಶೀಯ ಶಾಸನತಜ್ಞರ ಸಹಾಯದೊಂದಿಗೆ ಕರ್ನಾಟಕದ ಇತಿಹಾಸ ರಚನೆಯ ಆಕರಗಳಾದ ಶಾಸನಗಳನ್ನು ಸಂಗ್ರಹಿಸುವುದಕ್ಕೆ ನಾಂದಿ ಹಾಡಿದರು. ಶಾಸನಗಳ ಅಧ್ಯಯನ ಅಧಿಕೃತವಾಗಿ ವಿದೇಶೀಯರಿಂದ ಪ್ರಾರಂಭಗೊಂಡರೂ, ವಾಸ್ತವವಾಗಿ ಶಾಸನಕ್ಷೇತ್ರದ ಪರಿಚಯ ಸ್ಥಳೀಯ ವಿದ್ವಾಂಸರಿಗೆ ಸ್ಪಷ್ಟವಾಗಿತ್ತು. ಭಾರತದಲ್ಲಿ ಇತಿಹಾಸ ಚರಿತ್ರೆಯ ಪರಿಕಲ್ಪನೆಗಳು ಅಪರಿಚಿತವಾಗಿದ್ದಂತಹ ಸಂದರ್ಭದಲ್ಲಿ ಮೆಕಂಜಿ ಸ್ಥಳೀಯ ಇತಿಹಾಸ ರಚನೆಗೆ ಮೊರೆಹೋಗಿದ್ದು ದೇವಚಂದ್ರನಂತಹ ದೇಶೀಯ ಪಂಡಿತರನ್ನು. ದೇವಚಂದ್ರನ ಪಾಲಿಗೆ ಇತಿಹಾಸವೆಂದರೆ 'ಪ್ರಪಂಚುಗಳು'. ಮೆಕಂಜಿ ಆ 'ಪ್ರಪಂಚು' ಗಳನ್ನೇ ಬರೆದುಕೊಡುವಂತೆ ಕೇಳುತ್ತಾನೆ. ಅದರಂತೆ ದೇವಚಂದ್ರ 'ಕರ್ನಾಟಕದ ಪೂರ್ವ ಪ್ರಪಂಚುಗಳನ್ನು ಬರೆದು ಆ ಕೃತಿಗೆ 'ರಾಜಾವಳಿ ಕಥಾಸಾರ' ಎಂದು ಹೆಸರಿಟ್ಟ. ದೇವಚಂದ್ರ ತನ್ನ ರಾಜಾವಳಿ ಕತೆಯಲ್ಲಿ ಶ್ರವಣಬೆಳಗೊಳದ ಬುಕ್ಕರಾಯನ ಶಾಸನ, ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನವಲ್ಲದೆ, ಕರ್ನಾಟಕದ ಬೇರೆ ಬೇರೆ ರಾಜಮನೆತನಗಳ ಇತಿಹಾಸಕ್ಕೆ ಸಂಬಂಧಿಸಿದಂತೆ ಕೆಲವು ಸ್ಪಷ್ಟ ಹಾಗೂ ನಿಖರ ವಿಷಯಗಳನ್ನೇ ನಿರೂಪಿಸುತ್ತಾನೆ. ಪರಿಶೀಲನಾರ್ಹ ವಿಷಯವೆಂದರೆ, ಈ ವೇಳೆಗೆ ಬ್ರಿಟೀಷರೂ ಸಹ ಕರ್ನಾಟಕದಲ್ಲಿ ಶಾಸನ ಸಂಗ್ರಹಣಾ ಕಾರ್ಯವನ್ನು ಪ್ರಾರಂಭಿಸಿರಲಿಲ್ಲ. ದೇವಚಂದ್ರನ ಶಾಸನಗಳನ್ನಾಧರಿಸಿ ಶಾಸನ ಗಳಲ್ಲಿ ಮತ್ತು ಸಮಾಜದ ಸಂಗತಿಗಳ ನಡುವಿನ ಕೊಂಡಿಗಳನ್ನು ಬೆಸೆಯಲು ಐತಿಹ್ಯಗಳನ್ನು ತನ್ನ ಸುತ್ತಲಿನ ಪ್ರಪಂಚಗಳನ್ನು ದಾಖಲಿಸಿ ಇತಿಹಾಸವನ್ನು ಪೂರ್ಣವಾಗಿ ಕಟ್ಟಿಕೊಡಲು ಪ್ರಯತ್ನಿಸುತ್ತಾನೆ.

ಕರ್ನಾಟಕದಲ್ಲಿ ಸ್ಥಳೀಯರಿಗೆ ಶಾಸನಗಳ ಓದುವಿಕೆಯ ಬಗ್ಗೆ ಅರಿವಿತ್ತು. ಆದರೆ, ಅದರ ವೈಧಾನಿಕತೆಯ ತಿಳಿವಳಿಕೆಯಿರಲಿಲ್ಲ. ಯಾವುದಾದರೂ ಒಂದು ವಿಷಯದ ಬಗ್ಗೆ ಕೇಳಿದರೆ ಮೌಖಿಕವಾಗಿ ತಿಳಿದಿರುವ ಚರಿತ್ರೆಯ ಜೊತೆಗೆ ಐತಿಹ್ಯ, ಪುರಾಣಗಳನ್ನು ಸೇರಿಸಿ ಚರಿತ್ರೆಯನ್ನು ಗೋಜಲುಗೊಳಿಸುತ್ತಿದ್ದರು. ಬ್ರಿಟೀಷರು ಸ್ಥಳೀಯ ಪಂಡಿತರ ನೆರವನ್ನು ಪಡೆದು ಶಾಸನಗಳನ್ನು ಒಂದು ನಿರ್ದಿಷ್ಟ ವಿಧಾನ ಅನುಸರಿಸಿ ಸಂಪಾದಿಸಲು ಆರಂಭಿಸಿದರು.

ಕ್ರಿ.ಶ. ೧೮೦೦ ರಿಂದ ಆರಂಭಗೊಂಡ ಆಕರಮುಖಿ ಅಧ್ಯಯನ ಸ್ವರೂಪದ ಶಾಸನಗಳ ಸಂಗ್ರಹ ಮತ್ತು ಪ್ರಕಟಣ ಕಾರ್ಯ ಇಂದಿಗೂ ಆಕರಗಳನ್ನು ಸಂಗ್ರಹಿಸಿ ಒಂದೆಡೆ ಕಟ್ಟಿಕೊಡುವಂತಹ ಮತ್ತು ಪ್ರಕಟಿಸುವ ಪ್ರಕ್ರಿಯೆಯಾಗಿಯೇ ಮುಂದುವರೆದಿದೆ. ಕರ್ನಾಟಕದಾದ್ಯಂತ ದೊರೆಯುವ ಅಗಾಧ ಪ್ರಮಾಣದ ಶಾಸನಗಳು ಇದಕ್ಕೆ ಕಾರಣ. ಕಾಲಿನ್ ಕರ್ನಲ್ ಮೆಕಂಜಿ, ವಾಲ್ಟರ್ ಎಲಿಯೆಟ್, ಬಿ.ಎಲ್. ರೈಸ್, ಫ್ಲೀಟ್, ಆರ್. ನರಸಿಂಹಾಚಾರ್, ಎಂ.ಎಚ್. ಕೃಷ್ಣ, ಬಿ.ಆರ್. ಗೋಪಾಲ್, ಕೆ.ವಿ. ರಮೇಶ್, ದೇವರಕೊಂಡಾರೆಡ್ಡಿ ಮುಂತಾದ ವಿದ್ವಾಂಸರು ವ್ಯಕ್ತಿಗತ ನೆಲೆಯಲ್ಲಿ ಹಾಗೂ ಸಾಂಸ್ಥಿಕವಾಗಿ ಅಸಂಖ್ಯ

ಸಂಖ್ಯೆಯ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಇಂದಿಗೂ ಸಹ ವೈಯಕ್ತಿಕ ನೆಲೆಯಲ್ಲಿ ಶಾಸನ ಸಂಗ್ರಹಣಾ ಕಾರ್ಯ ಮುಂದುವರೆಯುತ್ತಲೇ ಇದೆ.

ಇಷ್ಟೆಲ್ಲ ಪ್ರಯತ್ನಗಳು ನಡೆಯುತ್ತಿದ್ದರೂ, ವಸಾಹತುಶಾಹಿ ಬರಹಗಾರರು 'ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲ' ಎಂಬ ಒಟ್ಟಂದದ ಅಭಿಪ್ರಾಯಕ್ಕೆ ಬಂದುಬಿಟ್ಟರು. ಭಾರತೀಯರು ಆಗಿ ಹೋದ ತಮ್ಮ ಹಿರಿಯರ, ಗತದಲ್ಲಿ ಕಳೆದುಹೋದ ನಮ್ಮ ಪರಂಪರೆ, ಅನಾದಿ ಕಾಲದಿಂದಲೂ ಅನುಸರಿಸಿಕೊಂಡು ಬರುತ್ತಿದ್ದ ಆಚಾರ ನಡವಳಿಕೆಗಳನ್ನು ಮೌಖಿಕವಾಗಿ ತಲೆಮಾರಿನಿಂದ ತಲೆಮಾರಿಗೆ ದಾಟಿಸಿಕೊಂಡೇ ಬಂದಿದ್ದಾರೆ. ಮಧ್ಯಕಾಲೀನ ಐತಿಹಾಸಿಕ ಕೃತಿಗಳು ತಮ್ಮದು ಇತಿಹಾಸ ಅಥವಾ ಚರಿತ್ರೆಯೆಂದು ಎಲ್ಲೂ ದಾಖಲಿಸಿಕೊಳ್ಳುವುದಿಲ್ಲ. ಕೃತಿಕಾರರು ತಮ್ಮ 'ನಿಜ'ದ ದನಿಗಳನ್ನಷ್ಟೇ ಅಲ್ಲಿ ದಾಖಲಿಸಿದ್ದಾರೆ. ಅಂಥ 'ನಿಜ'ದ 'ದನಿ' ಗಳು ನಡೆದ ಸಂಗತಿಗಳನ್ನು, ಕೇಳಿದ ವಿಷಯವನ್ನು ಅಥವಾ ಜನರಲ್ಲಿ ಪ್ರಚಲಿತದಲ್ಲಿದ್ದ ಪುರಾಣ ಐತಿಹ್ಯಗಳನ್ನು ಸೇರಿಸಿ ಬರೆದಿರಬಹುದು. ರೋಮಿಲಾ ಥಾಪರ್‌ರವರು ಅಭಿಪ್ರಾಯಪಡುವಂತೆ "ಗತಕಾಲದ ಸಮಾಜ ತನ್ನ ಅಗತ್ಯತೆಗೆ ಸಮುಚಿತವಾಗುವ ರೀತಿಯಲ್ಲಿ ತಮ್ಮ ಚರಿತ್ರೆಯನ್ನು ದಾಖಲಿಸಿತು. ಹಾಗಾಗಿ ಐತಿಹಾಸಿಕ ಬರಹಗಳು ಏಕರೂಪತೆಯನ್ನು ಅನುಸರಿಸಲಿಲ್ಲ. ನನ್ನ ಮಟ್ಟಿಗೆ ಈ ಪಠ್ಯಗಳಲ್ಲಿ ಪ್ರತಿಪಾದಿಸಿದ ಮಾಹಿತಿಯ ಐತಿಹಾಸಿಕ ಖಚಿತತೆಗಿಂತ ಅವರು ಗತಕಾಲವನ್ನು ಯಾವ ರೀತಿ ಗ್ರಹಿಸಿದರು ಮತ್ತು ವರ್ತಮಾನಕ್ಕೆ ಅದನ್ನು ಯಾವ ರೀತಿಯಲ್ಲಿ ಪ್ರಸ್ತುತಪಡಿಸಿಕೊಂಡರು ಎಂಬುದು ಮುಖ್ಯ".[೨] ರೋಮಿಲಾ ಥಾಪರ್‌ರವರ ಈ ಅಭಿಪ್ರಾಯವನ್ನು ಕರ್ನಾಟಕದ ಸಂದರ್ಭಕ್ಕೂ ಅನ್ವಯಿಸಿಕೊಳ್ಳಬಹುದು. ಕರ್ನಾಟಕದಲ್ಲಿ ಈವರೆಗೆ ನಡೆದ ಅಧ್ಯಯನಗಳು ಪ್ರಭುತ್ವ ವರ್ಗದಿಂದ ಹೊರಡಿಸಲ್ಪಟ್ಟ ಶಾಸನಗಳನ್ನು ಮಾತ್ರ ಕೇಂದ್ರೀಕರಿಸಿಕೊಂಡಿವೆ. ಶಾಸನಗಳೆಂದರೆ, ರಾಜರಿಂದ ಹೊರಡಿಸಲ್ಪಟ್ಟ ಆಜ್ಞಾರೂಪಗಳೆಂದೇ ವ್ಯಾಖ್ಯಾನಿಸಲಾಗಿದೆ. ಆದರೆ, ಸಮುದಾಯಗಳಲ್ಲಿ ದಾಖಲೆಗೊಂಡು, ಸಮುದಾಯಗಳ ಸ್ವತ್ತಾಗಿಯೇ ಉಳಿದುಕೊಂಡು ಬಂದಿರುವ ಜಯರೇಖೆಗಳಂತಹ ಶಾಸನಗಳನ್ನು ಅಧ್ಯಯನಗಳ ವ್ಯಾಪ್ತಿಯಿಂದ ಹೊರಗಿಡಲಾಗಿದೆ.

ಜಯರೇಖೆಗಳಿಗೆ ಸಂಬಂಧಿಸಿದ ಆಕರಗಳ ಸಂಗ್ರಹವೂ ಈ ಪ್ರಕ್ರಿಯೆಯಿಂದ ಹೊರತಾಗಿಲ್ಲ. ಜಯಪತ್ರಗಳ ಹೊರತಾಗಿ ಜಯರೇಖೆಗಳು, ಜಯಪತ್ರಿಕೆಗಳು, ಕಂಚಿಪತ್ರಗಳ ಹಿನ್ನೆಲೆಯಲ್ಲಿ ಅಧ್ಯಯನ ಗಳು ನಡೆದದ್ದೇ ಇಲ್ಲ. ಆಗಿರುವ ಅಧ್ಯಯನಗಳು ಸಹ ಆಕರಗಳನ್ನು ಸಂಗ್ರಹಿಸಿ ಪ್ರಕಟಿಸುವ ನೆಲೆಗಟ್ಟಿನಲ್ಲೇ ಆಗಿವೆ. ಸಮುದಾಯಗಳಿಗೆ ಜಯರೇಖೆಗಳಲ್ಲಿ ತಮ್ಮ ಕುಲಾಚಾರಗಳ ಬಗ್ಗೆ, ಕುಲದ ಮೂಲ ಪುರುಷರ ಬಗ್ಗೆ ಬರೆಯಲಾಗಿದೆಯೆಂಬ ಸಂಗತಿಯ ಅರಿವು ಇರುವುದರ ಜೊತೆಗೆ, ಅವುಗಳನ್ನು ಇತರರಿಗೆ ತೋರಿಸಬಾರದೆಂಬ ಮನೋಭಾವವನ್ನು ಸಹ ಹೊಂದಿರುವುದರಿಂದ ಹೆಚ್ಚಿನ ಸಂಖ್ಯೆಯ ಜಯರೇಖೆಗಳು ಇನ್ನೂ ಅಜ್ಞಾತವಾಗಿ, ಅಪ್ರಕಟಿತ ಸ್ಥಿತಿಯಲ್ಲೇ ಉಳಿದಿವೆ. ಇದಲ್ಲದೆ, ತಾಮ್ರದ ಪತ್ರಗಳಲ್ಲಿರುತ್ತಿದ್ದ ಇವುಗಳನ್ನು ಕಾಗದದ ಪ್ರತಿಗಳಲ್ಲಿ ನಕಲು ಮಾಡಿಕೊಳ್ಳುತ್ತಿದ್ದರು. ಕಾಗದವು ಬೇಗ

ಹಾಳಾಗುವ ಮಾಧ್ಯಮವಾದ್ದರಿಂದ ಸಹಜವಾಗಿಯೇ ನಕಲು ಮಾಡಿಟ್ಟುಕೊಂಡಿರುವ ಜಯರೇಖೆಗಳೂ ಸಹ ಹಾಳಾಗಿವೆ. ಆದರೂ, ಇತ್ತೀಚೆಗೆ ಕೆಳ ಸಮುದಾಯಗಳು ಅಕ್ಷರಲೋಕಕ್ಕೆ ತಮ್ಮನ್ನು ತೆರೆದುಕೊಂಡ ಫಲಿತವಾಗಿ ತಮ್ಮ ಕುಟುಂಬಗಳಲ್ಲಿರುವ ದಾಖಲೆಪತ್ರಗಳನ್ನು ಪ್ರಕಟಣೆಗಾಗಿ ನೀಡಲಾರಂಭಿಸಿದ್ದಾರೆ. ಹಾಗಾಗಿ ಬಹುತೇಕ ವಿದ್ವಾಂಸರು ಅಪ್ರಕಟಿತ ಜಯರೇಖೆಗಳನ್ನು ಪ್ರಕಟಿಸುವ ಪ್ರಯತ್ನದಲ್ಲಿ ಅವುಗಳ ಪಠ್ಯಗಳನ್ನು ಓದಿ ಪ್ರಕಟಿಸುವ ಕಡೆಗೇ ಹೆಚ್ಚು ಒಲವನ್ನು ತೋರಿಸುತ್ತಿದ್ದಾರೆ. ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿರುವ ನಿದರ್ಶನಗಳು ತುಂಬಾ ವಿರಳವಾಗಿವೆ. ನಡೆಸಿರುವ ವಿಶ್ಲೇಷಣೆಗಳೂ ಮೇಲ್ಪದರದ ಅರ್ಥಗ್ರಹಿಕೆಯನ್ನು ಮಾತ್ರ ಹೊಂದಿವೆ.

ಪ್ರಧಾನವಾಗಿ ಎಪಿಗ್ರಾಫಿಯಾ ಇಂಡಿಕ, ಎಪಿಗ್ರಾಫಿಯ ಕರ್ನಾಟಿಕ, ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು ಹಾಗೂ ಶಾಸನ ಅಧ್ಯಯನ ಸಂಚಿಕೆಗಳಲ್ಲಿ, ವಿಜಯನಗರ ಅಧ್ಯಯನ ಸಂಪುಟಗಳು ಹಾಗೂ ಕರ್ನಾಟಕ ಇತಿಹಾಸ ಅಕಾಡೆಮಿಯ ಇತಿಹಾಸ ದರ್ಶನ ಸಂಪುಟಗಳಲ್ಲಿ ಕಳೆದ ಎರಡು ಮೂರು ದಶಕಗಳಿಂದೀಚೆಗೆ ಹೆಚ್ಚಿನ ಸಂಖ್ಯೆಯ ಜಯರೇಖೆಗಳು ಸಂಪಾದನೆಗೊಂಡು ಬಿಡಿ ಆಕರಗಳಾಗಿ, ಲೇಖನಗಳಾಗಿ ಪ್ರಕಟಗೊಂಡಿವೆ.

ಇವುಗಳಲ್ಲಿ ಪ್ರಧಾನವಾಗಿ ಅಬ್ಬಲೂರು ಏಕಾಂತದ ರಾಮಯ್ಯನ ಜಯಪತ್ರ, ಶ್ರವಣಬೆಳಗೊಳದ ಬುಕ್ಕರಾಯನ ಶಾಸನ, ಆನೆಗೊಂದಿ ರೂಢಾಚಾರ್ಯ ಮಠದ ತಾಮ್ರಶಾಸನ, ಕೊಯಮತ್ತೂರಿನ ಮತಾಂತರಕ್ಕೆ ಸಂಬಂಧಪಟ್ಟ ಜಯರೇಖೆ, ಲಕ್ಷ್ಮೇಶ್ವರದ ಎರಡು ಜಯಪತ್ರಗಳು, ಧರ್ಮಸ್ಥಳದ ಓಲಗದವರಿಗೂ ಮತ್ತು ಮಡಿವಾಳರಿಗೂ ನಡೆದ ಪಣವ್ಯಾಜ್ಯದ ಕಂಚಿಪತ್ರ, ಪೆದ್ದಿಂಟಿಗೊಲ್ಲರ ಜಯರೇಖೆ, ರೊಳ್ಳದ ಜಯರೇಖೆ, ದಾವಣಗೆರೆ ಗೌಡಿಕೆಗೆ ಸಂಬಂಧಿಸಿದ ಜಯರೇಖೆ ಮುಂತಾದ ಆಕರ ಪಠ್ಯಗಳನ್ನು ಗಮನಿಸಬಹುದು. ಇವಲ್ಲದೆ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿ ಮಾಲೆಯ ಅಂಗವಾಗಿ ಪ್ರಕಟವಾದ ಹೆಳವರ ಸಂಸ್ಕೃತಿ, ಸಿಂದ್ ಮಾದಿಗರು, ಮಾಸ್ಟೀಕರ ಸಂಸ್ಕೃತಿ, ಗೋಸಂಗಿ, ಕೊರಮ, ದಕ್ಕಲಿಗರು, ಮುಂತಾದ ಕೃತಿಗಳಲ್ಲಿ ಸಹ ಕಂಚಿಪತ್ರಗಳು ಪ್ರಕಟವಾಗಿವೆ. ಕರ್ನಾಟಕದ ಕೈಫಿಯತ್ತುಗಳು ಕೃತಿಯಲ್ಲಿ ಕೆಲವು ಕೈಫಿಯತ್ತುಗಳು ಜಯರೇಖೆಗಳ ಸ್ವರೂಪದಲ್ಲಿದ್ದು, ಅವುಗಳನ್ನೂ ಸಹ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಎಡ್ಗರ್ ಥರ್ಸ್ಟನ್ ಅವರು ತಮ್ಮ ಸೌತ್ ಇಂಡಿಯನ್ ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಕೃತಿಯಲ್ಲಿ ದಕ್ಷಿಣ ಕರ್ನಾಟಕದ ಸಮುದಾಯಗಳ ಬಗ್ಗೆ ಸಮೀಕ್ಷೆ ನಡೆಸಿ ಅವರ ಮೂಲ–ಚೂಲಗಳ ಬಗ್ಗೆ ಸ್ವಲ್ಪ ಮಟ್ಟಿಗೆ ಗಮನಸೆಳೆದಿದ್ದಾರೆ. ಇಲ್ಲಿ ಅವರು ವಿವಿಧ ಸಮುದಾಯಗಳ ಜನರ ಬಗ್ಗೆ ತಿಳಿಸುವಾಗ ಜಾನಪದರಲ್ಲಿ ಅಥವಾ ಆಯಾ ಸಮುದಾಯಗಳಲ್ಲಿ ತಮ್ಮ ತಮ್ಮ ಕುಲಮೂಲಗಳ ಬಗ್ಗೆ ಪ್ರಚಲಿತದಲ್ಲಿದ್ದ ಪೌರಾಣಿಕ ನಂಬಿಕೆ, ಹಿನ್ನಲೆ, ಐತಿಹ್ಯಗಳನ್ನು ಮತ್ತು ಅದಕ್ಕೆ ಸಂಬಂಧಿಸಿದಂತೆ ಇರುವ ದಾಖಲೆಗಳನ್ನು ಕಂಚಿಪತ್ರಗಳನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡಿರುತ್ತಾರೆ. ಆನಂತರ, ಇವರನ್ನು

ಅನುಸರಿಸಿ ವಸಾಹತುಶಾಹಿ ಕಾಲಘಟ್ಟದಲ್ಲಿ ಹಲವಾರು ವಿದ್ವಾಂಸರು ಕುಲಮೂಲ ಅಧ್ಯಯನಗಳನ್ನು ನಡೆಸಿರುತ್ತಾರೆ. ಆದರೆ, ಇಲ್ಲಿ ಜಯಪತ್ರಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ. ಆದರೆ, ಕ್ವಚಿತ್ತಾಗಿ ಕಂಚಿಪತ್ರಗಳಲ್ಲಿನ ಮಾಹಿತಿಯನ್ನು ಬಳಸಿಕೊಂಡಿರುತ್ತಾರೆ.

**ವಿಶ್ಲೇಷಣಾಮುಖಿ ನೆಲೆ**

ಜಯರೇಖೆಗಳ ಬಗ್ಗೆ ಪ್ರಾಚೀನ ಭಾರತೀಯ ಕೃತಿಗಳನ್ನು ಆಧರಿಸಿ ಇಂಗ್ಲಿಷ್ ಭಾಷೆಯಲ್ಲಿ ಕೆಲವು ಚರ್ಚೆಗಳು ನಡೆದಿವೆ. ಅವುಗಳಲ್ಲಿ ಪ್ರಧಾನವಾಗಿ Mahesh Kumar Sharan ರವರ Court Procedure in Ancient India on the basis of Dharmashastra Literature, Rama Jois ರವರ Legal and Constitutional Histroy of India, K.P. Jayaswal ರವರ Proceedings and Judgement of Hindu Court in Sanskrit, Amareshawar Thakur ರವರ Shasana and Jayapatra ಲೇಖನ ಹಾಗೂ ಕೃತಿಗಳಲ್ಲಿ ಪ್ರಾಚೀನ ಧರ್ಮಶಾಸ್ತ್ರಕಾರರು ಜಯಪತ್ರದ ಬಗ್ಗೆ ನೀಡಿರುವ ವ್ಯಾಖ್ಯಾನಗಳ ಬಗ್ಗೆ ವಿಸ್ತೃತ ಚರ್ಚೆ ನಡೆಸಲಾಗಿದೆ.

ಆದರೆ ಈ ಎಲ್ಲ ಕೃತಿಗಳಲ್ಲೂ ಜಯಪತ್ರಗಳನ್ನು ಪ್ರಾಚೀನ ಭಾರತದ ನ್ಯಾಯವ್ಯವಸ್ಥೆಯ ಒಂದು ಭಾಗವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ. ಅಲ್ಲದೆ, ಇವು ಕರ್ನಾಟಕದಲ್ಲಿ ಕಂಡುಬಂದ ಜಯಪತ್ರಗಳಿಗಿಂತ ಭಿನ್ನವಾಗಿವೆ. ಇವುಗಳ ವಿಶ್ಲೇಷಣೆಯ ಆಧಾರದ ಮೇಲೆ ಕರ್ನಾಟಕದ ಜಯಪತ್ರಗಳ ಬೀಜರೂಪಿ ಚಿಂತನೆಗಳು ಎಲ್ಲಿ ಮೊದಲಿಗೆ ಮೊಳೆತಿದ್ದವು ಎಂಬುದನ್ನು ಕಂಡುಕೊಳ್ಳಲು ಸಾಧ್ಯವಾಯಿತು.

ಕನ್ನಡ ಶಾಸನಗಳನ್ನಾಧರಿಸಿ ಕರ್ನಾಟಕದ ನ್ಯಾಯನಿರ್ಣಯ ವಿಧಾನದ ಬಗ್ಗೆ ಪ್ರತ್ಯೇಕವಾದ ಅಧ್ಯಯನಗಳು ನಡೆದಿರುವುದಿಲ್ಲ. ರಾಜಮನೆತನಗಳನ್ನು ಅಥವಾ ಸಮಗ್ರವಾಗಿ ಎಲ್ಲ ಶಾಸನ ಗಳನ್ನಾಧರಿಸಿ ನಡೆದ ಅಧ್ಯಯನಗಳಲ್ಲಿ ಒಂದು ಅಧ್ಯಾಯ ಅಥವಾ ಉಪ-ಅಧ್ಯಾಯವಾಗಿ ಇವುಗಳ ಬಗ್ಗೆ ಚರ್ಚಿಸಲಾಗಿದೆ. ಆದರೆ ಈ ಚರ್ಚೆಗಳಲ್ಲಿ ಪ್ರಭುತ್ವ ಕೇಂದ್ರಿತ ನ್ಯಾಯಾಡಳಿತವನ್ನೇ ಚರ್ಚಿಸಿವೆ. ಲಕ್ಷ್ಮಣ್ ತೆಲಗಾವಿಯವರ ಸಂಪಾದಕತ್ವದಲ್ಲಿ ಹೊರಬಂದ 'ಪಾಳೆಯಗಾರರ ಕಾಲದ ನ್ಯಾಯಾಡಳಿತ' ಕೃತಿಯು ಈ ಮಟ್ಟಿನ ಕೊರತೆಯನ್ನು ಸ್ವಲ್ಪ ಮಟ್ಟಿಗೆ ನೀಗಿಸುತ್ತದೆ. ಈ ಕೃತಿಯಲ್ಲಿ ವಿವಿಧ ಲೇಖಕರು ಲಭ್ಯ ಶಾಸನಗಳ ಆಧಾರದ ಮೇಲೆ ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದ ಪಾಳೆಯಗಾರರ ಕಾಲದ ನ್ಯಾಯಪದ್ಧತಿಯ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಪ್ರಭುತ್ವದ ಸಮಕ್ಷಮದಲ್ಲಿ ನಡೆಯುವ ನ್ಯಾಯ ಪದ್ಧತಿಗಿಂತ ತಳ ಸಮುದಾಯಗಳು ತಮ್ಮ ಛಾವಡಿಗಳಲ್ಲೇ, ತಮ್ಮ ಕುಲಗಳಿಗೆ ಸಂಬಂಧಿಸಿದ ಆಚಾರಗಳನ್ನು ಕುಲಕಟ್ಟಳೆಗಳ ಮೂಲಕ ಬಗೆಹರಿಸಿಕೊಳ್ಳುವ, ನಿರ್ಣಯಿಸಿಕೊಳ್ಳುವ ವಿಧಾನವನ್ನು ಮೊದಲಿಗೆ ಇಲ್ಲಿ ಅನಾವರಣಗೊಳಿಸಲಾಗಿದೆ. ಆದರೆ, ಇಲ್ಲೂ ಸಹ ಜಯರೇಖೆಗಳನ್ನು ನ್ಯಾಯಪದ್ಧತಿಯ

ಹಿನ್ನಲೆಯಲ್ಲಿಯೇ ವಿವೇಚಿಸಿ, ಉಳಿದೆಲ್ಲ ಅಂಶಗಳನ್ನು ಗೌಣಗೊಳಿಸಿರುವುದರಿಂದ ಈ ಕೃತಿಗೂ ಒಂದು ಪರಿಮಿತಿ ಇದೆ ಎಂದು ಭಾವಿಸಲಾಗಿದೆ.

ಕನ್ನಡದಲ್ಲಿ 'ಜಯಪತ್ರ'ಗಳ ಬಗ್ಗೆ ವಿಶ್ಲೇಷಣಾತ್ಮಕ ವಿವರಣೆಗಿಂತ ಹೆಚ್ಚಾಗಿ, ಅವುಗಳಿಗೆ ನಿಘಂಟುಗಳಲ್ಲಿ ಅರ್ಥ ನೀಡಲು ಮತ್ತು ವ್ಯಾಖ್ಯಾನಗಳನ್ನು ನೀಡಲು ಮಾತ್ರ ಪ್ರಯತ್ನಿಸಲಾಗಿದೆ. ಕನ್ನಡ ಶಾಸನಗಳನ್ನು ಮೊದಲಿಗೆ ಸಾಂಸ್ಕೃತಿಕ ಅಧ್ಯಯನಕ್ಕೊಳಪಡಿಸಿದ ಚಿದಾನಂದಮೂರ್ತಿಯವರೂ ಸಹ ಜಯಪತ್ರಗಳನ್ನು ಅವು ಒಳಗೊಂಡ ವಿಷಯವನ್ನಾಧರಿಸಿ ಧಾರ್ಮಿಕ ಸಂಘರ್ಷದ ಭಾಗವಾಗಿಯೇ ವಿಶ್ಲೇಷಿಸಿರುತ್ತಾರೆ. ತಮ್ಮ ಕೃತಿಯಲ್ಲಿ ಅವರು ಜೈನಧರ್ಮದ ಉಗಮ, ವಿಕಾಸ, ಅವನತಿಯ ಬಗ್ಗೆ ಹಾಗೂ ಜೈನ–ಶೈವ, ಜೈನ–ವೈಷ್ಣವ ಧರ್ಮದ ಸಂಘರ್ಷದ ಬಗ್ಗೆ ವಿಶ್ಲೇಷಿಸುತ್ತಾ ಅಬ್ಬಲೂರಿನ ಜಯಪತ್ರದ ಬಗ್ಗೆ ಪ್ರಾಸಂಗಿಕವಾಗಿ ವಿವರ ನೀಡುತ್ತಾರೆ. ಈ ಶಾಸನದ ಬಗ್ಗೆ ವಿವಿಧ ವಿದ್ವಾಂಸರು ಪದೇ ಪದೇ ಉಲ್ಲೇಖಗಳನ್ನು ಮಾಡುತ್ತಿದ್ದರೂ ಎಲ್ಲ ವಿವರಣೆಗಳಲ್ಲಿಯೂ ಸಹ ಅಬ್ಬಲೂರಿನ ಜಯ ಪತ್ರವನ್ನು 'ಜಯಪತ್ರ' ದ ಪರಿಕಲ್ಪನೆಯ ಹಿನ್ನೆಲೆಯಲ್ಲಿನ ಚರ್ಚೆಗಿಂತ ಜೈನ ಮತ್ತು ಶೈವ ಧರ್ಮದ ಧಾರ್ಮಿಕ ಸಂಘರ್ಷದ ಘಟಕವಾಗಿಯೇ ವಿಶ್ಲೇಷಣೆಗೊಳಗಾಗಿದೆ.

ಜಯರೇಖೆಗಳ ಮುಂದುವರೆದ ಪರಿಕಲ್ಪನೆಯಾದ ಕಂಚಿಪತ್ರಗಳು ಕರ್ನಾಟಕದ ಶಾಸನ ಕ್ಷೇತ್ರದ ವಿಶಿಷ್ಟ ಪ್ರಕಾರಕ್ಕೆ ಸೇರುತ್ತವೆ. ಇವು ಬಹುತೇಕ ಪಣಕಟ್ಟು ಕಲಹಗಳ ವಸ್ತುವಿಷಯವನ್ನು ಒಳಗೊಂಡಿವೆ. ಹಯವದನರಾವ್ ಅವರು ತಮ್ಮ 'ಮೈಸೂರು ಗೆಝೆಟಿಯರ್' ನಲ್ಲಿ ಮೊಟ್ಟಮೊದಲ ಬಾರಿಗೆ ಕರ್ನಾಟಕದಲ್ಲಿರುವ ಪಣ ಸಮಾಜದ ಬಗ್ಗೆ ಚರ್ಚೆ ನಡೆಸಿರುತ್ತಾರೆ. ಪಣ ವ್ಯಾಜ್ಯಗಳಿಗೆ ಸಂಬಂಧಿಸಿದಂತೆ ಲಕ್ಷ್ಮೀಪತಿ ಕೋಲಾರರವರು ತಮ್ಮ ಮಾಸ್ತಿಕರ ಸಂಸ್ಕೃತಿ ಎಂಬ ಕೃತಿಯಲ್ಲಿ ಸುದೀರ್ಘವಾಗಿ ವಿಶ್ಲೇಷಿಸಿದ್ದಾರೆ. ಅದರಲ್ಲಿ ಕಂಚಿ ಪತ್ರಗಳಿಗೂ, ಕಂಚಿಗೂ, ತಳ ಸಮುದಾಯಗಳಿಗೂ ಇರುವ ಸಂಬಂಧದ ಬಗ್ಗೆ ಅಧ್ಯಯನಪೂರ್ಣ ಮಾಹಿತಿಯನ್ನು ನೀಡಿದ್ದಾರೆ. ಹಾಗೆಯೇ ಕೋಟಗಾನ ಹಳ್ಳಿ ರಾಮಯ್ಯನವರು ತಮ್ಮ 'ಸಿಂದ್ ಮಾದಿಗರ ಸಂಸ್ಕೃತಿ' ಕೃತಿಯಲ್ಲಿ ಸಿಂದ್ ಮಾದಿಗ ಸಮುದಾಯದ ಪೌರಾಣಿಕ/ಸಾಮಾಜಿಕ ಹಿನ್ನಲೆಯನ್ನು ತಿಳಿಸುವ ಕಂಚಿ ಶಾಸನವನ್ನು ವಿಶ್ಲೇಷಿಸುತ್ತಾ, ಎಡಗೈ ಮತ್ತು ಬಲಗೈ ಪಣಕಟ್ಟುಗಳ ನಡುವಿನ ಸಂಘರ್ಷದ ಬಗ್ಗೆ ಚರ್ಚೆ ನಡೆಸಿರುತ್ತಾರೆ. ಈ ಹಿಂದೆಯೇ ತಿಳಿಸಲಾದಂತೆ ಈ ವಿಷಯದ ಬಗ್ಗೆ ಹೆಚ್ಚಿನ ಅಧ್ಯಯನಗಳು ನಡೆಯದಿರುವುದರಿಂದ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ.

ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯಿಂದ ಜಯರೇಖೆಗಳ ಕುರಿತಂತೆ ಈ ಅಧ್ಯಯನ ಗಳಲ್ಲಿ ನೀಡಲಾಗಿರುವ ವಿಷಯಗಳು ತುಂಬಾ ಆಂಶಿಕವಾಗಿದ್ದು, ಅಪೂರ್ಣವಾಗಿವೆ. ನೀಡಿರುವ ಅಭಿಪ್ರಾಯಗಳು, ಮಾಡಿರುವ ವ್ಯಾಖ್ಯಾನಗಳು ಸಹ ಆಕರ ಸಂಗ್ರಹಣೆ, ನ್ಯಾಯಿಕ ಹಿನ್ನೆಲೆ, ಧರ್ಮದ ಪರಿಕಲ್ಪನೆಯಡಿಯಲ್ಲಿಯೇ ನಡೆದಿವೆ. ನಡೆದಿರುವ ಅಧ್ಯಯನಗಳೂ ತೀರಾ ನಗಣ್ಯವಾಗಿದ್ದು, ಕ್ವಚಿತ್ತಾಗಿವೆ

ಮತ್ತು ಅವು ಪ್ರಾಸಂಗಿಕವಾಗಿ ವಾಕ್ಯಗಳ ನಡುವೆಯೋ ಅಥವಾ ಒಂದು ಲೇಖನಕ್ಕಷ್ಟೇ ಪರಿಮಿತವಾಗಿಯೋ ನಡೆದಿವೆ. ಈವರೆಗೆ ಪೂರ್ಣಪ್ರಮಾಣದ ಅಧ್ಯಯನ ನಡೆದ ನಿದರ್ಶನಗಳು ಇಲ್ಲದಿರುವುದರಿಂದ, ಇದೊಂದು ಮೊಟ್ಟಮೊದಲ ಪ್ರಯತ್ನವಾಗಿದೆ. ಹಾಗಾಗಿ ಜಯರೇಖೆಗಳ ಕುರಿತಂತೆ ವಿದ್ವಾಂಸರ ದೃಷ್ಟಿಕೋನ ಮತ್ತು ವಿಶ್ಲೇಷಣಾ ವಿಧಾನವನ್ನು ಕುರಿತು ಗಂಭೀರವಾದ ಪ್ರಶ್ನೆಗಳನ್ನು ಎತ್ತಲು ಸಹ ಈ ಅಧ್ಯಯನದಲ್ಲಿ ಅವಕಾಶವಿದೆ.

**ಅಡಿಟಿಪ್ಪಣಿಗಳು:**

೧. ಕಲಬುರ್ಗಿ ಎಂ.ಎಂ: ಕರ್ನಾಟಕದ ಕೈಫಿಯತ್ತುಗಳು, ಪುಟ–X

೨. Romila Thaper: Cultural Pasts, Essays in Early Indian History, P. 123-172

* * *

# ಅಧ್ಯಾಯ-೨

## ಜಯರೇಖೆ ಶಾಸನಗಳ ಸಾಂಸ್ಕೃತಿಕ ಸಂಕಥನದ ತಾತ್ವಿಕ ಚರ್ಚೆ

## ಅಧ್ಯಾಯ-೨

### ಜಯರೇಖೆಗಳ ಸಾಂಸ್ಕೃತಿಕ ಸಂಕಥನದ ತಾತ್ವಿಕ ಚರ್ಚೆ

ಜಯಪತ್ರ, ಜಯರೇಖೆ, ಜಯಲೇಖೆ, ಜಯಪತ್ರಿಕಾ, ರಾಯರೇಖೆ, ಸೋತಪತ್ರ, ಕಂಚಿನ ಸನದು, ಕಂಚಿಪತ್ರ, ತಾಮ್ರದ ಪತ್ರ ಹೀಗೆ ವೈವಿಧ್ಯಮಯ ಹೆಸರುಗಳಿಂದ ಕರೆಯಲ್ಪಟ್ಟಿರುವ ಜಯರೇಖೆಗಳ ಪರಿಕಲ್ಪನೆ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಸಾಗುತ್ತದೆ. ಹೀಗಾಗಿ ಕಾಲಬದ್ಧ ಅಧ್ಯಯನದ ವ್ಯಾಪ್ತಿಯೊಳಗೆ ಮತ್ತು ಒಂದೇ ಪರಿಕಲ್ಪನೆಯ ಚೌಕಟ್ಟಿನೊಳಗೆ ಇದನ್ನು ತರುವುದು ಕಷ್ಟ ಒಂದು ಕಾಲಘಟ್ಟಕ್ಕೆ ಅಥವಾ ಒಂದು ಪರಿಕಲ್ಪನೆಯ ಅರ್ಥವ್ಯಾಪ್ತಿಯೊಳಗೆ ಪರಿಮಿತಗೊಳಿಸಿ ಅಧ್ಯಯನಕ್ಕೊಳಪಡಿಸಿದರೆ, ಅದು ಏಕಮುಖಿ ವ್ಯಾಖ್ಯಾನವಾಗತ್ತದೆಯೇ ವಿನಾ, ಜಯರೇಖೆಗಳ ಬಹುಮುಖಿ ಪರಿಕಲ್ಪನೆಗಳನ್ನು, ಅರ್ಥ ವಿಕಸನಗಳನ್ನು ಅರ್ಥಮಾಡಿಕೊಳ್ಳುವುದು ಅಸಾಧ್ಯ.

ಜಯಪತ್ರ ಕಥನವು ಮಧ್ಯಕಾಲೀನ ಸಮುದಾಯಗಳ ಜೀವನ್ಮುಖಿ ಹೋರಾಟದ ಕಥನವೇ ಆಗಿದೆ.ಬಾಳ್ವೆಗಾಗಿ, ಸಮಾಜದಲ್ಲಿ ತಮ್ಮ ಅಸ್ತಿತ್ವ ಉಳಿಸಿಕೊಳ್ಳುವುದಕ್ಕಾಗಿ, ಸಮುದಾಯಗಳ ನಡುವೆ ತಮ್ಮ ಛಾಪನ್ನು, ಅನನ್ಯತೆಯನ್ನು ಮೂಡಿಸುವುದಕ್ಕಾಗಿ ಸಮುದಾಯಗಳು ತಾಕಲಾಡಿದ ರೀತಿ, ಸಾಧಿಸಿದ ಗೆಲುಮೆ, ಗೆಲುಮೆಯ ದಾಖಲೀಕರಣ, ಲಿಖಿತ ದಾಖಲಾತಿಗಳನ್ನು ಭದ್ರವಾಗಿ ತಮ್ಮ ಸಮುದಾಯಗಳ ಜನಪದರ ಸ್ಮೃತಿಕೋಶದಲ್ಲಿ ಸಾಂಸ್ಕೃತಿಕವಾಗಿ ಕಟ್ಟಿಕೊಡಲು ಪ್ರಯತ್ನಿಸಿದ ಬಗೆ ಮುಂತಾದ ಅಂಶಗಳು ಇಲ್ಲಿ ಪ್ರಧಾನ ಪಾತ್ರ ವಹಿಸುತ್ತವೆ.

ಕೆಲವು ಜಯರೇಖೆಗಳು ಮೇಲ್ನೋಟಕ್ಕೆ ವ್ಯಕ್ತಿಗತ ಹೋರಾಟದ ನೆಲೆಯನ್ನು ಬಿಂಬಿಸುವಂತಿದ್ದರೂ, ವಾಸ್ತವವಾಗಿ ಸಾಮುದಾಯಿಕ ಸಮಷ್ಠಿಯ ಮೇಲ್ಮೆಗಾಗಿ ನಡೆಸಿದ ಹೋರಾಟವಾಗಿದೆ. ಇದು ಕೆಲವೊಮ್ಮೆ ಘರ್ಷಣೆಗಳಿಗೆ, ಸಂಘರ್ಷಗಳಿಗೆ ಇಂಬುಕೊಟ್ಟಿರುವುದನ್ನು ಕಾಣಬಹುದು.

ಜಯಪತ್ರಗಳ ಅಧ್ಯಯನದಿಂದ ಅವುಗಳಲ್ಲಿ ಅಡಕವಾದ ಘಟಕಗಳ ಗ್ರಹಿಕೆಗಳನ್ನು ಪದರು-ಪದರುಗಳಾಗಿ ಬಿಡಿಸಿ ನೋಡಿದಾಗ ಅವುಗಳ ಗ್ರಹಿಕೆಯ ನೆಲೆಗಳೂ ವಿಭಿನ್ನಾರ್ಥಗಳನ್ನು ಪಡೆದುಕೊಳ್ಳತೊಡಗುತ್ತವೆ. ಅರ್ಥಗಳನ್ನು ಅಧ್ಯಾರೋಹಣ ಮಾಡಿಕೊಂಡಂತೆ ಅವುಗಳ ಅಂತರ್‌ದನಿ ಅನುರಣನಗೊಳ್ಳುತ್ತಾ ಸಾಗುತ್ತವೆ.

ಜಯಪತ್ರಗಳ ಪರಿಕಲ್ಪನೆ ಹಾಗೂ ಪ್ರಭೇದಗಳ ನಿರ್ವಚನ ಹೆಚ್ಚು ಜಟಿಲವೆನಿಸುತ್ತದೆ. ಹಾಗೆಯೇ ಸಮಸ್ಯಾತ್ಮಕವಾಗಿ ಪರಿಣಮಿಸುತ್ತದೆ. ಇವುಗಳನ್ನು ಏಕರೇಖಾತ್ಮಕ ಅಧ್ಯಯನಕ್ಕೆ ಒಳಪಡಿಸಲು ಸಾಧ್ಯವಿಲ್ಲ. ಕಾರಣ ಅವು ಒಳಗೊಂಡ ವಿಭಿನ್ನ ರೀತಿಯ ನಿರೂಪಣಾ ಕ್ರಮ ಅಥವಾ ಕಥನ ಕ್ರಮ. ಕ್ರಿ.ಶ.ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗಿನ ದೀರ್ಘಕಾಲಾವಧಿಯಲ್ಲಿ, ಬೇರೆ

ಬೇರೆ ಒತ್ತಾಸೆ ಮತ್ತು ಪ್ರೇರಣೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಜಯರೇಖೆಗಳು ಒಳಗೊಂಡ ವಿಷಯ ಕಾಲಕ್ಕೆ ತಕ್ಕಂತೆ ಹಲವು ಮಜಲುಗಳನ್ನು ಸಹ ಪಡೆದುಕೊಂಡಿದೆ. ಹನ್ನೆರಡನೆಯ ಶತಮಾನದಿಂದ ಧಾರ್ಮಿಕ ಚೌಕಟ್ಟಿನಲ್ಲಿ ನಡೆಯುವ ಕಥಾನಕವಾದರೆ, ಹದಿನೈದನೆಯ ಶತಮಾನದಿಂದ ಇವು ಆರ್ಥಿಕ ಸವಲತ್ತುಗಳಿಗಾಗಿ ನಡೆದ ವ್ಯಾಜ್ಯಗಳ ಪ್ರತಿಬಿಂಬಗಳಾಗಿವೆ. ಮೂರನೆಯ ಮಾದರಿಯ ಕಥಾನಕಗಳು ಕುಲಗಳ ಅನನ್ಯತೆ, ಶ್ರೇಷ್ಠತೆಯ ಪ್ರತಿಪಾದನೆಗಾಗಿ ಕಲ್ಪಿತವಾದ ಕುಲಮೂಲ ಮಾದರಿಗಳಾಗಿವೆ. ಹಾಗೆಯೇ ಕುಲ ವರ್ತನಾ ಸಂಹಿತೆಗಳಾಗಿಯೂ ಕಂಡು ಬರುತ್ತವೆ. ಒಟ್ಟಾರೆಯಾಗಿ ಜಯರೇಖೆಗಳ ಸಾಂಸ್ಕೃತಿಕ ಸಂಕಥನದ ಅಧ್ಯಯನವು ಮಧ್ಯಕಾಲೀನ ಕರ್ನಾಟಕದ ಒಳ ಹಾಗೂ ತಳ ಸಮುದಾಯ ಗಳು ತಮ್ಮ ಸಾಂಸ್ಕೃತಿಕ ಅನನ್ಯತೆಗಾಗಿ ನಡೆಸಿದ ತಾತ್ವಿಕ ಹೋರಾಟದ ಪ್ರತಿಫಲಗಳೆಂಬುದನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಈ ದೃಷ್ಟಿಯಿಂದ ಇಂದು ಸಮಾಜದ ಯಾವ ಘಟಕವನ್ನು ದೇಸೀ ಚಿಂತಕರು ಸಬಾಲ್ಟ್ರನ್ ಎಂದು ಗುರುತಿಸುತ್ತಾರೆಯೋ, ಅಂಥ ಒಂದು ಬೃಹತ್ ಮಧ್ಯಕಾಲೀನ ಸಮುದಾಯಗಳ ಸಮಾಜೋ-ಸಾಂಸ್ಕೃತಿಕ ಜೀವನದ ಪಡಿನೆರಳಾಗಿವೆ.

### ೨.೧ ಜಯರೇಖೆ ಶಾಸನಗಳ ನಿರ್ವಚನ

'ಜಯಪತ್ರ'ಗಳು ಎಂಬ ಪದದ 'ಗ್ರಹಿಕೆ' ಸಾಹಿತ್ಯ, ಇತಿಹಾಸದ ವಿದ್ಯಾರ್ಥಿಗಳಿಗಿರಲಿ, ಸ್ವತಃ ಶಾಸನಶಾಸ್ತ್ರದ ಪ್ರಾಥಮಿಕ ಹಂತದ ವಿದ್ಯಾರ್ಥಿಗಳಿಗೂ ಸ್ವಲ್ಪಮಟ್ಟಿನ ಅಪರಿಚಿತ ಪದವಾಗಿದೆ. ಆ ಮಟ್ಟಿಗೆ ಶಾಸನಕ್ಷೇತ್ರದಲ್ಲಿ ಇದೊಂದು ಅಪರಿಚಿತ ಪರಿಕಲ್ಪನೆಯಾಗಿಯೇ ಉಳಿದುಕೊಂಡು ಬಂದಿದೆ. ಈ ವಿಷಯದ ಬಗ್ಗೆ ಅಧ್ಯಯನವಿರಲಿ, ಹೆಚ್ಚಿನ ಪ್ರಮಾಣದಲ್ಲಿ ಚರ್ಚೆಗಳೂ ಸಹ ನಡೆದಿಲ್ಲವೆಂದರೆ ಅತಿಶಯೋಕ್ತಿಯೆನಿಸದು. ಇದಕ್ಕೆ ಆಕರಗಳ ಅಲಭ್ಯತೆ ಪ್ರಧಾನ ಕಾರಣವಾಗಿದೆ. ಜೊತೆಗೆ ಆರಂಭದ ಅವಧಿಯ ಜಯಪತ್ರಗಳ ಹೊರತಾಗಿ ಹದಿನಾರನೆಯ ಶತಮಾನಾನಂತರ ರಚಿತವಾದ ಜಯಪತ್ರಗಳೆಲ್ಲವೂ ಕೃತಕವಾಗಿ ರಚಿತವಾದ ತಾಮ್ರಪಟಗಳಾಗಿವೆ ಅಥವಾ ಅವುಗಳ ನಕಲು ಕಾಗದಪ್ರತಿಗಳಾಗಿವೆ. ಇದಲ್ಲದೆ, ಇವು ಆಯಾ ಕುಲ-ಸಮುದಾಯಗಳ ಜನರ ಖಾಸಗಿ ರಕ್ಷೆಯಲ್ಲಿರುವುದರಿಂದ ಅವು ಹೆಚ್ಚು ಬೆಳಕು ಕಂಡಿಲ್ಲ. ಕೆಲವು ಬೆಳಕು ಕಂಡಿದ್ದರೂ, ಅವುಗಳಲ್ಲಿರುವ ವಿಷಯ ಅವಾಸ್ತವಿಕ ಎಂಬ ಆತ್ಯಂತಿಕ ಅಭಿಪ್ರಾಯಕ್ಕೆ ಬರಲಾಗಿದೆ. ಕರ್ನಾಟಕದಲ್ಲಿ ದೊರೆತಿವೆಯೆಂದು ಅಂದಾಜಿಸಲಾಗಿರುವ ಸುಮಾರು ನಲವತ್ತು ಸಾವಿರಕ್ಕೂ ಅಧಿಕ ಶಾಸನಗಳಲ್ಲಿ ಜಯಪತ್ರ ಅಥವ ಜಯರೇಖೆ ಎಂಬ ಪದ ಪ್ರಯೋಗವಾಗಿರುವ ಶಾಸನಗಳ ಸಂಖ್ಯೆಯು ಗರಿಷ್ಠ ಮೂವತ್ತೈದನ್ನೂ ದಾಟುವುದಿಲ್ಲವೆಂಬುದು ವಾಸ್ತವ ಸಂಗತಿ. ಆದರೆ ರಾಚನಿಕವಾಗಿ ಅವುಗಳನ್ನು ಹೋಲುವ ಬೇರೆ ಬೇರೆ ಹೆಸರಿನಲ್ಲಿರುವ ಕೆಲವು ದಾಖಲೆಗಳನ್ನು ಸಹ ಜಯಪತ್ರಗಳ ಅಧ್ಯಯನದ ವ್ಯಾಪ್ತಿಗೆ ತರಲಾಗಿದೆ.

ಜಯರೇಖೆಗೆ ಸಂವಾದಿಯಾಗಿ ಶಾಸನ ಹಾಗೂ ಸಾಹಿತ್ಯದಲ್ಲಿ ಜಯಪತ್ರ, ಜಯಲೇಖೆ, ರಾಯರೇಖೆ, ಜಯಪತ್ರಿಕಾ ಕ್ರಮ, ತಾಮ್ರಶಾಸನ, ಕಂಚಿ ಸನದು, ಕಂಚಿಪತ್ರ, ಸೋತಪತ್ರ, ತೊರೆ ಪತ್ರ,

ಚಪ್ಪೋಡು, ಮುಂತಾದ ಪದಪ್ರಯೋಗಗಳು ಬಳಕೆಯಾಗಿವೆ. ಇವುಗಳಲ್ಲೆಲ್ಲಾ ಸಂಸ್ಕೃತ ಪದ ಅಥವಾ ಶಿಷ್ಟ ರೂಪದ ಪದವಾದ 'ಜಯಪತ್ರ' ಎಂಬ ಪದವನ್ನು ಹೆಚ್ಚಾಗಿ ಬಳಸಲಾಗಿದೆ. ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ಭಾರತದಲ್ಲಿನ ಆಡಳಿತ ವ್ಯವಸ್ಥೆ ಹಾಗೂ ನ್ಯಾಯ ನಿರ್ಣಯ ಸ್ವರೂಪವನ್ನು ವಿವರಿಸುವ ಸಂದರ್ಭದಲ್ಲಿ 'ಜಯಪತ್ರ'ದ ಬಗೆಗೆ ವಿಸ್ತೃತವಾಗಿ ಚರ್ಚೆಮಾಡಲಾಗಿದೆ ಮತ್ತು ವ್ಯಾಖ್ಯಾನ ಆಖ್ಯಾನಗಳಿಗೆ ಗುರಿಪಡಿಸಲಾಗಿದೆ.

ಮೇಲ್ನೋಟಕ್ಕೆ 'ಜಯಪತ್ರ'ಪದ ಸರಳ ಅರ್ಥವನ್ನು ಪಡೆದಿದೆ. ಜಯ ಅಥವಾ ದಿಗ್ವಿಜಯಗಳನ್ನು ಸಾಧಿಸಿದ ವ್ಯಕ್ತಿಗಳಿಗೆ ನೀಡುವ ಪತ್ರ ಎಂಬ ಸಾಮಾನ್ಯಾರ್ಥ ಪಡೆದಿದ್ದು, 'Winner Certificate' ಎಂಬ ಸುಲಭ ಹಾಗೂ ಸರಳ ವ್ಯಾಖ್ಯಾನ ಪಡೆದಿದೆ. ಕರ್ನಾಟಕದ ಶಾಸನಗಳ ಮತ್ತೊಂದು ಪ್ರಕಾರವಾದ ಪ್ರಶಸ್ತಿ ಶಾಸನ, ಜಯಸ್ತಂಭ, ಪ್ರಶಸ್ತಿಲೇಖಗಳು ವ್ಯಕ್ತಿಯ ದಿಗ್ವಿಜಯಗಳನ್ನು ಹಾಗೂ ಸಾಧನೆಗಳನ್ನು ನಿರೂಪಿಸುವಂತಹ ನಿರೂಪಗಳೇ ಆಗಿವೆ. ಆದರೆ ಅಲ್ಲಿ ವ್ಯಕ್ತಿಯ ಶೀಲ, ಶೌಚ, ಶೌರ್ಯ, ಮುಂತಾದ ಗುಣ ವಿಶೇಷಣಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗುತ್ತದೆ. ಕನ್ನಡದ ಮೊದಲ ಪ್ರಶಸ್ತಿ ಶಾಸನ ಗುಣಮಧುರನ ಶಾಸನ, ಕಪ್ಪೆ ಅರಭಟ್ಟನ ಶಾಸನ, ಶ್ರವಣಬೆಳಗೊಳದ ನಂದಿಸೇನ ಮುನಿಯ ಶಾಸನ, ಮುಂತಾದಂತಹ ಅಸಂಖ್ಯ ಶಾಸನಗಳು ಒಂದು ರೀತಿಯಲ್ಲಿ ಜಯಪತ್ರದಂತೆಯೇ ಕಂಡುಬರುತ್ತವೆ. ಅವರ ವ್ಯಕ್ತಿಗತ ಸಾಧನೆ–ದಿಗ್ವಿಜಯಗಳ ಸೂಚಕವಾಗಿ 'ಜಯಸ್ತಂಭ'ವನ್ನು ನಿಲ್ಲಿಸಲಾಗುತ್ತದೆ ಅಥವಾ 'ವಿಜಯಪ್ರಶಸ್ತಿ'ಯನ್ನು ಬರೆಯಿಸಲಾಗುತ್ತದೆ. ಆದರೆ 'ಪ್ರಶಸ್ತಿ ಶಾಸನ'ಗಳಲ್ಲಿ ಒಬ್ಬ ವ್ಯಕ್ತಿ ಮತ್ತೊಬ್ಬರೊಂದಿಗೆ ಅಥವಾ ಬೇರೊಂದು ಸಂಸ್ಕೃತಿ, ಸಮುದಾಯಗಳೊಂದಿಗೆ ಭೌತಿಕವಾಗಿಯಾಗಲೀ ಅಥವಾ ತಾತ್ವಿಕವಾಗಿಯಾಗಲೀ ಮುಖಾಮುಖಿಯಾಗುವುದಿಲ್ಲ. ಜಯಪತ್ರಗಳು ನಿರ್ದಿಷ್ಟವಾಗಿ ಎದುರಾಳಿಸಂಸ್ಥೆ, ಸಮುದಾಯದೊಂದಿಗೆ ಮುಖಾಮುಖಿಯಾಗಿ ಜಯವನ್ನು ಪಡೆದಂಥವರಿಗೆ ನೀಡುವ ಪತ್ರಗಳು. ಜಯಪತ್ರಗಳ ಬಗ್ಗೆ ಆಗಿರುವ ಅಧ್ಯಯನಗಳು ಅವುಗಳ ಭೌತಿಕ ಅರ್ಥದ ಪರಿಪ್ರೇಕ್ಷ್ಯದಲ್ಲೇ ನಡೆದಿವೆ.

### ೨.೧.೨ ವ್ಯಾಖ್ಯಾನಗಳ ಕ್ರೋಢೀಕರಣ

ಮೊಟ್ಟ ಮೊದಲಿಗೆ ಏಕಾಂತದ ರಾಮಯ್ಯನ ಅಬ್ಬಲೂರು ಶಾಸನವನ್ನು ಪ್ರಕಟಿಸಿದ ಜೆ.ಎಫ್. ಫ್ಲೀಟ್‌ರವರು ಜಯಪತ್ರಕ್ಕೆ 'Certificate of Success'[೧] ಎಂದು ವ್ಯಾಖ್ಯಾನಿಸಿದ್ದಾರೆ. ರಾಮಾ ಜೋಯಿಸ್‌ರವರು 'A document recording success' ಎಂದು ಅಭಿಪ್ರಾಯಪಟ್ಟಿದ್ದಾರೆ.[೨]

ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶವನ್ನು ಕಟ್ಟಿಕೊಟ್ಟ ಶ್ರೀನಿವಾಸ ರಿತ್ತಿಯವರು ಜಯರೇಖೆಗಳ ಸ್ವರೂಪವನ್ನು ಮೂರು ರೀತಿಯಲ್ಲಿ ಗುರುತಿಸುತ್ತಾರೆ. ಅವರ ಪ್ರಕಾರ,–

**ಜಯಪತ್ರ:** (i) ಭೂಮಿ ಇತ್ಯಾದಿ ವಿವಾದಗಳಲ್ಲಿ ಗೆದ್ದವರಿಗೆ ಕೊಡುವ ಪತ್ರ–

A writ of a victory granted to a disputed, decree;

(ii) ಶಾಸ್ತ್ರಾದಿಗಳ ವಾದದಲ್ಲಿ ಗೆದ್ದವರಿಗೆ ರಾಜನು ಕೊಡುತ್ತಿದ್ದ ಗೆಲುವಿನ ಸೂಚಕಪತ್ರ

A letter indicating the victory in learning discourses presented by the king;

(iii) ಪಂಥದಲ್ಲಿ ಗೆದ್ದವರಿಗೆ ಕೊಡುವ ಪ್ರಮಾಣ ಪತ್ರ–

Certificate given to the person winning in a challenge.

**ಜಯಪತ್ರಿಕಾ ಕ್ರಮ:** ಇದರ ಜೊತೆಗೆ ಈ ಮೂರು ಪ್ರವರ್ಗಗಳ ವ್ಯಾಪ್ತಿಗೆ ಬರದ ಆದರೆ ಕೆಲವು ದಾನ–ದತ್ತಿಗಳ ವಿವರಗಳನ್ನು ಒಳಗೊಂಡ ಜಯಪತ್ರಗಳಲ್ಲಿ ಉಲ್ಲೇಖಗೊಂಡ 'ಜಯಪತ್ರಿಕಾ ಕ್ರಮ' ಎಂಬ ಪದಕ್ಕೆ ವ್ಯಾಖ್ಯೆ ನೀಡಿರುತ್ತಾರೆ (Order of details contained in a Jayapatra);[೩]

ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿರುವ ಕನ್ನಡ ನಿಘಂಟು ಸಂಪುಟದಲ್ಲಿ 'ಜಯರೇಖೆ' ಎಂದರೇನು ಎಂಬುದಕ್ಕೆ ಸಂಬಂಧಿಸಿದ ಪರಿಭಾಷೆಯನ್ನು ಆ ಪದಪ್ರಯೋಗಗೊಂಡಿರುವ ಕೃತಿಗಳ ಉದಾಹರಣೆಗಳೊಂದಿಗೆ ನೀಡಲಾಗಿದೆ. ಅದರ ಪ್ರಕಾರ,–

**ಜಯಪತ್ರ:** (i) ಜಯವನ್ನು ಘೋಷಿಸುವ ದಾಖಲೆ ಪತ್ರ.

(ii) ವಾದದಲ್ಲಿ ಗೆದ್ದವನಿಗೆ ಅವನ ವಿಜಯವನ್ನು ಒಪ್ಪಿ ಬರೆದುಕೊಡುವ ಪತ್ರ.

**ಜಯಪತ್ರಿಕೆ:** ಪ್ರಶಸ್ತಿಲೇಖ ಎಂದು ಹೇಳಿ ಅದಕ್ಕೆ ಪುರುದೇವ ಚರಿತೆಯ ಉದಾಹರಣೆಯನ್ನು ನೀಡಲಾಗಿದೆ "ಸರ್ವರಿಂ ಪೂಜಿತನಾಗಿ ಅಲ್ಲಲ್ಲಿ ಶಾಸನಗಳನ್ನಿಟ್ಟು ವೃಷಭಾದ್ರಿಯಲ್ಲಿ ತನ್ನ ಜಯಪತ್ರಿಕೆಯನ್ನು ಸ್ಥಾಪಿಸಿದನು"[೪]

ಇದರಲ್ಲಿ ಮೊದಲನೆಯ ಹಂತದ ವ್ಯಾಖ್ಯಾನವನ್ನು ಇಲ್ಲಿ ವಿದ್ವಾಂಸರು ಪರಿಭಾವಿಸಿದ ರೀತಿಯಲ್ಲೇ ಮಾಡಲಾಗಿದೆ. ಆದರೆ ಎರಡನೆಯ ಹಂತದ 'ಜಯಪತ್ರಿಕೆ' ಎಂಬ ಪದಕ್ಕೆ ನೀಡಿರುವ ವ್ಯಾಖ್ಯಾನ ತುಂಬಾ ಭಿನ್ನವಾಗಿದ್ದು ಮೂಲ ಆಶಯ ಮತ್ತು ಅರ್ಥಕ್ಕೆ ಚ್ಯುತಿ ತರುವಂತಿದೆ. ಇಲ್ಲಿ ನೀಡಿರುವ 'ಪ್ರಶಸ್ತಿಲೇಖ' ಎಂಬ ಅರ್ಥ, ಶಾಸನಗಳ ಮತ್ತೊಂದು ಪ್ರಕಾರವಾದ ಪ್ರಶಸ್ತಿ ಶಾಸನಗಳಿಗೆ ಅನ್ವಯಿಸುತ್ತದೆ. ಪ್ರಶಸ್ತಿ ಶಾಸನಗಳು ರಾಜನ ಅಥವಾ ಒಬ್ಬ ವ್ಯಕ್ತಿಯ ಉದಾತ್ತಗುಣಗಳನ್ನು ಎಂದರೆ ಆತನ ಶೀಲ, ಶೌಚ, ಧೈರ್ಯ, ಶೌರ್ಯ, ದಾನಗುಣ ಹಾಗೂ ವೀರ ಗುಣ, ಮುಂತಾದವುಗಳನ್ನು

ಪ್ರಶಂಸಿಸುವ ಸ್ವರೂಪದಲ್ಲಿರುತ್ತವೆ. ಆದರೆ, ಇಲ್ಲಿ ಜಯಪತ್ರಿಕೆ ಎಂದರೆ, ವಿಜಯದ ಸಾಧನೆ ಎಂಬ ಅರ್ಥ ನೀಡಲಾಗಿದೆ. ಸಿದ್ಧಾಪುರ ಶಾಸನದಲ್ಲಿ[೫] ಉಲ್ಲೇಖಗೊಂಡ 'ಜಯಪತ್ರಿಕಾ ಕ್ರಮ' ಎಂಬ ಶಬ್ದಕ್ಕೆ ಬೇರೆಯವರೊಂದಿಗೆ ಒಡಂಬಡಿಕೆ ಮಾಡಿಕೊಂಡು ಬರೆಸಿದ ಶಾಸನ ಎಂಬರ್ಥದಲ್ಲಿ ಬಳಕೆಯಾಗಿದೆ.

ಡಿ.ಸಿ. ಸರ್ಕಾರ್‌ರವರು ಸಂಸ್ಕೃತ ಹಾಗೂ ದ್ರಾವಿಡ ಭಾಷೆಗಳ ಶಾಸನಗಳಲ್ಲಿ ಅಡಕವಾಗಿರುವ ವಿಶಿಷ್ಟ ಪಾರಿಭಾಷಿಕ ಪದಗಳ ನಿಘಂಟನ್ನು ರಚಿಸಿದ್ದು ಅದರಲ್ಲಿ ಜಯಪತ್ರಗಳಿಗೆ ಈ ಮುಂದಿನಂತೆ ವಿವರಣೆಯನ್ನು ನೀಡಲಾಗಿದೆ.

**Jayapatra, Jayarekha patra**- a certificate of victory in a dispute; a copy of the judgement, a certificate of success.

**Jayarekha patrika**- a certificate of victory– ಎಂದು ಉದಾಹರಣೆಗಾಗಿ ಶಾಸನೋಕ್ತ ಉಲ್ಲೇಖಗಳನ್ನು ಒದಗಿಸುತ್ತಾರೆ.[೬]

ಪ್ರಸ್ತುತ ನಿಘಂಟುವಿನ ವ್ಯಾಪ್ತಿ ತುಂಬಾ ವಿಸ್ತೃತವಾಗಿದೆ. ಸಂಸ್ಕೃತ ಹಾಗೂ ದ್ರಾವಿಡ ಭಾಷೆಯ ಶಾಸನಗಳನ್ನೆಲ್ಲ ಪರಿಗಣನೆಗೆ ತೆಗೆದುಕೊಂಡಿರುವುದರಿಂದ ಕರ್ನಾಟಕದ ಚಾರಿತ್ರಿಕ ಸಂದರ್ಭದಲ್ಲಿ ಆ ಪದಗಳ ವಾಸ್ತವ ಅರ್ಥವನ್ನು ಗ್ರಹಿಸಲಾಗಿಲ್ಲ. ಬದಲಾಗಿ ಮೇಲ್ಪದರದ ಅರ್ಥವ್ಯಾಖ್ಯಾನ ಮಾಡಲಾಗಿದೆ ಎಂದೆನಿಸುತ್ತದೆ. ಎಂದರೆ, ಜಯರೇಖೆಗಳೆಂಬುದು ಕೇವಲ 'ವಾದದಲ್ಲಿ ವಿಜಯಿಯಾದವರಿಗೆ ನೀಡುವ ಪ್ರಮಾಣಪತ್ರ; ಜಯದ ಅಥವಾ ಯಶಸ್ಸಿನ ಪ್ರಮಾಣಪತ್ರ, ತೀರ್ಪಿನ ಪ್ರತಿ' ಎಂದು ಅರ್ಥೈಸಲಾಗಿದೆ. ಭೌತಿಕವಾಗಿ ಇದುನೇರ ಅರ್ಥವನ್ನೇ ಧ್ವನಿಸಿದರೂ, ವಾಸ್ತವಿಕವಾಗಿ ಜಯಪತ್ರ–ಜಯರೇಖೆಗಳ ವಿಭಿನ್ನ ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನ ನೀಡಲಾಗಿಲ್ಲ.

ಪಿ.ವಿ. ನಾರಾಯಣರವರು 'ಜಯಪತ್ರವೆಂದರೆ ಗೆದ್ದವನಿಗೆ ಕೊಡುವ ದಾಖಲೆ ಪತ್ರ' ಎಂದು ವ್ಯಾಖ್ಯಾನಿಸಿ ಆದಿಪುರಾಣದ 'ಖಚರೇಶ್ವರನೀಯ ಪಡೆದಂ ಅತ್ಯಾಧರದಿಂ ಜಯಪತ್ರಮಂ ಸ್ವಯಂ ಬುದ್ಧ ಬುಧಂ' ಎಂಬ ಪದ್ಯವನ್ನು ಉದಾಹರಿಸುತ್ತಾರೆ.[೭]

ಈ ಎಲ್ಲ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ವಿಶ್ಲೇಷಿಸಿದಾಗ, ಜಯಪತ್ರಗಳ ಅರ್ಥಸ್ವರೂಪವನ್ನು ನೇರವಾಗಿ ವ್ಯಾಖ್ಯಾನಿಸುವುದಕ್ಕಿಂತ ಅವುಗಳ ವಸ್ತು ವಿಷಯಕ್ಕೆ ಆದ್ಯತೆ ನೀಡಲಾಗಿದೆ. ಇನ್ನು ಕೆಲವು ವ್ಯಾಖ್ಯಾನಗಳಲ್ಲಿ ಜಯಪತ್ರವನ್ನು ಭೌತಿಕವಾಗಿ ವ್ಯಾಖ್ಯಾನಿಸಲಾಗಿರುವುದು ಕಂಡುಬರುತ್ತದೆ. ಮೊದಲ ಜಯಪತ್ರವಾದ ಅಬ್ಬಲೂರಿನ ಶಾಸನ ಹಾಗೂ ಅದೇ ಸ್ವರೂಪದ ಬುಕ್ಕರಾಯನ ಶ್ರವಣಬೆಳಗೊಳ ಶಾಸನಗಳ ಅಧ್ಯಯನವನ್ನು 'ಧಾರ್ಮಿಕ ಸಂಘರ್ಷ' ಮತ್ತು 'ಧರ್ಮಸಮನ್ವಯ'ವೆಂಬ ಏಕಸೂತ್ರದ ಪರಿಕಲ್ಪನೆಯಲ್ಲಿ ಅಧ್ಯಯನ ನಡೆಸಿರುವುದು ಕಂಡುಬರುತ್ತದೆ. ಅಲ್ಲದೆ ಜಯರೇಖೆ

ಗಳೆಂದರೆ ಧಾರ್ಮಿಕ ಸಂಘರ್ಷದ ರೂಪಕಗಳೆಂಬಂತೆ ಅರ್ಥೈಸಲಾಗಿದೆ. ಒಂದು ನೆಲೆಗಟ್ಟಿನಿಂದ ಅರ್ಥೈಸಿದಾಗ ಇದು ನಿಜವೂ ಹೌದು. ಏಕೆಂದರೆ ಆರಂಭಿಕ ಜಯರೇಖೆಗಳ ಕಥನವೇ ಎರಡು ವಿಭಿನ್ನ ಧರ್ಮಗಳ ನಡುವಿನ ತಿಕ್ಕಾಟ. ಆದರೆ ಜಯರೇಖೆಗಳಲ್ಲಿನ ಧರ್ಮಗಳ ನಡುವಿನ ತಿಕ್ಕಾಟವನ್ನೇ ಮುನ್ನೆಲೆಗೆ ತರುತ್ತಾ, ಅಂಥ ತಿಕ್ಕಾಟಗಳ ಹಿಂದಿರುವ ಮನೋಭೂಮಿಕೆಗಳನ್ನು, ಅವುಗಳ ರಚನೆಗೆ ಕಾರಣವಾದ ಸಂಕೀರ್ಣವಾದ ಜ್ಞಾತ, ಅಜ್ಞಾತ ಕಾರಣಗಳ ಬಗ್ಗೆ, ಅವುಗಳನ್ನು ರಚಿಸಿದ ವ್ಯಕ್ತಿ, ಸಂಸ್ಥೆ, ಸಮುದಾಯಗಳ ಆಶಯ ಹಾಗೂ ಒತ್ತಾಸೆಗಳು ಏನಾಗಿದ್ದಿರಬಹುದು, ನಂತರದ ಕಾಲದಲ್ಲಿ ಅವು ಪಡೆದ ಅವಸ್ಥೆಗಳ ಸ್ವರೂಪವೇನು ಇನ್ನೂ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಅವುಗಳ ಸಾಂಸ್ಕೃತಿಕ ರಾಜಕಾರಣದ ಬಗೆಗೆ ವಿಶ್ಲೇಷಣೆಗಳನ್ನು ನಡೆಸಲಾಗಿಲ್ಲ.

ಮತ್ತೊಂದು ಸಂಗತಿಯೆಂದರೆ, ಈ ವ್ಯಾಖ್ಯಾನಗಳೆಲ್ಲಾ 'ಜಯಪತ್ರ' ಎಂಬ ಶಿಷ್ಟ ಪದದ ಪರಿಭಾಷೆಯ ವ್ಯಾಪ್ತಿಯೊಳಗೇ ನಡೆಯುತ್ತವೆ. ಆದರೆ, ತರುವಾಯದ ಅವಧಿಯಲ್ಲಿ ರೂಪುಗೊಂಡ ಅವುಗಳ ದೇಸಿ ಪ್ರಕಾರಗಳಾದ, ಜಯರೇಖೆ, ಕಂಚಿಪತ್ರ ಮತ್ತು ಕುಲಕಥನ ಜಯರೇಖೆಗಳ ಬಗ್ಗೆ ಚರ್ಚೆಗಳಿರಲಿ, ಉಲ್ಲೇಖಗಳೂ ಸಹ ಇಲ್ಲದಿರುವುದು ಗಮನಾರ್ಹ.

**೨.೧.೨ ಜಯರೇಖೆಗಳ ಬೀಜರೂಪಿ ಚಿಂತನೆಗಳು**

ಕರ್ನಾಟಕದಲ್ಲಿ ಜಯಪತ್ರಗಳ ಪ್ರಪ್ರಥಮ ಉಲ್ಲೇಖ ಪಂಪನ ಆದಿಪುರಾಣದಲ್ಲಿ ದೊರೆಯುತ್ತದೆ. ಹಾಗೆಯೇ ಪ್ರಥಮ ಶಾಸನೋಲ್ಲೇಖ ಕ್ರಿ.ಶ. ೧೨ನೆಯ ಶತಮಾನದ ಏಕಾಂತದ ರಾಮಯ್ಯನ ಶಾಸನದಲ್ಲಿ ಕಂಡುಬರುತ್ತದೆ. ಹಾಗಿದ್ದಲ್ಲಿ, 'ಜಯಪತ್ರ'ಗಳ ಉಲ್ಲೇಖ ಕರ್ನಾಟಕದಲ್ಲಿ ಏಕಾಏಕಿ ಒಮ್ಮೆಲೇ ಕಾಣಿಸಿಕೊಂಡಿತೇ? ಕನ್ನಡಿಗರೇ ಆ ಪರಿಕಲ್ಪನೆಯನ್ನು ಹುಟ್ಟುಹಾಕಿದರೇ? ಅಥವಾ ಕರ್ನಾಟಕದಲ್ಲಿ ಬಳಕೆಗೊಳ್ಳುವುದಕ್ಕೆ ಪೂರ್ವದಲ್ಲಿ ಬೇರೆ ಯಾವ ಭಾಷೆ/ಕೃತಿಗಳಲ್ಲಿ ಬಳಕೆಯಾಗಿದೆ? ಎಂಬ ಪ್ರಶ್ನೆಗಳನ್ನು ಹಾಕಿಕೊಂಡು ಜಯಪತ್ರಗಳ ಮೂಲವನ್ನು ಅನ್ವೇಷಿಸುತ್ತಾ ಸಾಗಿದಾಗ, ಜಯಪತ್ರಗಳ ಬೀಜರೂಪಿ ಚಿಂತನೆಗಳು ನಮಗೆ ಸಂಸ್ಕೃತ ವಾಙ್ಮಯದಲ್ಲಿ ಕಂಡುಬರುತ್ತವೆ.

ಸಂಸ್ಕೃತದ ಧರ್ಮಶಾಸ್ತ್ರ ಕೃತಿಗಳಲ್ಲಿ ಜಯಪತ್ರಗಳಿಗೆ ವಿಶೇಷ ಆದ್ಯಸ್ಥಾನವನ್ನು ನೀಡಲಾಗಿದೆ. 'ಪ್ರಾಚೀನ ಕಾನೂನು ಕೃತಿಗಳಲ್ಲಿ ಲೇಖನಗಳನ್ನು ರಾಜಕೀಯ (ಪಬ್ಲಿಕ್) ಮತ್ತು ಲೌಕಿಕ ಅಥವಾ ಜಾನಪದ (ಪ್ರೈವೇಟ್) ಎಂದು ಎರಡು ವಿಭಾಗಗಳಾಗಿ ವರ್ಗೀಕರಣ ಮಾಡಲಾಗುತ್ತಿತ್ತು. ಅವುಗಳಲ್ಲಿ ಮೊದಲನೆಯ ರಾಜಕೀಯ ವಿಭಾಗವು ಹಲವು ವರ್ಗೀಕರಣಗಳನ್ನು ಹೊಂದಿದ್ದು ಅವುಗಳಲ್ಲಿ ಶಾಸನ ಮತ್ತು ಜಯಪತ್ರ ಹೆಚ್ಚು ಮಹತ್ವದ್ದಾಗಿದೆ'.[೮] ಬೃಹಸ್ಪತಿಯ ಪ್ರಕಾರ ರಾಜಕೀಯ ದಾಖಲೆಗಳಲ್ಲಿ ಮೂರು ಪ್ರವರ್ಗಗಳಿರುತ್ತವೆ.

1) ಶಾಸನ (a royal grant of land)

2) ಜಯಪತ್ರ (a judgement deciding a law suit)

೩) ಪ್ರಸಾದ ಪತ್ರ (a deed showing the kings pleasure at the devoted service or bravery a person).[೯]

ವಶಿಷ್ಠನ ಪ್ರಕಾರ ರಾಜ ದಾಖಲೆಗಳಲ್ಲಿ,-

೧. ಶಾಸನ

೨. ಜಯಪತ್ರ

3. ಆಜ್ಞಾಪತ್ರ (A royal command addressed to feudatories)

೪. ಪ್ರಜ್ಞಾಪನಾ ಪತ್ರ (A writing of request addressed by the king to sacrificial priests, a purohita, teacher, a learned brahmana on other highly honoured persons).[೧೦]

ಸರಸ್ವತಿ ವಿಲಾಸದ ಪ್ರಕಾರ ರಾಜ ದಾಖಲೆಗಳಲ್ಲಿ,-

೧. ಶಾಸನ

೨. ಜಯಪತ್ರ

೩. ಆಜ್ಞಾಪತ್ರ

೪. ಪ್ರಜ್ಞಾಪನ ಪತ್ರ

೫. ಪ್ರಸಾದ ಪತ್ರ – ಎಂಬ ಐದು ಪ್ರವರ್ಗಗಳಿವೆ.

ಮೇಲ್ಕಂಡ ಧರ್ಮಶಾಸ್ತ್ರಕಾರರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ರಾಜ್ಯದ ಆಡಳಿತಾಂಗದಲ್ಲಿ ಜಯರೇಖೆಗಳಿಗೆ ಶಾಸನಾನಂತರ ಎರಡನೆಯ ಪ್ರಮುಖ ಸ್ಥಾನವಿರುವುದು ಕಂಡುಬರುತ್ತದೆ. ಅಲ್ಲದೆ, ಶಾಸನಗಳಿಗಿಂತ ಇವು ಭಿನ್ನ ಪ್ರಕಾರವೆಂಬುದನ್ನು ಸ್ಪಷ್ಟಪಡಿಸುತ್ತವೆ.

ಜಯಪತ್ರಗಳೆಂದರೇನು? ಅವುಗಳ ವೈಲಕ್ಷಣಗಳೇನು? ಹಾಗೂ ಅವುಗಳನ್ನು ಯಾವಾಗ ಯಾರಿಗೆ ನೀಡಲಾಗುತ್ತದೆ ಎಂಬ ಬಗ್ಗೆಯೂ ಸಹ ಧರ್ಮಶಾಸ್ತ್ರಕಾರರು ಸ್ಪಷ್ಟಪಡಿಸುತ್ತಾರೆ. "ಒಬ್ಬ ವ್ಯಕ್ತಿ ಸಾಕಷ್ಟು ಸಾಕ್ಷ್ಯ ಪುರಾವೆಗಳ ಮೂಲಕ ಚರ ಮತ್ತು ಸ್ಥಿರಾಸ್ತಿಯನ್ನು ಹೊಂದಿದ್ದಾಗ ಅಥವಾ ಆಸ್ತಿ ಪಾಲಿಗೆ ಸಂಬಂಧಿಸಿದ ವ್ಯಾಜ್ಯದಲ್ಲಿ ಜಯಶೀಲನಾದಾಗ ಅಥವಾ ತೀವ್ರ ಸ್ವರೂಪದ ಆಪಾದನೆಯಿಂದ ಖುಲಾಸೆಯಾದಾಗ, ಆ ಪ್ರಕರಣವನ್ನು ಖುದ್ದಾಗಿ ಅಥವಾ ಮುಖ್ಯ ನ್ಯಾಯಾಧೀಶರ ಮುಖಾಂತರ ವಿಚಾರಣೆ ನಡೆಸಿರಬಹುದಾದ ಅರಸನು ಆತನಿಗೆ ಡಿಕ್ರಿಯನ್ನು ನೀಡಬೇಕು. ಅದನ್ನೇ ಜಯಪತ್ರ

ಎನ್ನುತ್ತಾರೆ".[೧೧] ನಾರದನ ಪ್ರಕಾರ ಜಯಪತ್ರವೆಂದರೆ, ಆಪಾದನೆ, ಉತ್ತರ, ವಿಚಾರಣೆಯ ಸಾರಾಂಶ, ಅವುಗಳಿಗೆ ನೀಡಿದ ಪರಿಗಣನೆ ಮತ್ತು ಅದರ ಮೇಲೆ ನೀಡಿದ ನಿರ್ಣಯ ಈ ಅಂಶಗಳನ್ನು ಒಳಗೊಂಡ ದಸ್ತಾವೇಜನ್ನು ಜಯಪತ್ರ ಎನ್ನುತ್ತಾರೆ.[೧೨]

ಬೃಹಸ್ಪತಿಯ ಪ್ರಕಾರ ಆಪಾದನೆಯ ಸಾರಾಂಶ, ಉತ್ತರ, ವಿಚಾರಣೆ ಮತ್ತು ನಿರ್ಣಯದ ದಾಖಲಾತಿಯನ್ನು ಒಳಗೊಂಡಿರುವ, ಜಯಶೀಲನಾದ ಪಕ್ಷಕಾರನಿಗೆ ರಾಜನು ನೀಡುವ ದಸ್ತಾವೇಜನ್ನು ಜಯಪತ್ರ ಎನ್ನುತ್ತಾರೆ (a document recording success).[೧೩] ವಶಿಷ್ಠನು ಜಯಪತ್ರಕ್ಕೆ ವ್ಯಾಖ್ಯಾನ ನೀಡುತ್ತಾ "ರಾಜ ಸ್ವತಃ ಕಾನೂನು ವ್ಯವಹರಣೆಗಳನ್ನು ಕೈಗೊಂಡ ನಂತರ ಅಥವಾ ಆತನಿಗೆ ಮುಖ್ಯ ನ್ಯಾಯಾಧೀಶನು ವಿವರಿಸಿದ ನಂತರ ರಾಜ ಇತರರ ಮಾಹಿತಿಗಾಗಿ ತೀರ್ಪನ್ನು ನೀಡಬೇಕು" ಎಂದು ಅಭಿಪ್ರಾಯಪಡುತ್ತಾನೆ.[೧೪]

**೨.೧.೩ ಜಯರೇಖೆಗಳ ಮೂಲ ಮತ್ತು ಪ್ರಾಚೀನತೆ**

ಧರ್ಮಶಾಸ್ತ್ರಗಳಲ್ಲಿ ಒಂದು ಸಾಮ್ರಾಜ್ಯದ ಆಡಳಿತಾಂಗದಲ್ಲಿ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿರುವ ಜಯರೇಖೆಗಳು ಭಾರತದ ಇತಿಹಾಸದಲ್ಲಿ ಯಾವ ಕಾಲಘಟ್ಟದಿಂದ ಅಸ್ತಿತ್ವಕ್ಕೆ ಬಂದವು ಎಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ಇವುಗಳ ಬಗ್ಗೆ ಹಲವಾರು ಧರ್ಮಗ್ರಂಥಗಳನ್ನಾಧರಿಸಿ ಚರ್ಚೆ ಮಾಡಿರುವ ವಿದ್ವಾಂಸರು ಕ್ರಿ.ಪೂ. ೪ನೇ ಶತಮಾನದಲ್ಲಿದ್ದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬಳಕೆಯಾಗಿರುವ 'ಪಶ್ಚಾಕಾರವೇ' ಜಯಪತ್ರದ ಮೂಲವಿರಬಹುದೆಂದು ಅಭಿಪ್ರಾಯಪಡುತ್ತಾರೆ. ಇದಕ್ಕೆ ವ್ಯಾಖ್ಯಾನ ನೀಡಿದ ಪ್ರೊ॥ ಶಾಮಶಾಸ್ತ್ರಿಯವರು 'ಪಶ್ಚಾಕಾರ' ಎಂದರೆ 'Sentence of Punishment' ಎಂದು ಅರ್ಥೈಸಿದ್ದಾರೆ. ಹಲ್ಲೆಯ ಪ್ರತಿವಾದಿ ಸ್ಥಾನದಲ್ಲಿರುವ ಆರೋಪಿಯು, ತನ್ನ ವಿರುದ್ಧ ಮಾಡಿರುವ ಆಪಾದನೆಗಳಿಗೆ ಉತ್ತರಿಸಲು ವಿಫಲನಾದ ದಿನವೇ ದಂಡನೆಯ ಶಿಕ್ಷೆಯನ್ನು ನೀಡಬೇಕೆಂದು ಅವರು ವ್ಯಾಖ್ಯಾನಿಸುತ್ತಾರೆ.[೧೫] ಕ್ರಿ.ಶ. ೪–೬ನೆಯ ಶತಮಾನದಲ್ಲಿದ್ದನೆಂದು ಹೇಳಲಾಗುವ ಕಾತ್ಯಾಯನನು ತನ್ನ ವ್ಯವಹಾರ ನಿರ್ಣಯದಲ್ಲಿ ನ್ಯಾಯಿಕ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತೆ 'ಪಶ್ಚಾಕಾರ' ಮತ್ತು 'ಜಯಪತ್ರ' ಎಂಬ ಪದಗಳನ್ನು ಪ್ರಯೋಗಿಸಿ ಅವುಗಳ ನಡುವಿನ ಸ್ಥೂಲ ವ್ಯತ್ಯಾಸವನ್ನು ಗುರುತಿಸುತ್ತಾನೆ. ಅವನ ಪ್ರಕಾರ 'ಪಶ್ಚಾಕಾರ' ಎಂದರೆ, ವಾದಿಗೂ– ಪ್ರತಿವಾದಿಗೂ ತುಂಬಾ ವಿವಾದವಾದ ಬಳಿಕ ವಾದಿಯ ಪರವಾಗಿ ನೀಡುವ ತೀರ್ಪು; ಪ್ರತಿವಾದಿಯೇ ತಪ್ಪೊಪ್ಪಿಗೆ ಕೊಟ್ಟಾಗ ಅಥವಾ ಬೇರೆ ಕಾರಣಗಳಿಗಾಗಿ ಅವನ ಪ್ರಕರಣವನ್ನು ವಜಾ ಮಾಡಿ ತೀರ್ಪನ್ನು ನೀಡುವ ಪ್ರಸಂಗದಲ್ಲಿ ಅವನು 'ಜಯಪತ್ರ' ವೆಂಬ ಶಬ್ದದ ಅರ್ಥಕ್ಕೆ ಸೀಮಿತಗೊಳಿಸುತ್ತಾನೆ.[೧೬]

ದೇವಣ್ಣಭಟ್ಟನ ಪ್ರಕಾರ ನ್ಯಾಯಿಕ ವ್ಯವಹರಣೆಯ ಎಂದರೆ ನಾಲ್ಕು ಅಂಶಗಳು ಇದ್ದಾಗ ಮತ್ತು ಅದರಲ್ಲಿ ಸ್ಪಷ್ಟತೆ ಇಲ್ಲದೆ ಅವುಗಳನ್ನು ದಾಖಲಿಸಿದ್ದಾಗ ಮಾತ್ರ ಜಯಪತ್ರಕ್ಕೆ 'ಪಶ್ಚಾಕಾರ' ಎಂಬ

ಪದವನ್ನು ಅನ್ವಯಿಸಬಹುದು. ಮುಂದುವರೆಸುತ್ತಾ, ಪ್ರತಿವಾದಿಯು ಸತ್ಯೋತ್ತರವನ್ನು ಸಲ್ಲಿಸಿದ ಕಾರಣದ ಮೇಲೆ ಪುರಾವೆ ಮತ್ತು ಪ್ರತ್ಯಾಕಲಿತ (deliberation as to on whom the burden of proof will lie) ಮಂಡನೆ ಅನವಶ್ಯಕವೆನಿಸಿದಾಗ, ಈ ಎರಡು ಭಾಗಗಳನ್ನು ಎಂದರೆ ಆಪಾದನೆ (ದೋಷಾರೋಪ) ಮತ್ತು ಉತ್ತರವನ್ನು ಒಳಗೊಂಡ ಜಯಪತ್ರ ಜಯಪತ್ರವೇ ವಿನಃ ಅದು ಪಶ್ಚಾಕಾರವಾಗುವುದಿಲ್ಲವೆಂದು ಅಭಿಪ್ರಾಯಪಡುತ್ತಾನೆ.[೧೭] ಆದರೂ, ಅರ್ಥಶಾಸ್ತ್ರದಲ್ಲಿ ಉಲ್ಲೇಖ ಗೊಂಡಿರುವ 'ಪಶ್ಚಾಕಾರ' ಎಂಬ ಪದವು, ಧರ್ಮಶಾಸ್ತ್ರಗಳಲ್ಲಿ ನೀಡಿದ ಅರ್ಥಕ್ಕಿಂತ ತುಂಬಾ ಭಿನ್ನವಾಗೇನೂ ಇಲ್ಲ. ಅಮರೇಶ್ವರ ಥಾಕೂರ್‌ರವರು ಪ್ರೊ॥ ಜೂಲಿಯಸ್ ಜಾಲಿಯವರ "ಕೌಟಿಲ್ಯನಲ್ಲಿ ಉಲ್ಲೇಖಗೊಂಡ ಪಶ್ಚಾಕಾರ ಪದವು ಧರ್ಮಶಾಸ್ತ್ರದಲ್ಲಿ ಉಲ್ಲೇಖಗೊಂಡ ಜಯಪತ್ರವನ್ನು ಸೂಚಿಸುವ ಅರ್ಥವನ್ನು ಒಳಗೊಂಡಿರುವಂತೆ ತೋರುತ್ತದೆ ಎಂಬ ಅಭಿಪ್ರಾಯವನ್ನು ಒಪ್ಪಿಕೊಳ್ಳುತ್ತಾ, ಅರ್ಥಶಾಸ್ತ್ರದಲ್ಲಿ ನಮೂದಿಸಲ್ಪಟ್ಟ ಪಶ್ಚಾಕಾರದ ಉಲ್ಲೇಖವನ್ನು ಕಡೆಗಣಿಸಬಾರದು. ಅದು ನಿರ್ವಿವಾದವಾಗಿಯೂ ಭಾರತೀಯ ಜಯಪತ್ರಗಳ ಅತಿ ಪ್ರಾಚೀನತೆಗೆ ಸಾಕ್ಷಿಯಾಗಿದೆ" ಎಂದು ಅಭಿಪ್ರಾಯಪಡುತ್ತಾರೆ.[೧೮] ಈ ಅಭಿಪ್ರಾಯಗಳ ಒಟ್ಟಂದ ನಿರೂಪಣೆಯಿಂದ ಜಯಪತ್ರದ ಪ್ರಾಚೀನ ರೂಪ ಪಶ್ಚಾಕಾರವಾಗಿದ್ದು, ಕ್ರಿ.ಪೂ. ನಾಲ್ಕನೆಯ ಶತಮಾನದಿಂದಲೇ 'ಜಯಪತ್ರ'ದ ಪರಿಕಲ್ಪನೆ ಪ್ರಚಲಿತದಲ್ಲಿತ್ತೆಂದು ತಿಳಿದುಬರುತ್ತದೆ.

**೨.೧.೪ ಜಯರೇಖೆಗಳ ಲಕ್ಷಣಗಳು**

ಜಯಪತ್ರಗಳು ಹೊಂದಿರಬೇಕಾದ ಪ್ರಧಾನ ಘಟಕಾಂಶಗಳ ಬಗ್ಗೆ ಧರ್ಮಶಾಸ್ತ್ರಕಾರರು ವಿಶೇಷವಾದ ಚರ್ಚೆಗಳನ್ನು ನಡೆಸಿದ್ದಾರೆ.

ವ್ಯಾಸನ ಪ್ರಕಾರ ಜಯಪತ್ರವು (i) ಆರೋಪದ ಮತ್ತು ಉತ್ತರದ ಸಂಕ್ಷಿಪ್ತ ಹೇಳಿಕೆ (ii) ಪಕ್ಷಕಾರರು ಮಂಡಿಸುವ ಸಾಕ್ಷ್ಯ (iii) ಒಳಗೊಂಡ ವಿಷಯದ ಬಗ್ಗೆ ಚರ್ಚೆ (iv) ಪಕ್ಷಕಾರರ ವಾದ ವಿವಾದಗಳ ಪರ್ಯಾಲೋಚನೆ (v) ಪ್ರಕರಣಕ್ಕೆ ಅನ್ವಯವಾಗಬಹುದಾದ ಕಾನೂನು (vi) ಸಭ್ಯರ (ನ್ಯಾಯಾಧೀಶರ) ಅಭಿಪ್ರಾಯಗಳು (vii) ಮುಖ್ಯ ನ್ಯಾಯಮೂರ್ತಿ ಮತ್ತು ಇತರ ನ್ಯಾಯಾಧೀಶರು ನೀಡಿದ ತೀರ್ಪು (viii) ರಾಜಮುದ್ರೆಯನ್ನು ಒಳಗೊಂಡಿರಬೇಕು.[೧೯] ಕಾತ್ಯಾಯನನ ಪ್ರಕಾರ ಜಯಪತ್ರದಲ್ಲಿ ಇರಬೇಕಾದ ಮೊದಲ ಅಂಶವೆಂದರೆ, ಆಪಾದನೆ ಮತ್ತು ಉತ್ತರ ಮತ್ತು ಆನಂತರ ಮುಖ್ಯ ನ್ಯಾಯಾಧೀಶರ ಮತ್ತು ಇತರ ಸಭ್ಯರ ಅಥವಾ ನ್ಯಾಯಾಧಿಕರಣದ ಸದಸ್ಯರ ಅಥವಾ ಸಂದರ್ಭಾನುಸಾರ ಸಂಸ್ಥೆಯ ಸದಸ್ಯರ ವಿವೇಚನೆಯನ್ನು ಒಳಗೊಂಡಿರಬೇಕು. ತರುವಾಯ ಪ್ರಶ್ನಿತ ದಾವೆಯ ವಸ್ತು ವಿಷಯದ ಬಗೆಗಿನ ಕಾನೂನು ಪ್ರಕರಣಗಳ ಅಭಿಪ್ರಾಯಗಳನ್ನು ಹಾಗು ಕಟ್ಟಕಡೆಯದಾಗಿ ನ್ಯಾಯಾಧೀಶರ ಸಮ್ಮತಿಯನ್ನು ಒಳಗೊಂಡಿರಬೇಕು.[೨೦] ಕಾತ್ಯಾಯನನೇ ಮತ್ತೊಂದು

ಶ್ಲೋಕದಲ್ಲಿ ಜಯಪತ್ರವು ವಾದಿ-ಪ್ರತಿವಾದಿಗಳ ಹೇಳಿಕೆಗಳನ್ನು, ಸಾಕ್ಷಿಗಳ ಸಂಗ್ರಹಣೆ, ಮುಖ್ಯ ನ್ಯಾಯಮೂರ್ತಿ ಮತ್ತು ನ್ಯಾಯಾಧೀಶರ ಅಭಿಪ್ರಾಯಗಳನ್ನು, ವಿಷಯವನ್ನು ಸ್ವತಃ ರಾಜ ಪರ್ಯಾಲೋಚಿಸಿರುವ ವಿಧಾನವನ್ನು, ರಾಜನ ತೀರ್ಪನ್ನು ಅನುಕ್ರಮವಾಗಿ ಜಯಪತ್ರದಲ್ಲಿ ದಾಖಲಿಸ ಬೇಕೆಂದು ಘೋಷಿಸುತ್ತಾನೆ.[೨೧] ಅಲ್ಲದೆ, ರಾಜ ಮತ್ತು ಸಭಾಸದರು ತಮ್ಮ ಸ್ವಹಸ್ತಾಕ್ಷರ ಹಾಕಿರಬೇಕೆಂದು ಹೇಳುತ್ತಾನೆ. ಮಿತಾಕ್ಷರನು ಕಾತ್ಯಾಯನನಿಗಿಂತ ಭಿನ್ನ ಅಭಿಪ್ರಾಯ ತಾಳುತ್ತಾ ಜಯಪತ್ರವು ವಾದ, ಉತ್ತರ, ಸಾಕ್ಷ್ಯ ಮತ್ತು ನಿರ್ಣಯಗಳ ಸಾರಾಂಶವನ್ನು ನೀಡುವ ತೀರ್ಪಾಗಿರುತ್ತದೆ ಎಂದು ಅಭಿಪ್ರಾಯಪಡುತ್ತಾನೆ.ರಘುನಂದನನು ಜಯಪತ್ರವು ಎಲ್ಲ ರೀತಿಯಲ್ಲೂ ಪರಿಪೂರ್ಣವಾಗಿದೆ ಎಂಬುದನ್ನು ಪ್ರತಿಬಿಂಬಿಸುವ ಉದ್ದೇಶದಿಂದ ಜಯಪತ್ರದಲ್ಲಿ ಈ ಎಲ್ಲ ಘಟಕಾಂಶಗಳು ಇರಬೇಕೆಂದು ಸಮರ್ಥಿಸುತ್ತಾನೆ.

ಬೃಹಸ್ಪತಿಯು, ಒಂದು ದಾವೆಯಲ್ಲಿ ಏನನ್ನು ವ್ಯವಹರಿಸಲಾಗಿದ್ದರೂ, ಜಯಪತ್ರದಲ್ಲಿ ವಾದ, ಉತ್ತರ ಮತ್ತು ಪ್ರತಿಪಾದನೆ (SoE forth), ಹಾಗೆಯೇ ವಿಚಾರಣೆಯ ಸಾರಾಂಶವನ್ನು ಸಂಪೂರ್ಣವಾಗಿ ದಾಖಲಿಸಬೇಕೆಂದು ಹೇಳುತ್ತಾನೆ.[೨೨]

ಜಯಪತ್ರಗಳನ್ನು ಯಾರಿಗೆ ಮತ್ತು ಯಾವ ಸಂದರ್ಭಗಳಲ್ಲಿ ನೀಡಬೇಕು ಎಂಬ ಬಗ್ಗೆಯೂ ಸಹ ಧರ್ಮಗ್ರಂಥಗಳು ಚರ್ಚಿಸಿವೆ. ಪ್ರಡ್ವಿವಾಕನ (ಮುಖ್ಯ ನ್ಯಾಯಮೂರ್ತಿ) ಸಹಿ ಮತ್ತು ರಾಜಮುದ್ರೆಯೊಂದಿಗೆ ಜಯಶೀಲನಾದ ವ್ಯಕ್ತಿಗೆ ಅವನ ವಿಜಯಕ್ಕೆ ಸಾಕ್ಷಿಯಾಗಿ ಜಯಪತ್ರ ನೀಡಬೇಕೆಂದು ವೃದ್ಧಹಾರೀತನು ಅಭಿಪ್ರಾಯಪಡುತ್ತಾನೆ.[೨೩] ಸ್ಮೃತಿಗಳಲ್ಲಿ ನಿರ್ದಿಷ್ಟಪಡಿಸಿದಂತಹ ಎಲ್ಲ ವಿಧಿವಿಧಾನಗಳೊಂದಿಗೆ ಬರೆದ ಜಯಪತ್ರಗಳನ್ನು ರಾಜರೇ ಆಸ್ಥಾನದಲ್ಲಿ ನೀಡಬೇಕಾಗುತ್ತದೆ.[೨೪]

ಜಯಪತ್ರವನ್ನು ಯಾರಿಗೆ ನೀಡಬೇಕೆಂಬ ಬಗ್ಗೆ ವಶಿಷ್ಠನು ತಿಳಿಸುತ್ತಾ, ಸ್ಥಿರ ಅಥವಾ ಚರಾಸ್ತಿಯ ಪಾಲಿನ ಬಗ್ಗೆ ಆಪಾದನೆಯನ್ನು ಮಾಡಿದಾಗ್ಯೂ, ಅಂಥ ಆಸ್ತಿಗಳ ಮಾಲೀಕತ್ವವನ್ನು ಸ್ವತಃ ರುಜುವಾತುಪಡಿಸಿಕೊಳ್ಳಲು ಸಾಕ್ಷ್ಯವನ್ನು ಬಳಸಿಕೊಂಡು ಯಶಸ್ವಿಯಾಗುವ ಕಕ್ಷಿದಾರನಿಗೆ ನೀಡಬೇಕೆಂದು ಅಭಿಪ್ರಾಯಪಡುತ್ತಾನೆ.[೨೫]

ಜಯಪತ್ರಗಳನ್ನು ಯಾವ ಸಂದರ್ಭದಲ್ಲಿ ನೀಡಬೇಕು ಎಂಬ ಬಗ್ಗೆ ಚರ್ಚಿಸುತ್ತಾ ಯಾಜ್ಞವಲ್ಕ್ಯನು "ಒಂದೇ ವಿಷಯ ಮತ್ತೆ ಮತ್ತೆ ಸಂಕ್ಷೋಭೆಗೊಳಗಾಗುವುದನ್ನು ತಪ್ಪಿಸಲು ಜಯಪತ್ರವನ್ನು ವಿಶೇಷವಾಗಿ ನೀಡಲಾಗುತ್ತದೆಂದು ಅಭಿಪ್ರಾಯಪಡುತ್ತಾನೆ".[೨೬] ನಾರದನು "ಒಬ್ಬ ವ್ಯಕ್ತಿ ಸ್ವಯಂ ತಪ್ಪೊಪ್ಪಿಗೆಯಿಂದ ಅಥವಾ ತನ್ನ ಸ್ವಕೃತ್ಯದಿಂದ (ಎಂದರೆ ತಪ್ಪು ಸಾಕ್ಷ್ಯ ಅಥವಾ ನಕಲಿ ದಾಖಲೆಗಳನ್ನು ಸಲ್ಲಿಸುವ ಮೂಲಕ) ಸೋತರೆ ಅಥವಾ ಅವನು ಸೋತಿದ್ದಾನೆಂದು ಸಭಾಸಭ್ಯರು ಘೋಷಿಸಿದರೆ ಗೆದ್ದ ವ್ಯಕ್ತಿಗೆ ಜಯಪತ್ರ ನೀಡಬೇಕು" ಎಂದು ಪ್ರತಿಪಾದಿಸುತ್ತಾನೆ.

ಭಾರತೀಯ ಧರ್ಮಶಾಸ್ತ್ರಗಳು ಮತ್ತು ಸ್ಮೃತಿಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಜಯಪತ್ರಗಳನ್ನು "ಸಿವಿಲ್ ಅಥವಾ ಕ್ರಿಮಿನಲ್ ವಿಷಯಗಳಿಗೆ ಸಂಬಂಧಪಟ್ಟ ನ್ಯಾಯಿಕ ವ್ಯವಹರಣೆಯ ಪ್ರಕ್ರಿಯೆಯಲ್ಲಿ ಗೆದ್ದಂತಹ ವ್ಯಕ್ತಿಗೆ ಸಭಾಸದರು ಮತ್ತು ರಾಜನು ನೀಡುತ್ತಿದ್ದ ನ್ಯಾಯ ಪ್ರಕ್ರಿಯೆಯ ವಿವರಗಳನ್ನೊಳಗೊಂಡ ದಾಖಲೆ" ಎಂದು ಅರ್ಥೈಸಬಹುದಾಗಿದೆ. ಇಂತಹ ಎಲ್ಲ ವೈಲಕ್ಷಣಗಳನ್ನು, ನ್ಯಾಯಿಕ ಪ್ರಕ್ರಿಯೆಯ ಘಟಕಾಂಶಗಳನ್ನು ಒಳಗೊಂಡ ಕ್ರಿ.ಶ. ೯೨೮ರ ಅವಧಿಯ ಜಯಪತ್ರ ಜಾವಾ ದ್ವೀಪದಲ್ಲಿ ದೊರೆತಿದೆ. ಇದು ಪ್ರಾಚೀನ ಜಾವಾ ಭಾಷೆಯಲ್ಲಿದ್ದು ಇದನ್ನು ಮೊದಲ ಬಾರಿಗೆ ಪ್ರೊ॥ ಜೆ ಜೊಲಿಯವರು ಪ್ರಕಟಿಸಿದ್ದಾರೆ.[೨೭] ಇದನ್ನು ವಾದಿ ಧರ್ಮ ಎಂಬುವವನು ಪು-ಜಾಬ್‌ವೆಲ್ (Pu-Jobwell) ಎಂಬುವವನ ಮೃತ ಪತ್ನಿ ಚಂಪಾ ಎಂಬುವವಳು ವಾದಿಯಿಂದ ಪಡೆದಿದ್ದ ಸಾಲವನ್ನು ವಸೂಲು ಮಾಡುವುದಕ್ಕೆ ಹಾಕಿದ ದಾವೆಯಾಗಿದ್ದು, ವಾದಿಯು ನ್ಯಾಯಾಲಯದಲ್ಲಿ ವಿಚಾರಣೆಯ ವೇಳೆ ಹಾಜರಾಗದಿದ್ದರಿಂದ ಮತ್ತು ಮೃತ ಚಂಪಳಿಗೆ ಮಕ್ಕಳಿಲ್ಲದಿದ್ದುದರಿಂದ ಮತ್ತು ಆಕೆ ತನ್ನ ಪತಿಯ ಗಮನಕ್ಕೆ ಬಾರದೆ ಸಾಲ ಪಡೆದಿದ್ದರಿಂದ ಪತಿಯ ಸಮ್ಮತಿಯಿಲ್ಲದೆ ಪತ್ನಿ ಪಡೆದ ಸಾಲಕ್ಕೆ ಪತಿ ಜವಾಬ್ದಾರನಲ್ಲ ಎಂದು ಹೇಳಿ ಕೊನೆಯಲ್ಲಿ ಜಯಪತ್ರದಲ್ಲಿ ಒಳಗೊಂಡ ನಿರ್ಣಯ ಅಂತಿಮವಾಗಿದೆ ಮತ್ತು ಅದನ್ನು ಮಾರ್ಪಡಿಸತಕ್ಕದ್ದಲ್ಲವೆಂದು ವಿನಿಯಮಿಸಲಾಗಿದೆ.[೨೮] ಹಾಗೆಯೇ ಇಂಥ ಎಲ್ಲ ವೈಲಕ್ಷಣಗಳನ್ನು ಒಳಗೊಂಡ ದಿನಾಂಕ ೧೦-೦೬-೧೭೯೪ರ ಮತ್ತೊಂದು ಜಯಪತ್ರವನ್ನು ಡಾ॥ ಕೆ.ಪಿ. ಜಯಸ್ವಾಲ್‌ರವರು ಪ್ರಕಟಿಸಿದ್ದಾರೆ. ಈ ಜಯಪತ್ರವು, ಜಯಪತ್ರಗಳನ್ನು ಹೇಗೆ ಬರೆಯುತ್ತಾರೆ, ಅವು ಏನನ್ನು ಒಳಗೊಂಡಿರುತ್ತದೆ, ಪ್ರಾಚೀನ ಭಾರತದ ನಿಯಮಗಳನ್ನು ಹೇಗೆ ಅನ್ವಯಿಸಿಕೊಳ್ಳಬೇಕು ಎಂಬುದಕ್ಕೆ ಉದಾಹರಣೆಯಾಗಿದೆ. ಈ ಜಯಪತ್ರದ ವಿಷಯ ಮನೆಗೆಲಸದ ಹುಡುಗಿಯನ್ನು ಸ್ವಾಧೀನಕ್ಕೆ ಪಡೆಯುವುದಕ್ಕೆ ಸಂಬಂಧಿಸಿದಂತೆ ತುಲಾರಾಮ್ ಶರ್ಮನ್ ಎಂಬುವವನು ಮಣಿನಾತ್ ಶರ್ಮನ್ ಎಂಬುವವನ ವಿರುದ್ಧ ಹೂಡಿದ ದಾವೆಯಾಗಿದ್ದು, ಅದರಲ್ಲಿ ಪ್ರತಿವಾದಿ ದಾವೆಯನ್ನು ಗೆಲ್ಲುತ್ತಾನೆ ಮತ್ತು ಅವನಿಗೆ ಜಯಪತ್ರ ನೀಡಲಾಗುತ್ತದೆ. ಒಟ್ಟಾರೆಯಾಗಿ ಇದು ಧರ್ಮಶಾಸ್ತ್ರಕಾರರು ತಿಳಿಸುವ ಸರ್ವಲಕ್ಷಣಗಳನ್ನು ಒಳಗೊಂಡ ಜಯಪತ್ರವಾಗಿದೆ. ಅದರಲ್ಲಿ ಕೆ.ಪಿ. ಜಯಸ್ವಾಲ್ ರವರು "The judgement is thus one of the very late products of the Hindu Court" ಎಂದು ಅಭಿಪ್ರಾಯಪಟ್ಟಿದ್ದಾರೆ.[೨೯]

ಈ ಸಂದರ್ಭದಲ್ಲಿ ಇಲ್ಲಿ ಉದ್ಭವವಾಗುವ ಒಂದು ಯಥೋಚಿತ ಪ್ರಶ್ನೆಯೆಂದರೆ, ಪ್ರಾಚೀನ ಭಾರತದ ಆಡಳಿತಾಂಗದ ಮೂಲ ಘಟಕವಾದ ನ್ಯಾಯ ಪ್ರಕ್ರಿಯೆಯ ಒಂದು ಸಾಂದ್ರ ಘಟಕಾಂಶವಾಗಿಯೇ ಪರಿಭಾವಿತವಾಗಿ ಅತ್ಯಂತ ಪ್ರಮುಖ ಸ್ಥಾನ ಪಡೆದಿದ್ದ ಜಯಪತ್ರಗಳು ಸಹಜವಾಗಿಯೇ ಭಾರತದಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಯಾಕೆ ಲಭ್ಯವಾಗಿಲ್ಲ? ಭಾರತದ ನ್ಯಾಯ ಪ್ರಕ್ರಿಯೆಯ ಭಾಗವಾದ ಜಯಪತ್ರಗಳ ಪ್ರಪ್ರಥಮ ನಿದರ್ಶನಕ್ಕಾಗಿ ನಾವು ಕಡಲಾಚೆಯ ಜಾವಾ ದ್ವೀಪದಲ್ಲಿ ದೊರೆತ ಕ್ರಿ.ಶ. ೯೨೮ರ ಅವಧಿಯ ಜಯಪತ್ರದೆಡೆಗೆ ಏಕೆ ದೃಷ್ಟಿ ಹಾಯಿಸಬೇಕಾಯಿತು?

ಎಂಬುದು. ಇದಕ್ಕೆ ರಾಮಾಜೋಯಿಸ್‌ರವರು "ದುರದೃಷ್ಟವಶಾತ್ ಒಂದಲ್ಲ ಒಂದು ಕಾರಣಕ್ಕಾಗಿ ಈ ವ್ಯವಹರಣೆಗಳ ದಾಖಲೆಗಳನ್ನು ನಿರ್ವಹಿಸುವ ವ್ಯವಸ್ಥೆ ಭಾರತದಲ್ಲಿ ಪ್ರಚಲಿತದಲ್ಲಿರಲಿಲ್ಲ. ಕೆಲವು ದಾಖಲೆಗಳನ್ನು ನಿರ್ವಹಿಸಿದ್ದರೂ, ಅವುಗಳನ್ನು ಸಂರಕ್ಷಿಸಿಟ್ಟಿಲ್ಲದಿರುವುದು ಇದಕ್ಕೆ ಕಾರಣವಿರಬಹುದು" ಎಂದು ಅಭಿಪ್ರಾಯಪಟ್ಟಿದ್ದಾರೆ.[೩೦]

ಭಾರತದ ಮೊಟ್ಟಮೊದಲ ಜಯಪತ್ರ ಜಾವಾದಲ್ಲಿ ಲಭ್ಯವಾಗುವ ಸರಿಸುಮಾರು ವೇಳೆಗೆ (ಕ್ರಿ.ಶ. ೯೨೮) ಕನ್ನಡಿಗರಿಗೆ ಜಯಪತ್ರದ ಪರಿಕಲ್ಪನೆಯ ಅರಿವು ಇದ್ದಿತೆಂದು ಹೇಳಬಹುದು. ಇದಕ್ಕೆ ಕರ್ನಾಟಕದ ಆಳರಸರ ಸಾಮ್ರಾಜ್ಯಗಳ ಭೌಗೋಳಿಕ ವಿಸ್ತರಣೆ ಮತ್ತು ಕರ್ನಾಟಕ ಹಾಗೂ ಕರ್ನಾಟಕದ ಜೈನಪರಂಪರೆ ವಿಶ್ವಾತ್ಮಕ ಭಾಷೆಗಳಿಗೆ ತನ್ನನ್ನು ಮುಕ್ತವಾಗಿ ಒಡ್ಡಿಕೊಂಡಿದ್ದ ಪರಿಣಾಮವಿರಬಹುದು. ಸಂಸ್ಕೃತದ ಮಹಾಪುರಾಣವನ್ನಾಧರಿಸಿ ಆದಿಪುರಾಣ ರಚಿಸಿದ ಪಂಪ, ಜಯಪತ್ರದ ಪರಿಕಲ್ಪನೆಯನ್ನು ಮೊಟ್ಟಮೊದಲ ಬಾರಿಗೆ ಕನ್ನಡಿಗರಿಗೆ ಪರಿಚಯಿಸುತ್ತಾನೆ. ಪಂಪನ ಆದಿಪುರಾಣದಲ್ಲಿ (ಕ್ರಿ.ಶ. ೯೪೨) ಸ್ವಯಂಬುದ್ಧ ಎಂಬುವವನು ಪ್ರತಿವಾದಿಗಳನ್ನು ವಾದ ವಿವಾದಗಳಲ್ಲಿ ಮಣಿಸಿದ್ದಕ್ಕಾಗಿ ಖಚರೇಂದ್ರ ಅವನಿಗೆ ಜಯಪತ್ರ ನೀಡುತ್ತಾನೆ.

'ಪರವಾದಿಗಳಮೊಗಂಗಳ್
ಕರಿಕುವರಿದಂತೆ ಕಂದಿಕುಂದಿರೆ ಕಚರೇ
ಶ್ವರನೀಯೆ ಪಡೆದನತ್ಯಾ
ಧರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ[೩೧]

ಆದಿಪುರಾಣದ ನಂತರ ಸುಮಾರು ೨೫೦ ವರ್ಷಗಳ ತರುವಾಯ ಎಂದರೆ ಕ್ರಿ.ಶ. ಸುಮಾರು ೧೨೦೦ ರ ವೇಳೆಗೆ ಜಯಪತ್ರವನ್ನೊಳಗೊಂಡ ಶಿಲಾಶಾಸನ ಲಭ್ಯವಾಗುತ್ತದೆ.

ಜಯಪತ್ರಗಳ ಬೀಜರೂಪಿ ಚಿಂತನೆ ಕ್ರಿ.ಪೂ. ಸುಮಾರು ನಾಲ್ಕನೆಯ ಶತಮಾನದಲ್ಲಿದ್ದ ಕೌಟಿಲ್ಯನ ಅರ್ಥಶಾಸ್ತ್ರದಲ್ಲೇ ಇದೆ ಎಂಬ ಅಭಿಪ್ರಾಯವನ್ನು ಅಂಗೀಕರಿಸುವುದಾದರೆ, ಕರ್ನಾಟಕಕ್ಕೆ ಜಯಪತ್ರಗಳು ಪರಿಚಯವಾಗಲು ೧೬೦೦ ವರ್ಷಗಳ ಕಾಲಾವಧಿ ಬೇಕಾಯಿತೇ?

ಜಾವಾದಲ್ಲಿ ದೊರೆತ ಜಯಪತ್ರವನ್ನು ಹೊರತುಪಡಿಸಿದರೆ ಈವರೆಗೆ ಇಡೀ ಭಾರತದಲ್ಲಿ ಲಭ್ಯವಾಗಬಹುದಾದ ಮೊಟ್ಟಮೊದಲ ಶಾಸನೋಲ್ಲೇಖ ಜಯಪತ್ರ ಅಬ್ಬಲೂರಿನದೇ ಆಗಿದೆ. ಇದಕ್ಕೆ ಕಾರಣವೇನಾಗಿರಬಹುದು ಎಂದು ಪರ್ಯಾಲೋಚಿಸಿದಾಗ, ಬಹುಶಃ ಕಲ್ಯಾಣ ಚಾಲುಕ್ಯ ಅರಸ ಆರನೆಯ ವಿಕ್ರಮಾದಿತ್ಯನ ಆಸ್ಥಾನದೆಡೆಗೆ ಬೆರಳು ಮಾಡಿ ತೋರಿಸಬೇಕಾಗುತ್ತದೆ. ಆರನೆಯ ವಿಕ್ರಮಾದಿತ್ಯ ಕಲ್ಯಾಣ ಚಾಲುಕ್ಯ ಅರಸರಲ್ಲೇ ಅತ್ಯಂತ ಪ್ರಭಾವಿ ಮತ್ತು ಪ್ರಸಿದ್ಧ ಅರಸನೆಂದು ಇತಿಹಾಸ ದಾಖಲಿಸುತ್ತದೆ. ಈತನ ಆಸ್ಥಾನದಲ್ಲಿ ಉತ್ತರ ಭಾರತದ ಕಡೆಯಿಂದ ಬಂದ ಬಿಲ್ಹಣ, ಕರ್ನಾಟಕದ

ವಿಜ್ಞಾನೇಶ್ವರ, ಮುಂತಾದ ವಿದ್ವಾಂಸರು ಇದ್ದರು. ವಿಜ್ಞಾನೇಶ್ವರ ತನ್ನ ಮಿತಾಕ್ಷರ ಸಂಹಿತೆಯಲ್ಲಿ ನ್ಯಾಯ ಪ್ರಕ್ರಿಯೆಯ ಬಗ್ಗೆ ವಿಸ್ತೃತ ಚರ್ಚೆಯನ್ನು ನಡೆಸಿದ್ದಾನೆ. ಹಾಗಾಗಿ ಬಹುಶಃ ಆತನ ಪ್ರಭಾವದಿಂದಾಗಿ ಕರ್ನಾಟಕದಲ್ಲಿ ಜಯಪತ್ರಗಳು ಪರಿಚಯಿಸಲ್ಪಟ್ಟಿರಬಹುದೆಂದು ಊಹಿಸಬಹುದಾಗಿದೆ.

ಭಾರತೀಯ ಸಂಸ್ಕೃತ ಗ್ರಂಥಗಳಲ್ಲಿ ಚರ್ಚೆಯಾಗಿರುವ ನ್ಯಾಯಿಕ ಸ್ವರೂಪದ ಆರಂಭಿಕ ಜಯಪತ್ರಗಳು ತರುವಾಯ ತಾತ್ವಿಕ ಸಂಘರ್ಷದ ಫಲಿತಗಳಾಗಿ ಮೂಡಿಬಂದಿವೆ. ಕೆಲವೇ ಕೆಲವು ಜಯಪತ್ರಗಳ ಹೊರತಾಗಿ ಉಳಿದ ಎಲ್ಲಾ ಭಾರತೀಯ ಜಯರೇಖೆಗಳು ತಾತ್ವಿಕ ಸಂಘರ್ಷದಲ್ಲಿ ಗೆದ್ದವರಿಗೆ ನೀಡಿದಂತಹ ದಾಖಲೆಗಳಾಗಿ ಚಿತ್ರಿತವಾಗಿವೆ. ಈ ಹಿನ್ನೆಲೆಯಲ್ಲಿಯೇ ಬಹುತೇಕ ವಿದ್ವಾಂಸರು ಜಯಪತ್ರಗಳೆಂದರೆ 'ವಾದವಿವಾದದಲ್ಲಿ ಗೆದ್ದಂತಹವರಿಗೆ ನೀಡುವ ದಾಖಲೆ' ಎಂಬ ವ್ಯಾಖ್ಯಾನಕ್ಕೆ ಹೆಚ್ಚಿನ ಆದ್ಯತೆ ನೀಡುತ್ತಾ ಬಂದಿದ್ದಾರೆ. ಕರ್ನಾಟಕದಲ್ಲೂ ಇಂತಹ ತಾತ್ವಿಕ ಸ್ವರೂಪದ ಜಯಪತ್ರಗಳ ನಿದರ್ಶನಗಳು ಸಾಹಿತ್ಯ ಕೃತಿಗಳಲ್ಲಿ ಲಭ್ಯವಿದ್ದು ಅದನ್ನು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಕರ್ನಾಟಕದಲ್ಲಿ ಶಾಸನೋಕ್ತ ಜಯಪತ್ರಗಳು ಭಾರತೀಯ ಸಂಸ್ಕೃತ ಗ್ರಂಥಗಳಲ್ಲಿ ಕಂಡುಬರುವ ಜಯಪತ್ರಗಳಿಗಿಂತ ಭಿನ್ನವಾಗಿವೆ. ಧರ್ಮಶಾಸ್ತ್ರಗಳಲ್ಲಿ ಉಲ್ಲೇಖಗೊಂಡಿರುವ ಜಯಪತ್ರಗಳು ನ್ಯಾಯಿಕ ವ್ಯವಹರಣೆಗಳ ಅಂಗವಾಗಿ ರೂಪುಗೊಂಡಿದ್ದರೆ, ಕರ್ನಾಟಕದ ಜಯರೇಖೆಗಳು ಧಾರ್ಮಿಕ ಸಂಘರ್ಷದ ಭಾಗವಾಗಿ ಪಡಿಮೂಡಿವೆ ಮತ್ತು ವಿದ್ವಾಂಸರು ಅಂಥ ಜಯಪತ್ರಗಳನ್ನು ಈ ಹಿನ್ನೆಲೆಯಲ್ಲಿಯೇ ಹೆಚ್ಚಿನ ಚರ್ಚೆಗೆ ಒಳಮಾಡಿದ್ದಾರೆ. ಆದರೆ, ಇಂಥ ಧಾರ್ಮಿಕ ಸಂಘರ್ಷದ ಜಯಪತ್ರಗಳು ಕಾಲಾನಂತರದಲ್ಲಿ ವಿಭಿನ್ನ ಹೆಸರುಗಳೊಂದಿಗೆ, ವಿಭಿನ್ನವಾದ ಪರಿಕಲ್ಪನೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕರ್ನಾಟಕದಲ್ಲಿ ಕಂಡುಬರುವ ಇಂತಹ ವಿಭಿನ್ನ ಜಯಪತ್ರಗಳ ಪರಿಕಲ್ಪನೆಗಳು ಈವರೆಗೆ ನಾನು ಗಮನಿಸಿದ ಮಟ್ಟಿಗೆ ಭಾರತದ ಇತರ ಕಡೆ ಪ್ರಚಲಿತದಲ್ಲಿರಲಿಲ್ಲ ಎನ್ನುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಇವು ಕರ್ನಾಟಕದ ವೈಶಿಷ್ಟ್ಯಗಳಾಗಿವೆ. ಆ ಕಾರಣಕ್ಕಾಗಿಯೇ ಇವು ಅಖಿಲ ಭಾರತ ಮಟ್ಟದಲ್ಲಿ ಹಾಗೆಯೇ ಕರ್ನಾಟಕದಲ್ಲಿ ನಡೆದ ಅಧ್ಯಯನಗಳ ವ್ಯಾಪ್ತಿಯಿಂದ ತುಂಬಾ ದೂರು ಉಳಿದಿದೆ. ಈ ಮಟ್ಟಿಗೆ ಅಖಂಡ ಭಾರತಕ್ಕೆ ಸಂಬಂಧಪಟ್ಟಂತೆ ಧರ್ಮಶಾಸ್ತ್ರಗಳಲ್ಲಿ ವ್ಯಾಖ್ಯಾನಿಸಲಾದ ಜಯಪತ್ರಗಳಿಗೂ, ಕರ್ನಾಟಕದ ತಳಸಮುದಾಯಗಳ ಹೋರಾಟದ ಜೀವನ್ಮುಖಿ ನೆಲೆಗಳಿಂದ ರೂಪುಗೊಂಡ ಜಯರೇಖೆ, ಕಂಚಿಪತ್ರಗಳಿಗೂ ತುಂಬಾ ಭಿನ್ನತೆಗಳಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಜಯಪತ್ರಗಳ ಅಧ್ಯಯನ ಕರ್ನಾಟಕದ ಚರಿತ್ರೆಯಲ್ಲಿ ಗೈರುಹಾಜರಾಗಿರುವ ವೈಶಿಷ್ಟ್ಯಪೂರ್ಣ ಸಮಾಜವೊಂದನ್ನು ನಮ್ಮ ಮುಂದೆ ಅನಾವರಣಗೊಳಿಸುತ್ತದೆ.

## ೨.೨ ಕರ್ನಾಟಕದಲ್ಲಿ ಜಯಪತ್ರಗಳ ವಿಭಿನ್ನ ಪರಿಕಲ್ಪನೆಗಳು ಮತ್ತು ಮಾದರಿಗಳು

ಜಯಪತ್ರಗಳ ಅಧ್ಯಯನ ಏಕರೂಪಿ ಅಧ್ಯಯನವಲ್ಲ. ಕಾಲಬದ್ಧ ವ್ಯಾಪ್ತಿಗೆ ಒಳಪಡದ ಜಯಪತ್ರಗಳ ಅಧ್ಯಯನವನ್ನು ಕಾಲಾತೀತ ಅಧ್ಯಯನ ಪ್ರಕ್ರಿಯೆಯ ವ್ಯಾಪ್ತಿಗೆ ಒಳಪಡಿಸುವುದು ಅಗತ್ಯ. ಜಯಪತ್ರ, ಜಯರೇಖೆ, ಜಯಲೇಖೆ, ಜಯಪತ್ರಿಕಾ, ರಾಯರೇಖೆ, ಕಂಚೀಸನದು, ಕಂಚಿನ ಪತ್ರ, ತಾಮ್ರದ ನಕಲು, ಚಪ್ಪೋಡು, ಹೀನಪತ್ರ ಅಥವಾ ಸೋತ ಪತ್ರ, ಮುಂತಾದ ವಿಭಿನ್ನ ಹೆಸರುಗಳಲ್ಲಿ ಕಂಡು ಬರುವ ಜಯಪತ್ರಗಳ ಅಧ್ಯಯನವನ್ನು ಒಂದು ಕಾಲಘಟ್ಟಕ್ಕೆ ಮತ್ತು ಒಂದೇ ಪರಿಕಲ್ಪನೆಯ ತೆಕ್ಕೆಯೊಳಗೆ ಒಳಪಡಿಸಿದರೆ ಅದು ಏಕಮುಖಿ ಅಥವಾ ಏಕಸ್ತರದ ವ್ಯಾಖ್ಯಾನವಾಗುತ್ತದೆಯೇ ವಿನಾ ಅದರ ಬಹುಮುಖಿ ಪರಿಕಲ್ಪನೆಗಳನ್ನು, ಅರ್ಥವಿಕಸನ ಗತಿವಿಧಾನಗಳನ್ನು ಅರ್ಥಮಾಡಿಕೊಳ್ಳುವುದು ಅಸಾಧ್ಯ. ಹೀಗಾಗಿ ಕಾಲಾನುಕ್ರಮದಲ್ಲಿ ಅವು ತಾಳಿದ ವಿವಿಧ ಹಾಗೂ ವಿಭಿನ್ನ ಹೆಸರುಗಳು ಮತ್ತು ಅರ್ಥವ್ಯಾಪ್ತಿಯ ಆಧಾರದ ಮೇಲೆ ಹಂತಹಂತವಾಗಿ ಈ ಮುಂದಿನಂತೆ ಗುರುತಿಸಲಾಗಿದೆ.

೧) ಜಯಪತ್ರಗಳು, ಸೋತ ಪತ್ರಗಳು, ತೊರೆ ಪತ್ರಗಳು, ರಾಯರೇಖೆ
೨) ಜಯರೇಖೆಗಳು, ಜಯಲೇಖೆಗಳು, ಜಯಪಟ್ಟಿಕಾ ಕ್ರಮ
೩) ಕಂಚಿ ಪತ್ರಗಳು, ಕಂಚಿನ ಸನದು, ತಾಮ್ರದ ನಕಲು, ಕುಲಕಥನಗಳು, ಚಪ್ಪೋಡು
೪) ಜಯಪತ್ರಗಳ ಸಾಹಿತ್ಯಕ ರೂಪ, ಇತರೆ

### ೨.೨.೧ ಜಯಪತ್ರಗಳು

ಭಾರತೀಯ ಸಂದರ್ಭದಲ್ಲಿ ಜಯಪತ್ರಗಳ ಮೂಲ ಎಳೆಗಳು ಕ್ರಿ.ಪೂ. ನಾಲ್ಕನೆಯ ಶತಮಾನದ ವೇಳೆಗೆ ಅಸ್ತಿತ್ವದಲ್ಲಿದ್ದವೆಂಬ ಸಂಗತಿಯನ್ನು ಹಿಂದಿನ ಉಪ-ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕೌಟಿಲ್ಯನಿಂದ ಮೊದಲ್ಗೊಂಡ ಜಯಪತ್ರಗಳ ಬೀಜರೂಪಿ ಚಿಂತನೆ,ಕ್ರಿ.ಶ. ಹತ್ತನೆಯ ಶತಮಾನದ ವೇಳೆಗೆ ಹಲವಾರು ಧರ್ಮಶಾಸ್ತ್ರಜ್ಞರ ಚಿಂತನೆಗಳಲ್ಲಿ ಹರಳುಗಟ್ಟಿ ಹನ್ನೆರಡನೆಯ ಶತಮಾನದ ವೇಳೆಗೆ ಕರ್ನಾಟಕದ ಶಾಸನಗಳಲ್ಲಿ ಅಂಕುರವಾಗಲಾರಂಭಿಸಿತು.

ಸ್ವಯಂಬುದ್ಧ ಎಂಬುವವನು ಪ್ರತಿವಾದಿಗಳನ್ನು ವಾದ ವಿವಾದಗಳಲ್ಲಿ ಮಣಿಸಿದ್ದಕ್ಕಾಗಿ ಖಚರೇಂದ್ರ ಅವನಿಗೆ ಜಯಪ್ರಶಸ್ತಿ ನೀಡುತ್ತಾನೆ.[೨೨] ಆದಿಪುರಾಣದ ಮೂರನೆಯ ಆಶ್ವಾಸದಲ್ಲಿ "ಅಂತಾತ್ಮೀಯವಿಜಯ ಪ್ರಶಸ್ತಿಯನಾವೃಷಭಗಿರಿಯೊಳಾವೃಷಭೇಶ್ವರನಂದನಂ ಕಿಂಕಿಣೀ ರತ್ನದಿಂ ಬರೆಯಿಸಿದಂ' ಎಂಬ ಉಲ್ಲೇಖ ಬರುತ್ತದೆ.[೩೩] ಎರಡನೆಯ ಆಶ್ವಾಸದಲ್ಲಿ ಸ್ವಯಂ ಬುದ್ಧನಿಗೆ 'ಜಯಪ್ರಶಸ್ತಿ' ನೀಡಲಾಗುತ್ತದೆ. ಮೂರನೆಯ ಆಶ್ವಾಸದಲ್ಲಿ ಸ್ವತಃ ಭರತೇಶ್ವರ ತನ್ನ 'ವಿಜಯಪ್ರಶಸ್ತಿ'ಯನ್ನು ವೃಷಭಾದ್ರಿಯಲ್ಲಿ ನಿಲ್ಲಿಸುತ್ತಾನೆ. ಜಯಪ್ರಶಸ್ತಿ, ವಿಜಯಪ್ರಶಸ್ತಿ ಎಂಬ ಪದಪುಂಜಗಳು ಮೇಲ್ನೋಟಕ್ಕೆ ಒಂದೇ ಅರ್ಥವನ್ನು ಸ್ಫುರಿಸುವಂತೆ ತೋರುತ್ತದೆ. ಬಹುತೇಕ

ಸಂದರ್ಭಗಳಲ್ಲಿ ಇವೆರಡೂ ಒಂದೇ ಎಂದು ಪರಿಭಾವಿಸಿರುವ ನಿದರ್ಶನಗಳು ಇವೆ. ವಿಜಯ ಪ್ರಶಸ್ತಿ ಒಬ್ಬ ವ್ಯಕ್ತಿಯ ಸಿದ್ಧಿ ಸಾಧನೆಗಳನ್ನು ಪ್ರಶಂಸಿಸಿ ಹಾಕಿಸುವ ಶಿಲಾಸ್ತಂಭ ಅಥವಾ ಶಿಲಾಲೇಖಗಳು. ಆದರೆ ಜಯಪತ್ರ ವಾದ ವಿವಾದದಲ್ಲಿ ವಿಜಯಿಯಾದ ವಾಗ್ಮಿಗಳಿಗೆ ಅವರ ಪಾಂಡಿತ್ಯ ಪ್ರತಿಭೆಗಳನ್ನು ಮನ್ನಿಸಿ ನೀಡಿದ ಮಾನ್ಯತಾ ಪತ್ರಗಳ ಮಾದರಿಯಾಗಿ ಪರಿಭಾವಿಸಲಾಗಿದೆ. ಎಂದರೆ, ಭೌತಿಕ ಅಥವಾ ತಾತ್ವಿಕ ಅರ್ಥದಲ್ಲಿ ವಿಜಯಿಯಾದವನಿಗೆ ನೀಡಿದ 'ವಿಜಯಪತ್ರ' ಎಂಬ ರೀತಿಯಲ್ಲಿ ಪರಿಗ್ರಹಿಸಲಾಗಿದೆ. ಪ್ರಭುತ್ವದ ಅಂಕಿತ ಪಡೆದಂತಹ ಶಾಸನಗಳಲ್ಲೆಲ್ಲಾ ಎಂದರೆ ಶಿಷ್ಟ ಶಾಸನಗಳ ಸಿದ್ಧ ಮಾದರಿಯಲ್ಲಿ ರಚನೆಗೊಂಡ ಶಾಸನಗಳಲ್ಲಿ 'ಜಯಪತ್ರ' ಎಂಬ ಪದ ಸ್ಪಷ್ಟವಾಗಿ ಪ್ರಯೋಗವಾಗಿದೆ. ಭಾರತೀಯ ನ್ಯಾಯಪದ್ಧತಿಯಲ್ಲಿ 'ಜಯಪತ್ರ' ಮಹತ್ವದ ಪಾತ್ರವಹಿಸಿದ್ದುದನ್ನು ಈ ಹಿಂದಿನ ಉಪ-ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಬ್ಬಲೂರಿನ ಜಯಪತ್ರ ಹಾಗೂ ಲಕ್ಷ್ಮೇಶ್ವರದ ಜಯಪತ್ರಗಳು ಭಾರತೀಯ ಧರ್ಮಗ್ರಂಥಗಳಲ್ಲಿ ಹೇಳಿರುವಂತೆ ನ್ಯಾಯಿಕ ವ್ಯವಹರಣೆಯ ಸ್ವರೂಪದಲ್ಲೇ ಇವೆ. ಇಲ್ಲೂ ಸಹ ವಾದಿ-ಪ್ರತಿವಾದಿಗಳು ಇದ್ದಾರೆ, ಅವರ ವಿಚಾರಣೆಯೂ ನಡೆದಿದೆ, ಗೆದ್ದ ಪಕ್ಷಕಾರರಿಗೆ ಜಯಪತ್ರವನ್ನು ನೀಡಲಾಗಿದೆ. ಆದರೆ ಇಡೀ ಶಾಸನ ಕರ್ನಾಟಕದ ಅಥವಾ ಭಾರತದಾದ್ಯಂತ ಕಂಡು ಬರುವ ರಾಜಶಾಸನದ ಲಕ್ಷಣಗಳನ್ನೇ ಒಳಗೊಂಡಿದೆ. ಎಂದರೆ, ಪ್ರಾರ್ಥನೆ, ರಾಜನ ಹೆಸರು, ಕಾಲ, ಶಾಸನ ಹಾಕಿಸುತ್ತಿರುವ ರಾಜನ ಅಧೀನದಲ್ಲಿರುವ ಭೂ ಮಂಡಲದ ವರ್ಣನೆ, ಶಾಸನದ ನಾಯಕನ ವರ್ಣನೆ, ಅವನ ಸಾಹಸ ಕೃತ್ಯಗಳು, ಪ್ರತಿವಾದಿಗಳ ಅಸಹಾಯಕತನ, ಗೆದ್ದ ಪಕ್ಷಕಾರನಿಗೆ ರಾಜ ನಿರ್ಭಯವಾಗಿ 'ಜಯಪತ್ರ' ಕೊಡುವ ಬಗೆ- ಈ ಎಲ್ಲ ಅಂಶಗಳಿಂದ ಇವು ರಾಜಶಾಸನದ ಸ್ವರೂಪವನ್ನು ಪಡೆದುಕೊಂಡಿವೆ. ಅಬ್ಬಲೂರಿನ ಶಾಸನದ ಕಾಲಾವಧಿ ಕ್ರಿ.ಶ. ಸುಮಾರು ೧೨೦೦ ಎಂದೂ ಗುರುತಿಸಲಾಗಿದೆ. ಇಡೀ ಅಬ್ಬಲೂರು ಜಯಪತ್ರವನ್ನು ಗಮನಿಸಿದಾಗ ಅದು ಹರಿಹರೋತ್ತರ ಅವಧಿಯಲ್ಲಿ ರಚನೆಯಾಗಿರುವ ಸಂಭಾವ್ಯತೆಯನ್ನು ತಳ್ಳಿಹಾಕುವಂತಿಲ್ಲ. ಹರಿಹರನ ರಗಳೆಗಳ ಲಕ್ಷಣವನ್ನು ಹೊಂದಿರುವ ಈ ಜಯಪತ್ರ, ಹರಿಹರನ ರಗಳೆಗಳಿಂದ ನೇರವಾಗಿ ಪ್ರೇರಿತವಾಗಿ ರಚನೆಯಾದಂತೆ ತೋರುತ್ತದೆ. ಲಕ್ಷ್ಮೇಶ್ವರದ ಎರಡು ಜಯಪತ್ರಗಳಲ್ಲಿ ಒಂದು ಭೂವಿವಾದದಲ್ಲಿ ಜಯಶೀಲರಾದವರಿಗೆ ಜಯಪತ್ರ ನೀಡಿದವು, ಮತ್ತೊಂದು ಧಾರ್ಮಿಕ ಆಚರಣೆಯಲ್ಲಿ ಜೈನಧರ್ಮ ಅನ್ಯ ಧರ್ಮದ ಸಂಕೇತಗಳನ್ನು ಬಳಸಿದುದರ ಬಗ್ಗೆ ವಿಚಾರಣೆ ನಡೆದು ಗೆದ್ದ ಪಕ್ಷಕಾರರಿಗೆ ಜಯಪತ್ರ ನೀಡಿದುದನ್ನು ದಾಖಲಿಸುತ್ತವೆ.

ಲಕ್ಷ್ಮೇಶ್ವರದ ಶಾಸನಗಳಲ್ಲಿ ರಾಜನ ಬದಲಿಗೆ ಅರಮನೆಯ ಪುರೋಹಿತರು, ದಂಡನಾಯಕ ವ್ಯಾಜ್ಯವನ್ನು ಇತ್ಯರ್ಥಗೊಳಿಸಿ ಗೆದ್ದವರಿಗೆ ಜಯಪತ್ರವನ್ನು ನೀಡುತ್ತಾರೆ. ರಾಜನಿಂದ ನೇರವಾಗಿ ನೀಡಲ್ಪಟ್ಟ ಅಥವಾ ರಾಜನ ಆದೇಶದ ಮೇರೆಗೆ ರಾಜಪುರೋಹಿತರು ಅಥವಾ ದಂಡನಾಯಕರು ಇತ್ಯರ್ಥಗೊಳಿಸಿದ ವ್ಯಾಜ್ಯಗಳ ಸಂಬಂಧದಲ್ಲಿ ಹಾಕಿಸಲಾದ ಶಾಸನಗಳಲ್ಲಿ 'ಜಯಪತ್ರ' ಎಂಬ ಪದವನ್ನು ಬಳಸಲಾಗಿದೆ. ಅಲ್ಲದೆ, 'ಜಯಪತ್ರ'ವನ್ನು ಉಲ್ಲೇಖಿಸುವ ಶಾಸನಗಳ ರಚನೆಯ ಮೇಲೂ

ಸಹ ಸಂಸ್ಕೃತಭಾಷೆಯ ಪ್ರಭಾವವಿದೆ. ಎಂದರೆ, ಶಿಷ್ಟ ಶಾಸನ ಪಠ್ಯ ರಚನೆಗಳ ಮಾದರಿಯಲ್ಲಿಯೇ ಪ್ರಾರ್ಥನಾ ಶ್ಲೋಕ, ಕಾಲಗಣನೆ, ರಾಜ ವಂಶಾವಳಿ, ಆಳ್ವಿಕೆ ನಡೆಸುತ್ತಿರುವ ಅರಸ, ಆತನ ಪ್ರಶಸ್ತಿ ಬಿರುದಾವಳಿಗಳೊಂದಿಗೆ ದಾನಿ–ದಾತನ ವಿವರ ಮುಂತಾದ ಅಂಶಗಳೊಂದಿಗೆ ಶಾಪಾಶಯಗಳೊಂದಿಗೆ ಶಾಸನ ಪಠ್ಯ ಪರಿಸಮಾಪ್ತವಾಗುತ್ತದೆ. ಮತ್ತೊಂದು ಗಮನಾರ್ಹ ಅಂಶವೆಂದರೆ, 'ಜಯಪತ್ರ' ಎಂದು ಉಲ್ಲೇಖಗೊಂಡ ಶಾಸನಗಳೆಲ್ಲವೂ ಶಿಲಾಮಾಧ್ಯಮಗಳ ಮೇಲೆ ರಚನೆಗೊಂಡಿದ್ದು, ನೈಜ ಕಾಲಾವಧಿ ಒಳಗೊಂಡ ಶಾಸನಗಳಾಗಿವೆ. ಹೀಗಾಗಿ ಅವು ಶಿಷ್ಟ ಶಾಸನ ಪಠ್ಯದ ಸರ್ವ ಸಂಲಕ್ಷಣಗಳನ್ನು ಒಳಗೊಂಡಿರುವುದು ಸಹಜವೇ ಆಗಿದೆ. ಜೈನ ಮತ್ತು ಶೈವ, ಜೈನ ಮತ್ತು ವೈಷ್ಣವ ಧರ್ಮಗಳ ನಡುವಿನ ಧಾರ್ಮಿಕ ಹೊಯ್ದಾಟ ಮತ್ತು ತಿಕ್ಕಾಟಗಳೇ ಈ ಜಯಪತ್ರಗಳ ಪ್ರಧಾನ ವಸ್ತು. ಆರಂಭದ ಜಯಪತ್ರಗಳೊಂದಿಗೆ ವೀರಶೈವಧರ್ಮ ಮತ್ತು ಜೈನಧರ್ಮಗಳು ತಳುಕು ಹಾಕಿಕೊಂಡಿರುವುದು ಕಾಕತಾಳೀಯವಾಗಿರದೆ, ಬಹುಶಃ ಸಂದರ್ಭಗಳ ಅನಿವಾರ್ಯತೆಯಿರಬಹುದೆನಿಸುತ್ತದೆ.

ಈ ಕಾಲಾವಧಿಯಲ್ಲಿ ಧರ್ಮದ ಸ್ವರೂಪದಲ್ಲಾಗುತ್ತಿದ್ದ ಸ್ಥಿತ್ಯಂತರಗಳು, ಸಮಾಜದಲ್ಲಿ ಜರುಗುತಿದ್ದ ಪಲ್ಲಟಗಳು, ವ್ಯಾಪಾರಿ ಕ್ಷೇತ್ರದ ಸ್ವಾಮ್ಯತೆಗಾಗಿ ನಡೆಯುತ್ತಿದ್ದ ಪೈಪೋಟಿಗಳು ಧರ್ಮಗಳ ನಡುವೆ ವಿಷಮತೆ ಮತ್ತು ವೈರುಧ್ಯತೆ ಬೆಳೆಯಲು ಕಾರಣವಾಗಿರಬಹುದು.

ಜಯಪತ್ರಗಳನ್ನು ನೀಡುತ್ತಿದ್ದ ಮತ್ತೊಂದು ಸಂದರ್ಭವೆಂದರೆ, ರಾಜರ ಆಸ್ಥಾನಗಳಲ್ಲಿ ನಡೆಯುತ್ತಿದ್ದ ತಾತ್ವಿಕ ಚರ್ಚೆಗಳು. ಇಂಥ ತಾತ್ವಿಕ ಚರ್ಚೆಗಳೂ ಸಹ ಮತ ಪಂಥಗಳ ನಡುವಿನ ವಿವಾದಗಳೇ ಆಗಿರುತ್ತಿದ್ದವು. ತಮ್ಮ ತಮ್ಮ ಮತ ಪಂಥಗಳ ಮೇಲ್ಮೆಯನ್ನು ಸಾರುವುದಕ್ಕಾಗಿ ನಡೆಸುವ ಇಂತಹ ಸಾತ್ವಿಕ ಸಂಘರ್ಷಗಳಲ್ಲಿ ಗೆದ್ದ ವ್ಯಕ್ತಿಗೆ ಜಯಪತ್ರವನ್ನು ನೀಡಲಾಗುತ್ತಿತ್ತು. ಜಯಶೀಲನಾದ ವ್ಯಕ್ತಿಗೆ 'ಜಯಪತ್ರ' ನೀಡುವುದು ಒಂದು ಸಾಂಕೇತಿಕ ಕ್ರಿಯೆಯಾಗಿದ್ದು, ಅದಕ್ಕಿಂತಲೂ ಮಿಗಿಲಾಗಿ ಗೆದ್ದ ವ್ಯಕ್ತಿಗಳು ಸೋತಂತಹ ವ್ಯಕ್ತಿಗಳನ್ನು ಮಣಿಸುವ ಮೂಲಕ ಆತನ ಮತವನ್ನು ಹಣಿಯುವ, ನಿರ್ನಾಮ ಮಾಡುವ ಮತ್ತು ಅಂತಹ ಮತವನ್ನು ಅನುಸರಿಸುವ ವ್ಯಕ್ತಿಗಳಲ್ಲಿ ಭಯ, ಹಿಂಜರಿಕೆಗಳನ್ನು ಉಂಟು ಮಾಡುವ ತಂತ್ರವೂ ಇದಾಗಿದೆ. "ಹೀಗೆ ವಾದಮಟ್ಟದಲ್ಲಿ ನಡೆದ ಘರ್ಷಣೆ, ಅದರಲ್ಲಿ ದೊರೆತ ಜಯಪತ್ರ–ಇವುಗಳು ಜನತೆಯ ಮೇಲೆ ಪ್ರಭಾವವನ್ನು ಬೀರಿ ಧರ್ಮಪ್ರಚಾರಕ್ಕೆ ಸಹಾಯಕವಾಗುತ್ತಿದ್ದುವೆನ್ನುವುದರಲ್ಲಿ ಸಂದೇಹವಿಲ್ಲ".[೩೪]

ತಾತ್ವಿಕ ಚರ್ಚೆಗಳಲ್ಲಿ ಗೆದ್ದಂತಹ ವ್ಯಕ್ತಿಗಳಿಗೆ ಜಯಪತ್ರಗಳನ್ನು ನೀಡಿದಂತಹ ಸಾಹಿತ್ಯಕ ಉದಾಹರಣೆಗಳು ಹಾಗೂ ಐತಿಹ್ಯಗಳು ನಮಗೆ ದೊರೆಯುತ್ತವೆ. ಆದರೆ ಶಾಸನಗಳಲ್ಲಿ ಅಂಥ ಉಲ್ಲೇಖಗಳ ಗೈರುಹಾಜರಿ ಎದ್ದು ಕಾಣುತ್ತದೆ. ಈ ರೀತಿ ಜಯಪತ್ರಗಳನ್ನು ನೀಡುವ ಪದ್ಧತಿ ಭಾರತದಾದ್ಯಂತ ಪ್ರಚಲಿತದಲ್ಲಿತ್ತು. ಚೌಹಾನರ ಮುಮ್ಮಡಿ ಪೃಥ್ವಿರಾಜನು (ಕ್ರಿ.ಶ. ೧೧೭೮–೧೧೯೨) ತನ್ನ ಆಸ್ಥಾನದಲ್ಲಿದ್ದ ಜಿನಪತಿ ಸೂರಿಗೆ ಜಯಪತ್ರ ನೀಡಿ ಸನ್ಮಾನಿಸಿದ್ದನೆಂದು ತಿಳಿದುಬರುತ್ತದೆ.[೩೫]

ಕರ್ನಾಟಕದಲ್ಲಿಯೂ ಇಂತಹ ತಾತ್ವಿಕ ಸಂಘರ್ಷಗಳು ನಡೆದಂತಹ ಉದಾಹರಣೆಗಳು ಶಾಸನಗಳಲ್ಲಿ ಲಭ್ಯವಾಗುತ್ತವೆ. ಅದರಲ್ಲಿ ಪ್ರಧಾನವಾಗಿ ಬೌದ್ಧ, ಜೈನ, ವೈದಿಕ ಧರ್ಮಗಳ ನಡುವೆ ನಡೆದಂತಹ ಸಂಘರ್ಷಗಳನ್ನು ಈ ಪ್ರಶಸ್ತಿಗಳು ಸ್ಪಷ್ಟಪಡಿಸುತ್ತವೆ. ಗೋಪನನ್ದಿಮುನಿಪುಂಗವನೆಂಬುವವನು ಸಾಂಖ್ಯ, ಚಾರ್ವಾಕ, ಬೌದ್ಧ, ವೈಷ್ಣವ, ಮುಂತಾದ ಧರ್ಮಗಳಿಗೆ ಮದಾನ್ಧಸಿನ್ಧುರನಾಗಿದ್ದ.[೩೬] ಬಹುತೇಕ ಜೈನ ಮುನಿಗಳು ಪರವಾದಿ ಶರಭಭೇರುಂಡರು,[೩೭] ತಾರ್ಕಿಕ ಚಕ್ರವರ್ತಿಗಳು,[೩೮] ಪರವಾದೀ ವಿಜಯಿಗಳು, ಕಾಳಾಮುಖ ಸಮಯ ಸಮುದ್ಧರಣರು[೩೯] ಮುಂತಾದ ಪ್ರಶಸ್ತಿಗಳನ್ನು ಹೊಂದಿರುತ್ತಿದ್ದರು. ಆದರೆ ಇಂತಹ ಸಂಘರ್ಷಗಳ ಕೊನೆಯಲ್ಲಿ ಜಯಪತ್ರ ನೀಡಲಾಯಿತೇ ಎಂಬುದರ ಬಗ್ಗೆ ಶಾಸನಗಳು ಮೌನತಾಳಿವೆ. ಪ್ರಶಸ್ತಿಗಳ ಮೂಲಕ ಸಾಂಕೇತಿಕವಾಗಿ ತಿಳಿಸಲಾಗಿದೆ.

ಕನ್ನಡದ ಕೆಲವು ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಮತ್ತು ಆಧುನಿಕ ಕೃತಿಗಳಲ್ಲಿ ಕೆಲವು ವ್ಯಕ್ತಿ ಚಿತ್ರಣಗಳನ್ನು ಕಟ್ಟಿಕೊಡುವಂತಹ ಸಂದರ್ಭಗಳಲ್ಲಿ ಹೀಗೆ ಜಯಪತ್ರ ಪಡೆದ ಕೆಲವು ಸನ್ನಿವೇಶಗಳ ವಿವರ ನೀಡಲಾಗಿದೆ. ಮಹಾಮೇಧಾವಿಗಳು, ವಿದ್ವಾಂಸರು ರಾಜರ ಆಸ್ಥಾನಗಳಿಗೆ ತೆರಳಿ ಅಲ್ಲಿ ಅದ್ವಿತೀಯ ವಿದ್ವಾಂಸರನ್ನೆಲ್ಲ ತಮ್ಮ ವಾದಗಳಿಂದ ಮಣಿಸುತ್ತಿದ್ದರು. ಅಂಥ ಜಯಶೀಲ ಪಂಡಿತರಿಗೆ ಅಪಾರ ಬಿರುದು ಬಾವಲಿಗಳೊಂದಿಗೆ ಜಯಪತ್ರವನ್ನು ನೀಡಿ ಸನ್ಮಾನ ಮಾಡುತ್ತಿದ್ದರೆಂಬ ವಿಷಯ ತಿಳಿದುಬರುತ್ತದೆ. ಕೆಲವು ಸಾಧಕರ ವ್ಯಕ್ತಿತ್ವದ ಬಗ್ಗೆ ಅಂಥ ಹಲವಾರು ಐತಿಹ್ಯಗಳು ಮೌಖಿಕವಾಗಿ ಪ್ರಚಾರದಲ್ಲಿದ್ದುದು ತಿಳಿದುಬರುತ್ತದೆ.

ತೆರಕಣಾಂಬಿಯ ಬೊಮ್ಮರಸ ತನ್ನ ಜೀವಂಧರ ಚರಿತೆಯಲ್ಲಿ ತನ್ನ ಪೂರ್ವೇತಿಹಾಸವನ್ನು ಹೇಳುತ್ತಾ, ತಾನು ಪ್ರೌಢದೇವರಾಯನನ್ನು ಮೆಚ್ಚಿಸಿ ಜಯಪತ್ರವನ್ನು ಪಡೆದ ನೇಮಿಚಂದ್ರನ ಕುಲದೀಪಕನೆಂದು ಕರೆದುಕೊಂಡಿದ್ದಾರೆ.[೪೦] ಸನತ್ಕುಮಾರ ಚರಿತೆಯಲ್ಲೂ ಸಹ ನೇಮಿಚಂದ್ರ ಪ್ರೌಢದೇವರಾಯನಿಂದ ಜಯಪತ್ರ ಪಡೆದುದನ್ನು ಉಲ್ಲೇಖಿಸಲಾಗಿದೆ.

"ಮಂಡಲೇಶ್ವರಪ್ರೌಢರಾಯನ
ಕಂಡು ತತ್ಸಭೆಯಲ್ಲಿ ರಂಜಿಪ
ತಂಡ ತಂಡದ ವಾದಿ ವಿದ್ವಾನ್ನುಗಳ ಮದದುಳಿದ
ಕೊಂಡು ಜಯಪತ್ರವನು ಭುವಿಗೆ ಪ್ರ
ಚಂಡ ತಾರ್ಕಿಕ ರತ್ನ ಸದ್ಗುಣ
ಮಂಡನಾಂಗನು ನೇಮಿಚಂದ್ರಗೆ ಶಿರವಮಗ್ಗಿಪೆನು".[೪೧]

ದೇವಚಂದ್ರ ತನ್ನ ರಾಜಾವಳೀ ಕಥಾಸಾರದಲ್ಲಿ ಜೈನರಿಗೆ, ಬೌದ್ಧರಿಗೆ ವಾದವೇರ್ಪಟ್ಟಾಗ, ಜೈನರು ಬೌದ್ಧರನ್ನು ಘಟವಾದದಿಂದ ಜಯಿಸಿ ಜಯಪತ್ರ ಪಡೆಯುವುದನ್ನು ದಾಖಲಿಸುತ್ತಾನೆ.[೪೨] ಅದೇ ಕೃತಿಯಲ್ಲಿ ಜೈನ ಭಟ್ಟಾರಕನು ಬುದ್ಧದಾಸನೊಂದಿಗೆ ವಾದ ಮಾಡಿ ಜಯಪತ್ರ ಪಡೆಯುವುದನ್ನೂ ಸಹ ಉಲ್ಲೇಖಿಸುತ್ತಾನೆ.[೪೩] ಡಿ.ವಿ.ಜಿ.ಯವರು ತಮ್ಮ ಜ್ಞಾಪಕ ಚಿತ್ರಶಾಲೆಯಲ್ಲಿ ಕೋಲಾರದ ನಾಗರತ್ನಮ್ಮನ ತಾಯಿ ನಂಜುಂಡಾಸಾನಿಯು ಆ ಕಾಲದಲ್ಲಿ ಪ್ರಸಿದ್ಧಗಳಾಗಿದ್ದ ವಿದುಷಿಯಾಗಿದ್ದು, ಸಂಗೀತದಲ್ಲಿಯೂ, ಭರತನಾಟ್ಯದಲ್ಲಿಯೂ ಮಹಾಪ್ರವೀಣೆಯೆಂದು ಅನೇಕ ಸಭೆಗಳಲ್ಲಿ ಜಯಪತ್ರ ಗಳಿಸಿದ್ದವಳು ಎಂದು ಉಲ್ಲೇಖಿಸುತ್ತಾರೆ.[೪೪]

ಮೇಲ್ಕಂಡ ಇಂಥ ಉದಾಹರಣೆಗಳನ್ನು ಪರಿಶೀಲಿಸಿದಾಗ, ಇಲ್ಲೆಲ್ಲಾ ತಾತ್ವಿಕ ಚರ್ಚೆಗಳಿಗೆ ಮತ್ತು ವಿದ್ವತ್ತಿಗೆ ಮನ್ನಿಸಿ ಜಯಪತ್ರಗಳನ್ನು ನೀಡಿರುವುದು ಕಂಡುಬರುತ್ತದೆ. ಇಂಥ ತಾತ್ವಿಕ ಚರ್ಚೆಗಳಲ್ಲಿ ಒಂದು ಪಂಥದ ವಿದ್ವಾಂಸರು ಧಾರ್ಮಿಕ ಅಥವಾ ಮತ್ತಿತ್ತರ ಪಾಂಡಿತ್ಯಪೂರ್ಣ ವಿಚಾರಗಳಲ್ಲಿ ಮತ್ತು ಕಲೆಪಾಂಡಿತ್ಯಗಳಲ್ಲಿ ಮತ್ತೊಂದು ಧರ್ಮದ ವಿದ್ವಾಂಸರಿಗೆ ಪಂಥಾಹ್ವಾನ ನೀಡಿ ಅವರನ್ನು ಸೋಲಿಸುತ್ತಿದ್ದರು. ಗೆದ್ದವರಿಗೆ ಬಿರುದು ಬಾವಲಿಗಳು ಮತ್ತು ಸತ್ಕಾರ ಸನ್ಮಾನಗಳು ಲಭ್ಯವಾಗುತ್ತಿದ್ದವು. ಶಿಷ್ಟ ಸಾಹಿತ್ಯ ಕೃತಿಗಳಲ್ಲಿ ಇಂಥ ಉದಾಹರಣೆಗಳು ಕಂಡುಬರುತ್ತವೆ. ನನ್ನ ಅಧ್ಯಯನದ ಸಂದರ್ಭದಲ್ಲಿ ಇಂತಹ ತಾತ್ವಿಕ ಪಂಥಾಹ್ವಾನಗಳಲ್ಲಿ ವಿಜಯಶಾಲಿಗಳಾದಂತಹ ವ್ಯಕ್ತಿಗಳಿಗೆ ನೀಡಿದಂತಹ ಶಾಸನೋಲ್ಲೇಖ ಜಯಪತ್ರಗಳು ಲಭ್ಯವಾಗಿಲ್ಲ. ಬದಲಾಗಿ ಭೌತಿಕವಾಗಿ ಪಂಥಾಹ್ವಾನ ನೀಡಿ ಗೆದ್ದು ಬಂದಂತಹವರಿಗೆ ನೀಡಿದ ಜಯಪತ್ರಗಳು ಕಂಡುಬಂದಿವೆ.

ಜಯಪತ್ರಗಳನ್ನು ಪಡೆಯುವ ಮತ್ತೊಂದು ವಿಧಾನವೆಂದರೆ ದಿವ್ಯಗಳು. ಸಾಮಾನ್ಯವಾಗಿ ಇಂಥ ದಿವ್ಯಗಳು ಸೀಮಾ ವಿವಾದ, ವ್ಯಕ್ತಿಗಳ ವೈಯಕ್ತಿಕ ಚಾರಿತ್ರ್ಯ, ಆಸ್ತಿಗಳ ಒಡೆತನ, ಕಳ್ಳತನ, ಮುಂತಾದ ವಿಷಯಗಳ ಸಂಬಂಧದಲ್ಲಿ ನಡೆಯುತ್ತವೆ. ಮಾಡಿದ ಆಪಾದನೆಗಳಿಗೆ ಭೌತಿಕ ಸಾಕ್ಷ್ಯಗಳು ಲಭ್ಯವಿಲ್ಲದಿದ್ದ ಸಂದರ್ಭದಲ್ಲಿ ದಿವ್ಯಗಳ ಮೊರೆಹೋಗುತ್ತಿದ್ದರು. ಪ್ರಾಚೀನ ಭಾರತೀಯ ನ್ಯಾಯದಾನ ವ್ಯವಸ್ಥೆಯಲ್ಲಿ ದಿವ್ಯಪದ್ಧತಿಗೆ ಮಹತ್ವದ ಸ್ಥಾನವಿದೆ. ದಿವ್ಯ ವಿಧಾನವು ಅನುಸರಿಸಲು ಕಷ್ಟವಾಗಿದ್ದು ಕೆಲವೊಮ್ಮೆ ಅದಕ್ಕೆ ಗುರಿಯಾದ ವ್ಯಕ್ತಿಗೆ ಪ್ರಾಣಾಪಾಯವೂ ಸಂಭವಿಸುವ ಸಾಧ್ಯತೆಯಿರುತ್ತದೆ. ಇವು ಅಪರಾಧ ಎಸಗಿದ ವ್ಯಕ್ತಿಗಳನ್ನು ಮಾನಸಿಕವಾಗಿ ಕುಗ್ಗಿಸಿ ಸ್ವತಃ ಅವರೇ ಸ್ವಯಂ ಅಪರಾಧವನ್ನು ಒಪ್ಪಿಕೊಳ್ಳಲು ಮಾಡಿದ ತಂತ್ರವಾಗಿದೆ. ಕರ್ನಾಟಕದಲ್ಲಿ ಅಂಥ ದಿವ್ಯಗಳನ್ನು ಗೆದ್ದಂತಹ ವ್ಯಕ್ತಿಗಳಿಗೆ ಜಯಪತ್ರಗಳನ್ನು ನೀಡಿದಂತಹ ಉಲ್ಲೇಖಗಳು ಹಲವಾರು ಶಾಸನಗಳಲ್ಲಿ ಲಭ್ಯವಾಗುತ್ತವೆ. (ಈ ವಿಷಯದ ಬಗ್ಗೆ ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ)

### ೨.೨.೨ ಸೋತಪತ್ರ, ಹೀನಪತ್ರ, ಪರಾಜಯ ಪತ್ರ, ತೊರೆಪತ್ರಗಳು

ಹೆಸರೇ ಸೂಚಿಸುವಂತೆ ಈ ಪರಿಭಾಷೆಗಳು 'ಜಯಪತ್ರ'ದ ಪರಿಕಲ್ಪನೆಗೆ ವೈರುಧ್ಯಾತ್ಮಕ ಅರ್ಥವ್ಯಾಪ್ತಿಯಲ್ಲಿ ನಿಲ್ಲುತ್ತದೆ. ಜಯಶೀಲರಾದವರಿಗೆ ಪ್ರಧಾನ ಮಾಡುವ ಪತ್ರ ಜಯಪತ್ರವಾದರೆ, ಸೋತವರು ಸ್ವತಃ ತಮ್ಮ ಸೋಲನ್ನು ತಾವೇ ಒಪ್ಪಿಕೊಂಡು ಬರೆದುಕೊಡುವ ಪತ್ರ ಸೋತಪತ್ರ. ಮದ್ದಿಹಳ್ಳಿ ಮಾದಿಗತನದ ಕಾಣಾಚಿ ವ್ಯಾಜ್ಯ ಕುರಿತ ತಾಮ್ರಪತ್ರಗಳಲ್ಲಿ[೪೫] ದೊಡ್ಡೇರಿಯ ಮಾದಿಗರ ಹೊಟ್ಟೆರಂಗ ಮತ್ತು ಮಾದಿಗರ ಚಿಕ್ಕ, ಮಧುರೆಗಿರಿಯ ತಿಮ್ಮ, ಬೆಳಗೆರೆಯ ಚಿನ್ನ, ಕೊಡಿ ದಾಸ ಇವರ ನಡುವೆ ಮಾದಿಹಳ್ಳಿ ಮಾದಿಗ ವೃತ್ತಿಯ ಮೇಲೆ ಹಕ್ಕು ಸ್ವಾಮ್ಯ ಸಾಧಿಸುವ ಸಂಬಂಧದಲ್ಲಿ ಉಂಟಾದ ವ್ಯಾಜ್ಯ ಬಗೆಹರಿಸುವ ಸಂದರ್ಭದಲ್ಲಿ ಪಂಚಾಯತಿಯಲ್ಲಿ ಸಾಕ್ಷಿ–ಸಾಕ್ಷ್ಯಗಳ ಮಂಡನೆಯ ನಂತರ ಸೋತ ಐವರು ತಮ್ಮ ಸೋಲನ್ನು ಒಪ್ಪಿಕೊಂಡು 'ಸೋತಪತ್ರ' ಬರೆದುಕೊಡುತ್ತಾರೆ.

ಇಡೀ ಶಾಸನದ ವಸ್ತು ವಿಷಯ, ವ್ಯಾಜ್ಯ ಸಂಗತಿಗಳು, ನ್ಯಾಯನಿರ್ಣಯ ವಿಧಾನ ಸಾಮಾನ್ಯ ಜಯರೇಖೆಗಳಂತೆಯೇ ಇವೆ. ಸಾಮಾನ್ಯವಾಗಿ ಗೆದ್ದವರಿಗೆ ಜಯಪತ್ರ ಬರೆದುಕೊಡುವುದು ರೂಢಿಗತ ಕ್ರಮ. ಆದರೆ, ತದ್ವಿರುದ್ಧವಾಗಿ ಸೋತವರು 'ಸೋತಪತ್ರ' ಬರೆದುಕೊಟ್ಟಿರುವುದು ವಿಶೇಷ ಸಂಗತಿ. ಲಕ್ಷ್ಮಣ್ ತೆಲಗಾವಿಯವರು ಇದನ್ನು ಜಯರೇಖೆಯೆಂದೇ ಪರಿಗಣಿಸಿ "ಪ್ರಸ್ತುತ ತಾಮ್ರಪತ್ರಗಳು ಶಾಸನಪ್ರಕಾರಕ್ಕೆ ಸೇರಿದ ಜಯರೇಖೆ ಅಥವಾ ಜಯಪತ್ರದ ಸ್ವರೂಪವೆನ್ನಬಹುದು. ಆದರೆ, ಇಲ್ಲಿಯ ವ್ಯತ್ಯಾಸವೆಂದರೆ, ವ್ಯಾಜ್ಯದಲ್ಲಿ ಜಯಿಸಿದವರಿಗೆ ನೀಡುವಂಥದ್ದು ಜಯರೇಖೆ/ ಜಯಪತ್ರವಾದರೆ, ಸೋತವರು ಗೆದ್ದವರಿಗೆ ಬರೆದುಕೊಟ್ಟಂಥದ್ದು 'ಸೋತಪತ್ರ'" ಎಂದು ಅಭಿಪ್ರಾಯಪಟ್ಟಿದ್ದಾರೆ.[೪೬]

ಸೋತಪತ್ರಗಳು 'ಹೀನಪತ್ರ' ಅಥವಾ 'ಪರಾಜಯ ಪತ್ರ' ಎಂಬ ಹೆಸರಿನಲ್ಲಿ ಧರ್ಮಗ್ರಂಥಗಳಲ್ಲೂ ಉಲ್ಲೇಖಗೊಂಡಿವೆ. ಬೃಹಸ್ಪತಿ ಹಾಗೂ ಅವನ ವ್ಯಾಖ್ಯಾನಕಾರ ದೇವಣಭಟ್ಟ ಕೆಲವೊಮ್ಮೆ ಸೋತ ಪಕ್ಷಕಾರರಿಗೆ ಸೋತದ್ದರ ಬಗ್ಗೆ ದಾಖಲೆಯನ್ನು ನೀಡಲಾಗುತ್ತದೆ. ಇದನ್ನೂ ಸಹ ಜಯಪತ್ರವೆಂದೂ ಕರೆಯಲಾಗುತ್ತದೆಂದು ಅಭಿಪ್ರಾಯಪಡುತ್ತಾನೆ. ಅಸಹಾಯ ಇದನ್ನು 'ಪರಾಜಯ ಪತ್ರ' ಎಂದು ಸೂಕ್ತವಾಗಿ ಕರೆದಿದ್ದಾನೆ.[೪೭]

ಕಾತ್ಯಾಯನನ ಪ್ರಕಾರ ನಿರಾಕರಣೆ, ಸಾಕ್ಷ್ಯದಾರರು ಮತ್ತು ನ್ಯಾಯಾಧೀಶರ ಬಗೆಗಿರುವ ದ್ವೇಷ ಮನೋಭಾವ, ಹಾಜರಾಗುವಂತೆ ಸಮನು ಮಾಡಿದರೂ ಹಾಜರಾಗದಿರುವಿಕೆ, ಮೌನವಾಗಿರುವಿಕೆ ಮತ್ತು ತಪ್ಪಿಸಿಕೊಳ್ಳುವಿಕೆ ದಾವೆಯ ವಜಾಗೆ ಐದು ಕಾರಣಗಳಾಗಿವೆ. ಅಲ್ಲದೆ ಇನ್ನೂ ಕೆಲವು ಕಾನೂನು ಗ್ರಂಥಗಳು ವ್ಯಾಜ್ಯವನ್ನು ವಜಾ ಮಾಡಿಕೊಂಡ (non suited) ಪಕ್ಷಕಾರನು, ದಾವೆಯ ವಸ್ತು ವಿಷಯಕ್ಕೆ ತನ್ನ ಕ್ಲೇಮನ್ನು ಕೈಬಿಡದಿದ್ದರೂ ಸಹ ಶಿಕ್ಷೆಗೆ ಅರ್ಹನಾಗುತ್ತಾನೆ. ಆತನನ್ನು ಮುಂದಿನ ಕೆಲವು ಸಂದರ್ಭಗಳಲ್ಲಿ ಶಿಕ್ಷಿಸುವ ಸಲುವಾಗಿ ವಜಾ (non suited)ತೀರ್ಪನ್ನು ದಾಖಲೆಯಲ್ಲಿ

ಬರೆದಿಡಬೇಕಾಗುತ್ತದೆ. ಅಂಥ ದಾಖಲೆಯನ್ನು ಮಿತಾಕ್ಷರನು ಜಯಪತ್ರಕ್ಕೆ ಪರ್ಯಾಯವಾಗಿ 'ಹೀನಪತ್ರ' ಎಂದು ಹೆಸರಿಸಿದ್ದಾನೆ.[೪೮]

ಮಿತಾಕ್ಷರವು ಕಾತ್ಯಾಯನನಿಗಿಂತ ಭಿನ್ನವಾಗಿ ಆಪಾದನೆ, ಉತ್ತರ, ಸಾಕ್ಷ್ಯ ಮತ್ತು ನಿರ್ಣಯಗಳ ಸಾರಾಂಶವನ್ನು ನೀಡುವ ತೀರ್ಪು ಜಯಪತ್ರವಾದರೆ, ವಾದಿಯು, ಪ್ರತಿವಾದದ ಬದಲಾವಣೆಗಾಗಿ ಅಥವಾ ಹಾಜರಾಗದಿದ್ದುದಕ್ಕಾಗಿ ಅಥವಾ ಕಾನೂನು ಕಟ್ಟಳೆ ಜರುಗಿಸದಿರುವುದಕ್ಕಾಗಿ (non-prosecution) ಸೋತರೆ, ಇದಕ್ಕಾಗಿ ನೀಡುವ ದಾಖಲೆಯನ್ನು 'ಹೀನಪತ್ರ'ವೆಂದು ಕರೆಯಲಾಗುತ್ತದೆ ಎಂದು ಅಭಿಪ್ರಾಯಪಡುತ್ತದೆ.[೪೯]

ಈ ಸಂದರ್ಭದಲ್ಲಿ ನನ್ನ ಗಮನ ಸೆಳೆದ ಮತ್ತೊಂದು ಪದ 'ತೊರೆಪತ್ರ' ಉರಿಲಿಂಗಪೆದ್ದಿಯವಚನಗಳಲ್ಲಿ ಉಲ್ಲೇಖಗೊಂಡ ಈ ಪತ್ರಹೀನಪತ್ರದಸಾದೃಶಪದವಿರಬಹುದೆನಿಸುತ್ತದೆ. ಚಿದಾನಂದಮೂರ್ತಿಯವರುವಚನಕಾರ ಉರಿಲಿಂಗಪೆದ್ದಿಯು ತನ್ನವಚನಗಳಲ್ಲಿ ಉಲ್ಲೇಖಿಸಿದ ಬ್ರಾಹ್ಮಣ ಮತ್ತು ಹೊಲೆಯರ ನಡುವಿನ ಜಗಳವನ್ನು ಪ್ರಸ್ತಾಪಿಸುತ್ತಾರೆ. ಅದರ ಪ್ರಕಾರ ಬ್ರಾಹ್ಮಣರು ಮತ್ತು ಹೊಲೆಯರು ಮಲಸಹೋದರರಾಗಿದ್ದು, ಜಮದಗ್ನಿಗೆ ಕ್ರಮವಾಗಿ ರೇಣುಕಾದೇವಿ ಮತ್ತು ಮಾತಂಗಿಯಲ್ಲಿ ಜನಿಸುತ್ತಾರೆ. ಇವರಿಬ್ಬರಿಗೆ ಜಗಳವಾಡಬಾರದೆಂದು ಭಾರದ್ವಾಜ, ವಿಶ್ವಾಮಿತ್ರ, ಅಗಸ್ತ್ಯ, ನಾರದ, ಕೌಂಡಿಲ್ಯ ಎಂಬ ಐವರು ಋಷಿಗಳ ಸಾಕ್ಷಿಯಾಗಿ ಅವರಿಬ್ಬರಿಗೂ ಆಸ್ತಿ ಹಕ್ಕುಗಳನ್ನು ವಿತರಿಸುತ್ತಾರೆ. ಅದರಂತೆ ಊರಿನ ಗಡಿಯಲ್ಲಿರುವ ಮನೆ ಮತ್ತು ಸತ್ತ ಹಸುವನ್ನೊಯ್ಯುವುದು ಹೊಲೆಯರ ಹಕ್ಕಾದರೆ, ಹದಿನೆಂಟು ಜಾತಿಯ ಜನರನ್ನು ಬೇಡಿ ಬದುಕಿರುವ ಹಸುವನ್ನು ಪಡೆಯುವುದು ಬ್ರಾಹ್ಮಣರ ಹಕ್ಕು. ಇವರಿಬ್ಬರಿಗೂ ಪರಸ್ಪರ ಸಂಬಂಧವಿರುವುದಿಲ್ಲ. ಬ್ರಾಹ್ಮಣರನ್ನು ಕಂಡಾಗ ಹೊಲೆಯರು ತೊಲಗಬೇಕೆಂದು 'ಸಂಬೋಳಿ' ಎಂಬ ಹೆಸರನ್ನು ಹೊಲೆಯರಿಗೆಕೊಟ್ಟು 'ತೊರೆಪತ್ರ' ಬರೆದುಕೊಡಲಾಯಿತು.[೫೦] ತೊರೆಪತ್ರವನ್ನು ಬ್ರಾಹ್ಮಣರಿಗೆ ಕೊಡದೆ ಹೊಲೆಯರಿಗೆ ಕೊಟ್ಟ ಸಂದರ್ಭ, ಅವರಿಗೆ ಸತ್ತ ದನಗಳನ್ನು ಹೊಯ್ಯುವ ಹಕ್ಕು ಮತ್ತು ಊರ ಹೊರಗೆ ವಾಸಿಸುವ ಹಕ್ಕನ್ನು ನೀಡುವ ಮೂಲಕ ಅವರನ್ನು ಹೀನವಾಗಿ ನಡೆಸಿಕೊಂಡ ಕ್ರಮದ ಹಿನ್ನಲೆಯಲ್ಲಿ ಈ ತೊರೆಪತ್ರ, ಹೀನಪತ್ರಕ್ಕೆ ಪರ್ಯಾಯ ದಾಖಲೆಯಾಗಿದೆಯೇ ಎಂಬ ಅನುಮಾನ ಮೂಡುತ್ತದೆ. ಆದರೂ ರಾಚನಿಕವಾಗಿ ಸೋತಪತ್ರ, ಪರಾಜಯಪತ್ರ, ಹೀನಪತ್ರ, ತೊರೆಪತ್ರ ಇವೆಲ್ಲವೂ ಜಯಪತ್ರ ಅಥವಾ ಜಯರೇಖೆಗಳಲ್ಲಿರುವ ವ್ಯಾಜ್ಯಗಳ ಸ್ವರೂಪವನ್ನು ಹೊಂದಿರುವುದರಿಂದ ಇವುಗಳನ್ನು ಜಯರೇಖೆಯ ಸಂವಾದಿ ಅಥವಾ ಸಾದೃಶ ಪದಗಳೆಂದು ಪರಿಭಾವಿಸಬಹುದು.

### ೨.೨.೩ ಜಯರೇಖೆ, ಜಯಲೇಖೆ, ಜಯಪಟ್ಟಿಕಾ ಕ್ರಮ

ಸಂಸ್ಕೃತದ 'ಜಯಪತ್ರ' ಎಂಬಪದದ ದೇಸೀ ಹಾಗೂ ಮುಂದುವರೆದ ರೂಪಗಳೇ ಜಯರೇಖೆ, ಜಯಲೇಖೆಗಳು. ಲೇಖೆ ಎಂದರೆ ಬರೆಯುವುದು, ಬರಹ, ಕಾಗದ, ಪತ್ರ[೫೧] ರೇಕು ಎಂದರೆ, ಚಿನ್ನ ಮುಂತಾದ ಲೋಹಗಳ ತೆಳುವಾದ ತಗಡು.[೫೨] ಲೇಖೆ, ರೇಖೆ ಎಂದರೆ ಬರವಣಿಗೆ ಅರ್ಥಾತ್ ಪತ್ರ ಎಂದೇ ಅರ್ಥ, ತಾಮ್ರ ಪತ್ರದ ತಗಡಿನ ಮೇಲೆ ಬರೆಯುವ ಜಯಪತ್ರವೇ ಜಯರೇಖೆ.

ಜಯರೇಖೆಗಳು ಹೆಸರಿನಿಂದ ಮಾತ್ರವಲ್ಲದೆ, ರಾಚನಿಕವಾಗಿಯೂ ಇವು ಶಿಷ್ಟ ಜಯಪತ್ರಗಳಿಗಿಂತ ಮತ್ತು ಶಾಸನಗಳಿಗಿಂತ ಭಿನ್ನವಾಗಿದೆ. ಪ್ರಾರ್ಥನಾ ಶ್ಲೋಕ, ಕಾಲಗಣನೆ, ರಾಜರ ಹೆಸರು, ಮುಂತಾದ ಅಂಶಗಳು ಇಲ್ಲಿ ಗೈರುಹಾಜರಾಗಿರುತ್ತವೆ ಅಥವಾ ಇದ್ದರೂ, ಔಪಚಾರಿಕ ವಾಗಿರುವುದಿಲ್ಲ. ಇವು ನೇರ ನಿರೂಪಣೆಯಿಂದ ಆರಂಭವಾಗುತ್ತದೆ. 'ಜಯಪತ್ರ'ಗಳು ಅಧಿಕಾರಸ್ಥ ನೆಲೆಯಲ್ಲಿ ಸಮಾಜದ ಉನ್ನತಸ್ತರದ ಸಮುದಾಯಗಳ ನಡುವೆ ರಚನೆಗೊಂಡರೆ, 'ಜಯರೇಖೆ'ಗಳು ಕೆಳಸ್ತರದ ಸಮುದಾಯಗಳ ನಡುವೆ ಹುಟ್ಟಿಕೊಂಡಿವೆ. 'ಜಯಪತ್ರ'ಗಳ ಪಾತ್ರಗಳು ಪ್ರಭುತ್ವ ಮತ್ತು ಪ್ರಭುತ್ವದ ಸಹಾಯಕ ಅಂಗಗಳಾದ ಶಾಸಕಾಂಗ ಮತ್ತು ನ್ಯಾಯಾಂಗಗಳಾದರೆ, ಜಯರೇಖೆಗಳ ಪಾತ್ರಗಳು ಕೆಳಹಾಗೂ ತಳಸಮುದಾಯಗಳ ಸಾಮಾನ್ಯ ಜನತೆ ಮತ್ತು ಅವರ ಸಾಂಸ್ಕೃತಿಕ ನಡಾವಳಿಗಳು ಮತ್ತು ವರ್ತನಾ ಸಂಹಿತೆಗಳ ರೂಪದಲ್ಲಿರುತ್ತವೆ. ಹದಿನೈದನೆಯ ಶತಮಾನಾನಂತರದ ಕಾಲಾವಧಿಯಲ್ಲಿ ಜಯಪತ್ರಗಳು ಜಯರೇಖೆಗಳಾಗಿ ಪರಿವರ್ತನೆಗೊಳ್ಳುವ ವಿದ್ಯಮಾನ ಕಂಡುಬರುತ್ತದೆ. ಸಂಸ್ಕೃತ ಹಾಗೂ ಶಿಷ್ಟ ಸಾಹಿತ್ಯ ರೂಪಗಳಲ್ಲಿ, ಪ್ರಭುತ್ವದ ನೆಲೆಗಳಿಂದ ಸೃಷ್ಟಿಸಲ್ಪಡುತ್ತಿದ್ದ ಶಾಸನಗಳಲ್ಲಿ ಜಯಪತ್ರ ಎಂದು ಪರಿಗಣಿಸಲ್ಪಟ್ಟಿದ್ದ ಇವು, ಜನಸಾಮಾನ್ಯರ ಬಾಯಿಯಲ್ಲಿ ಜಯರೇಖೆ, ಜಯಲೇಖೆ, ಜಯಪಟ್ಟಿಕೆಗಳಾಗಿ ಬದಲಾದವು. ರಾಜರ ಆಸ್ಥಾನಗಳಲ್ಲಿ ಅವರ ಸಮ್ಮುಖದಲ್ಲಿ ನಡೆಯುತ್ತಿದ್ದ ವ್ಯಾಜ್ಯಗಳು, ಆಗುತ್ತಿದ್ದ ತೀರ್ಮಾನಗಳು, ಜನಸಾಮಾನ್ಯರ ಅಂಗಳಕ್ಕೆ ಕಾಲಿರಿಸಿದವು. ರಾಜನ ಒಡ್ಡೋಲಗಗಳಲ್ಲಿ, ಸಂಸ್ಕೃತ ಪಂಡಿತರ, ವಿದ್ವಾಂಸರ ಹಾಗೂ ಧರ್ಮಶಾಸ್ತ್ರಜ್ಞರ ಘನಉಪಸ್ಥಿತಿಯಲ್ಲಿ ನಡೆಯುತ್ತಿದ್ದ ತೀರ್ಮಾನಗಳು ಸಾಮಾನ್ಯ ಜನಸಮುದಾಯಗಳ ಕಟ್ಟೆ ಮನೆಗಳಿಗೆ, ಪಂಚಾಯತಿಗಳಿಗೆ ಕಾಲಿರಿಸಿದವು. ಜಿರಲೆ ಮಲ್ಲಮ್ಮನಂತಹ ಒಬ್ಬ ಸಾಮಾನ್ಯ ಮಹಿಳೆಯ ಸಮಷ್ಠಿ ಹಿತದೃಷ್ಟಿಯ ಕಾಳಜಿ ಕಾಕತಳಿಗಳೂ ಜಯರೇಖೆ ರೂಪದಲ್ಲಿ ಕಟ್ಟಳೆಗಳಾಗಿ ರೂಪುಗೊಂಡವು.[೫೩]

ಜಯರೇಖೆಗಳ ರಚನೆ ಮಧ್ಯಯುಗೀನ ಕಾಲಘಟ್ಟದಲ್ಲಿ ಒದಗಿಸಿದ ಒಂದು ಮಹತ್ವದ ಸಾಂಸ್ಕೃತಿಕ ಪಲ್ಲಟ. ಇವೂ ಸಹ ಜಯಪತ್ರಗಳಂತೆ, 'ಜಯ' ದ ವಿಜಯಪತಾಕೆಗಳಾಗಿ ಕಂಡರೂ, ವಾಸ್ತವವಾಗಿ ಆಂತರ್ಯದಲ್ಲಿ ಭೌತಿಕ 'ಜಯ'ದ ಅರ್ಥವ್ಯಾಪ್ತಿಯನ್ನು ಮೀರಿ ಮಧ್ಯಕಾಲೀನ ಸಮುದಾಯಗಳಲ್ಲಿ ಈವರೆಗೆ ಅಜ್ಞಾತವಾಗಿ ಅನಾವರಣಗೊಳ್ಳದಿದ್ದ ಒಂದು ಬೃಹತ್ ಸಾಂಸ್ಕೃತಿಕ

ಲೋಕವನ್ನು ತೆರೆದಿಡುತ್ತದೆ. ಜಯರೇಖೆಗಳ ಸ್ವರೂಪದ ಬಗ್ಗೆ ಸಾರಭೂತ ವ್ಯಾಖ್ಯಾನ ನೀಡುವುದಾದರೆ ಜಯರೇಖೆಗಳೆಂದರೆ ಸಮುದಾಯಗಳು ಒಂದು ನೆಲೆ ಕಂಡುಕೊಳ್ಳುವಿಕೆ, ಆ ನೆಲೆಯಲ್ಲಿ ಸ್ಥಿರಗೊಳ್ಳುವಿಕೆ ಹಾಗೂ ನಿಂತ ನೆಲದಲ್ಲಿ ಸಾಂಸ್ಕೃತಿಕ ಅಧಿಪತ್ಯ ಸ್ಥಾಪಿಸುವಿಕೆಯ ಕಥನಗಳೆಂದು ನಿರ್ವಚಿಸ ಬಹುದೆನಿಸುತ್ತದೆ. ಅವು ಅಂದಿನ ಸಮುದಾಯಗಳ ಸಾಂಸ್ಕೃತಿಕ ಹಾಗೂ ಆರ್ಥಿಕ ಅಧಿಕಾರ ಸ್ಥಾಪನೆಯ ಕಾರ್ಯಸೂಚಿಯಾಗಿರುವುದು ಕಂಡುಬರುತ್ತದೆ.ಹೀಗೆ ನಿರ್ವಚಿಸುತ್ತಲೇ ಹದಿನಾರನೆಯ ಶತಮಾನಾನಂತರ ಜಯಪತ್ರಗಳು, ಜಯರೇಖೆಗಳ ಸ್ವರೂಪದ ಪಡೆಯಲು ಮತ್ತು ತನ್ನ ನಿರೂಪಣಾ ವಿನ್ಯಾಸದ ಶೈಲಿಯನ್ನು ಬದಲಾಯಿಸಿಕೊಳ್ಳಲು ಚಾರಿತ್ರಿಕ, ಕಾರಣಗಳೇನಿದ್ದಿರಬಹುದು ಎಂಬ ಸಂಗತಿ ಗಳನ್ನು ಸಹ ಕಂಡುಕೊಳ್ಳುವುದು ಅವಶ್ಯ.

ಮಧ್ಯಕಾಲೀನ ಕರ್ನಾಟಕವು ಸಾಹಿತ್ಯಕವಾಗಿ, ರಾಜಕೀಯವಾಗಿ ಹಲವಾರು ಸ್ಥಿತ್ಯಂತರಗಳಿಗೆ, ಪಲ್ಲಟಗಳಿಗೆ ಸಾಕ್ಷಿಯಾದ ಯುಗ. ಸಾಹಿತ್ಯ ರಚನೆಯ ದೃಷ್ಟಿಯಿಂದ ಹದಿನೈದನೆಯ ಶತಮಾನಾ ನಂತರ ಅವಧಿಯನ್ನು ಕತ್ತಲೆಯ ಯುಗ ಎಂದು ಕರೆಯಲಾಗುತ್ತದೆ. ಆದರೆ ವಾಸ್ತವವಾಗಿ ಇತಿಹಾಸದ ಕತ್ತಲೆಯ ಆವರಣದಲ್ಲಿದ್ದ ಜನಸಾಮಾನ್ಯರು ತಮ್ಮ ಮಾತುಗಳಿಗೆ ದನಿ ನೀಡಿ ಹೊರಗಿನ ಜಗತ್ತಿಗೆ ಬಂದು ಕಣ್ಣು ಬಿಟ್ಟಿದ್ದು ಈ ಅವಧಿಯಲ್ಲೇ ಎಂಬುದೂ ಅಷ್ಟೇ ವಾಸ್ತವ. ರಾಜರ ಒಡ್ಡೋಲಗಗಳಲ್ಲಿ ಪಂಡಿತ ಮಂಡಲಿಯಿಂದ ತಮ್ಮ ಮತಧರ್ಮಗಳ ಪ್ರತಿಷ್ಠೆಗೆ ವಾಗ್ವಾದ ನಡೆಯುತ್ತಿತ್ತು. ಒಂದೆಡೆ ವೈಷ್ಣವರು ಪೌರಾಣಿಕ ರಾಮಾಯಣ, ಮಹಾಭಾರತದ ಕತೆಗಳನ್ನು ಜನಸಾಮಾನ್ಯರಲ್ಲಿ ಪ್ರಚುರಪಡಿಸುವ ಉದ್ದೇಶದಿಂದ ಕಾವ್ಯ ರಚನೆಗೆ ಕೈಹಾಕುತ್ತಿದ್ದರೆ, ವೀರಶೈವರು ಇತಿಹಾಸದಲ್ಲಿ ಆಗಿಹೋದ ಶರಣರ ಕತೆಗಳನ್ನು ಅಕ್ಷರರೂಪಕ್ಕಿಳಿಸಿ ಅದನ್ನು ರಾಜರಿಗೆ ಬೋಧಿಸಿ ಆ ಮೂಲಕ ಪ್ರಜೆಗಳ ಬಲವನ್ನು ಸಂಪಾದಿಸಲು ಪ್ರಯತ್ನಿಸುತ್ತಿದ್ದುದನ್ನು ಕಾಣಬಹುದು. ಪ್ರೌಢದೇವರಾಯನ ಕಾವ್ಯದ ಕಥಾವಸ್ತುವೇ ಜಕ್ಕಣಾರ್ಯ ಪ್ರೌಢದೇವರಾಯನಿಗೆ ಶಿವಶರಣರ ಕತೆಗಳನ್ನು ತಿಳಿಸಿಹೇಳಿದ್ದನ್ನು ಒಳಗೊಂಡಿದೆ. ಮತಧರ್ಮಗಳ ಪ್ರತಿಷ್ಠೆಯ ಕಥನ ರಾಜರ ಆಸ್ಥಾನದಲ್ಲಿ ನಡೆಯುತ್ತಿದ್ದರೆ, ಇವುಗಳ ಪರಿವೆ ಇಲ್ಲದ ಅಥವಾ ಇವುಗಳಿಗೆ ವಿಮುಖರಾದ ಜನಸಾಮಾನ್ಯರು ತಮ್ಮ ಜೀವದನಿಗಳನ್ನು ತಮಗೆ ತಿಳಿದಿರುವ ಭಾಷೆಯಲ್ಲಿ, ಗೊತ್ತಿರುವ ಮಾಧ್ಯಮಗಳಲ್ಲಿ ಅಭಿವ್ಯಕ್ತಪಡಿಸಲಾರಂಭಿಸಿದರು. ಹೀಗೆ ಸಾಮಾನ್ಯರಿಂದ ಕಥಿತವಾದ ಲೇಖೆಗಳೇ ಜಯರೇಖೆಗಳಾದವು.

ಇದಲ್ಲದೆ, ಹದಿನೈದನೆಯ ಶತಮಾನಾನಂತರದ ಅವಧಿಯು ಕರ್ನಾಟಕದಲ್ಲಿ ರಾಜಕೀಯವಾಗಿ ಹಲವಾರು ಏಳುಬೀಳುಗಳಿಗೆ ಕಾರಣವಾದ ಯುಗ. ಒಂದೆಡೆ ಆಡಳಿತದ ವಿಕೇಂದ್ರೀಕರಣ ನಡೆಯುತ್ತಿದ್ದರೆ, ಮತ್ತೊಂದೆಡೆ ಸಾಮ್ರಾಜ್ಯ ಛಿದ್ರೀಕರಣಗೊಳ್ಳುತ್ತಿದ್ದುದಕ್ಕೆ ಸಾಕ್ಷಿಯಾದ ಯುಗ. ವಿಜಯನಗರ ಸಾಮ್ರಾಜ್ಯ ಅನುಸರಿಸಿದ ವಿಕೇಂದ್ರೀಕರಣ ನೀತಿಯಿಂದ ಕೇವಲ ನಾಗರಿಕ ಸಮಾಜದ ಸಮುದಾಯಗಳಲ್ಲದೆ, ಬುಡಕಟ್ಟು ಸಮುದಾಯಗಳ ಬಲಿಷ್ಠ ಅರ್ಹ ವ್ಯಕ್ತಿಗಳೂ ಸಹ ಸಣ್ಣ ಸಣ್ಣ ಪಾಳೆಯಪಟ್ಟುಗಳನ್ನು ನಿರ್ಮಿಸಿಕೊಂಡು ಆಳ್ವಿಕೆ ನಡೆಸಲು ಪ್ರಾರಂಭಿಸಿದರು. ಆದರೆ ಇಂಥ ಹೊಸ

ಪ್ರಭುತ್ವಗಳಿಗೆ ಮೂಲವನ್ನು ಘೋಷಿಸುವಾಗ ಅವರಿಗೆ ಮೇಲ್ಜಾತಿಯ ಸ್ಥಾನವನ್ನು ಪಡೆಯುವುದು ಅನಿವಾರ್ಯವಾಗಿತ್ತು. ತಾವು ಪ್ರಭುತ್ವ ನಡೆಸುವುದಕ್ಕೆ ಅಗತ್ಯವಾದಂತಹ ತಾತ್ವಿಕ ಸಮರ್ಥನೆಗಳನ್ನು ಪಡೆಯಲು ಪುರೋಹಿತಶಾಹಿ ವ್ಯವಸ್ಥೆಯನ್ನು ಅವಲಂಬಿಸುವುದು ಅಗತ್ಯವಾಗಿತ್ತು. ಅಂತೆಯೇ ವೈದಿಕಶಾಹಿ ವ್ಯವಸ್ಥೆ ಅವರು ಪ್ರಭುತ್ವದಲ್ಲಿ ಮುಂದುವರೆಯಲು ಅಗತ್ಯವಾದ ಮತ್ತು ಪೂರಕವಾದ ಎಲ್ಲ ಗೋತ್ರ, ಸೂತ್ರ, ವ್ಯವಸ್ಥೆಗಳನ್ನು ಕಲ್ಪಿಸಿಕೊಟ್ಟಿತು. ಹಾಗೆಯೇ ಅವರಿಗೂ ಪ್ರಭುತ್ವದ ಆಶ್ರಯ ಅಗತ್ಯವಾಗಿತ್ತು.

ಪಾಳೆಯಪಟ್ಟುಗಳ ಸ್ಥಾಪನೆಯ ಹಿಂದೆ ಪುರೋಹಿತಶಾಹಿಯ ಬೆಂಬಲವಿತ್ತೆಂಬುದನ್ನು ನಾವು ಪಾಳೆಯಪಟ್ಟುಗಳ ಸ್ಥಾಪನೆಗೆ ಸಂಬಂಧಪಟ್ಟ ಐತಿಹ್ಯಗಳಲ್ಲಿ ಹಾಗೂ ಜಾನಪದ ಕಥನಗಳಲ್ಲಿ ಕಾಣುತ್ತೇವೆ. ಕೆಂಪೇಗೌಡನನ್ನು ತನ್ನ ತೋಟದ ಊಳಿಗದವನಾಗಿ ಮಾಡಿಕೊಂಡು ನಾನಾ ಹಿಂಸೆ ಕೊಟ್ಟು ಕೆಲಸ ಮಾಡಿಸುತ್ತಿದ್ದ ಪುರೋಹಿತ ಕುಟುಂಬ, ಒಮ್ಮೆ ಹೊಲಕ್ಕೆ ಬಂದಾಗ ಕೆಂಪೇಗೌಡ ನಿದ್ದೆ ಮಾಡುತ್ತಿದ್ದುದನ್ನು ಹಾಗೂ ಅವನ ತಲೆ ಮೇಲೆ ಸರ್ಪ ಹೆಡೆ ಆಡಿಸುತ್ತಿದುದ್ದನ್ನು ನೋಡುತ್ತಾನೆ. ಈ ಶುಭ ಶಕುನ ಮುಂದೊಮ್ಮೆ ಈತ ರಾಜನಾಗುತ್ತಾನೆಂಬುದನ್ನು ಸೂಚಿಸುತ್ತದೆಂಬುದನ್ನು ತಿಳಿದು ಕೆಂಪೇಗೌಡನ ಬಳಿ ಬಂದು ಅವನಿಗೆ "ನೀನು ರಾಜನಾದರೆ ನನ್ನನ್ನು ನಿನ್ನ ಪುರೋಹಿತನನ್ನಾಗಿ ಮಾಡಿಕೊಳ್ಳಬೇಕೆಂದು" ಆಣೆ ತೆಗೆದುಕೊಂಡು ಅದರಂತೆ ಮುಂದೆ ಕೆಂಪೇಗೌಡ ರಾಜನಾದಾಗ ಅವನು ಪುರೋಹಿತನಾಗುತ್ತಾನೆ. ಇಂತಹ ಜಾನಪದ ಆಶಯಗಳು ಹಲವಾರು ಪಾಳೆಯಗಾರರ ಕತೆಗಳಲ್ಲಿ ಪುನರಾವರ್ತನೆಯಾಗಿವೆ.

ವಿಜಯನಗರೋತ್ತರ ಅವಧಿಯಲ್ಲಿ ಉಂಟಾದ ರಾಜಕೀಯ ಛಿದ್ರತೆ ಪಾಳೆಯಪಟ್ಟುಗಳು ಬಲಗೊಳ್ಳುವುದಕ್ಕೆ ಕಾರಣವಾದವು. ಅದೇ ಸಂದರ್ಭದಲ್ಲಿ, ಅವು ಛಿದ್ರತೆಗೂ ಸಹ ಗುರಿಯಾದವು. ವಿಜಯನಗರ ಸಂಸ್ಥಾನದಲ್ಲಿದ್ದ ನಾಯಕ, ಅಮರನಾಯಕ ಪದ್ಧತಿಯಡಿ ಆರಂಭದಲ್ಲಿದ್ದ ದೊಡ್ಡ ಪಾಳೆಯಪಟ್ಟುಗಳು ಹಲವಾರು ಕವಲುಗಳಾಗಿ ಒಡೆದು ಹೋದವು. ಒಂದೊಂದೇ ಕುಟುಂಬ ಹಲವಾರು ಸ್ಥಳಗಳಲ್ಲಿ ಸ್ವತಂತ್ರವಾಗಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಳ್ಳುವ ಮೂಲಕ ಅಸಂಖ್ಯ ಪಾಳೆಯಪಟ್ಟುಗಳು ಅಸ್ತಿತ್ವಕ್ಕೆ ಬಂದವು. ಇದರ ಪರಿಣಾಮವಾಗಿ ನೆಲದ ಗಡಿ ಸಂಕುಚಿತವಾಗುತ್ತ ಬಂತು. ಇದರಿಂದ ಪಾಳೆಯಗಾರರಿಗೆ ತಮ್ಮ ಸಾಮ್ರಾಜ್ಯಗಳನ್ನು ವಿಸ್ತರಿಸುವುದು ಮತ್ತು ತಮ್ಮ ಸಂಪತ್ತನ್ನು ಹೆಚ್ಚಿಸಿಕೊಳ್ಳುವುದು ಅನಿವಾರ್ಯವಾಯಿತು. ಇದಕ್ಕಾಗಿ ಅನುಸರಿಸಿದ ಎರಡು ಪ್ರಧಾನ ಮಾರ್ಗಗಳೆಂದರೆ ಒಂದು ವಲಸೆ, ಇನ್ನೊಂದು ಅರಣ್ಯ ನಾಶ.

ವಲಸೆ ಕೈಗೊಂಡರೂ ಪಾಳೆಯಪಟ್ಟಿನ ಸ್ಥಾಪನೆಗೆ ಸೂಕ್ತವಾದ ಸ್ಥಳ ಗುರುತಿಸುವುದು ಮತ್ತು ಅಲ್ಲಿನ ಸ್ಥಳೀಯರ ಬೆಂಬಲ ಪಡೆದುಕೊಳ್ಳುವುದು ಸುಲಭದ ವಿಷಯವಾಗಿರಲಿಲ್ಲ. ಅದಕ್ಕಾಗಿ ಅವರನ್ನು ಧಾರ್ಮಿಕವಾಗಿ ಒಳಗೊಳ್ಳುವ ಮೂಲಕ ಅವರ ವಿಶ್ವಾಸ ಗಳಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಅವರು

ಪೂಜಿಸುವ ಸ್ಥಳೀಯ ಬುಡಕಟ್ಟು ದೇವರುಗಳಿಗೆ ಹೆಚ್ಚು ಮಾನ್ಯತೆಯನ್ನು ನೀಡುವುದು ಅನಿವಾರ್ಯವಾಗಿತ್ತು. ಪ್ರಭುತ್ವ ಅದನ್ನು ಸಮರ್ಪಕವಾಗೇ ನಿರ್ವಹಿಸಿತು. ಚಿತ್ರದುರ್ಗದ ದೊರೆ ಸುತ್ತಲಿನ ಎಲ್ಲ ದೇವರುಗಳನ್ನು ದುರ್ಗಕ್ಕೆ ಕರೆಸಿ ಅವುಗಳೆಲ್ಲಾ ದುರ್ಗದಲ್ಲಿ ನೆಲಸುವಂತೆ ಮಾಡಿದನೆಂದು ಚಿತ್ರದುರ್ಗದ ನಿರೂಪ ದಾಖಲಿಸುತ್ತದೆ.[೫೪]

ಬದಲಾದ ಸನ್ನಿವೇಶ ಒತ್ತಡಗಳಿಗೆ ಒಳಗಾಗಿ ತಮ್ಮ ಮೂಲನೆಲೆಗಳನ್ನು ಬಿಟ್ಟು ವಲಸೆ ಬರುವ ಸಮುದಾಯಗಳು ನಂತರ ಬೇರೆ ಕಡೆ ನೆಲೆಗಳನ್ನು ಕಂಡುಕೊಂಡು, ಗ್ರಾಮಗಳನ್ನು ಸ್ಥಾಪಿಸಿ, ಅಲ್ಲಿ ಸುವ್ಯವಸ್ಥಿತ ವಸತಿ ನೆಲೆಗಳನ್ನಾಗಿ ಮಾರ್ಪಡಿಸುವ ಪ್ರಕ್ರಿಯೆಯನ್ನು ಇಂಥ ಜಯರೇಖೆಗಳಲ್ಲಿ ಕಾಣಬಹುದು. ಅಂಥ ಸಂದರ್ಭದಲ್ಲಿ ಆ ಸಮುದಾಯಗಳ ಸಾಂಸ್ಕೃತಿಕ ತಾಕಲಾಟಗಳು, ತಲ್ಲಣಗಳು, ತಮ್ಮೊಂದಿಗೆ ತಮ್ಮ ಸಂಸ್ಕೃತಿ–ದೇವರನ್ನು ವಲಸೆ ತರಬೇಕಾದ ಅನಿವಾರ್ಯತೆ, ಸ್ಥಳೀಯ ಸಮುದಾಯಗಳೊಂದಿಗೆ ಮುಖಾಮುಖಿಯಾಗುವ ಅನಿವಾರ್ಯತೆ, ಅದರಿಂದಾಗಿ ಅನುಭವಿಸುವ ತಲ್ಲಣ ತಾಕಲಾಟಗಳ ಸಮರ್ಥ ಚಿತ್ರಣ ಜಯರೇಖೆಗಳಲ್ಲಿ ಕಂಡುಬರುತ್ತದೆ.

ಅರಣ್ಯ ನಾಶವೆಂದರೆ, ರಾಜ್ಯ ವಿಸ್ತರಣೆಗಾಗಿ ಕಾಡನ್ನು ನಾಡಾಗಿಸುವ ಪ್ರಕ್ರಿಯೆ. ಹೀಗೆ ಹೊಸ ನಾಡುಗಳನ್ನು ಕಟ್ಟಿದ ಬಳಿಕ ಜನವಸತಿ ನೆಲೆಗೊಳ್ಳುವುದಕ್ಕಾಗಿ ಜನರು ಹೊಸದಾಗಿ ಆ ಪ್ರದೇಶದಲ್ಲಿ ನೆಲೆಗೊಳ್ಳಲು ಬೇಕಾದಂತಹ ಎಲ್ಲ ಏರ್ಪಾಟುಗಳನ್ನು ಮಾಡಬೇಕಾಗಿತ್ತು. ಈ ರೀತಿಯ ವ್ಯವಸ್ಥೆ ಹಾಗೂ ಅನುಕೂಲಗಳನ್ನವಲಂಬಿಸಿ ಜನತೆ ನಿರಾತಂಕವಾಗಿ ವಲಸೆ ಬರುತ್ತಿತ್ತು. ಕರ್ನಾಟಕದಲ್ಲಿ ಸಮುದಾಯಗಳ ವಲಸೆಯ ಕಥನಗಳನ್ನು ಗಮನಿಸಿದಾಗ, ಬಹುತೇಕ ಸಮುದಾಯಗಳು ಸುಮಾರು ೧೬ ರಿಂದ ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಅತಿ ಹೆಚ್ಚು ವಲಸೆಗಳನ್ನು ಕೈಗೊಂಡಿರುವುದನ್ನು ಕಾಣಬಹುದು. ಎಷ್ಟೋ ಸಂದರ್ಭಗಳಲ್ಲಿ ಇಡೀ ಗ್ರಾಮ ಗ್ರಾಮಗಳೇ ವಲಸೆ ಬಂದಿರುವುದನ್ನು ಕಾಣಬಹುದು.

ಹೊಸ ಗ್ರಾಮಗಳ ರಚನೆಯಾಗಿ ಅಂತಹ ಗ್ರಾಮಗಳಲ್ಲಿ ನೆಲೆಗೊಳ್ಳಲು ಬೇರೆ ಬೇರೆ ಸಮುದಾಯಗಳು ಬರಲಾರಂಭಿಸಿದವು. ಪ್ರಧಾನವಾಗಿ ಪ್ರಬಲವಾದ ರೈತ ಸಮುದಾಯಗಳು ಇಂತಹ ವಲಸೆಗಳಲ್ಲಿ ಮಹತ್ತರ ಪಾತ್ರ ವಹಿಸಿದರು. ಇವರು ತಮ್ಮೊಂದಿಗೆ ತಮ್ಮ ರೈತಾಪಿ ಕಸುಬಿಗೆ ಪೂರಕವಾದಂತಹ ಬಡಗಿ, ಕುಂಬಾರ, ಕಮ್ಮಾರ, ಮುಂತಾದ ವಿವಿಧ ಕಸುಬುಗಳಿಗೆ ಮತ್ತು ಪಣಕಟ್ಟುಗಳಿಗೆ ಸೇರಿದ ಸಮುದಾಯಗಳನ್ನೂ ಸಹ ಕರೆತಂದರು ಅಥವಾ ಕೆಲವು ಸಂದರ್ಭಗಳಲ್ಲಿ ಆನಂತರ ಕರೆಸಿಕೊಂಡರು. ಇದು ಈಗಾಗಲೇ ಇದ್ದ ಆಯಗಾರ ವ್ಯವಸ್ಥೆ ಇಲ್ಲೂ ಮುಂದುವರೆಯಲು ದಾರಿ ಮಾಡಿಕೊಟ್ಟಿತು. ಒಂದೇ ಗ್ರಾಮದಲ್ಲಿ ಈ ಎಲ್ಲ ಸಮುದಾಯಗಳು ಪರಸ್ಪರ ಸಹಕಾರ ಮನೋಭಾವದಿಂದ ಇರುತ್ತಿದ್ದರು.

ಇನ್ನು ಕೆಲವು ಜಯರೇಖೆಗಳು ವ್ಯಕ್ತಿಗತ ನೆಲೆಯಲ್ಲಿ ಹುಟ್ಟಿಕೊಂಡಿರುವಂತೆ ಕಂಡರೂ, ಅವು ಆತ್ಯಂತಿಕವಾಗಿ ಸಮುದಾಯ ಕೇಂದ್ರೀಕೃತವೇ ಆಗಿರುತ್ತವೆ. ಟಿಪ್ಪು ಸುಲ್ತಾನನ ಕಾಲದ ಮತಾಂತರ ಪ್ರಸಂಗದ ಜಯರೇಖೆ.[೫೫] ಟಿಪ್ಪುವಿನ ಕಾಲದಲ್ಲಿ ಮತಾಂತರಗೊಂಡ ರಂಗಶಾಮಿ ಶೆಟ್ಟಿ ಎಂಬುವವನು ಮರಣ ಹೊಂದಿದ ನಂತರ, ಆತನ ವಿಧವೆ ಪತ್ನಿ ತನ್ನ ಮಕ್ಕಳಿಗೆ ಮದುವೆ ಮಾಡುವ ಸಂದರ್ಭದಲ್ಲಿ ಎದುರಿಸುವ ಸಮಸ್ಯೆ-ಸವಾಲುಗಳು, ಒಂದು ಕುಟುಂಬದ ತಳಮಳಗಳು ಹಾಗೂ ಅಸ್ಥಿರತೆಯ ನೆಲೆಗಳನ್ನು ಸೂಚಿಸುವಂತಿದ್ದರೂ, ಅದರ ಪರಿಣಾಮ ಇಡೀ ಸಮುದಾಯದ ಮೇಲಾಗುತ್ತದೆ. ಅಲ್ಲದೆ, ಅದಕ್ಕೆ ಪರಿಹಾರ ಕಂಡುಕೊಳ್ಳಲು ಧರ್ಮಗುರುಗಳು, ಮಠಗಳು ಸೇರಿದಂತೆ ಇಡೀ ಸಮುದಾಯ ಪ್ರಯತ್ನಿಸುತ್ತದೆ. ಹಾಗೆಯೇ ಜಿರಳೆ ಮಲ್ಲಮ್ಮ ಎಂಬ ಮಹಿಳೆ[೫೬] ಸಮಾಜಮುಖಿ ಕಾರ್ಯಪ್ರಜ್ಞೆಯಿಂದ ನೀರಿಗಾಗಿ ಒಂದು ಸೋಪಾನ ಕಟ್ಟಿಸಿ, ತನ್ನ ಕುಲದ ಕೆಲವು ಗೌಡರಿಗೆ ಹಲವು ಊರುಗಳ ಗೌಡಿಕೆಯನ್ನು ವಹಿಸುತ್ತಾಳೆ. ಅದಕ್ಕೆ ಸಾಕ್ಷಿಪ್ರಜ್ಞೆಯಾಗಿ ಮಾಡಿದ್ದು ತನ್ನ ಸುತ್ತಮುತ್ತಲ ಸಮುದಾಯವನ್ನು. ಹೀಗೆ ಇವು ವ್ಯಕ್ತಿಸಂಕಥನದ ಸಂಸ್ಕೃತಿಯನ್ನು ಸಮಷ್ಟಿಪ್ರಜ್ಞೆಯಿಂದ ಸಂಕಥನವಾಗಿಸುವ ಕ್ರಮವಾಗಿ ಕಾಣುತ್ತೇವೆ.



### ೨.೨.೪ ಕಂಚಿ ಪತ್ರಗಳು

ಜಯರೇಖೆಗಳ ಮುಂದುವರೆದ ಹಂತವೇ ಕಂಚಿ ಪತ್ರಗಳು. ಇವುಗಳನ್ನು ಕಂಚಿನ ಪತ್ರ, ತಾಮ್ರ ಪತ್ರ, ಕಂಚಿ ಸನದು, ಬ್ರಹ್ಮಕಪಾಲ ಪತ್ರ ಎಂದೂ ಸಹ ಕರೆಯಲಾಗಿದೆ. 'ಕಂಚಿಪತ್ರ'ದ 'ಕಂಚಿ'ಯು ಸ್ಥಳವಾಚಿಯಾಗಿದ್ದು, ದಕ್ಷಿಣ ಭಾರತದ ಪ್ರಖ್ಯಾತ ಶಾಕ್ತಪೀಠವಾದ ತಮಿಳುನಾಡಿನ ಕಂಚಿಯನ್ನು ಸೂಚಿಸುತ್ತದೆ. ಕರ್ನಾಟಕ ಮತ್ತು ಆಂಧ್ರದ ಹಲವಾರು ತಳಸಮುದಾಯಗಳು ಎಂದರೆ ಹೆಳವರು, ಜಾಂಬವ ಕುಲದವರು, ದಕ್ಕಲಿಗರು, ಅಗಸರು, ಕ್ಷೌರಿಕರು, ಗೊಲ್ಲರು, ಶೆಟ್ಟರು, ಚಲವಾದಿಗಳು, ಇನ್ನೂ ಮುಂತಾದ ಸಮುದಾಯಗಳು ತಮ್ಮ ಬಳಿ ಕಂಚಿನ ಪತ್ರಗಳಿವೆ, ತಾಮ್ರ ಪತ್ರಗಳಿವೆ ಎಂದು ಹೇಳಿಕೊಳ್ಳುತ್ತಾರೆ ಮತ್ತು ಅದರಲ್ಲಿ ತಮ್ಮ ಕುಲಮೂಲಗಳನ್ನು, ನಡಾವಳಿಗಳನ್ನು ಬರೆದಿಡಲಾಗಿದೆ ಎಂದು ಹೇಳುತ್ತಾರೆ. ಬಹುತೇಕ ಕಂಚಿಪತ್ರಗಳು ೧೯-೨೦ನೆಯ ಶತಮಾನದಲ್ಲಿ ರಚಿತಗೊಂಡಿವೆ.

ಕಂಚಿಪತ್ರಗಳಲ್ಲಿ ಕಾಲದ ಉಲ್ಲೇಖವಿದ್ದರೂ, ಅವುಗಳಲ್ಲಿ ಯಾವುದೂ ನೈಜ ಕಾಲನಿರ್ದೇಶನವಾಗಿರುವುದಿಲ್ಲ. ಎಂದರೆ ಬಹುತೇಕ ಕಂಚಿಪತ್ರಗಳು ಕೂಟ ಶಾಸನವಾಗಿವೆ. ಇಲ್ಲವೇ ನಕಲು ಪ್ರತಿಗಳಾಗಿವೆ. ಹೆಚ್ಚಿನ ಪತ್ರಗಳಲ್ಲಿ ವಿಜಯನಗರದ ಪ್ರಮುಖ ಅರಸರುಗಳಾದ ಕೃಷ್ಣದೇವರಾಯ, ಅಚ್ಯುತರಾಯ, ಮುಂತಾದ ಅರಸರೊಂದಿಗೆ, ಆನಂತರದ ಕಾಲಾವಧಿಯಲ್ಲಿ ಬರುವ ಪಾಳೆಯಗಾರರನ್ನು, ಪ್ರಭುಗಳನ್ನು, ಮರಾಠಿ ಅಧಿಕಾರಿಗಳನ್ನು ಸಮಕಾಲೀನಗೊಳಿಸಿ ಮಿಳಿತಗೊಳಿಸಲಾಗಿರುತ್ತದೆ. ಹೀಗಾಗಿಯೇ ವಿದ್ವಾಂಸರು ಇವು ನೈಜ ಶಾಸನಗಳಲ್ಲ ಎಂಬ ಕಾರಣದ

ಮೇಲೆ ಅಧ್ಯಯನಗಳಿಂದ ದೂರವಿರಿಸಿದ್ದರು. ಇವು ನೈಜ ಶಾಸನಗಳಲ್ಲ, ಕೂಟ ಶಾಸನಗಳೆಂಬುದು ವಾಸ್ತವವಾದರೂ, ಇವು ಕುಲಸಂಬಂಧಿ ನಡಾವಳಿಗಳನ್ನು ಒಳಗೊಂಡಿರುವುದರಿಂದ ಮತ್ತು ಪ್ರತಿ ಸಮುದಾಯದ ಕುಲಮುಖ್ಯಸ್ಥರು ಇವುಗಳನ್ನು ನಂತರ ಕಾಗದದ ಪ್ರತಿಗಳಲ್ಲಿ ನಕಲು ಮಾಡಿಟ್ಟುಕೊಂಡಿರುವುದರಿಂದ ಇವು ಬಹುಪಠ್ಯಗಳಲ್ಲಿ ಕಂಡುಬರುತ್ತವೆ. ಅಲ್ಪಸ್ವಲ್ಪ ವ್ಯತ್ಯಾಸಗಳ ಹೊರತಾಗಿ ಬಹುತೇಕ ಪಠ್ಯಗಳ ಕಥಾ ಸಂವಿಧಾನ ಒಂದೇ ರೀತಿಯಲ್ಲಿರುತ್ತದೆ. ಇವು ನೈಜ ಶಾಸನಗಳಲ್ಲವಾದರೂ, ಇವು ಕರ್ನಾಟಕದ ಸಮಾಜದಲ್ಲಿ ನಿಜವಾಗಿ ಬಾಳಿ ಬದುಕಿದ ಸಮುದಾಯಗಳ ನಿಜ ಜೀವದನಿಗಳಾಗಿರುವುದರಿಂದ ಮತ್ತು ಇವು ಸಮುದಾಯಗಳ ಸಂಕಥನಗಳನ್ನು ಸಜೀವವಾಗಿ ಕಟ್ಟಿಕೊಡುವುದರಿಂದ ಇವುಗಳನ್ನು ನೈಜಶಾಸನಗಳೆಂದೇ ಪರಿಭಾವಿಸಬಹುದು. ಅಲ್ಲದೆ ಅಂಥ ಕಂಚಿ ಪತ್ರಗಳು ಕೂಟಶಾಸನಗಳಾಗಿರುವುದಕ್ಕೆ ಹಾಗೂ ಅವು ಬಹುಪಠ್ಯೀಯ ನೆಲೆಗಳಲ್ಲಿ ಲಭ್ಯವಾಗುತ್ತಿರುವುದಕ್ಕೆ ಕಾರಣಗಳನ್ನು ಮತ್ತು ಮೌಖಿಕವಾಗಿ ಜನಪದರ ಸ್ಮೃತಿಕೋಶಗಳಲ್ಲಿದ್ದ ಕಥನಗಳು, ಕಂಚಿಪತ್ರಗಳಲ್ಲಿ ದಾಖಲಾಗುವುದಕ್ಕೆ ಕಾರಣವಾದ ಚಾರಿತ್ರಿಕ ಸಂದರ್ಭಗಳನ್ನು ಪರಿಶೀಲಿಸುವುದು ಅಗತ್ಯ.

ವಸಾಹತುಶಾಹಿ ವ್ಯವಸ್ಥೆಯು ಎಲ್ಲ ರಂಗಗಳಿಗೂ ಪ್ರವೇಶಿಸಿ ಸರ್ವವನ್ನೂ ಆಪೋಶನ ತೆಗೆದುಕೊಂಡು, ನಮ್ಮ ಸಂಸ್ಕೃತಿ-ಪರಂಪರೆಗೆ ವಿಸ್ಮೃತಿಯನ್ನು ತಂದಿತು ಎಂಬ ಅಪವಾದ ಕೇಳಿಬರುತ್ತಲೇ ಇದೆ. ಇದು ಕೆಲವು ಸಂದರ್ಭಗಳಲ್ಲಿ ನಿಜವೆನಿಸುತ್ತದೆ. ಆದರೆ, ದೇಸೀಯ, ಪರಿಶಿಷ್ಟ, ಒಳ/ತಳ ಸಮುದಾಯಗಳ ಸಮಾಜ, ಸಂಸ್ಕೃತಿ, ಆಚರಣೆಗಳು ದಾಖಲುಗೊಂಡಿರುವ ಹಿನ್ನೆಲೆಯನ್ನು ಗಮನಿಸಿದಾಗ, ದೇಶೀಯ ಪರಂಪರೆಯ ಸ್ಮೃತಿಪಟಲದಲ್ಲಿ ಅಂತಃಪ್ರವಾಹವಾಗಿ ಹರಿಯುತ್ತಿದ್ದ ಹಲವಾರು ಸಾಂಸ್ಕೃತಿಕ ಅಂಶಗಳನ್ನು, ವಿಸ್ಮೃತಿಗೆ ಸರಿದಿದ್ದ ವಿಭಿನ್ನ ಪರಂಪರೆಗಳನ್ನು ಇದೇ ವಸಾಹತುಶಾಹಿ ವ್ಯವಸ್ಥೆ ಅನಾವರಣಗೊಳಿಸಿತೆಂಬುದೂ ಸಹ ಅಷ್ಟೇ ಸತ್ಯ.

"ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಮತ್ತು ಇಪ್ಪತ್ತನೆಯ ಶತಮಾನದ ಮೊದಲ ಭಾಗಗಳ ಅವಧಿಯಲ್ಲಿ ವಸಾಹತುಶಾಹಿ ಅಧಿಕಾರಿಗಳು ಮೌಖಿಕ ಪರಂಪರೆಯ ಭಾಗವಾಗಿದ್ದ ಐತಿಹ್ಯಗಳನ್ನು ದಾಖಲಿಸಿದ್ದಾರೆ. ತನ್ನ ಪ್ರಜೆಗಳನ್ನು ದಕ್ಷವಾಗಿ ಆಳಲು, ಅವರ ಬದುಕಿನ ಒಳಗೆ ಇಣುಕಿ ನೋಡಲು, ಅವರ ಆಸ್ತಿ ಸಂಬಂಧಗಳನ್ನು ಕರಾರುವಕ್ಕಾಗಿ ಗುರುತಿಸಲು, ಕಾನೂನು, ಆಡಳಿತಗಳ ಮುಖಾಂತರ ಅವರನ್ನು ಹದ್ದುಬಸ್ತಿನಲ್ಲಿಡಲು, ಜನಸಂಖ್ಯೆಯ ಕುರಿತು, ನಿಖರವಾಗಿ ಅಂದಾಜು ಮಾಡಲು ಮತ್ತು ಪ್ರಜೆಗಳ ಕಟ್ಟುಕಟ್ಟಳೆಗಳನ್ನು ದಾಖಲಿಸಲು ಒಟ್ಟಿನಲ್ಲಿ ವಸಾಹತುಶಾಹಿ, ದೇಶೀಯ ಪ್ರಜೆಗಳನ್ನು ತನ್ನ ಆಳ್ವಿಕೆಗೆ ಒಳಪಡುವ ಪ್ರಕ್ರಿಯೆಯ ಒಂದು ಭಾಗವಾಗಿ ಈ ರೀತಿಯ ದಾಖಲೆಗಳನ್ನು ಅಧಿಕಾರಿಗಳು ಬರೆದಿಟ್ಟಿದ್ದಾರೆ".[೫೭] ಬ್ರಿಟೀಷರು ಇಲ್ಲಿ ಆಳ್ವಿಕೆ ನಡೆಸುವುದಕ್ಕೆ ಇಲ್ಲಿಯ ಸಂಸ್ಕೃತಿ ಮತ್ತು ಪರಂಪರೆಗಳ ಅರಿವು ಅಗತ್ಯವಾಗಿತ್ತು. ಇಂಥ ಸನ್ನಿವೇಶದಲ್ಲಿಯೇ ೧೭೯೯ರಲ್ಲಿ ಟಿಪ್ಪು ಸುಲ್ತಾನನ

ಮರಣಾನಂತರ ಅವನ ಆಡಳಿತದ ಬಗ್ಗೆ ಕ್ಷೇತ್ರ ವೀಕ್ಷಣೆಯನ್ನು ಕೈಗೊಂಡು ವರದಿ ಸಲ್ಲಿಸುವಂತೆ ಫ್ರಾನ್ಸಿಸ್ ಬುಕಾನನ್‌ನನ್ನು ನೇಮಕ ಮಾಡಲಾಯಿತು. ಬುಕಾನನ್ ಮದ್ರಾಸ್, ಬೆಂಗಳೂರು ಮತ್ತು ಮಲಬಾರ್ ಪ್ರದೇಶಗಳಲ್ಲೆಲ್ಲಾ ಸಂಚರಿಸಿ ಒಂದು ವಿಸ್ತೃತ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾನೆ. ಹಾಗೆಯೇ ಸ್ವಯಂ ಆಸಕ್ತಿಯಿಂದ ಮೆಕೆಂಜಿ, ಸಿ.ಪಿ.ಬ್ರೌನ್, ಅಬ್ಬೆದುಬಾಯಿಸ್, ಕರ್ನಲ್ ವಿಲ್ಸನ್ ಮುಂತಾದ ಹಲವಾರು ವಿದ್ವಾಂಸರು ಈ ನಿಟ್ಟಿನಲ್ಲಿ ಮಾಹಿತಿಗಳನ್ನು ಕಲೆಹಾಕಲಾರಂಭಿಸಿದರು.

ಹಾಗೆಯೇ ಜನಗಣತಿಗಳನ್ನು ಪ್ರಾರಂಭಿಸಿದಾಗ, ಗೆಜೆಟ್‌ಗಳ ರಚನಾ ಕಾರ್ಯವನ್ನು ಕೈಗೆತ್ತಿಕೊಂಡಾಗ, ಜಾತಿ ಸಮೀಕ್ಷೆಗಳನ್ನು ನಡೆಸಿದಾಗ, ಬ್ರಿಟೀಷರು ಜಾತಿಯೆಂದರೇನು? ಸಮುದಾಯಗಳೆಂದರೇನು? ಅವು ಅನುಸರಿಸುವ ಆಚಾರ ವಿಚಾರಗಳೇನು? ಅವು ಒಂದಕ್ಕಿಂತ ಮತ್ತೊಂದು ಹೇಗೆ ಭಿನ್ನವಾಗಿವೆ? ಎಂಬ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಸ್ಥಳೀಯರ ಬಳಿ ಹೋದಾಗ, ಅಂಥ ಪ್ರಶ್ನೆಗಳನ್ನು ಎದುರಿಸಿದ ಸ್ಥಳೀಯರು ಮೊಟ್ಟಮೊದಲ ಬಾರಿಗೆ ತಮ್ಮ ಸಮುದಾಯ ಯಾವುದು? ಇದು ನಮ್ಮ ಸಮುದಾಯ ಎಂದು ಗುರುತಿಸಲು ಇರುವ ಮಾನದಂಡಗಳೇನು? ಇಂಥ ಮಾನದಂಡಗಳು ನನ್ನ ಸಮುದಾಯದಲ್ಲಿ ಮಾತ್ರ ಅಸ್ತಿತ್ವದಲ್ಲಿವೆಯೇ? ಅಥವಾ ಇತರ ಸಮುದಾಯಗಳಲ್ಲೂ ಇವೆಯೇ? ಇದ್ದರೆ, ಯಾವ ಅಂಶಗಳಲ್ಲಿ ಸಾಮ್ಯತೆಯಿದೆ? ಮತ್ತು ಯಾವ ಅಂಶಗಳಲ್ಲಿ ಭಿನ್ನತೆಯಿದೆ? ಎಂಬ ಚಿಂತನೆಯೊಂದಿಗೆ, ಅದಕ್ಕೆ ತಾತ್ವಿಕವಾಗಿ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದರು. ಬ್ರಾಹ್ಮಣ, ಲಿಂಗಾಯತರಂತಹ ಮೇಲ್ವರ್ಗದ ಸಮುದಾಯಗಳು ಪುರಾಣ ಹಾಗೂ ಇತಿಹಾಸದ ಆಧಾರದ ಮೇಲೆ ಈಗಾಗಲೇ ತಮ್ಮ ಸಮುದಾಯ ಚರಿತ್ರೆಯನ್ನು ದಾಖಲಿಸಿಕೊಂಡಿದ್ದರು. ಆದರೆ ಬರವಣಿಗೆ ಬಾರದ ಶೂದ್ರಾಪಿ, ರೈತಾಪಿ ಹಾಗೂ ಇತರೆ ಕೆಳ/ತಳ ಸಮುದಾಯಗಳು ತಮ್ಮ ಸಮುದಾಯದ ಸ್ಮೃತಿಕೋಶದಲ್ಲಿ ಪ್ರಚಲಿತದಲ್ಲಿದ್ದ, ಪೀಳಿಗೆಯಿಂದ ಪೀಳಿಗೆಗೆ ಬಾಯ್ದೆರೆಯಾಗಿ ವರ್ಗಾವಣೆಯಾಗುತ್ತಿದ್ದ ಕುಲಸಂಬಂಧಿ ಕಥನಗಳನ್ನು ಅಕ್ಷರಸ್ಥರ ಮುಂದೆ ಹೇಳಿ ದಾಖಲೀಕರಿಸಿದರು. ತಮ್ಮ ಸಮುದಾಯದ ಸ್ಮೃತಿಕೋಶದಲ್ಲಿರುವ ಅಂಶಗಳನ್ನೆಲ್ಲ ಒಂದೊಂದಾಗಿ ಬೆದಕಿ ಕೆದಕಿ ತೆಗೆಯಲಾರಂಭಿಸಿದರು. ಅವುಗಳಿಗೆ ಪ್ರಾಚೀನತೆಯನ್ನು ಆರೋಪಿಸಲು ಪೌರಾಣಿಕ ಹಾಗೂ ಐತಿಹಾಸಿಕ ಅಂಶಗಳೊಂದಿಗೆ ತಳುಕು ಹಾಕಿ ದಾಖಲಿಸಿದರು. ತಮ್ಮ ಸಮುದಾಯ ಅನಾದಿಕಾಲದಿಂದಲೂ ಅಸ್ತಿತ್ವದಲ್ಲಿದೆ ಎಂದು ತೋರಿಸಲು ಪ್ರಯತ್ನಪಟ್ಟರು. ಅಂಥ ದಾಖಲೆಗಳನ್ನು ವಸಾಹತುಶಾಹಿ ಸಂಪಾದನಕಾರರ ಮುಂದಿಟ್ಟರು.

ಈ ಸಂದರ್ಭದಲ್ಲಿ ಡಾ॥ ರಹಮತ್ ತರೀಕೆರೆಯವರು ಎತ್ತುವ ಪ್ರಶ್ನೆಯೆಂದರೆ "ಸಮುದಾಯಗಳಿಗೆ ಮತ್ತೊಂದರಿಂದ ಭಿನ್ನವಾಗಿರುವ ಲಕ್ಷಣಗಳು ಖಂಡಿತ ಇರುತ್ತವೆ. ಆದರೆ ಈ ಭಿನ್ನ ಕ್ಷಣಗಳು ಆತ್ಯಂತಿಕವಾಗಿರುವುದಿಲ್ಲ. ಕಾರಣ ಯಾವ ಸಮುದಾಯವೂ ದ್ವೀಪದಂತೆ ಉಳಿದು ತನ್ನ ಸಾಂಸ್ಕೃತಿಕ ವಿಶಿಷ್ಟತೆ ಉಳಿಸಿಕೊಳ್ಳುವುದು ಸಾಧ್ಯವಿಲ್ಲ. ಇತರೆ ಸಮುದಾಯಗಳ ಜೊತೆ ಕೊಡುಕೊಳೆ ಮಾಡಿಯೇ ತೀರಬೇಕು. ಹೀಗೆ ಮಾಡಿಯೂ ಅದು ಕೆಲವು ವಿಶಿಷ್ಟತೆಗಳನ್ನು

ಉಳಿಸಿಕೊಂಡಿರುವ ಸಾಧ್ಯತೆಯಿದೆ. ಆದರೂ ಅದನ್ನು ಪ್ರತ್ಯೇಕ ಅಸ್ತಿತ್ವ ಎನ್ನುವುದನ್ನು ಒಪ್ಪಲು ಸಾಧ್ಯವಿಲ್ಲ".[೫೮] ಇಲ್ಲಿ ಉದ್ಭವಿಸುವ ಪ್ರಶ್ನೆಯೆಂದರೆ, ಪ್ರತ್ಯೇಕ ಅಸ್ತಿತ್ವ ಎನ್ನುವುದನ್ನು ಒಪ್ಪಲು ಸಾಧ್ಯವಿಲ್ಲವೆನ್ನುವುದಾದರೆ, ಸಮುದಾಯಗಳು ತಮ್ಮ ಕುಲಚಹರೆಗಳಿಗಾಗಿ ಏಕೆ ತಮ್ಮ ತಮ್ಮಲ್ಲಿ ಬಡಿದಾಡಿಕೊಳ್ಳಬೇಕು. ಅಂತಹ ಚಹರೆಗಳನ್ನು ಪಡೆಯಲು, ಉಳಿಸಿಕೊಳ್ಳಲು ಅವರು ಏಕೆ ಹೆಣಗಬೇಕು? ಮತ್ತು ಅವುಗಳನ್ನು ತಮಗೇ ವಿಶಿಷ್ಟವೆಂದು ಸಾಧಿಸಲು ಏಕೆ ದಾಖಲೀಕರಣ ಮಾಡಬೇಕು? ಎಂಬಿತ್ಯಾದಿ ಪ್ರಶ್ನೆಗಳೂ ಸಹ ಪ್ರಸ್ತುತವಾಗುತ್ತದೆ. ಅವರು ಈ ಬಗ್ಗೆ ಚರ್ಚೆ ಮುಂದುವರೆಸುತ್ತ, "ಪ್ರಶ್ನೆ ಎಂದರೆ, ಇಂಥ ಸಾಂಸ್ಕೃತಿಕ ವಿಶಿಷ್ಟತೆಯನ್ನು ಇತರರು ಅನನ್ಯತೆ ಎಂದು ಗುರುತಿಸುತ್ತಿದ್ದರೋ ಅಥವಾ ಆ ಸಮುದಾಯವೇ ಗುರುತಿಸಿಕೊಳ್ಳುವ ತವಕದಲ್ಲಿದೆಯೋ"?[೫೯] ಎಂದು ಪ್ರಶ್ನಿಸುತ್ತಾರೆ.

ಇದಕ್ಕೆ ಉತ್ತರವಾಗಿ ಹೇಳುವುದಾದರೆ, ಇದನ್ನು ಯಾರೋ ಮಾನವಶಾಸ್ತ್ರದ ಪರಿಣತರಾಗಲಿ ಅಥವಾ ಸಮಾಜಶಾಸ್ತ್ರಜ್ಞರಾಗಲಿ ಗುರುತಿಸದೆ, ಸ್ವತಃ ಸಮುದಾಯಗಳೇ ತಮ್ಮಲ್ಲಿನ ವೈಶಿಷ್ಟತೆಯನ್ನು ಗುರುತಿಸಿ ದಾಖಲಿಸುವ ಪ್ರಯತ್ನ ಮಾಡಿವೆ. ಅಲ್ಲದೆ, ತಮ್ಮ ಸಮುದಾಯ ಅಥವಾ ಕುಲವಿಶಿಷ್ಟ ಸಾಂಸ್ಕೃತಿಕ ಚಹರೆಗಳು, ವೈಶಿಷ್ಟ್ಯಗಳನ್ನು ಇತರರು ಅನುಸರಿಸಲು ಪ್ರಯತ್ನಿಸಿದಾಗ ಅದನ್ನು ವಿರೋಧಿಸಿ ಸಂಘರ್ಷಕ್ಕೂ ಇಳಿದಿವೆ. ಮಾದಿಗ ಮತ್ತು ಚಲವಾದಿ ಸಮುದಾಯಗಳ ಒಂದು ಸಂಘರ್ಷವನ್ನು ಈ ಸಂದರ್ಭದಲ್ಲಿ ಗುರುತಿಸಬಹುದು. ಚಲವಾದಿ ಮತ್ತು ಜಾಂಬವ ಕುಲಗಳ ನಡುವೆ ನಡೆಯುವ ಸಂಘರ್ಷವೂ, ಗೋಸಂಗಿ ಮತ್ತು ದಕ್ಕಲಿಗ ಸಮುದಾಯಗಳಲ್ಲಿಯೂ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಕಂಡುಬರುತ್ತದೆ. ಈ ಎಲ್ಲ ಕಂಚಿಪತ್ರಗಳ ವೈಶಿಷ್ಟ್ಯವೆಂದರೆ, ವಿಶ್ವ ಸೃಷ್ಟಿಯ ಕಥನ. ಜಗತ್ತಿನ ಸೃಷ್ಟಿಗೆ ಕಾರಣವಾದ ಮೂಲ ಪ್ರವರ್ತಕ ಜಾಂಬವಮುನಿ. ಈತನನ್ನು ಆದಿತಾತ ಎಂದೂ ಸಹ ಕರೆಯಲಾಗಿದೆ. ಜಲದಿಂದ ಆವೃತ್ತವಾಗಿದ್ದ ಭೂಮಂಡಲದಲ್ಲಿ ಚರಾಚರ ವಸ್ತುಗಳು ಸೃಷ್ಟಿಯಾಗುವುದಕ್ಕೆ ಜಾಂಬವಮುನಿಯೇ ಕಾರಣ.

ದೀರ್ಘವಾದ ಸೃಷ್ಟಿ ಪುರಾಣದ ನಂತರ ಕುಲಚಹರೆಗಳಿಗಾಗಿ ನಡೆದ ವ್ಯಾಜ್ಯವನ್ನು ವಿವರಿಸಲಾಗಿದೆ. ಚಲವಾದಿ ಸಮುದಾಯ ಮದುವೆ ಸಂದರ್ಭದಲ್ಲಿ ಹನ್ನೆರಡು ಕಂಬದ ಚಪ್ಪರ, ಹನ್ನೆರಡು ಪಂಜುಗಳನ್ನು ಬಳಸಿದ್ದನ್ನು ಗೋಸಂಗಿಯವರು ಇದು ನಿಮಗೆ ಸಲ್ಲುವುದಿಲ್ಲ, ಐವತ್ತಾರು ದೇಶಗಳಲ್ಲಿ ಈ ರೀತಿಯ ಆಚರಣೆ ಸಲ್ಲುವುದಿಲ್ಲವೆಂದು ಕಿತ್ತೆಸೆಯುತ್ತಾರೆ. ನ್ಯಾಯ ನಿರ್ಣಯಕ್ಕಾಗಿ ಗಜಪತಿಯ ಬಳಿ ಹೋಗುತ್ತಾರೆ. ಗಜಪತಿ ಅವರ ಪೇಟೆಯೊಳಗಿರುವ ದೈವಾಚಾರದವರನ್ನು ಕರೆಸಿ ಪಂಚಾಯತಿ ಮಾಡಿದಾಗ ಅವರು ಚಲವಾದಿಗಳಿಗೆ ಹನ್ನೆರಡು ಕಂಬದ ಹಂದರ ಮತ್ತು ಹನ್ನೆರಡು ಪಂಜು ಸಲ್ಲುವುದಿಲ್ಲವೆಂದು ಹೇಳುತ್ತಾರೆ. ಈ ನಿರ್ಣಯವನ್ನು ಪ್ರಶ್ನಿಸಿ ಇಬ್ಬರೂ ಪಂಪಾಕ್ಷೇತ್ರ ವಿಜಯನಗರಕ್ಕೆ ಬರುತ್ತಾರೆ. ಅಲ್ಲಿಯೂ ನರಪತಿ ಪಟ್ಟದ ದೈವಾಚಾರದವರನ್ನು ಕರೆಸಿ ವಿಚಾರಣೆ

ಮಾಡಿದಾಗ ಅವರೂ ಸಹ ಕೋಟೆಗಾರನಿಗೆ ಇವು ಸಲ್ಲವೆಂದು ಹೇಳುತ್ತಾರೆ. ಚಲಗಾರ ಮಂಜಪ್ಪ ಮತ್ತು ಕಂಚಿಗೆ ಹೋಗಲು ಅಪ್ಪಣೆ ಕೇಳುತ್ತಾನೆ. ಕಂಚಿಯಲ್ಲಿ ವಜ್ರಸಿಂಹಾಸನಾಧೀಶ್ವರರಾದ ದೇಶಾಯಿ ಅಪ್ಪಾರವು, ಕರಣಂ ನರಸಿಂಗರಾವ್, ಅನುಮತಿ ತಿಮ್ಮನಗೌಡ, ಶಾನುಭೋಗ ತಿರುಮಲರಾವ್, ಮುಂತಾದವರು ಚಲವಾದಿಗಳಿಗೆ ಇದು ಸಲ್ಲದೆಂದು ಹೇಳುತ್ತಾರೆ.

ಇದಲ್ಲದೆ, ಈ ಬಗ್ಗೆ ತೀರ್ಮಾನ ಮಾಡಲು ಹಿಂದಿನ ನಿರ್ಣಯಗಳನ್ನು/ಆಚಾರಗಳನ್ನು ಪರಾಮರ್ಶೆ ಮಾಡುತ್ತಾರೆ. ಹಿಂದೆ ಅರಂಜ್ಯೋತಿ ವಿವಾಹದಲ್ಲಿ ವಶಿಷ್ಠರು ಮಾಡಿದ ತೀರ್ಮಾನಗಳನ್ನು ಪರಾಮರ್ಶಿಸಿ, ಜಾಂಬವ ಗೋಸಂಗಿಗಳಿಗೆ ಯಾವ ಯಾವ ವಸ್ತುಗಳು ಸಲ್ಲುತ್ತವೆ ಮತ್ತು ಚಲವಾದಿಗಳಿಗೆ ಯಾವ ಯಾವ ವಸ್ತುಗಳು ಸಲ್ಲುತ್ತವೆಂಬುದನ್ನು ಪಟ್ಟಿ ಮಾಡಿ, ಕಂಚಿ ರಾಜರು, ರಾಮ–ಲಕ್ಷ್ಮಣರು, ಊರ ಪ್ರಮುಖರ ಸಾಕ್ಷಿಯಾಗಿ, ಕಂಚಿಪತ್ರದಲ್ಲಿ ಬರೆಸುತ್ತಾರೆ. ಕೊನೆಯಲ್ಲಿ ಪೂರ್ವದಲ್ಲಿ ಜಾಂಬವಂತರು ಈ ದಸ್ತಾವೇಜನ್ನು ಹಾಕಿಸಿದ್ದು, ಇದು ಕಂಚೀಶಾಸನ, ತಪ್ಪು ಅಂದವನ ಬಾಯಲ್ಲಿ ಹುಳ ಬೀಳುತ್ತೆ. ಐವತ್ತಾರು ದೇಶಕ್ಕೆ ಇದೇ ಶಾಸನ, ಇದರಂತೆ ನಡೆಯಬೇಕೆಂದು, ಇದಕ್ಕೆ ತಪ್ಪಿದವನು ಹಂದಿ, ನರಿ, ನಾಯಿ, ಗೂಗೆಯ ಜನ್ಮ ತಾಳುತ್ತಾರೆ ಎಂದು ಎಚ್ಚರಿಕೆ ನೀಡಲಾಗಿದೆ.

ಇದು ಕರ್ನಾಟಕದ ಬಲಗೈ ಮತ್ತು ಎಡಗೈ ಸಮುದಾಯಗಳ ನಡುವಿನ ಪಣವ್ಯಾಜ್ಯವಾಗಿದ್ದು, ಇಂಥ ಪಣವ್ಯಾಜ್ಯಗಳು ದಕ್ಷಿಣ ಭಾರತದ ಸಮುದಾಯಗಳ ಚರಿತ್ರೆಯ ವೈಲಕ್ಷಣವೂ ಆಗಿದೆ. ಇಂಥ ವಿವಾದಗಳು ಹತ್ತೊಂಬತ್ತನೆಯ ಶತಮಾನದ ಜಯಪತ್ರಗಳಲ್ಲಿ ಸರ್ವೇ ಸಾಮಾನ್ಯವಾಗಿದೆ. ಕುಲಾಚಾರಗಳಿಗೆ ಕಟ್ಟಳೆಗಳನ್ನು ವಿಧಿಸಿ, ಆಚರಣೆಗಳನ್ನು ನಿರ್ದಿಷ್ಟಪಡಿಸುವ ಪ್ರವೃತ್ತಿ ಈ ಅವಧಿಯಲ್ಲಿ ಹೆಚ್ಚಾಗಿರುವುದನ್ನು ಕಾಣಬಹುದು.

ಚಲವಾದಿ ಮತ್ತು ಜಾಂಬವರ ನಡುವಿನ ಇಂಥ ಪಣವ್ಯಾಜ್ಯದ ಕಥನಗಳು ಬಹುಪಠ್ಯಗಳಲ್ಲಿ ಲಭ್ಯವಾಗುತ್ತದೆ. ಕರ್ನಾಟಕದಲ್ಲಷ್ಟೇ ಅಲ್ಲದೆ, ಆಂಧ್ರಪ್ರದೇಶದ ಹಲವಾರು ಚಲವಾದಿ ಹಾಗೂ ಜಾಂಬವಂತ ಸಮುದಾಯಗಳ ಮನೆಗಳಲ್ಲಿ ಇಂಥ ದಾಖಲೆಗಳನ್ನು ಕಾಗದಗಳಲ್ಲಿ ಪ್ರತಿಮಾಡಿಟ್ಟುಕೊಂಡು ಕಾಪಾಡಿಕೊಂಡು ಬರುತ್ತಿದ್ದಾರೆ. ಅಷ್ಟೇ ಅಲ್ಲ, ಪೌರಾಣಿಕ ಪ್ರತಿಮೆಗಳ ಮೂಲಕ ತಮ್ಮ ಕುಲ ಮತ್ತು ಆಚರಣೆ ತುಂಬಾ ಪ್ರಾಚೀನವೆಂಬುದನ್ನು ದಾಖಲು ಮಾಡಲು ಪ್ರಯತ್ನಿಸಲಾಗಿದೆ.

**೨.೨.೫ ಕುಲಕಥನ ಅಥವಾ ಕುಲೋತ್ಪತ್ತಿ ಜಯರೇಖೆಗಳು**

ಕುಲಕಥನಗಳು ಅಥವಾ ಕುಲೋತ್ಪತ್ತಿ ಜಯರೇಖೆಗಳ ಮುಖ್ಯ ಆಶಯ ಸಮುದಾಯಗಳ ಮೇಲ್ಚಲನೆ. ತಮ್ಮ ಕುಲದ ಅಸ್ತಿತ್ವವನ್ನು ನೆಲೆಗೊಳಿಸುವ ಮತ್ತು ಅದಕ್ಕೆ ಪಾವಿತ್ರ್ಯತೆಯನ್ನು ತರುವ ನಿಟ್ಟಿನಲ್ಲಿ ಇವು ಹುಟ್ಟಿಕೊಂಡಿವೆ. ತಮ್ಮ ಸಮುದಾಯದ ಚರಿತ್ರೆಯನ್ನು ಕಟ್ಟುವ ಕೆಲಸವಷ್ಟೇ ಇಲ್ಲಿ ನಡೆಯುತ್ತದೆ. ತಮ್ಮ ಸಮುದಾಯದ ಚರಿತ್ರೆಯನ್ನು ಕಟ್ಟಲು, ಆ ಮೂಲಕ ತಮ್ಮ ಅನನ್ಯತೆಯನ್ನು

ಸ್ಥಾಪಿಸಿಕೊಳ್ಳುವ ಸಲುವಾಗಿ ತಮ್ಮಲ್ಲಿ ಮೌಖಿಕವಾಗಿದ್ದ ಕಥನಗಳನ್ನು, ಪರಂಪರೆಯಲ್ಲಿ ಅನುಸರಿಸುತ್ತಾ ಬಂದಿದ್ದ ಆಚರಣೆಗಳನ್ನು ದಾಖಲೀಕರಿಸಲಾರಂಭಿಸಿದರು. ಅದಕ್ಕಾಗಿ ಕುಲಕಥನಗಳನ್ನು ದೈವಿಕ ಅಥವಾ ಪೌರಾಣಿಕ ಮೂಲಕ್ಕೆ ಎಳೆದೊಯ್ಯಲಾಗಿದೆ.

ಉಳಿದೆಲ್ಲ ಜಯರೇಖೆಗಳಿಗೆ ಹೋಲಿಸಿದರೆ, ಕುಲಕಥನಗಳು ದೀರ್ಘ ಇತಿಹಾಸವನ್ನು ಹೊಂದಿವೆ. ಇವು ಸಾಂಸ್ಕೃತಿಕವಾಗಿ ಸಾರ್ವತ್ರಿಕ ಹಾಗೂ ವಿಶ್ವಾತ್ಮಕತೆಯ ಆಯಾಮಗಳನ್ನು ಪಡೆದಿವೆ. ಜಗತ್ತಿನ ಎಲ್ಲ ಸಮುದಾಯಗಳ ಸಂಸ್ಕೃತಿಯಲ್ಲಿ ಒಂದೊಂದು ಸೃಷ್ಟಿ ಪುರಾಣಗಳು/ಕುಲಮೂಲ ಕಥನಗಳು ಹುಟ್ಟಿಕೊಂಡೇ ಇವೆ. ಇಲ್ಲೆಲ್ಲಾ ಒಂದು ಜನಾಂಗದಲ್ಲಿ ಸಾಂಸ್ಕೃತಿಕ ಯಾಜಮಾನ್ಯತೆಗಾಗಿ ನಡೆದ ಪ್ರಯತ್ನವೆಂಬಂತೆ ಗೋಚರವಾಗುತ್ತದೆ. ಕರ್ನಾಟಕದಲ್ಲಿ ಮೊದಲ ರಾಜವಂಶ ಕದಂಬರ ಶಾಸನಗಳಲ್ಲಿ ಅವರ ಮೂಲವನ್ನು ಹೇಳುವಾಗ ಹಲವಾರು ಪೌರಾಣಿಕ ಪುರುಷರ ದೀರ್ಘ ವಂಶಾವಳಿಯೇ ಬರುತ್ತದೆ. ಹಾಗೆಯೇ ಬಾದಾಮಿ ಚಾಲುಕ್ಯರು-ತರುವಾಯದ ರಾಜವಂಶಗಳೂ ಸಹ ಇದೇ ಕ್ರಮವನ್ನನುಸರಿಸಿವೆ.

ಕರ್ನಾಟಕದಲ್ಲಿ ಶಾಸನೋಕ್ತ ಕುಲಕಥನವೆಂದರೆ ವಿವಾಹ ಪುರಾಣ. (ಇದು ತಾಮ್ರ ಮತ್ತು ಶಿಲಾಶಾಸನ ಎರಡರಲ್ಲೂ ಕಂಡುಬರುತ್ತದೆ). ಕುಂಬಾರರ ಕುಲಮೂಲವನ್ನು ಸಂಕಥಿಸುವ ಈ ಶಾಸನ ಕುಂಬಾರ ಸಮುದಾಯವು ಶಿವ-ಗಿರಿಜೆಯ ಕಲ್ಯಾಣದ ಸಂದರ್ಭದಲ್ಲಿ ಮದುವೆಗೆ ಸಹಕರಿಸಿದರೆಂದು ಹೇಳುವ ಮೂಲಕ ಅವರ ಕುಲಮೂಲವನ್ನು ಪುರಾಣಕ್ಕೆ ಸಂಬಂಧ ಕಲ್ಪಿಸುವುದನ್ನು ಕಾಣಬಹುದು. ಅಲ್ಲದೆ ಕುಂಬಾರರಿಗೆ ಶಿವನೇ ಕೆಲವು ವೃತ್ತಿ ಸಂಬಂಧಿ ಸಲಕರಣೆಗಳನ್ನು ನೀಡಿ ಇನ್ನು ಮುಂದೆ ಕುಂಬಾರ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುವಂತೆ ಆದೇಶಿಸುತ್ತಾನೆ.

ಉಳಿದ ಸಮುದಾಯಗಳ ಸಂದರ್ಭದಲ್ಲೂ ಸಹ ಇಂಥ ಕುಲಮೂಲ ಪುರಾಣಗಳು ಕಥಿತಗೊಂಡಿರುವುದನ್ನು ಕಾಣಬಹುದಾಗಿದೆ. ಕುರುಬರ ಸಂಬಂಧದಲ್ಲಿ ಟಗರು ಪುರಾಣ, ಹಾಲುಮತ ಪುರಾಣಗಳು, ಮಾದಿಗ ಸಮುದಾಯದ ಜಾಂಬವ ಪುರಾಣಗಳೂ ಸಹ ಇದೇ ರೀತಿಯ ಕಥಾಹಂದರವನ್ನು ಹೊಂದಿವೆ. ಕೆಲವು ಕುಲಕಥನಗಳು ಪ್ರತ್ಯೇಕವಾಗಿ ರಚಿತವಾಗಿದ್ದರೆ, ಕೆಲವೊಮ್ಮೆ ಕಂಚಿಪತ್ರಗಳಲ್ಲಿಯೂ ಸಹ ಕುಲಕಥನಗಳು ದಾಖಲಾಗಿರುತ್ತವೆ.

ಕಂಚಿಪತ್ರಗಳಂತೆಯೇ ಕುಲೋತ್ಪತ್ತಿ ಜಯರೇಖೆಗಳೂ ಸಹ ಹೆಚ್ಚೆಚ್ಚು ಕಾಣಿಸಿಕೊಳ್ಳುವುದು ವಸಾಹತುಶಾಹಿ ಕಾಲಘಟ್ಟದಲ್ಲಿ. ಬ್ರಿಟೀಷ್ ಅಧಿಕಾರಿಗಳು ಭಾರತದಲ್ಲಿನ ವಿವಿಧ ಜಾತಿ ಸಮುದಾಯಗಳು, ಆಚಾರ-ವಿಚಾರಗಳು, ಧರ್ಮ, ಚರಿತ್ರೆ, ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಸಂಗ್ರಹ ಮಾಡಲಾರಂಭಿಸಿದರು. ಆಗ ಪ್ರತಿಯೊಂದು ಸಮುದಾಯವೂ ತನ್ನ ಮೂಲದ ಬಗ್ಗೆ ತಿಳಿದುಕೊಳ್ಳುವ ಅನಿವಾರ್ಯತೆ ಎದುರಾಯಿತು. ತನ್ನ ಆಚಾರ-ವಿಚಾರಗಳಿಗೆ, ಅನುಸರಿಸುವ ಧರ್ಮಕ್ಕೆ ಒಂದು ತಾತ್ವಿಕತೆಯನ್ನು, ಪಾವಿತ್ರ್ಯತೆಯನ್ನು ಲೇಪಿಸಿ, ಸಮುದಾಯದ

ಮೂಲವನ್ನು ಪುರಾಣಕ್ಕೆ ಕೊಂಡೊಯ್ದು, ಸಮುದಾಯಕ್ಕೆ ಧಾರ್ಮಿಕ ಪಾವಿತ್ರ್ಯತೆಯನ್ನು ತಂದುಕೊಡಲು ಪ್ರಯತ್ನಿಸಿತು. ಪುರಾಣ ಪುರುಷರಿಂದ ತಮ್ಮ ಸಮುದಾಯಗಳು ಉದ್ಭವವಾಯಿತೆಂದು ಆರೋಪಿಸಿ, ತಮ್ಮ ಸಮುದಾಯವನ್ನು ಇತರ ಸಮುದಾಯಗಳಿಗಿಂತ, ಆಚಾರ ವಿಚಾರಗಳಿಗಿಂತ ವಿಭಿನ್ನಗೊಳಿಸಲು ಪ್ರಯತ್ನಿಸಲಾಯಿತು.

**೨.೨.೬ ಚಪ್ಪೋಡು**

ಚಪ್ಪೋಡು ಪದಕ್ಕೆ ನಿಘಂಟುವಿನಲ್ಲಿ ತಾಮ್ರಶಾಸನ, ಸ್ವತ್ತು, ಆಸ್ತಿ ಎಂಬ ಅರ್ಥಗಳಿವೆ.[೬೦] ಹೆಳವರ ಬಳಿಯಲ್ಲಿರುವ ಕಡತಗಳಿಗೆ 'ಚಪ್ಪೋಡು' ಎಂದು ಕರೆಯುತ್ತಾರೆ. ಇವರು ಒಕ್ಕಲುಮನೆಗಳಿಗೆ ಹೋಗಿ ಕುಲವೃತ್ತಾಂತ ಹೇಳುವಾಗ ಚಪ್ಪೋಡುಗಳ ನೆರವಿನಿಂದ ಹೇಳುತ್ತಾರೆ.[೬೧] ಹರಿಲಾಲ್ ಕೆ. ಪವಾರ್‌ರವರು ಹೆಳವ ಶಬ್ದದ ಅರ್ಥವನ್ನು ವಿಶ್ಲೇಷಿಸುತ್ತಾ ಹೆಳವರಿಗೆ 'ಹೇಳುವವರು' ಎಂಬ ಹೆಸರಿರುವುದನ್ನು ಸಹ ಪ್ರಸ್ತಾಪಿಸುತ್ತಾ, ತೆಲುಗಿನಲ್ಲಿ 'ಚಪ್ಪ' ಎಂದರೆ ಹೇಳು, 'ಚಪ್ಪೋಡು' ಎಂದರೆ 'ಹೇಳುವವ' ಅಥವಾ 'ಹೇಳುವವರು' ಎಂದರ್ಥ ಎಂದು ಅಭಿಪ್ರಾಯಪಡುತ್ತಾರೆ.[೬೨] ಆದರೆ ಆರ್. ನರಸಿಂಹಾಚಾರ್ಯರು 'ಚಪ್ಪೋಡು' ಎಂಬುದು 'ತಾಮ್ರಶಾಸನ' ಎಂಬ ಅರ್ಥದಲ್ಲಿಯೂ ಉಪಯೋಗಿಸಲ್ಪಡುತ್ತದೆ. ತಮಿಳು ಭಾಷೆಯಲ್ಲಿ ಚೇಪ್ಪೇಡು ಎಂದಿದೆ. ಇದೇ ಸರಿಯಾದ ರೂಪ. ಈ ಪದವು 'ಶೆಂಬು', 'ಏಡು' ಎಂಬ ಎರಡು ಪದಗಳಿಂದ ಕೂಡಿದೆ. ಶೆಂಬು ಎಂದರೆ ತಾಮ್ರ; ಏಡು ಎಂದರೆ ಹಲಗೆ; ತಾಮ್ರದ ಹಲಗೆ ಎಂದಾಯ್ತು. ತಮಿಳು ವ್ಯಾಕರಣದ ಪ್ರಕಾರದಲ್ಲಿ ಸಮಾಸದಲ್ಲಿ ಸರಳಾಕ್ಷರಗಳು ಪುರುಷಾಕ್ಷರಗಳಾಗುತ್ತವೆ. ಆದುದರಿಂದ, ಶೆಂಬೇಡು ಎಂಬುದು ಶೆಪ್ಪೇಡು ಎಂದಾಯ್ತು. 'ಚೆಪ್ಪೋಡು' ಎಂಬುದು ತಮಿಳು ಶಬ್ದದ ವಿಕಾರವಾಗಿದೆ" ಎಂದು ಅಭಿಪ್ರಾಯಪಡುತ್ತಾರೆ.[೬೩]

ಶಾಸನ ಹಾಗೂ ಸಾಹಿತ್ಯ ಕೃತಿಗಳಲ್ಲಿ ಚಪ್ಪೋಡು ಎಂಬ ಪದವನ್ನು ಜಯಪತ್ರ, ಜಯರೇಖೆ, ಕಂಚಿಪತ್ರಗಳ ಅರ್ಥವ್ಯಾಪ್ತಿಯಲ್ಲಿ ಬಳಸಿರುವುದು ಕಂಡುಬರುತ್ತದೆ. ದೇವಚಂದ್ರ ತನ್ನ ರಾಜಾವಳಿ ಕತೆಯಲ್ಲಿ ವೈದಿಕರಿಗೂ, ಜೈನರಿಗೂ ನಡೆದ ತಾತ್ವಿಕ ಸಂಘರ್ಷಗಳಲ್ಲಿ ಜೈನರು ಮಂಡಿಸಿದ ಜೈನಪುರಾಣಗಳ ಲೋಕದೃಷ್ಟಿ ಪ್ರಬಲವಾದಾಗ ಮಹಾರಾಜ ವಸುಪಾಲ ಜೈನೋಪಾಧ್ಯಾಯಗಳನ್ನು ವಂದನಪೂರ್ವಕವಾಗಿ ಪ್ರಶಂಸೆ ಮಾಡಿ ಜಯಪತ್ರ ಕೊಟ್ಟು ಗ್ರಾಮ, ಕ್ಷೇತ್ರ, ಗೃಹಾದಿಗಳನ್ನು ದಾನವಾಗಿ ನೀಡಿ ಮಂತ್ರಿಪದ, ಪೌರೋಹಿತ್ಯ, ವೈದ್ಯ, ಜ್ಯೋತಿಷ, ಮಂತ್ರವಾದಾದಿಗಳುಂ ಇವರಿಗೆ ಸಲ್ಲುವುದೆಂದು ಶಾಸನ 'ಚಪ್ಪೋಡು' ಮಾಡಿಸಿಕೊಡುತ್ತಾನೆ.[೬೪]

ಇದರಲ್ಲಿ ಜಯಪತ್ರ ಮತ್ತು ಚಪ್ಪೋಡು ಎಂಬ ಎರಡು ಪದಗಳೂ ಒಂದೇ ಸಾರಿ ಬಳಕೆಯಾಗಿವೆ. ಜಯಪತ್ರವನ್ನು ವಾದದಲ್ಲಿ ಗೆದ್ದದ್ದಕ್ಕಾಗಿ ನೀಡಿ, ಆ ಮುನಿಗಳಿಗೆ ಕೆಲವು ವಿಶೇಷ ಹಕ್ಕುಗಳನ್ನು ನೀಡಿರುವುದನ್ನು 'ಚಪ್ಪೋಡು'ವಿನಲ್ಲಿ ದಾಖಲಿಸಲಾಗಿದೆ.

ಮತ್ತೊಂದು ಸಂದರ್ಭದಲ್ಲಿ ಆನೆಗೊಂದಿ ರಾಯನ ಮೇಲೆ ಶತ್ರುಗಳು ಆಕ್ರಮಣ ಮಾಡಿದಾಗ, ಅವನು ತನ್ನ ರಾಜ್ಯ ತನಗೆ ನಿಂತರೆ ಮಲೆಯೂರು ಗ್ರಾಮವನ್ನು ಕನಕಗಿರಿಯ ವಿಜಯದೇವರ ಶ್ರೀಕಾರ್ಯಕ್ಕೆ ಕೊಡುವುದಾಗಿ ಹರಕೆ ಮಾಡಿಕೊಂಡಿರುತ್ತಾನೆ. ಅದರಂತೆ ಗೆದ್ದ ನಂತರ ಮಲೆಯೂರು ಗ್ರಾಮವನ್ನು ದತ್ತಿ ನೀಡಿ ಶಿಲಾಶಾಸನವನ್ನು ಬರೆಯಿಸಿ 'ತಾಮ್ರದ ಚಪ್ಪೋಡಿ'ನಲ್ಲಿ ಆ ಗ್ರಾಮದ ಎಲ್ಲೆ, ಸಿದ್ದಾಯ, ಹುಟ್ಟುವಳಿ ಮುಂತಾದ ವಿವರಗಳನ್ನು ಬರೆಯಿಸಿ ಕೊಡುತ್ತಾನೆ.[೬೫] ಇಲ್ಲಿ ಶಿಲಾಶಾಸನವನ್ನು ಬರೆಯಿಸಿ ತಾಮ್ರದ ಶಾಸನದಲ್ಲಿ ದೇವಾಲಯಕ್ಕೆ ನೀಡಲಾದ ವಿಶೇಷ ಸವಲತ್ತುಗಳನ್ನು ದಾಖಲಿಸಿರುವುದನ್ನು ಕಾಣಬಹುದು. ಅಷ್ಟಗ್ರಾಮಗಳ ಕೈಫಿಯತ್ತಿನ ಪ್ರಕಾರ ರಾಮಾನುಜಾಚಾರ್ಯರು ಚೋಳರಾಜ್ಯದಿಂದ ಕರ್ನಾಟಕಕ್ಕೆ ಬಂದು ಬಿಟ್ಟಿದೇವನನ್ನು ಭೇಟಿ ಮಾಡಿ ಅವನನ್ನು ವಿಷ್ಣುವರ್ಧನನೆಂದು ನಾಮಾಂಕಿತ ಮಾಡಿ, ಅವನ ಕೈಯಲ್ಲಿ ತಮ್ಮ ಸಂಗಡ ಬಂದ ಶ್ರೀವೈಷ್ಣವ ಬ್ರಾಹ್ಮಣರಿಗೆಲ್ಲ ಕಾವೇರಿಯಂಚಿನ ಪಾರ್ಶ್ವಗಳಲ್ಲಿ ಇರುವ ಗಿಡಮರಗಳನ್ನು ತರಿದು, ಕಟ್ಟೆ ಕಾಲುವೆಗಳನ್ನು ತೆಗೆಯಿಸಿ ಇಲ್ಲಿ ಗ್ರಾಮಗಳನ್ನು ಕಟ್ಟಿಕೊಂಡು ಸುಖದಲ್ಲಿ ಇರುವ ಹಾಗೆ ವಿಷ್ಣುವರ್ಧನರಾಯರ ಕೈಯಿಂದ ಅಪ್ಪಣೆ ಕೊಡಿಸಿ, ಅವರು ಕಟ್ಟಿದಂತಹ ಗ್ರಾಮ, ಕಟ್ಟೆ, ಕಾಲುವೆ, ಮುಂತಾದಕ್ಕೆಲ್ಲ ನೀವೇ ಬ್ರಾಹ್ಮಣ ಪ್ರಭುಗಳೆಂದು ಹೇಳಿ ನೇಮಕ ಮಾಡಿ ಚಪ್ಪೋಡು ಶಾಸನ ಮಾಡಿಸಿಕೊಡುತ್ತಾರೆ.[೬೬]

ಜನಪದ ಮಹಾಕಾವ್ಯವಾದ ಜುಂಜಪ್ಪನ ಕಾವ್ಯದಲ್ಲೂ ಚಪ್ಪೋಡು ಪದ ಉಲ್ಲೇಖಗೊಂಡಿದೆ. ಚೋಳೂರು ಪಾಳೆಯಗಾರರು ಜುಂಜಪ್ಪನ ಬಡಮೈಲ ಎಂಬ ಹಸುವಿನ ಮೇಲೆ ಆಸೆಪಟ್ಟಾಗ ಅದು ಇಡೀ ಪಟ್ಟಣವನ್ನು ನಾಶ ಮಾಡುತ್ತದೆ. ಕೊನೆಗೆ ಚೋಳೂರು ಪಾಳೆಯಗಾರ ಜುಂಜಪ್ಪನಿಗೆ ಚೋಳೂರು ಹುಲ್ಲುಗಾವಲಿನ ಒಡೆತನವನ್ನು ಬಿಟ್ಟುಕೊಟ್ಟು 'ಚಪ್ಪೋಡು' ಬರೆಸಿಕೊಡುತ್ತಾನೆ. ಇದರಿಂದ ಜುಂಜಪ್ಪನ ಖ್ಯಾತಿ ಸುತ್ತಮುತ್ತಲಿನ ಊರುಗಳಲೆಲ್ಲಾ ಹೆಚ್ಚಾಗುತ್ತದೆ.[೬೭]

ಮಂಟೇಸ್ವಾಮಿ ಮಹಾಕಾವ್ಯದ ಕಲ್ಯಾಣಪಟ್ಟಣದ ಸಾಲಿನಲ್ಲಿ 'ಚಪ್ಪೋಡು' ವಿನ ಪ್ರಸ್ತಾಪವಿದೆ. ಮಂಟೇಸ್ವಾಮಿ (ಅಲ್ಲಮಪ್ರಭು) ಕಲ್ಯಾಣ ಪಟ್ಟಣಕ್ಕೆ ಬಸವಣ್ಣನನ್ನು ಪರೀಕ್ಷಿಸಲು ಬಂದಾಗ ಬಾಗಿಲ ಮಾರಣ್ಣ ಅವನನ್ನು ತಡೆಯುತ್ತಾನೆ. ಬಸವಣ್ಣ ಬರುವ ವೇಳೆಗೆ ಅಲ್ಲಿಂದ ಮುನಿಸಿಕೊಂಡು ನಿರ್ಗಮಿಸುವ ಮಂಟೇಸ್ವಾಮಿ ವಿಭೂತಿ ಹರಡಿಕೊಂಡು, ಹುಲಿಚರ್ಮ ಹಾಸಿಕೊಂಡು ತಿಪ್ಪೆಮೇಲೆ ಮಲಗುತ್ತಾನೆ. ಕಾಲಜ್ಞಾನ ಬರೆದಂತಹ ತಾಮ್ರದ 'ಚಪ್ಪೋಡ'ನ್ನು ತೆಗೆದುಕೊಂಡು ತಲೆದಿಂಬನ್ನು ಮಾಡಿಕೊಳ್ಳುತ್ತಾನೆ.

ಮಂಟೇಸ್ವಾಮಿಯನ್ನು ಹುಡುಕಿಕೊಂಡು ಬರುವ ಬಸವಣ್ಣ, ನೀಲಾಂಬಿಕೆಯರು ಅಲ್ಲಮನ ಬಳಿ ಬಂದು ಕೊಳೆತು ಬೇರೆ ಬೇರೆಯಾಗಿದ್ದ ಅವನ ರುಂಡ, ಮುಂಡ, ಕೈಕಾಲು, ಶರೀರದ ಭಾಗ ಭಾಗಗಳನ್ನು ತೆಗೆದು ಗಂಟುಕಟ್ಟಿಕೊಂಡು, ಕಾಲಜ್ಞಾನ ಬರೆದಿದ್ದ 'ಚಪ್ಪೋಡ'ನ್ನು ಜೋಳಿಗೆಯಲ್ಲಿಟ್ಟು ಕೊಂಡು ಹೋಗುತ್ತಾರೆ.

ಶಾಸನಗಳಲ್ಲಿಯೂ ಚಪ್ಪೋಡು ಎಂಬ ಪದ ಬಳಕೆಯಾಗಿದೆ. ಶ್ರೀಶೈಲದಲ್ಲಿರುವ ವಿರೂಪಾಕ್ಷವರ್ತಿ ಮಠ ಹಾಗೂ ಘಾಳಿಪೂಜೆ ಮಠಗಳು ಒಂದಾಗಿರುವುದರಿಂದ ಕೃಷ್ಣಾನದಿಯ ದಕ್ಷಿಣ ಮತ್ತು ಪಶ್ಚಿಮದಲ್ಲಿರುವ ವ್ಯಾಪಾರಿಗಳು, ರೈತರು, ಗೌಡರು, ರೆಡ್ಡಿಗಳು ಮತ್ತಿತ್ತರು ಇನ್ನು ಮುಂದೆ ತಮ್ಮ ಕಾಣಿಕೆಗಳನ್ನು ಘಾಳಿಪೂಜೆ ಮಠದ ಸ್ವಾಮಿಗಳಿಗೆ ಪಲ್ಲಕ್ಕಿ, ಮುತ್ತಿನ ಹಾರ, ಬಂಗಾರದ ಛತ್ರಿ, ಚಾಮರ, ಮಕರ ತೋರಣ, ನಂದಿಧ್ವಜ ಮತ್ತು ಪಂಚವಾದ್ಯಗಳನ್ನು ನೀಡಿ ಗೌರವಿಸಬೇಕೆಂದೂ ಹಾಗೂ ಸುಡುಗಾಡು ಸಿದ್ಧರು, ಪಾಕನಾಟದವರು, ಜಡೆ ಜೋಗಿಗಳು, ಗೋಲು ಕೊಂಡೆಯರು, ಜಂಗುರು ಉಪ್ಪಿನಕುಲಗಳವರು ದಾಸೋಹ ದೀಪಾರಾಧನೆ ಮಾಡುವುದಕ್ಕಾಗಿ ಕಾಣಿಕೆ ಘಾಳಿಪೂಜೆ ಮಠಕ್ಕೆ ಕೊಡಬೇಕೆಂದು ಚಪ್ಪೋಡು ಬರೆಸಿಕೊಡಲಾಗುತ್ತದೆ.[೬೮] ಕಾಳಮುತ್ತದಾಸ ಮುತ್ತತ್ತಿಯಲ್ಲಿ ಕಕ್ಕೆಯ ಸೊಪ್ಪಿನಿಂದ ಗುಡಿಸಲನ್ನು ಕಟ್ಟಿ ಮುತ್ತತ್ತಿರಾಯನನ್ನು ಕಾಯ್ದುಕೊಂಡಿದ್ದಕ್ಕಾಗಿ, ಅವನಿಗೆ ಗೌಡರು, ಸ್ವಾಮಿಯ ಸಕಲಾಚಾರರೆಲ್ಲ ಸೇರಿ ಕಾಳಮುತ್ತದಾಸನಿಗೆ ದೇವರ ಪೂಜೆಯನ್ನು ಮಾಡಿಕೊಂಡಿರೆಂದು ಹೇಳಿ ನಾಲ್ಕು ಮಂದಿಯ ಸಹಿಯೊಂದಿಗೆ ಚಪ್ಪೋಡನ್ನು ಬರೆಯಿಸಿಕೊಡುತ್ತಾರೆ.[೬೯]

ಈ ಎಲ್ಲ ಉಲ್ಲೇಖಗಳ ಹಿನ್ನೆಲೆಯಲ್ಲಿ ಒಬ್ಬ ವ್ಯಕ್ತಿಗೆ ವಿಶೇಷ ಹಕ್ಕು ಮತ್ತು ಪ್ರತ್ಯೇಕ ಸವಲತ್ತುಗಳನ್ನು ನೀಡುವಂತಹ ಸಂದರ್ಭದಲ್ಲಿ ಮಾತ್ರ ಚಪ್ಪೋಡನ್ನು ಬರೆಸಿಕೊಟ್ಟಿರುವುದು ಕಂಡುಬರುತ್ತದೆ. ಇದೊಂದು ರೀತಿಯ ಹಕ್ಕಿನ ಪತ್ರ, ಅದನ್ನು ಪಡೆದಂತಹವರು ಎಲ್ಲಿಗೆ ಹೋದರೂ ತಮ್ಮೊಂದಿಗೆ ಅಂತಹ ಚಪ್ಪೋಡುಗಳನ್ನು ತೆಗೆದುಕೊಂಡು ಹೋಗಿ ವಿಶೇಷ ಹಕ್ಕು ಹಾಗೂ ಸೌಲಭ್ಯಗಳನ್ನು ಪಡೆಯಬಹುದಾಗಿತ್ತು.

ಹೀಗೆ ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ಸುಮಾರು ಎಂಟು ನೂರು ವರ್ಷಗಳ ಅವಧಿಯಲ್ಲಿ ವಿಭಿನ್ನ ಪರಿಕಲ್ಪನೆಗಳಲ್ಲಿ ಲಭ್ಯವಾಗುವ ಜಯರೇಖೆಗಳು, ಪ್ರಧಾನ ಸಂಸ್ಕೃತಿಯ ಅಬ್ಬರಗಳಿಗೆ ತತ್ತರಿಸಿ ಮೂಲೆಗುಂಪಾದರೂ, ತಮ್ಮ ಒಳಧಾರೆಗಳಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಮೂಲ ಸಂಸ್ಕೃತಿಯನ್ನು ಹೊತ್ತು ಸಾಗುತ್ತಿರುವ ಮಧ್ಯಕಾಲೀನ ಕೆಳ/ತಳ ಸಮುದಾಯಗಳ ಸಂಕಥನವನ್ನು ದಾಖಲಿಸುವ ಪ್ರಯತ್ನ ಮಾಡಿದೆ. ಇವುಗಳ ಅಧ್ಯಯನದಿಂದ, ಸಬಾಲ್ಟ್ರನ್ ಚಿಂತಕರು ಗುರುತಿಸುವ ಇತಿಹಾಸದಲ್ಲಿ ಅಂಚಿಗೆ ಸರಿಸಲ್ಪಟ್ಟ, ಗೈರುಹಾಜರಾದ, ದಾಖಲೀಕರಣಗೊಳ್ಳದಂಥ ಸಮುದಾಯಗಳ ಜೀವನ್ಮುಖಿ ಹೋರಾಟದ ನೆಲೆಗಳನ್ನು ಮತ್ತು ಅಂಥ ಸಮುದಾಯಗಳ ವೈಶಿಷ್ಟ್ಯಪೂರ್ಣವಾದ ಸಮಾಜವನ್ನು ಅನಾವರಣಗೊಳಿಸಿದೆ.

**ಅಡಿಟಿಪ್ಪಣಿಗಳು:**

೧. ಎ.ಇಂ-೫: ಜೆ.ಎಫ್. ಫ್ಲೀಟ್, ಪು. ೨೪೫-೨೫೨, ಕ್ರಿ.ಶ. ೧೨೦೦

೨ Rama Jois: Legal and Constitutional History of India, P-556

೩ ಶ್ರೀನಿವಾಸ ರಿತ್ತಿ (ಸಂ): ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ, ಪು. ೧೭೪-೧೭೫

೪ ಕನ್ನಡ ನಿಘಂಟು, ಸಂ. ೨, ಪು. ೨೯೮೮

೫ ಎ.ಕ-೧೨ (ರೈಸ್): ಮಧುಗಿರಿ ೨೧, (ಎಂಎಆರ್ ೧೯೧೮: ಪು. ೬೫-೬೬, ಕ್ರಿ.ಶ. ೧೬೦೬)

೬ Sircar D.C: Indian Epigraphical Glossary, P. 134

೭ ನಾರಾಯಣ ಪಿ.ವಿ: ಕನ್ನಡ ಚಂಪೂ ನುಡಿಗನ್ನಡಿ, ಪು. ೪೩೪

೮ Amareswar Thakur MA: Shasana and Jayapatra, , P. 75

೯ Mahesh Kumar Sharan: Court Procedure in Ancient India on the basis of Dharma Shastra Literatures, (Ed) Elizabeth Law Bourn, Cornel Symes, P. 89

೧೦ ಅದೇ, ಪು. ೮೯

೧೧ ಅದೇ, ಪು. ೮೯

೧೨ Rama Jois: Legal and Constitutional History of India, P. 556

೧೩ Rama Jois: Legal and Constitutional History of India, P. No. 557

೧೪ Donald R. Devis Jr: Toward a history of documents in Medieval India, The encounter of scholasticism and regional law in the Smriti Chandrika, P. 182

೧೫ Amareswar Thakur MA: Shasana and Jayapatra, P. 84

೧೬ ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂ. ೧, ಭಾಗ-೧, ಪು. ೨೭೬ ("ನಿರಸ್ತಾಸ್ತು ಕ್ರಿಯಾಯತ್ರ ಪ್ರಮಾಣೇನೈವ ವಾದಿನಾ ಪಶ್ಚಾಕಾರೋ ಭವೇತ್ತತ್ರನ ಸರ್ವಾಸು ವಿಧೀಯತೇ ಅನ್ಯವಾದ್ಯಾದಿ ಹೀನೇಭ್ಯ ಇತರೇಷಾಂ ಪ್ರದೀಯತೇ ವೃತ್ತಾನುವಾದಸಂ ಸಿದ್ಧಂ ತಚ್ಚ ಸ್ಯಾಜ್ಜಯಪತ್ರಕಮ್॥)

೧೭ Amareswar Thakur MA: Shasana and Jayapatra, P. 87

೧೮ Amareswar Thakur MA: Shasana and Jayapatra, P.No. 88

೧೯ Rama Jois: Legal and Constitutional History of India, P. 555 ('ಪೂರ್ವೋತ್ತರೇ ಕ್ರಿಯಾಪಾದಂ ಪ್ರಮಾಣಾಂ ತತ್ಪರೀಕ್ಷಣಮ್ ನಿಗದಂ ಸ್ಮೃತಿವಾಕ್ಯಂ ಯತಾಸಮ್ಯಂ ವಿನಿಸ್ಮೃತಮ್ ಏತಸ್ವರ್ವ ಸಮಾಸೇನ ಜಯಪತ್ರೇವಿಲೇಖಯೇತ್).

೨೦ Amareswar Thakur MA: Shasana and Jayapatra, P. 85

೨೧ Rama Jois: Legal and Constitutional History of India, P. 555

೨೨ Batia (Ed): Society, Law and Administration in Ancient India, P. 295

೨೩ Rama Jois: Legal and Constitutional History of India, P. 557 (ಪ್ರಡ್ವಿವಾಕಾದಿ ಹಸ್ತಾಕ್ಷಮುದ್ರಿತಂ ರಾಜಮುದ್ರೆಯಾ। ಸಿದ್ಧೇಶರ್ಥೇವಾದಿನೋ ದದಾಜ್ಜಯಿನೇ ಜಯಪತ್ರ ಕಮುಮ್)

೨೪ Rama Jois: Legal and Constitutional History of India, P. 555 (ಕುಲಾಧಿಮಿನಿರ್ಣಯೇ ಜಯಪತ್ರಮಾವಾನ್ನಿರ್ಣಯಪತಂ . . .)

೨೫ Donald R. Devis Jr: Toward a History of Documents in Medieval India: The Encounter of Scholasticism and Regional Law in the Smriti Chandrika, P. 182

೨೬ Mahesh Kumar Sharan: Court Procedure, P. 173

೨೭ Jolly. J: Kolkata Weekly Notes, Vol. XXV, No. 32
(Ref: Amareswar Thakur MA: Shasana and Jayapatra, P. 88)

೨೮ Sarkar V.C: Epochs in Hindu Legal History, P. 290-291

೨೯ Sarkar V.C: Epochs in Hindu Legal History, P. 282-290

೩೦ Rama Jois: Legal and Constitutional History of India, P. 560

೩೧ ನರಸಿಂಹಶಾಸ್ತ್ರಿ ಕೆ.ಎಲ್. (ಸಂ): ಆದಿಪುರಾಣ, ೨/೨೩.

೩೨ ಅದೇ, ೨/೨೩

೩೩ ಅದೇ, ೩/೭೭

೩೪ ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೧೧೮

೩೫ Bakshi B.E (Ed): Early Aryans to Swaraj, Vol-3, Indian Education and Rajputs, P. 341

೩೬ ಎ.ಕ.೨ (ರೈಸ್): ಶ್ರವಣ ಬೆಳಗೊಳ ೭೦

೩೭ ಎಸ್‌ಐಐ ೯ (೧) ೧೩೦: ಕ್ರಿ.ಶ. ೧೦೬೬

೩೮ ಎಕ–೨ (ರೈಸ್): ಶ್ರವಣಬೆಳಗೊಳ ೫೨

೩೯ ಎಕ–೭ (ರೈಸ್): ಶಿಕಾರಿಪುರ ೨೦, ಕ್ರಿ.ಶ. ೧೦೩೨

೪೦ ಮಂಜುನಾಥನ್ ಜಿ.ಜಿ. (ಸಂ): ತೆರಕಣಾಂಬಿ ಬೊಮ್ಮರಸ ವಿರಚಿತ ಜೀವಂಧರ ಚರಿತ್ರೆ, ಪು. ೧೫೦

೪೧ ಮಂಜುನಾಥನ್ ಜಿ.ಜಿ, (ಸಂ): ಸನತ್ಕುಮಾರ ಚರಿತ್ರೆ, ಪು. ೪

೪೨ ಸಣ್ಣಯ್ಯ ಬಿ.ಎಸ್.: ರಾಜಾವಳಿ ಕಥಾಸಾರ, ಪು. ೧೩೯–೧೪೦

೪೩ ಅದೇ, ಪು. ೧೪೬–೧೪೭

೪೪ ಗುಂಡಪ್ಪ ಡಿ.ವಿ: ಡಿವಿಜಿ ಕೃತಿ ಶ್ರೇಣಿ, ಸಂ. ೬, ಪು. ೧೯೧

೪೫ ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಮದ್ದಿಹಳ್ಳಿ ಮಾದಿಗತನದ ಕಾಣಾಚಿ ವ್ಯಾಜ್ಯ, ಪು. ೩೬೦

೪೬ ಅದೇ, ಪು. ೩೬೦

೪೭ Amareswar Thakur MA: Shasana and Jayapatra, P. 88

೪೮ ಅದೇ, ಪು. ೮೮

೪೯ Mahesh Kumar Sharan: Court Procedure in ancient India on the basis of Dharma shastra Literatures, P. 173

೫೦ ಚಿದಾನಂದಮೂರ್ತಿ: ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಪು. ೪೯

೫೧ ಸಂಕ್ಷಿಪ್ತ ಕನ್ನಡ ನಿಘಂಟು, ಪು. ೧೧೦೦

೫೨ ಅದೇ, ಪು. ೧೧೧೮

೫೩ ಎ.ಕ–೧೨ (ರೈಸ್): ಮಧುಗಿರಿ ೨೧, (ಎಂಎಆರ್ ೧೯೧೮: ಪು. ೬೫–೬೬, ಕ್ರಿ.ಶ. ೧೬೦೬)

೫೪ ರಾಜಶೇಖರಪ್ಪ ಬಿ: ವಿಜಯನಗರ ದೊರೆಗಳ ಪ್ರಸ್ತಾಪ ಬರುವ ಗೊಲ್ಲ ಜನಾಂಗದವರ ಒಂದು ದಾಖಲೆ, ವಿಜಯನಗರ ಅಧ್ಯಯನ–೧೨, ಪು. ೧೧೬–೧೮೧

೫೫ ಶಾಸ್ತ್ರಿ ಎ.ಕೆ (ಸಂ): ಶೃಂಗೇರಿ ಮಠದ ಕಡತಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು, ಪು. ೨೭೩–೩೮೪

೫೬ ಎ.ಕ–೧೨ (ರೈಸ್): ಮಧುಗಿರಿ ೨೧, (ಎಂಎಆರ್ ೧೯೧೮: ಪು. ೬೫–೬೬, ಕ್ರಿ.ಶ. ೧೬೦೬)

೫೭ ಪಣೀಂದಂದೇವ್, ಇಶಿತ ಬ್ಯಾನರ್ಜಿ, ಸೌರಭ್ ದುಬೆ: (ಅನು) ರಾಜಶೇಖರ್ ಜಿ, ದಾರು ಪ್ರತಿಮಾ ನ ಪೂಜಿವೇ, ಪು. ೫೩

೫೮ ರಹಮತ್ ತರೀಕೆರೆ: ಸಾಂಸ್ಕೃತಿಕ ಅಧ್ಯಯನ, ಪು. ೬೯

೫೯ ಅದೇ, ಪು. ೬೯

೬೦ ಸಂಕ್ಷಿಪ್ತ ಕನ್ನಡ ನಿಘಂಟು, ಪು. ೪೨೪

೬೧ ಹರಿಲಾಲ್ ಕೆ. ಪವಾರ್: ಹೆಳವರ ಸಂಸ್ಕೃತಿ, ಪು. ೨೫

೬೨ ಅದೇ, ಪು. ೨೫

೬೩ ನರಸಿಂಹಾಚಾರ್ಯ ಆರ್: ಕನ್ನಡಕ್ಕೆ ಪ್ರೋತ್ಸಾಹ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ೨೧–೩, ಪು. ೨೪೬–೪೯

೬೪ ಸಣ್ಣಯ್ಯ ಬಿ.ಎಸ್. (ಸಂ): ರಾಜಾವಳಿ ಕಥಾಸಾರ, ಪು. ೯೪–೧೧೫

೬೫ ಅದೇ, ಪು. ೧೯೮

೬೬ ಕಲಬುರ್ಗಿ ಎಂ.ಎಂ: ಕರ್ನಾಟಕದ ಕೈಫಿಯತ್ತುಗಳು, ಪು. ೧೦

೬೭ ನಿಂಗಪ್ಪ ಮುದೇನೂರು: ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ಪು. ೧೫೪

೬೮ ಎ.ಕ–೧೧ (ಪರಿಷ್ಕೃತ): ಚಿಕ್ಕಮಗಳೂರು ೬೩, ಕ್ರಿ.ಶ. ೧೬೯೮

೬೯ ಮುತ್ತುರಾಜು, ಮುತ್ತತ್ತಿಯ ತಾಮ್ರಶಾಸನ, ಇತಿಹಾಸ ದರ್ಶನ–೯, ಪು. ೩೬–೩೯

* * *

# ಅಧ್ಯಾಯ-೩

## ಜಯರೇಖೆ ಶಾಸನಗಳ ಆರ್ಥಿಕ ಲೋಕದೃಷ್ಟಿ

೩.೧ ಧಾರ್ಮಿಕ ಆಧಿಪತ್ಯ ಮತ್ತು ಪೌರೋಹಿತ್ಯದ ಹಕ್ಕು

೩.೨ ಪಾಳೆಯಗಾರಿಕೆ ಹಕ್ಕು

೩.೩ ಗ್ರಾಮಸ್ಥಾಪನೆ, ಗೌಡಿಕೆ ಹಕ್ಕುಗಳು

೩.೪ ಕುಲಗೌಡಿಕೆ ಮತ್ತು ಕಟ್ಟೆಮನೆ ಹಕ್ಕುಗಳು

೩.೫ ವಿಶೇಷ ಹಕ್ಕು ಮತ್ತು ಅಧಿಕಾರಗಳು

## ಅಧ್ಯಾಯ–೩

## ಜಯರೇಖೆ ಶಾಸನಗಳ ಆರ್ಥಿಕ ಲೋಕದೃಷ್ಟಿ

ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ಆರ್ಥಿಕ ದೃಷ್ಟಿಕೋನದಿಂದ ಭಿನ್ನವಾಗಿ ನೋಡುವ ವೈಧಾನಿಕತೆ ಇತ್ತೀಚೆಗೆ ಬೆಳೆದುಬಂದ ಒಂದು ಪ್ರವೃತ್ತಿ. ಸಾಂಸ್ಕೃತಿಕ ಚರಿತ್ರೆಯ ತಳಹದಿಯೇ ಆರ್ಥಿಕತೆ. ಮನುಷ್ಯ ತನ್ನ ಹೊಟ್ಟೆಪಾಡಿಗಾಗಿ ಹುಡುಕಾಟ ನಡೆಸುತ್ತಾ ಬೇಟೆಗೆ ತೊಡಗಿದಂದಿನಿಂದಲೇ ಆತನ ಉಳಿವಿಗಾಗಿ ಹೋರಾಟ ಪ್ರಾರಂಭವಾಯಿತು. ಅಂದಿನಿಂದಲೂ ಒಂದೆಡೆ ನೆಲೆ ನಿಲ್ಲುವುದಕ್ಕಾಗಿ, ನಿಂತ ನೆಲದ ಮೇಲೆ ತನ್ನ ಆಧಿಪತ್ಯ ಸ್ಥಾಪಿಸುವುದಕ್ಕಾಗಿ, ಆಧಿಪತ್ಯ ಸ್ಥಾಪಿಸಿದ ನೆಲೆಗಳಲ್ಲಿ ತನ್ನ ಅಸ್ತಿತ್ವದ ಕುರುಹುಗಳನ್ನು ದಾಖಲಿಸುವುದಕ್ಕಾಗಿ ಹಾಗೂ ತನ್ನ ಅಸ್ಮಿತೆಯನ್ನು ಪಡಿಮೂಡಿಸುವುದಕ್ಕಾಗಿ ಆತ ನಡೆಸಿದ ಎಲ್ಲ ಪ್ರಯತ್ನಗಳು ಆರ್ಥಿಕ ಪರಿಧಿಯಲ್ಲಿಯೇ ನಡೆಯುತ್ತವೆ.

ಕರ್ನಾಟಕದ ಶಾಸನಗಳನ್ನು ಅಭ್ಯಸಿಸಿದಾಗ ಅವುಗಳಲ್ಲಿ ಹೆಚ್ಚಿನ ಭಾಗದ ಶಾಸನಗಳು ದಾನ ಶಾಸನಗಳೇ ಆಗಿವೆ. ದಾನಿಗಳು ಐಹಿಕ ಅಥವಾ ಪಾರಮಾರ್ಥಿಕ ಜೀವನದ ಶ್ರೇಯಸ್ಸಿಗಾಗಿ ದಾನಗಳನ್ನು ನೀಡಿದ್ದರೂ, ದಾನದ ಹಿಂದಿರುವ ಮನೋಭಾವನೆ ಏನೇ ಇದ್ದರೂ, ಅವುಗಳಲ್ಲಿ ಅಡಕಗೊಂಡಿರುವ ಆರ್ಥಿಕ ಆಯಾಮಗಳನ್ನು ನಿರಾಕರಿಸಲಾಗುವುದಿಲ್ಲ. ದಾನಾರ್ಥಿಗೆ ಭೂಮಿ, ಪಶು, ತೆರಿಗೆ, ಮುಂತಾದವುಗಳನ್ನು ಬಿಟ್ಟು ಕೊಡುವ ಮೂಲಕ ದಾನಗಳನ್ನು ನೀಡಿರುವುದನ್ನೂ ಶಾಸನಗಳಲ್ಲಿ ಕಾಣಬಹುದು. ಇದು ಕನ್ನಡದ ಮೊದಲ ಶಾಸನವೆಂದು ಗುರುತಿಸಲಾಗಿರುವ ಹಲ್ಮಿಡಿ ಶಾಸನದಿಂದ ಹಿಡಿದು ಇಪ್ಪತ್ತನೆಯ ಶತಮಾನದಲ್ಲಿ ಕೈಫಿಯತ್ತುಗಳ ರೂಪದಲ್ಲಿ ಅಥವಾ ಕಾಗದದ ಪ್ರತಿಗಳ ರೂಪದಲ್ಲಿ ಲಭ್ಯವಾಗುವ ನಿರೂಪಗಳು, ಸನ್ನದುಗಳು ಮತ್ತು ಜಯರೇಖೆಗಳವರೆಗೆ ಸರ್ವವ್ಯಾಪಿಯಾಗಿದೆ.

ಕರ್ನಾಟಕದಲ್ಲಿ ಮೊದಲ ಸಹಸ್ರಮಾನದ ಅವಧಿಯಲ್ಲಿ ಕೃಷಿ ಮತ್ತು ವಾಣಿಜ್ಯ ಚಟುವಟಿಕೆಗಳು ಆಗಷ್ಟೇ ಗರಿಗೆದರಲಾರಂಭಿಸಿದವು. "ಕ್ರಿ.ಶ. ಏಳರಿಂದ ಹನ್ನೊಂದನೆಯ ಶತಮಾನದ ಅವಧಿಯಲ್ಲಿ ಪ್ರಾಥಮಿಕವಾಗಿ ಕೃಷಿ ಆಧಾರಿತ ಆರ್ಥಿಕತೆ, ಕೃಷಿಗೆ, ಪಶುಸಂಗೋಪನೆ ಪೂರಕವಾಗಿತ್ತು. ವಾಣಿಜ್ಯದ ಜಾಲವು ಶೈಶವಾವಸ್ಥೆಯಲ್ಲಿತ್ತು. ದೂರಪ್ರದೇಶಗಳೊಡನೆ, ನಡೆಯುತ್ತಿದ್ದ ವ್ಯಾಪಾರವು ಬಹುಶಃ ಬೆಲೆಬಾಳುವ ಹರಳುಗಳಿಗೆ ಸೀಮಿತವಾಗಿತ್ತು ಮತ್ತು ಗ್ರಾಮಾಂತರ ಪ್ರದೇಶಗಳ ಕೃಷಿ ಉತ್ಪನ್ನವು ನಾಡುಗಳ ಕೇಂದ್ರವಾಗಿದ್ದ ನಗರ ಪ್ರದೇಶಗಳಲ್ಲಿ ಮಾರಾಟವಾಗುತ್ತಿತ್ತು ಎಂಬುದಕ್ಕೆ ಶಾಸನಗಳು ಪುರಾವೆಗಳನ್ನು ಒದಗಿಸುತ್ತವೆ".[೧]

ಕ್ರಿ.ಶ. ಹತ್ತನೆಯ ಶತಮಾನದವರೆಗೆ ಕೃಷಿ ಹಾಗೂ ಅದಕ್ಕೆ ಪೂರಕವಾದ ಕೆರೆ ನಿರ್ಮಾಣಗಳ ಕಡೆಗೆ ವಿಶೇಷ ಒಲವು ನೀಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಕಾಡುಗಳನ್ನು ಕಡಿದು

ನಾಡನ್ನಾಗಿ ಪರಿವರ್ತಿಸುವ ಹಾಗೂ ಕೃಷಿ ಯೋಗ್ಯ ಭೂಮಿಯನ್ನಾಗಿ ಮಾಡುವ ಪ್ರಕ್ರಿಯೆ ನಿರಂತರವಾಗಿತ್ತು. ಈ ಅವಧಿಯಲ್ಲಿ ಪಶುಸಂಗೋಪನೆ ಸಾಂಗೋಪಾಂಗವಾಗಿ ನಡೆಯುತ್ತಿದ್ದು, 'ಪಶು ಸಂಪತ್ತಿನ' ಆಕ್ರಮಣಕ್ಕಾಗಿ ವೈರಿಗಳು ಸದಾ ಪ್ರಯತ್ನಿಸುತ್ತಿದ್ದುದು 'ತುರುಗೋಳ್' ಶಾಸನಗಳಿಂದ ತಿಳಿದುಬರುತ್ತದೆ. ಇವಲ್ಲದೆ ದಾನ ನೀಡುವಾಗಲೂ ಹೇರಳವಾದ ಪಶುಸಂಪತ್ತು ನೀಡುತ್ತಿದ್ದುದನ್ನು ರಾಷ್ಟ್ರಕೂಟರ ಕಾಲದ ಗೋಸಾಸ ಅಥವಾ ಮೇಂಟಿ ಕಲ್ಲುಗಳು ಪ್ರಸ್ತುತಪಡಿಸುತ್ತವೆ. ತುಪ್ಪ ಹಾಗೂ ತುಪ್ಪದ ಮೇಲಿನ ತೆರಿಗೆ ಮನ್ನಾ ಮಾಡಿದ ಉದಾಹರಣೆಗಳು ಇವೆ.

ಕರ್ನಾಟಕದ ಹನ್ನೊಂದನೆಯ ಶತಮಾನಾನಂತರದ ಶಾಸನಗಳನ್ನು ಅವಲೋಕಿಸಿದಾಗ ಈ ಅವಧಿಯಲ್ಲಿ ಕೃಷಿ ಚಟುವಟಿಕೆಗಳು ಹೆಚ್ಚು ತೀವ್ರಗೊಂಡಿರುವುದನ್ನು ಕಾಣಬಹುದು. ಆ ಮೂಲಕ ಕರ್ನಾಟಕದ ಆರ್ಥಿಕ ಚಟುವಟಿಕೆಗಳು ಹೆಚ್ಚು ಚಲನಶೀಲತೆ ಪಡೆದುಕೊಂಡಿರುವುದೂ ವೇದ್ಯವಾಗುತ್ತದೆ. ಕೃಷಿ ಮತ್ತು ತತ್ಸಂಬಂಧಿ ವೃತ್ತಿಗಳಲ್ಲಿ ತೀವ್ರ ಸಂಚಲನವುಂಟಾಯಿತು. ಈ ಅವಧಿಯಲ್ಲಿ ಹಲವಾರು ಕಸುಬುದಾರರು ಪ್ರಾರಂಭದಲ್ಲಿ ಭೂದಾನ ಪಡೆದಂತೆ ಉಲ್ಲೇಖಿತರಾಗಿದ್ದಾರೆ. ನಿರ್ಗುಂದ ನಾಡಿಗೆ ಸೇರಿದ ಅಗ್ರಹಾರ ಬೆಳುಗುಲಿಯಲ್ಲಿ ಕೇಶವ ದೇವಾಲಯ ನಿರ್ಮಾಣ ಮಾಡಿ, ಆ ಗ್ರಾಮವನ್ನು ಅಗ್ರಹಾರ ಮಾಡಿ, ಆ ಅಗ್ರಾಹಾರದಲ್ಲಿ ಸೇವೆ ಸಲ್ಲಿಸುವ ದೇವಾಲಯದ ಪರಿವಾರ ವರ್ಗದ ಸೇನಬೋವ, ನಾಯಕ, ಬಡ್ಡಿಯ ಸೆಟ್ಟಿ, ಅಕ್ಕಸಾಲಿ, ಬಡಗಿ, ಕಮ್ಮಾರ, ಅಗಸ, ಕುಂಬಾರ, ಕಮ್ಮಾರ, ಚಾರಿಕ ಎಲ್ಲರಿಗೂ ಭೂಮಿ ದಾನ ನೀಡಲಾಗಿದೆ.[೨]

ಭೂದಾನಗಳು ಹೆಚ್ಚಾದಂತೆ ಸಮಾಜದಲ್ಲಿ ಹೊಸ ಶ್ರೀಮಂತ ಬಲಾಢ್ಯ ಸಮಾಜ ನಿರ್ಮಾಣಗೊಳ್ಳುವುದಕ್ಕೆ ಅನುವಾಯಿತು. ಭೂಮಿಯನ್ನು ದಾನವಾಗಿ ಪಡೆದ ಭೂಮಾಲೀಕರು ಅಂಥ ಭೂಮಿಗಳನ್ನು ಕೃಷಿ ಕಾರ್ಯ ಚಟುವಟಿಕೆಗಳ ನಿರ್ವಹಣೆಗಾಗಿ ಗೇಣಿಗೆ ನೀಡುವ ಮೂಲಕ ಗೇಣಿದಾರರನ್ನು ಹುಟ್ಟುಹಾಕಿದರು. ಇದು ಊಳಿಗಮಾನ್ಯ ವ್ಯವಸ್ಥೆಗೆ ನಾಂದಿಯಾಯಿತು.

ಇದೇ ಸಂದರ್ಭದಲ್ಲಿ ಕೃಷಿ ಚಟುವಟಿಕೆಗಳಿಗೆ ಪೂರಕವಾದ ವೃತ್ತಿಗಳಲ್ಲಿ ನಿರತವಾದ ವಿವಿಧ ಕಸುಬುದಾರ ಶ್ರೇಣಿಗಳ ಉಗಮವಾಯಿತು. ಕೃಷಿ ಕಸುಬನ್ನು ಆಧರಿಸಿ ಕುಂಬಾರರು, ತೆಲ್ಲಿಗರು, ಮಡಿವಾಳರು, ಅಕ್ಕಸಾಲಿಗರು, ಮುಂತಾದ ವೃತ್ತಿ ಶ್ರೇಣಿಗಳು ಆರ್ಥಿಕವಾಗಿ ಪ್ರಬಲವಾದವು. ಈ ಅವಧಿಯಲ್ಲಿ ಶಾಸನಗಳಲ್ಲಿ ಕಂಡುಬರುವ ಕುಂಬಾರದೆರೆ, ಗಾಣದೆರೆ, ಕಂಬಳಿಕಾರದೆರೆ, ಮುಂತಾದ ವೃತ್ತಿ ತೆರಿಗೆಗಳು ಈ ಅಂಶವನ್ನು ಪುಷ್ಟೀಕರಿಸುತ್ತವೆ.

ಕೃಷಿ ಚಟುವಟಿಕೆಗಳ ತೀವ್ರತೆಯನ್ನಾಧರಿಸಿ ರೈತರು ಉತ್ಪಾದಿಸುವ ವಸ್ತುಗಳಿಗೆ ಮಾರುಕಟ್ಟೆ ವ್ಯವಸ್ಥೆಯನ್ನು ಒದಗಿಸಲು ಉತ್ಪಾದಕ ವರ್ಗಗಳೂ ಹುಟ್ಟಿಕೊಂಡವು. ಇದರಿಂದ ಸಂತೆಗಳು, ಪುರ, ಪಟ್ಟಣ, ಪೇಟೆ, ನಗರಗಳ ನಿರ್ಮಾಣಕಾರ್ಯಕ್ಕೆ ಚಾಲನೆ ದೊರೆಯಿತು. "ಕ್ರಿ.ಶ. ಏಳರಿಂದ ಹತ್ತನೆಯ

ಶತಮಾನಗಳವರೆಗಿನ ಹೆಚ್ಚಿನ ಶಾಸನಗಳಲ್ಲಿ ಪುರ ಎನ್ನುವ ಪದ ಉಲ್ಲೇಖವಿದ್ದರೆ, ಕ್ರಿ.ಶ. ಹನ್ನೊಂದರಿಂದ ಹದಿಮೂರನೆಯ ಶತಮಾನಗಳರೆಗಿನ ಶಾಸನಗಳಲ್ಲಿ ನಗರ, ಮಹಾನಗರ, ಪಟ್ಟಣ ಎನ್ನುವ ಉಲ್ಲೇಖಗಳಿರುವುದು ಕಂಡುಬರುತ್ತದೆ."[೩]

ನಗರೀಕರಣ ಪ್ರಕ್ರಿಯೆಯನ್ನು ಗಮನಿಸಿದಾಗ ಕ್ರಿ.ಶ. ಹನ್ನೊಂದನೆಯ ಶತಮಾನದವರೆಗೆ ಅವು ಧಾರ್ಮಿಕ ಕೇಂದ್ರಗಳಾಗಿ ಹೆಚ್ಚು ಬೆಳವಣಿಗೆ ಹೊಂದಿರುವುದನ್ನು ಕಾಣಬಹುದು. ಹನ್ನೊಂದನೆಯ ಶತಮಾನಾನಂತರ ಧಾರ್ಮಿಕ ಕೇಂದ್ರಗಳು ಸಹ ವಾಣಿಜ್ಯ ನಗರಗಳಾಗಿ ಪರಿವರ್ತನೆಯಾದವು ಮತ್ತು ಹಲವಾರು ವಾಣಿಜ್ಯ ನಗರಗಳು ಹುಟ್ಟಿಕೊಂಡವು. ದೇವಾಲಯಗಳು ಇದ್ದಂತಹ ತೀರ್ಥಕ್ಷೇತ್ರಗಳು, ದೇವಾಲಯಗಳ ಅರ್ಥಮುಖಿ ಕಾರ್ಯಚಟುವಟಿಕೆಗಳ ವ್ಯಾಪಕತ್ವದಿಂದಾಗಿ ವಾಣಿಜ್ಯ ಕೇಂದ್ರಗಳಾಗಿ ಬದಲಾದವು. ವಾಣಿಜ್ಯ ಕೇಂದ್ರಗಳಲ್ಲಿನ ವ್ಯಾಪಾರ ಚಟುವಟಿಕೆಗಳು ವರ್ತಕ ಸಂಘಗಳನ್ನು ಹುಟ್ಟು ಹಾಕಿದವು. ಅಯ್ಯಾವೊಳೆ ಅಯ್ಯೂರ್ನವರು, ತಂಬುಲಿಗ ಸಾಸಿರ್ವರು, ಬಣಂಜಿಗರೈನೂರ್ವರು, ಗಾಣಿಗರೈವತ್ತೊಕ್ಕಲು, ಸಾಲೆ ಸಾಸಿರ್ವರು, ತೋಂಟಿಗರೈನೂರ್ವರು, ಮುಂತಾದ ಪ್ರತಿಯೊಂದು ವೃತ್ತಿಯವರೂ ತಮ್ಮದೇ ಆದ ವೃತ್ತಿ ಸಂಘಗಳನ್ನು ರಚಿಸಿಕೊಂಡಿದ್ದರು.

ಈ ತೆರನಾದ ಆರ್ಥಿಕ ಸಂಚಲನೆಗಳ ಪಲ್ಲಟಗಳು, ಸಾಮಾನ್ಯ ಜನತೆಯನ್ನೂ ಬಿಡಲಿಲ್ಲ. ಪರಂಪರಾನುಗತವಾಗಿ ಅನುಸರಿಸುತ್ತಿದ್ದ ಕುಲವೃತ್ತಿಗಳನ್ನು ಪರಿತ್ಯಜಿಸಿ 'ವಣಿಕ ಧರ್ಮವನ್ನು' ಆಶ್ರಯಿಸಲು ಮುಂದಾದರು. ಬಾಣಾವರದ ಮಾಚಿದೇವನೆಂಬ ವಿಪ್ರನ ಮಗ ಮಾರಯ್ಯನು ಬ್ರಾಹ್ಮಣ್ಯವನ್ನು ತ್ಯಜಿಸಿ ವಣಿಕ ಧರ್ಮ ಸ್ವೀಕರಿಸಿದುದನ್ನು ಮೊಸಳೆ ಶಾಸನ ದಾಖಲಿಸುತ್ತದೆ. "ಅನಿಶಂ ಗೋಮಾರ್ಗದಿಂದ ಪೊಟ್ಟೆಯನೆ ಪೊರೆದುಕೊಂಡಿರ್ಪ್ಪುದೀ ಗೂಡಮಾನುಷ್ಯನೆ ಹೇಳ್ ಧರ್ಮಾರ್ತ್ಥ ಕಾಮಂಗಳೊಳನುನಯದಿಂ ವರ್ತಿಸಲ್ಕರ್ತ್ಥಿಯಿಂದಂ ಧನಮಂ ವಾಣಿಜ್ಜದಿಂದಾರ್ಜಿಸುತೆ ಸಕಲಧರ್ಮ ಗಳೊಳ್ ಕಾಮದೊಳ್‌ಸಂದುನಿತ್ತಾನ್ತಂ ಶೋಭಿಸಿರ್ಪ ಸಕಳ ಗುಣಯುತಂ ಮಾರನತ್ಯನ್ತಧೀರಂ".[೪] ಲಲಿತಾಂಬ ಅವರು ಅಭಿಪ್ರಾಯಪಡುವಂತೆ "ಈ ಪದ್ಯವು ಕೇವಲ ಮಾರಯ್ಯ, ಮಾರಿಸೆಟ್ಟಿಯಾದ, ಅವನ ಬದುಕಿನಲ್ಲಾದ ಪಲ್ಲಟವನ್ನಷ್ಟೇ ಹೇಳುತ್ತಿಲ್ಲ. ಇಡೀ ಹನ್ನೊಂದನೆಯ-ಹನ್ನೆರಡನೆಯ ಶತಮಾನಕ್ಕೆ ಕನ್ನಡಿ ಹಿಡಿದಿದೆ. ಆ ಕಾಲದ ಶಾಸನಗಳು, ಸಾಹಿತ್ಯ ಕೃತಿಗಳನ್ನು, ಶಾಸ್ತ್ರ ಗ್ರಂಥಗಳನ್ನು ಗಮನಿಸಿದಾಗ ಇಡೀ ಸಮಾಜ 'ಅರ್ಥಮುಖಿ'ಯಾಗಿತ್ತೆಂಬುದು, ಸಂಪತ್ತಿನ ಒಡೆತನ ಅದರ ಆತ್ಯಂತಿಕ ಗುರಿಯಾಗಿ ತ್ತೆಂಬುದು ಕಂಡುಬರುತ್ತದೆ".[೫] ಈತನ ಮಕ್ಕಳು ದೇಶೀಯ ವ್ಯಾಪಾರದಲ್ಲಿ ಮಾತ್ರವಲ್ಲದೆ, ವಿದೇಶೀಯ ವ್ಯಾಪಾರದಲ್ಲೂ ಪ್ರಸಿದ್ಧರಾಗಿದ್ದುದನ್ನು ಶಾಸನಗಳು ದಾಖಲಿಸುತ್ತವೆ.

ಮಧ್ಯಕಾಲೀನ ಕರ್ನಾಟಕದಲ್ಲಿ ಇಂತಹ ಅರ್ಥಮುಖಿ ಸಮಾಜದ ಚಿತ್ರಣವನ್ನು ಜಯರೇಖೆಗಳು ಅದ್ಭುತವಾಗಿ ಕಟ್ಟಿಕೊಡುತ್ತವೆ. ಜಯರೇಖೆಗಳ ಆತ್ಯಂತಿಕ ಗುರಿ ಅಧಿಕಾರ ಗಳಿಕೆ ಮತ್ತು ಯಾಜಮಾನ್ಯತೆಯ ಸ್ಥಾಪನೆಯಾಗಿರುವುದು ಕಂಡಬರುತ್ತದೆ. ಒಂದು ರಾಜ್ಯದ ಬಲಾಢ್ಯ

ಧಾರ್ಮಿಕ ಮತ್ತು ಆರ್ಥಿಕ ಘಟಕಗಳಾದ ನಾಡಿದ ಮೇಲೆ, ಗ್ರಾಮದ ಮೇಲೆ, ದೇವಾಲಯಗಳ ಮೇಲೆ, ನ್ಯಾಯಸ್ಥಾನಗಳ ಮೇಲೆ ಯಾಜಮಾನ್ಯತೆಯನ್ನು ಸ್ಥಾಪಿಸುವ ಮೂಲಕ ಸಮಾಜವನ್ನು ನಿಯಂತ್ರಿಸುವುದು ಅವುಗಳ ಉದ್ದೇಶವಾಗಿದೆ. ಅಧಿಕಾರ ಗಳಿಕೆಯ ಮೂಲಕ ಸಾಮಾಜಿಕವಾಗಿ ಮೇಲ್‌ಸ್ತರದಲ್ಲಿ ಸ್ಥಾನಮಾನ ಗಳಿಸಿಕೊಳ್ಳುವ ಹುನ್ನಾರಗಳು ಜಯಪತ್ರಗಳ ಹಿಂದಿರುವ ಅರ್ಥಮುಖಿ ದೃಷ್ಟಿಕೋನಗಳಾಗಿವೆ.

ಕರ್ನಾಟಕದ ಜಯರೇಖೆಗಳನ್ನು ಅಭ್ಯಸಿಸಿದಾಗ ಸ್ಥೂಲವಾಗಿ ಅವು ದೇವಾಲಯಗಳ ಮೇಲೆ ಆಧಿಪತ್ಯ ಮತ್ತು ಹಕ್ಕು ಸಾಧಿಸುವುದಕ್ಕಾಗಿ, ಒಂದು ಪ್ರದೇಶದಲ್ಲಿ ನೆಲೆಗೊಳ್ಳುವುದಕ್ಕಾಗಿ, ನೆಲೆನಿಂತ ಪ್ರದೇಶಗಳಲ್ಲಿ ಆಧಿಪತ್ಯ ಸ್ಥಾಪಿಸುವುದಕ್ಕಾಗಿ ಹಾಗೂ ಸಾಂಸ್ಕೃತಿಕ ಚಹರೆಗಳ ಅಧೀನತೆಗಾಗಿ ನಡೆಸಿದ ಜೀವನ್ಮುಖಿ ಸಂಘರ್ಷದಂತೆ ತೋರುತ್ತವೆ. ಎಂದರೆ ಜಯರೇಖೆಗಳ ಅರ್ಥಮುಖಿ ಆಶಯಗಳನ್ನು ತಾತ್ವೀಕರಿಸಿಕೊಂಡು ಹೇಳುವುದಾದರೆ ನೆಲೆಗೊಳ್ಳುವಿಕೆ (settlement), ಸ್ಥಿರಗೊಳ್ಳುವಿಕೆ (establishment) ಮತ್ತು ಸಾಂಸ್ಕೃತಿಕ ಆಧಿಪತ್ಯದ ಸ್ಥಾಪನೆ (cultural demination) ಜಯರೇಖೆಗಳ ಹುಟ್ಟಿನ ಆಶಯವಾಗಿದೆ.

ಪ್ರಸಕ್ತ ಅಧ್ಯಾಯದಲ್ಲಿ ಜಯರೇಖೆಗಳನ್ನು ಪ್ರಧಾನವಾಗಿ ಈ ಮುಂದಿನ ಅಂಶಗಳ ಹಿನ್ನಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ, ಎಂದರೆ:–

1) ಧಾರ್ಮಿಕ ಆಧಿಪತ್ಯ ಮತ್ತು ಪೌರೋಹಿತ್ಯದ ಹಕ್ಕು
2) ಪಾಳೆಯಗಾರಿಕೆ ಹಕ್ಕು
3) ಗ್ರಾಮಸ್ಥಾಪನೆ, ಗೌಡಿಕೆ ಹಕ್ಕು, ಗ್ರಾಮಗೌಡಿಕೆ, ನಾಡಗೌಡಿಕೆ, ದೇಶಗತಿ ಗೌಡಿಕೆ ಹಕ್ಕುಗಳು
4) ಕುಲಾಚಾರ ಗೌಡಿಕೆ (ಕುಲಗೌಡಿಕೆ), ಕಟ್ಟೆ ಮನೆ ಹಕ್ಕುಗಳು
5) ವಿಶೇಷ ಹಕ್ಕು ಹಾಗು ಅಧಿಕಾರಗಳು (Special Privileges).

### ೩.೧ ಧಾರ್ಮಿಕ ಆಧಿಪತ್ಯ ಮತ್ತು ಪೌರೋಹಿತ್ಯದ ಹಕ್ಕು

ಹನ್ನೊಂದನೆಯ ಶತಮಾನಾನಂತರ ಕರ್ನಾಟಕವು ಹಲವಾರು ಧರ್ಮ ಸಂಬಂಧಿ ಆಂದೋಲನಗಳಿಗೆ ಸಾಕ್ಷಿಯಾಯಿತು. ಸಮಾನತೆಯ ಸಮಾಜವನ್ನು ನಿರ್ಮಿಸುವ ಆಶಯದೊಂದಿಗೆ ವೀರಶೈವ ಧರ್ಮ ಮುನ್ನೆಲೆಗೆ ಬಂದರೆ, ಭಕ್ತಿಯ ಮೂಲಕ ಅಂತ್ಯಜರಿಗೂ ದೀಕ್ಷೆ, ಮೋಕ್ಷ ಸಾಧ್ಯವೆಂಬ ಚಿಂತನೆಯೊಂದಿಗೆ ಶ್ರೀವೈಷ್ಣವ ಧರ್ಮ ಆವಿರ್ಭವಿಸಿತು. ಶಿವ ಮತ್ತು ವಿಷ್ಣುವಿನ ಆರಾಧನೆಯನ್ನು ಜನಪ್ರಿಯಗೊಳಿಸಿದ ಈ ಮತಗಳು ವೈದಿಕ ಧರ್ಮದ ಪರಿಪ್ರೇಕ್ಷ್ಯದಲ್ಲಿ ಸಣ್ಣಮಟ್ಟ ಕಲಹಗಳ ಹೊರತಾಗಿ ಸಾಮರಸ್ಯದಿಂದ ಸಹಬಾಳ್ವೆ ನಡೆಸುತ್ತಿದ್ದವು. ಈ ಸಮಯದಲ್ಲಿ ರಾಜಾಶ್ರಯದಡಿಯಲ್ಲಿ, ವ್ಯಾಪಾರ, ವ್ಯವಹಾರ ಚಟುವಟಿಕೆಗಳಿಂದ ಆರ್ಥಿಕವಾಗಿ ಪ್ರಬಲವಾಗಿದ್ದ ಜೈನಧರ್ಮವನ್ನು ಈ ಎರಡೂ ಮತಗಳು

ಎದುರಾಳಿ ಸ್ಪರ್ಧಿಯನ್ನಾಗಿ ಪರಿಭಾವಿಸಿದವು. ಸಾತ್ವಿಕ ಚಿಂತನೆಗಳನ್ನೊಳಗೊಂಡ ಜೈನಧರ್ಮದ ನಿಲುಮೆ ಅಹಿಂಸಾ ಪರವಾಗಿದ್ದರಿಂದ ಧಾರ್ಮಿಕವಾಗಿ ಅದನ್ನು ಮಣಿಸುವುದು ಕಷ್ಟಸಾಧ್ಯವಾಗಿತ್ತು. ಅದಕ್ಕಾಗಿ ಉಳಿದ ಧರ್ಮಗಳಿಗೆ ಜೈನಧರ್ಮಕ್ಕಿದ್ದ ಪ್ರಭುತ್ವದ ಆಶ್ರಯವನ್ನು, ಬೆಂಬಲವನ್ನು ತಪ್ಪಿಸಿ, ತಾವು ಅದನ್ನು ಪಡೆಯುವುದು ಅನಿವಾರ್ಯವಾಗಿತ್ತು. ಕರ್ನಾಟಕದ ದಕ್ಷಿಣ ಭಾಗದಲ್ಲಿ ರಾಮಾನುಜಾಚಾರ್ಯರ ಪ್ರಭಾವದಿಂದ ವೈಷ್ಣವ ಧರ್ಮ ರಾಜಾಶ್ರಯದಡಿ ಬಂದರೆ, ಉತ್ತರ ಭಾಗದಲ್ಲಿ ಶೈವಧರ್ಮ ಅಪಾರ ಜನಪ್ರಿಯತೆಯನ್ನು ಪಡೆಯಿತು. ಹನ್ನೊಂದರಿಂದ ಹದಿಮೂರನೆಯ ಶತಮಾನಗಳಲ್ಲಿ ದೇವಾಲಯಗಳು ಧಾರ್ಮಿಕ ಪರಿಪ್ರೇಕ್ಷ್ಯದಿಂದ ಹೊರಬಂದು ಸಾಂಸ್ಥಿಕ ರೂಪವನ್ನು ಪಡೆಯಲಾರಂಭಿಸಿದವು. ದೇವಾಲಯಗಳು ಆರಾಧನಾ ನೆಲೆಗಳಾಗಿ, ಭೂಬ್ಯಾಂಕುಗಳಾಗಿ ಪರಿವರ್ತನೆ ಗೊಂಡವು. ಇವುಗಳ ನಿರ್ವಹಣೆಗೆ 'ಸ್ಥಾನಪತಿ' ಹುದ್ದೆಗಳು ಸೃಜನೆಯಾದವು. ದೇವಾಲಯಗಳ ಸ್ಥಾನಪತಿಗಳು ಇಡೀ ದೇವಾಲಯದ ಸಂಪೂರ್ಣ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದರು. ದೇವಾಲಯಗಳು ಸಂಪತ್ತಿನ ಕ್ರೋಢೀಕರಣದ ಕೇಂದ್ರಗಳಾಗಿ ಪರಿವರ್ತನೆಗೊಂಡಿದ್ದವು. ದೇವಾಲಯಗಳ ವರಮಾನವೂ ಹೆಚ್ಚಾಗಿದ್ದುದನ್ನು ಹಲವಾರು ಶಾಸನಗಳು ಬೇರೆ ಬೇರೆ ಅಂಶಗಳ ಮೂಲಕ ಶ್ರುತಪಡಿಸುತ್ತವೆ. ಈ ಅವಧಿಯಲ್ಲಿ ದೇವಾಲಯಗಳ ನಿರ್ಮಾಣ ಅಲೌಕಿಕ ನೆಲೆಗಿಂತ ಲೌಕಿಕ ನೆಲೆಗಟ್ಟಿನಲ್ಲಿ ನಡೆಯಿತು.

ಅಬ್ಬಲೂರಿನ ಜಯಪತ್ರದ ಬಗ್ಗೆ ಈವರೆಗೆ ನಡೆದಿರುವ ಚರ್ಚೆಗಳು ಮತ್ತು ಬುಕ್ಕರಾಯನ ಶ್ರವಣಬೆಳಗೊಳದ ಶಾಸನ ಹಾಗೂ ಲಕ್ಷ್ಮೇಶ್ವರದ ಎರಡು ಜಯಪತ್ರಗಳನ್ನು ಈ ಹಿನ್ನೆಲೆಯಲ್ಲಿ ನೋಡಬೇಕಾಗಿದೆ. ಇವುಗಳ ಬಗ್ಗೆ ಈವರೆಗೆ ನಡೆದಿರುವ ಚರ್ಚೆಗಳು ಧಾರ್ಮಿಕ ಸಂಘರ್ಷದ ಪರಿಧಿಯಲ್ಲಿಯೇ ನಡೆದಿವೆ. ಆದರೆ ಇಂಥ ಧಾರ್ಮಿಕ ಸಂಘರ್ಷಗಳು ಹಿಂದೆಂದಿನ ಅವಧಿಗಿಂತಲೂ, ಮಧ್ಯಕಾಲೀನ ಕರ್ನಾಟಕದಲ್ಲಿ ಏಕೆ ಹೆಚ್ಚಾಗಿ ಸಂಭವಿಸಿದವು? ಅದಕ್ಕೆ ಕಾರಣಗಳೇನು? ಯಾವ ಬಲವಾದ ಒತ್ತಾಸೆಗಳು ಇಂಥ ಸಂಘರ್ಷಗಳಿಗೆ ಪ್ರೇರಕವಾಗಿದ್ದವು ಹಾಗೂ ಪೂರಕವಾಗಿದ್ದವು ಎಂಬುದನ್ನು ಹೆಚ್ಚು ಚರ್ಚೆಗೆ ಗುರಿಪಡಿಸಿಲ್ಲ.

ವೀರಶೈವ ಚಳವಳಿಯ ಹುಟ್ಟಿನ ಬಗ್ಗೆ ವಿಶ್ಲೇಷಿಸುತ್ತಾ ಆರ್.ಎನ್. ನಂದಿಯವರು ವ್ಯಾಪಾರದ ಪುನರುಜ್ಜೀವನವು ವಾಣಿಜ್ಯ ಸ್ಪರ್ಧೆಯನ್ನು ಹೆಚ್ಚಿಸಿ, ಬ್ರಾಹ್ಮಣ ಮತ್ತು ಜೈನ ವ್ಯಾಪಾರಿಗಳ ನಡುವೆ ವೈಷಮ್ಯವನ್ನು ಹುಟ್ಟಿಹಾಕಿರುವ ಸಾಧ್ಯತೆಗಳಿವೆ. ಇವರಿಬ್ಬರ ನಡುವಿನ ಘರ್ಷಣೆಯು ವೀರಶೈವ ಧರ್ಮದ ಹುಟ್ಟಿಗೆ ಕಾರಣವಾಗಿರಬಹುದೆಂದು ಹೇಳುತ್ತಾ, ವೀರಶೈವ ಚಳವಳಿ ಪ್ರಾರಂಭವಾದುದೇ ವ್ಯಾಪಾರೀ ಸ್ಥಳಗಳಿಂದ ಎಂದು ಅಭಿಪ್ರಾಯಪಡುತ್ತಾರೆ. ಧರ್ಮ ಸಂಘರ್ಷಕ್ಕೆ ಆಯಾ ಸಂಬಂಧಪಟ್ಟ ಕಾಲಘಟ್ಟದಲ್ಲಿ ಗರಿಗೆದರುತ್ತಿದ್ದ ಆರ್ಥಿಕ ಚಟುವಟಿಕೆಗಳು ಯಾವ ರೀತಿ ಪೋಷಕವಾಗಿದ್ದವು ಎಂಬುದನ್ನು ಆರ್.ಎನ್. ನಂದಿಯವರು ಶಾಸನಗಳ ಹಿನ್ನೆಲೆಯಲ್ಲಿ ಪ್ರತಿಪಾದಿಸಿರುತ್ತಾರೆ.[೬] ಅಲೌಕಿಕ

ನೆಲೆಯಿಂದ ಲೌಕಿಕವಾಗುವ ಪ್ರಕ್ರಿಯೆಯಲ್ಲಿ ಧರ್ಮ ಅರ್ಥಮುಖಿಯಾಗುತ್ತದೆ. ಅಬ್ಬಲೂರಿನ ಜಯಪತ್ರ ಶೈವಧರ್ಮ, ಜೈನಧರ್ಮವನ್ನು ಎದುರುಗೊಳ್ಳುವ ಸಂದರ್ಭ, ಜೈನರು ಧಾರ್ಮಿಕ ಸಂಸ್ಥೆಗಳ ಮೇಲೆ ಹೊಂದಿರುವ ನಿಯಂತ್ರಣವನ್ನು ಇಲ್ಲವಾಗಿಸುವ ಪ್ರಕ್ರಿಯೆಯಾಗಿದೆ. ಎಂದರೆ ಸಂಪತ್ತಿನ ಸ್ಥಾನಗಳಾದ ಆರಾಧನಾ ನೆಲೆಗಳ ಮೇಲೆ ನಿಯಂತ್ರಣ ಸಾಧಿಸುವ ಉದ್ದೇಶವೇ ಆಗಿದೆ.

ಏಕಾಂತದ ರಾಮಯ್ಯ ಅಳಂದೆಯಿಂದ ಅಬ್ಬಲೂರಿಗೆ ಬಂದದ್ದು, ಅಲ್ಲಿ ಜೈನರೊಂದಿಗೆ ವಾಗ್ವಾದ ನಡೆಸಿದ್ದು, ತನ್ನ ತಲೆಯನ್ನು ಪಣವೊಡ್ಡಿ ಜಯಿಸಿ ಜಿನಬಿಂಬಗಳನ್ನು, ಜಿನಾಲಯಗಳನ್ನು ನಾಶ ಮಾಡಿ ಅಲ್ಲಿ ಪರ್ವತೋಪಮವಾದ ಬ್ರಹ್ಮೇಶ್ವರ ದೇವಾಲಯವನ್ನು ನಿರ್ಮಿಸಿದ್ದು, ಅದಕ್ಕೆ ಕಲಚುರಿ ಬಿಜ್ಜಳ, ಕದಂಬ ಕಾಮದೇವ, ಕಲ್ಯಾಣ ಚಾಲುಕ್ಯ ಸೋಮೇಶ್ವರರಿಂದ ದಾನಗಳ ಮಹಾಪೂರವೇ ಹರಿದು ಬಂದಿದ್ದು, ಈ ಎಲ್ಲ ಅಂಶಗಳನ್ನು ಗಮನಿಸಿದಾಗ, ಇದು ಅಬ್ಬಲೂರಿಗೆ ಸೀಮಿತವಾಗಿರದೆ, ಈ ಅವಧಿಯಲ್ಲಿ ಎಲ್ಲ ವೈದಿಕ ದೇವಾಲಯಗಳಿಗೂ ಇದೇ ರೀತಿಯಲ್ಲಿ ಮಣ್ಣು ಅಥವಾ ಹೊನ್ನಿನ ರೂಪದಲ್ಲಿ ಅಪಾರ ಸಂಪತ್ತು ಹರಿದುಬಂದಿದ್ದನ್ನು ಸಮಕಾಲೀನ ಶಾಸನಗಳು ದಾಖಲಿಸುತ್ತವೆ. ಇಂಥ ಕೊಡುಗೆಗಳು ದೇವಾಲಯಗಳಲ್ಲಿ ಸಂಚಿತವಾಗುತ್ತಾ ಹೋಗಿ ಅವು ಸಂಪತ್ತಿನ ಶೇಖರಣೆಯ ಖಜಾನೆಗಳಾಗಿ ಪರಿವರ್ತನೆಯಾದವು.

ಪುಲಿಗೆರೆಯ ಶಂಖಬಸದಿಯಲ್ಲಿ ಬಾದಾಮಿ ಚಾಲುಕ್ಯರ ಕಾಲದಿಂದಲೂ ಸಂಚಿತವಾಗಿದ್ದ ಸಂಪತ್ತೇ ಪುಲಿಗೆರೆಯ ಜಯಪತ್ರಗಳ ಸಂಘರ್ಷಕ್ಕೆ ಕಾರಣವಾಗಿರಲಿಕ್ಕೆ ಸಾಕು. ಸೋಮೇಶ್ವರ ದೇವಾಲಯದ ಸ್ಥಾನದಾಚಾರ್ಯ ಶಿವರಾಮಯ್ಯ ಶಂಖಬಸದಿಯ ಜಮೀನನ್ನು 'ಬಲುಮೆ'ಯಿಂದ ಒತ್ತುವರಿ ಮಾಡಿಕೊಂಡು ಉಳುಮೆ ಮಾಡುತ್ತಿದ್ದದನ್ನು ಶಂಖಬಸದಿಯ ಹೇಮದೇವಾಚಾರ್ಯ ಪ್ರಶ್ನಿಸಿದಾಗ ಸ್ವತಃ ವೀರಪ್ರತಾಪದೇವರಾಯ ಮಹಾರಾಯನ ಅರಮನೆ ಪುರೋಹಿತ ಸಂಗಮದೇವನೇ ಮಧ್ಯಪ್ರವೇಶಿಸಿ ಬಗೆಹರಿಸಬೇಕಾಯಿತು. ಊರಿನ ನಾಡಗೌಡರಿಗೆ ಈ ವಿಷಯ ತಿಳಿದಿದ್ದರೂ, ಅವರು ಮೌನವಾಗಿರುವಂತಹ ಪರಿಸ್ಥಿತಿ ಉದ್ಭವವಾಗಿತ್ತು. ಅಂತಿಮವಾಗಿ ಶಂಖಬಸದಿಯ ಪರವಾಗಿ ನಿರ್ಣಯ ಮಾಡಿ ಹೇಮದೇವಾಚಾರ್ಯರಿಗೆ ಜಯಪತ್ರ ನೀಡಲಾಯಿತು.

ಅಪಜಯದ ಅವಮಾನ ಶಿವರಾಮಯ್ಯನನ್ನು ಕಾಡುತ್ತಿತ್ತು. ಇದಕ್ಕಾಗಿ ಸೂಕ್ತ ಸಮಯಕ್ಕಾಗಿ ಕಾಯುತ್ತಿರುವಂತೆ ಶಂಖಬಸದಿಯಲ್ಲಿ ಶಾಂತಿತೀರ್ಥಂಕರನ ಉತ್ಸವದಲ್ಲಿ ಅಷ್ಟದಿಕ್ಪಾಲಾದಿಗಳು, ಧ್ವಜ ಪತಾಕಾದಿಗಳನ್ನು ಬಳಸಿದುದನ್ನು ಕಾಳಹಸ್ತಿದೇವರು ಮತ್ತು ಶಿವರಾಮದೇವರು ಪ್ರಶ್ನಿಸಿ "ಕಾಲತ್ರಯದೊಳುಂ ವೇದಶಾಸ್ತ್ರಪುರಾಣಾಗಮಾದಿಗಳೊಳು ಜಿನಸಮಯಕ್ಕೆ ಅಷ್ಟದಿಕ್ಪಾಲಾದಿಗಳು ಧ್ವಜಪತಾಕಾದಿಗಳು ಸಲ್ಲುವುದಿಲ್ಲವೆಂದು ಪ್ರಜ್ಞಾಹೀನತೆಯಿಂದ ಮೆರೆಸಿದೆವೆಂದು" ಹೇಳಿ ಜೈನರು ಜಯಪತ್ರಿಕೆಯನ್ನು ಬರೆದುಕೊಡುತ್ತಾರೆ.

ಇದಕ್ಕೂ ಐವತ್ತು ವರ್ಷಗಳ ಮೊದಲು ಶ್ರವಣಬೆಳಗೊಳದಲ್ಲಿ ಬುಕ್ಕರಾಯನು ಜೈನರು ಪಂಚಮಹಾವಾದ್ಯಗಳು, ಕಲಶವನ್ನು ಬಳಸಬಹುದೆಂದು ಹೇಳಿದ್ದರೂ, ಇಲ್ಲಿ ಮತ್ತೆ ಅಂಥದೇ ಪ್ರಶ್ನೆ ಉದ್ಭವವಾಗಿ ಆ ಮೂಲಕ ಒಂದು ಸಮುದಾಯವನ್ನು ನಿಯಂತ್ರಣಕ್ಕೆ ತೆಗೆದುಕೊಂಡಿರುವುದನ್ನು ಕಾಣಬಹುದು. ಒಂದು ಸಮುದಾಯವನ್ನು ನೇರವಾಗಿ ಆರ್ಥಿಕವಾಗಿ ಬಲಹೀನಗೊಳಿಸಲು ಸಾಧ್ಯವಾಗದಿದ್ದಾಗ, ಧರ್ಮದ ಹೆಸರಿನಲ್ಲಿ ಅವುಗಳನ್ನು ನಿಯಂತ್ರಿಸುವಂತಹ ಇಂತಹ ಸನ್ನಿವೇಶಗಳನ್ನು ಶಾಸನಗಳು ಅನಾವರಣಗೊಳಿಸುತ್ತವೆ. ಅಲ್ಲದೆ, ಬಸದಿಗಳನ್ನು ಸಂರಕ್ಷಿಸುವ ಹೊಣೆಯನ್ನು ವೈಷ್ಣವರಿಗೆ ವಹಿಸಿದರೂ, ಅವುಗಳಿಗೆ ತಗಲುವ ವೆಚ್ಚವನ್ನು ಮತ್ತೆ ಜೈನರಿಂದಲೇ ಸಂಗ್ರಹಿಸಬೇಕೆಂದು ಆದೇಶಿಸಿರುವುದನ್ನು ಕಾಣಬಹುದು.

ಧಾರ್ಮಿಕ ಕೇಂದ್ರಗಳಾದ ದೇವಾಲಯಗಳು ಅಪಾರ ಪ್ರಮಾಣದ ಸಂಪತ್ತಿನ ಕೇಂದ್ರಗಳಾಗಿ ಪರಿವರ್ತನೆಯಾದ ನಂತರ ಅವುಗಳನ್ನು ನಿರ್ವಹಿಸಲು 'ಸ್ಥಾನಪತಿ' ಹುದ್ದೆಗಳು ಸೃಜನೆಗೊಂಡವು. ದೇವಾಲಯಗಳ 'ಸ್ಥಾನಪತಿ'ಗಳು ದೇವಾಲಯಗಳ, ಅವುಗಳಿಗೆ ಸಂಬಂಧಪಟ್ಟ ಮಠಗಳ ಮೇಲೆ ಸಂಪೂರ್ಣ ನಿಯಂತ್ರಣವನ್ನು ಹೊಂದಿರುತ್ತಿದ್ದರು. ಅವರು ದೇವಾಲಯಗಳಿಗೆ ಬರುವಂತಹ ದಾನಗಳನ್ನು ಸ್ವೀಕರಿಸುವ, ದೇವಾಲಯಗಳ ಭೂಮಿಯನ್ನು ಗೇಣಿಗೆ ನೀಡುವ ಮತ್ತು ಸಂಚಿತ ವಾಗಿರುವ ಹಣವನ್ನು ಬಡ್ಡಿಗೆ ನೀಡುವಂತಹ ಜವಾಬ್ದಾರಿಯನ್ನು ಹೊತ್ತಿದ್ದರು. ದೇವಾಲಯಗಳ ಮೇಲೆ ವಿವಿಧ ವೃತ್ತಿ ಸಮುದಾಯಗಳ ಅಸಂಖ್ಯ ಜನರು ಅವಲಂಬಿತರಾಗಿದ್ದರು.

ಹದಿನಾಲ್ಕನೆಯ ಶತಮಾನದಲ್ಲಿ ನಡೆದ ಅನ್ಯ ಧಾಳಿಗಳು ಕರ್ನಾಟಕದ ಚರಿತ್ರೆಯಲ್ಲಿ ಹಲವಾರು ಸ್ಥಿತ್ಯಂತರಗಳನ್ನು ತಂದವು. ಸಾಂಸ್ಥಿಕವಾಗಿ ಪ್ರಬಲವಾಗಿದ್ದ ದೇವಾಲಯಗಳ ವ್ಯವಸ್ಥೆ ಶಿಥಿಲಗೊಂಡಿತು. ದೇವಾಲಯಗಳನ್ನು ಆಧರಿಸಿ, ಜೀವನೋಪಾಯದ ಮೂಲಗಳನ್ನು ಕಂಡುಕೊಂಡಿದ್ದ ಪುರೋಹಿತರು, ಮಾಲೆಗಾರ, ತೆಲ್ಲಿಗ, ಪಾತ್ರ-ಪವುಳದವರು, ತಂಬುಳಿಗರು, ಅಗಸರು, ಮಡಿವಾಳರು, ಬಣಜಿಗರು, ಮುಂತಾದ ಸಮುದಾಯಗಳೆಲ್ಲವೂ ವೃತ್ತೀಯ ಆತಂಕಗಳನ್ನು ಎದುರಿಸುವಂತಹ ಸನ್ನಿವೇಶ ಉದ್ಭವವಾಯಿತು. ಪ್ರತಿಯೊಂದು ಸಮುದಾಯವೂ ತಮ್ಮ ತಮ್ಮ ಜೀವನೋಪಾಯಕ್ಕಾಗಿ ವೃತ್ತಿ ಬದುಕನ್ನು ಅರಸಿಕೊಂಡು ಸಾಗುವಂತಹ ಸನ್ನಿವೇಶ ಸೃಷ್ಟಿಯಾಯಿತು.

ಹಾಗೆಯೇ ಹನ್ನೊಂದರಿಂದ-ಹದಿಮೂರನೆಯ ಶತಮಾನದಲ್ಲಿದ್ದ ದೇವಾಲಯಗಳ ಮಠ ವ್ಯವಸ್ಥೆ ಕೆಲವು ಏಳುಬೀಳುಗಳ ನಡುವೆಯೂ ಹಾಗೆಯೇ ಮುಂದುವರೆಯಿತು. ಮೊದಲು ರಾಜಾಶ್ರಯದಲ್ಲಿ ಆರ್ಥಿಕವಾಗಿ ಸುಭದ್ರವಾಗಿದ್ದ ಇವು, ನಂತರ ಅಸ್ತಿತ್ವದ ಉಳಿವಿಗಾಗಿ ಹಲವಾರು ಜಾತಿಸಮುದಾಯಗಳ ಜನರನ್ನು ಆಶ್ರಯಿಸುವಂತಹ ಪರಿಸ್ಥಿತಿ ಉದ್ಭವವಾಯಿತು. ರಾಜಮಠಗಳು ಭಕ್ತಮಠಗಳಾಗಿ ಪರಿವರ್ತನೆಯಾದವು. ಇಂಥ ಸಂದರ್ಭದಲ್ಲಿ ಕೃಷಿಕ ಸಮುದಾಯದ ಜನರನ್ನು ಮಠಗಳೆಡೆ ಆಕರ್ಷಿಸಲು ಮತ್ತು ಅವರನ್ನು ತಮ್ಮ ಮಠಗಳ ಒಕ್ಕಲುಗಳನ್ನಾಗಿ ಮಾಡಿಕೊಳ್ಳಲು

ಪೈಪೋಟಿಯೂ ಪ್ರಾರಂಭವಾಯಿತು. ಇದು ಜನಪದ ಮಹಾಕಾವ್ಯ ಮಲೆಮಾದೇಶ್ವರ ಕಾವ್ಯದಲ್ಲೂ ಪ್ರತಿಧ್ವನಿತವಾಗಿದೆ. "ಮಲೆಮಾದೇಶ್ವರ, ಮಂಟೇಸ್ವಾಮಿ ನಡುವೆಯೂ ಕುಲಗಳನ್ನು ಏರ್ಪಡಿಸಿಕೊಳ್ಳುವಾಗ ಸಂಘರ್ಷಗಳು ನಡೆದಿವೆ. ಉತ್ಪಾದನಾ ಹಂತಗಳನ್ನು ಬೆಳೆಸಿಕೊಳ್ಳುವಾಗ ಇದು ಸಹಜವೂ ಎನಿಸುವುದು. ಈ ಇಬ್ಬರೂ ಸಾಂಸ್ಕೃತಿಕ ವೀರರು ಶೂದ್ರ ಸಮುದಾಯಗಳಿಂದ, ಹೊಲೆಯ, ಮಾದಿಗ ಕುಲಗಳಿಂದ ಬಂದಿರುವುದರಿಂದ ಮೇಲು ಸ್ತರಕ್ಕೆ ಜಿಗಿಯುವ ಪೈಪೋಟಿಯೂ ಇದಾಗಿರಬಹುದು. ಹೀಗೆ ಜಿಗಿಯುವುದೆಂದರೆ ತಮ್ಮತನವನ್ನು ಕಳೆದುಕೊಳ್ಳುವುದು ಎಂದಲ್ಲ. ತಮ್ಮ ಕುಲದ ಅಸ್ತಿತ್ವ ಅನನ್ಯತೆಗಳನ್ನು ಇಟ್ಟುಕೊಂಡೇ ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಹೆಣಗುವುದು. ತಮ್ಮ ಅಧಿಕಾರ ಹಕ್ಕುಗಳಿಗಾಗಿ ಜಿದ್ದಿಗೆ ಬೀಳುವುದು. ಈ ಹಠ ಇಬ್ಬರಲ್ಲೂ ಒಂದೇಯಾಗಿ ಕಾಣಿಸುವುದು. ಮಾದೇಶ್ವರ ಒಕ್ಕಲು ಪಡೆಯುವುದಾಗಲೀ, ಮಂಟೇಸ್ವಾಮಿ ಒಕ್ಕಲು ಪಡೆಯುವುದಾಗಲೀ ಅಷ್ಟು ಸುಲಭವಾಗಿ ದಕ್ಕುವ ವಿಚಾರವಲ್ಲ. ಹಾಗೆ ಸಾಮಾನ್ಯ ಭಿಕ್ಷೆ ಅವರಿಗೆ ದೊರೆಯುವುದು ಕಷ್ಟಕರವಾಗಿರುತ್ತವೆ. ಆಗ ಅವರು ಅಸಾಮಾನ್ಯಗೊಂಡವರಂತೆ, ಉತ್ಪಾದನಾ ಮಾಟ ಮಂತ್ರ, ಪವಾಡಗಳಿಗೆ ಮೊರೆಹೋಗುತ್ತಾರೆ. ಭಿಕ್ಷೆಯ ಮೂಲಕ ಮನೆಯ ಒಕ್ಕಲನ್ನು, ಮಕ್ಕಳನ್ನು ಕುಲಪಂಥಕ್ಕೆ ತಂದುಕೊಳ್ಳುವ ಸಾಹಸ ಮಾಡುತ್ತಾರೆ".[೭]

ಸಮುದಾಯಗಳನ್ನು ಮಠಗಳ ಕಡೆಗೆ ಆಕರ್ಷಿಸುವುದು ಒಂದು ಕಡೆಯಾದರೆ, ಮತ್ತೊಂದೆಡೆ ಮಠ-ಮಠಗಳ ನಡುವೆ ಆಧಿಪತ್ಯಕ್ಕಾಗಿ ಕಲಹಗಳು ಪ್ರಾರಂಭವಾದವು. ಒಂದು ಮಠ ಮತ್ತೊಂದು ಮಠ ತನಗೆ ಸೇರಿದೆ ಎಂದು ವಾದ ಮಾಡಿ ಕಲಹ ಪ್ರಾರಂಭಿಸಿದರೆ, ಇನ್ನು ಕೆಲವು ಮಠಗಳಲ್ಲಿ ಮಠಗಳ ಸ್ವಾಮಿಗಳಿಗೆ ಕೆಲವು ವಿಶೇಷ ರೀತಿಯ ಸವಲತ್ತುಗಳನ್ನು ನಿಷ್ಕರ್ಷೆ ಮಾಡಿ ಜಯರೇಖೆ ಹೊರಡಿಸಿರುವುದನ್ನು ಕಾಣಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ದೇವಾಲಯಗಳ ಪೌರೋಹಿತ್ಯದ ಹಕ್ಕನ್ನು ನೀಡಿ ಜಯಪತ್ರ ಹೊರಡಿಸಿರುವುದು ಕಂಡುಬರುತ್ತದೆ.

ಅಂತಹ ಒಂದು ನಿದರ್ಶನವನ್ನು ಆನೆಗೊಂದಿ ವಿಶ್ವಕರ್ಮ ಮಠದ ಜಯರೇಖೆ ಪ್ರಸ್ತುತಪಡಿಸುತ್ತದೆ. ಇದನ್ನು ಕ್ರಿ.ಶ. ೧೫೨೦ರಲ್ಲಿ ಕೃಷ್ಣದೇವರಾಯನ ಅವಧಿಯಲ್ಲಿ ಬರೆಯಿಸಿದಂತೆ ಶಾಸನದಲ್ಲಿ ಹೇಳಲಾಗಿದ್ದರೂ, ಶಾಸನ ಸಂಪಾದಕರಾದ ಡಾ॥ ದೇವರಕೊಂಡಾರೆಡ್ಡಿಯವರು ಲಿಪಿದೃಷ್ಟಿಯಿಂದ ಇದು ಹದಿನೆಂಟನೆಯ ಶತಮಾನಕ್ಕೆ ಸೇರುತ್ತದೆಂದು ಅಭಿಪ್ರಾಯಪಡುತ್ತಾರೆ.[೮] ಅಂದರೆ, ಕ್ರಿ.ಶ. ಹದಿನೆಂಟನೆಯ ಶತಮಾನದಲ್ಲಿ ನಡೆದಿರಬಹುದಾದ ವ್ಯಾಜ್ಯವನ್ನು ಇದು ದಾಖಲಿಸುತ್ತದೆ.

ಶಾಸನದ ಪ್ರಕಾರ ಅಂತರವಳ್ಳಿಯ ನಿರಂಜನಯ್ಯ ಮತ್ತು ಮೂರು ಜಾವದಯ್ಯ ಎಂಬುವವರು ವಿರೂಪಾಕ್ಷದೇವರ ರಥೋತ್ಸವಕ್ಕೆ ಬಂದು ಆನೆಗೊಂದಿ ಆಚಾರ್ಯ ಪೀಠ ನಮ್ಮದು, ಅದಕ್ಕೆ ನಾವೇ ಬಾಧ್ಯರು ಎಂದು ಹೇಳಿ ಆನೆಗೊಂದಿ ಪೀಠದ ಸದ್ಯೋಜಾತ ಸ್ವಾಮಿಯವರ ಜೊತೆ ವ್ಯಾಜ್ಯವನ್ನು

ಮಾಡಿಕೊಂಡು ಇದಕ್ಕೆ ಸಂಬಂಧಪಟ್ಟಂತೆ ನಾವು ಸನ್ನದು ಪತ್ರ ಕೊಡುತ್ತೇವೆ. ಒಂದು ವೇಳೆ ಕೊಡಲು ತಪ್ಪಿದರೆ ಸರ್ಕಾರಕ್ಕೆ ೩೦೦ ಗದ್ಯಾಣ ದಂಡ ಕೊಡುತ್ತೇವೆಂದು ಬರೆದುಕೊಡುತ್ತಾರೆ. ಆನೆಗೊಂದಿ ಮಹಾಸಂಸ್ಥಾನದ ಅಶೇಷ ವಿದ್ವಜ್ಜನರು, ತ್ರಿಮತಸ್ತ ಬ್ರಹ್ಮಸಭಾ ಸಮೂಹದವರು ಅಂತರವಳ್ಳಿಯವರು ಮಂಡಿಸಿದ ಸನ್ನದು ಪತ್ರಗಳನ್ನೆಲ್ಲಾ ಪರಾಮರ್ಶಿಸಿ "ಆನೆಗೊಂದಿ ಪೀಠಕ್ಕೆ ಅಂತರವಳ್ಳಿಯವರೇ ಬಾಧ್ಯರು ಎಂಬ ಅಂಶವನ್ನು ರುಜುವಾತುಪಡಿಸುವಂತಹ ಅಂಶಗಳು ಈ ಸನ್ನದುಗಳಲ್ಲಿಲ್ಲ. ಇದಕ್ಕೆ ಪೂರಕವಾದ ಇತರ ಸನ್ನದುಗಳನ್ನು ಮಂಡಿಸಿ" ಎಂದು ಕೇಳುತ್ತಾರೆ. ಆಗ ಅಂತರವಳ್ಳಿಯವರು "ಇವುಗಳ ವಿನಾ ನಮ್ಮಲ್ಲಿ ಬೇರೆ ಸನ್ನದು ಪತ್ರಗಳಿಲ್ಲ"ವೆಂದು ಹೇಳುತ್ತಾರೆ. ಆಗ ತ್ರಿಮತಸ್ತ ಬ್ರಾಹ್ಮಣ ಸಭೆಯವರು "ಹಾಗಿದ್ದರೆ ವ್ಯಾಜ್ಯ ಏಕೆ ಹೂಡಿದಿರಿ" ಎಂದು ಅಂತರವಳ್ಳಿಯವರನ್ನು ಪ್ರಶ್ನಿಸಿದಾಗ, "ನಮಗೆ ತಿಳಿಯದೆ ಅಜ್ಞಾನದಿಂದ ಶ್ರೀ ರೂಢಾಚಾರ್ಯವಂಶೋದ್ಭವರಾದ ಸದ್ಯೋಜಾತ ಸ್ವಾಮಿಗಳವರ ಸಂಗಾತ ಕಲಹ ಮಾಡಿದ್ದೇ ಹೊರತು ನಮ್ಮ ಸ್ವಬುದ್ಧಿಯಿಂದ ವ್ಯಾಜ್ಯ ಮಾಡಿದವರಲ್ಲ. ಕ್ಷುದ್ರ ಜನರ ಮಾತು ಕೇಳಿ ವ್ಯಾಜ್ಯ ಮಾಡಿದೆವು. ಅಲ್ಲದೆ, ಆನೆಗೊಂದಿ ಪೀಠ ನಮಗೆ ಮಾತ್ರುಸ್ಥಾನ, ನಾವು ಪೂರ್ವದಲ್ಲಾದರು ಶ್ರೀ ರೂಢಾಚಾರ್ಯ ಅನುಗ್ರಹಕ್ಕೆ ಪಾತ್ರರಾಗಿ ಅವರ ಆಜ್ಞಾಪ್ರಕಾರ ಕಪ್ಪಕಾಣಿಕೆಯನ್ನು ನೀಡುತ್ತಾ ನಮ್ಮ ಪಿತೃ ಪಿತಾಮಹ, ಪ್ರಪಿತಾಮಹಗಳಾದಿಯಾಗಿ ನಡಕೊಂಡು ಇದ್ದವರೆಂದು ನಮ್ಮ ಹಿರಿಯರು ಹೇಳುತ್ತಿದ್ದರೆಂದು ಹೇಳಿ, ಅದೇ ಪ್ರಕಾರ ನಾವು ನಡೆದುಕೊಳ್ಳುತ್ತೇವೆ" ಎಂದು ರಾಜಿ ಮಾಡಿಕೊಳ್ಳುತ್ತಾರೆ. ಆಗ ತ್ರಿಮತಸ್ತ ಬ್ರಾಹ್ಮಣ ಸಭಾ ಸಮೂಹದವರು ನ್ಯಾಯ-ಅನ್ಯಾಯಗಳನ್ನು ಮನಸಾಗ್ರಹಿಸಿ ಅಶೇಷರು ಹೇಳಿದ್ದುವಾಗಿ ಅಂತರವಳ್ಳಿಯ ನಿರಂಜನಯ್ಯ ಮತ್ತು ಮೂರು ಜಾವದಯ್ಯನ ಮಾತು ಸುಳ್ಳು ಆದುದರಿಂದ ಉಭಯತ್ರರು ರೂಢಾಚಾರ್ಯ ವಂಶೋದ್ಭವರಾದ ಸದ್ಯೋಜಾತ ಸ್ವಾಮಿಗಳವರಿಗೆ ಜಯಪ್ರಥಮ ನಿರ್ಣಯಪತ್ರ ಬರೆಸಿಕೊಟ್ಟರು. ಅಲ್ಲದೆ "ಆನೆಗೊಂದಿ ಸಿಂಹಾಸನಸ್ತರು ಯಾವ ದೇಶದಲ್ಲಿರುವಂಥಾ ವಿಶ್ವಕರ್ಮ ಪಾಂಚನನ ವರ್ಣಾಶ್ರಮಕ್ಕೆ ಮೂಲಪೀಠ ವಿಜಯನಗರ ರತ್ನ ಸಿಂಹಾಸನದಲ್ಲಿ ಇರುವಂಥ ಬ್ರಹ್ಮಸಭಾ ಸಮೂಹದವರು ತೀರ್ಮಾನಿಸಿ, ಅಂತಿಮವಾಗಿ ನರ್ಮದಾ ತೀರ ಮೊದಲಾದ ಚತುಸ್ಸಮಯದ ವಲಯಾಕ್ರುತಿಯಾದ ಯಾವ ದೇಶಕ್ಕೂ ಶ್ರೀ ಆರೂಢಾಚಾರ್ಯಕ್ಕೆ ಮೂಲಪೀಠಸ್ತರು ವಿಶ್ವಕರ್ಮ ಪಂಚಾನನ ವರ್ನಾಶ್ರಮಕ್ಕೆ ಗುರ್ವಾಧಿಕಾರಿಗಳೆಂದು ನಿಶ್ಚಯಿಸಿ ಆಹಾರ ವ್ಯವಹಾರ ಪಾಪ ಪ್ರಾಯಶ್ಚಿತ್ತವನ್ನು ಮಾಡುವುದಕ್ಕೆ ರೂಢಾಚಾರ್ಯ ವಂಶಸ್ಥರಾದ ಸದ್ಯೋಜಾತ ಸ್ವಾಮಿಗಳು ಬಾಧ್ಯರೇ ವಿನಾ ಅಂತರವಳ್ಳಿಯವರಿಗೆ ಲೇಶಮಾತ್ರ ಗುರುತ್ವಾಧಿಕಾರ ಇಲ್ಲ" ಎಂದು ಅಂತರವಳ್ಳಿಯವರ ಕಡೆಯಿಂದ ಅಪಜಯ ಬರೆಸಿಕೊಂಡು ೩೦೦ ಗದ್ಯಾಣ ವರಹವನ್ನು ದಂಡವಾಗಿ ಪಡೆಯುತ್ತಾರೆ.

ಇಡೀ ಶಾಸನವನ್ನು ಅವಲೋಕಿಸಿದಾಗ, ಇದನ್ನು ಸ್ಪಷ್ಟವಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ ಬರೆಯಿಸಿರುವಂತೆ ತೋರುತ್ತವೆ. ಇದರಲ್ಲಿ ಬರುವ ಫಿರ್ಯಾದಿ, ರುಜು, ಮಂಜೂರು, ಸನದು ಪತ್ರ, ದಸ್ತಾವೇಜು, ಕಬೂಲು, ಸರಕಾರ ಮುಂತಾದ ಪದಗಳು ಕ್ರಿ.ಶ. ಹತ್ತೊಂಬತ್ತನೆಯ ಶತಮಾನದಲ್ಲಿ

ಚಾಲ್ತಿಯಲ್ಲಿದ್ದುದು ಕಂಡುಬರುತ್ತದೆ. ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಈ ವ್ಯಾಜ್ಯವನ್ನು ಕೃಷ್ಣದೇವರಾಯನ ಕಾಲದ್ದೆಂದು, ಜಯಪತ್ರವನ್ನು ಕೃಷ್ಣದೇವರಾಯನಾದಿಯಾಗಿ ಕೆಲವು ಪ್ರಮುಖ ವ್ಯಕ್ತಿಗಳು ನೀಡಿದರೆಂದು ಹೇಳುವ ಮೂಲಕ ದಾಖಲೆಗೆ 'ರಾಜಮುದ್ರೆ'ಯ ಅಧಿಕೃತತೆಯನ್ನು ದಯಪಾಲಿಸುವುದು ಮುಖ್ಯ ಉದ್ದೇಶವಾಗಿದೆ.

ಈ ಮಠದ ಮೇಲೆ ಅಂತರವಳ್ಳಿಯವರು ವ್ಯಾಜ್ಯ ಹೂಡುವುದಕ್ಕೆ ಕಾರಣ, ಈ ಮಠವು ಹೊಂದಿದ್ದ ವಿಸ್ತಾರವಾದ ಭೌಗೋಳಿಕ ವ್ಯಾಪ್ತಿ ಮತ್ತು ಆ ಪ್ರದೇಶದಲ್ಲಿರುವ ಎಲ್ಲ ಮಠ ಮತ್ತು ಮಠದ ಭಕ್ತರ ಮೇಲೆ ಹೊಂದಿದ್ದ ಏಕಸ್ವಾಮ್ಯತೆ. ಈ ಮಠದ ಮೂಲಪರಂಪರೆಯವರಾದ ರೂಢಾಚಾರ್ಯರು ಹಲಸಿ, ಹಸ್ತಿನಾವತಿ, ಶಿರಶ್ರುಂಗಿ, ಕಾಶಿ, ಕಾಳಹಸ್ತಿಗಳ ಪಂಚ ಸಿಂಹಾಸನದಿಂದ ಪೂಜಿತರಾಗಿದ್ದರು. ಹೀಗೆ ಚತುಸ್ಸಮುದ್ರ ವಲಯಾಕೃತಿಯಾದ ಯಾವ ದೇಶಕ್ಕೂ ಶ್ರೀ ಆರೂಢಾಚಾರ್ಯರೇ ಮೂಲಪೀಠಸ್ಥರಾಗಿ ವಿಶ್ವಕರ್ಮ ಪಂಚಾನನ ವರ್ಣಾಶ್ರಮದ ಮೇಲೆ ಗುರುತ್ವದ ಹಕ್ಕನ್ನು ಪಡೆದಿರುವುದರಿಂದ ಆಹಾರ, ವ್ಯವಹಾರ, ಪಾಪ, ಪ್ರಾಯಶ್ಚಿತ್ತದ ಜವಾಬ್ದಾರಿ ಇವರ ಮೇಲೆ ಇರುತ್ತದೆ. ವಾಸುದೇವ ಬಡಿಗೇರರವರು "ಹಂಪಿ ಆನೆಗೊಂದಿ ಪ್ರದೇಶ ವಿಜಯನಗರ ಪೂರ್ವದಲ್ಲಿ ಪ್ರಮುಖ ಧಾರ್ಮಿಕ ಕೇಂದ್ರವಾಗಿತ್ತು. ವಿಜಯನಗರ ಸ್ಥಾಪನೆಯ ನಂತರ ರಾಜಧಾನಿ ಪಟ್ಟಣವಾಗಿ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಮುಂತಾದ ಕ್ಷೇತ್ರಗಳಲ್ಲಿ ವಿಸ್ತಾರರೂಪ ಪಡೆಯುತ್ತಾ ಬಂತು. ವಿಜಯನಗರ ರಾಜ್ಯ ಸ್ಥಾಪನೆಯ ನಂತರ ಇವು ಆರ್ಥಿಕವಾಗಿ ಸದೃಢವಾದವು. ಇವುಗಳಲ್ಲಿ ಆನೆಗೊಂದಿಯಲ್ಲಿದ್ದ ಸರಸ್ವತಿ ಮಠ ರೂಢಾಚಾರ್ಯರಾದಿಯಾಗಿ ಗುರುಪರಂಪರೆಯನ್ನು ಹೊಂದಿತ್ತು. ಇದರ ಶಾಖೆ ಕರ್ನಾಟಕದಾದ್ಯಂತ ಹರಡಿದ್ದವು. ವಿಜಯನಗರ ಸಾಮ್ರಾಜ್ಯ ಪತನಾನಂತರ, ಆಂಧ್ರಪ್ರದೇಶ ಮತ್ತು ಕರ್ನಾಟಕದಲ್ಲಿ ಈ ಪರಂಪರೆಯ ಶಾಖಾ ಮಠಗಳ ಸಂಖ್ಯೆ ಹೆಚ್ಚಾದವು. ವಿಜಯನಗರ ಕಾಲದಲ್ಲಿ ಈ ಪ್ರದೇಶದಲ್ಲಿದ್ದ ಮಠಗಳಿಗೆ, ಜನಾಂಗಕ್ಕೆ ಸಾಮಾಜಿಕವಾಗಿ ಜಾತ್ರೆ, ಉತ್ಸವಗಳಲ್ಲಿ ಕೆಲವು ಸ್ಥಾನಮಾನಗಳಿದ್ದವು. ಹಂಪಿ ಅದರ ಸುತ್ತಮುತ್ತಲಿನ ಗ್ರಾಮಗಳಲ್ಲಿ ವಾಸಮಾಡಿಕೊಂಡಿರುವ ಕುರುಬರು, ಬೇಡರು, ಬೆಸ್ತರು, ಬ್ರಾಹ್ಮಣರು ವಿರೂಪಾಕ್ಷನ ಉತ್ಸವದಲ್ಲಿ ಕೆಲವು ಹಕ್ಕು ಬಾಧ್ಯತೆಗಳನ್ನು ಪಡೆದುಕೊಂಡಿದ್ದಾರೆ." ಎಂದು ಅಭಿಪ್ರಾಯಪಟ್ಟಿದ್ದಾರೆ.

ವಿಶಾಲ ಭೂಪ್ರದೇಶದ ಮೇಲೆ ಸ್ವಾಮ್ಯತೆಯನ್ನು ಸಾಧಿಸಿದ್ದ ಈ ಮಠದ ಹಕ್ಕಿಗಾಗಿ ವ್ಯಾಜ್ಯ ನಡೆಯಿತೆಂಬುದು ಸ್ಪಷ್ಟವಾದರೂ, ಈ ಮಠದ ಮೇಲೆ ಅಂತರವಳ್ಳಿಯವರು ಹಕ್ಕು ಸಾಧಿಸುವುದಕ್ಕೆ ರೂಢಾಚಾರ್ಯ ಮಠ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ವಿಶ್ವಕರ್ಮಾದಿಯಾಗಿ ಇತರ ಎಲ್ಲ ಸಮುದಾಯಗಳ ಮೇಲೆ ಹೊಂದಿದ್ದ ನಿಯಂತ್ರಣಾಧಿಕಾರವೂ ಸಹ ಕಾರಣವೆನ್ನಬಹುದು.

ಇಂತಹ ಸಂದರ್ಭಗಳಲ್ಲಿ ಮೂಲ ಮಠದ ಬೇರೆ ಬೇರೆ ಶಾಖೆಗಳು ಕೆಲವು ಹಕ್ಕುಬಾಧ್ಯತೆಗಳನ್ನು, ವಿಶೇಷ ಸವಲತ್ತುಗಳನ್ನು ಪಡೆಯಲು ದೇಶಭಾಗಗಳನ್ನು ಹಂಚಿಕೊಳ್ಳುತ್ತಿದ್ದಂತಹ

ನಿದರ್ಶನಗಳೂ ಇವೆ. ದಳವಾಯಿ ದೇವರಾಜಯ್ಯರಸನವರ ಕಾಲದಲ್ಲಿ (ಕ್ರಿ.ಶ. ೧೭೩೪-೧೭೫೮) ಹುಟ್ಟಿದ ಜಯರೇಖೆ ನಕಲೊಂದು ಅಂತಹ ಮಾಹಿತಿಯನ್ನು ನೀಡುತ್ತದೆ. ಶೃಂಗೇರಿ ಮಠ, ಕೂಡ್ಲಿಗಿ ಹಾಗೂ ಶಿವಗಂಗಾ ಮಠಗಳ ನಡುವೆ ಆಚಾರ, ವ್ಯವಹಾರ, ಪ್ರಾಯಶ್ಚಿತ್ತ, ಶಿಷ್ಟಾಚಾರ, ಶ್ರೀಚರಣ, ಕಾಣಿಕೆ, ಗ್ರಾಮ, ತೋಟ, ತುಡಿಕೆ, ವರ್ತನೆ, ವುತ್ತಾರ ಗ್ರಾಮಗಳು, ಭಟಮಾನ್ಯಗಳು ಯಾರಿಗೆ ಸಲ್ಲಬೇಕೆಂಬ ಬಗ್ಗೆ ಸಂಶಯ ಉದ್ಭವವಾಗುತ್ತದೆ. ಆಗ ಹಿಂದೆ ಹೊನ್ನವಳ್ಳಿ ನರಸಿಂಹ ಭಾರತಿ, ವಿದ್ಯಾರಣ್ಯ ಭಾರತಿ, ಚಿಕ್ಕ ನರಸಿಂಹ ಭಾರತಿ, ಅಭಿನವ ವಿದ್ಯಾರಣ್ಯ ಭಾರತಿ, ಗಂಗಾಧರ ಭಾರತಿ ಈ ಐದು ಸ್ವಾಮೀಜಿಗಳಿಗೆ ನೀಡಿದ್ದ ದೇಶವಿಭಾಗ ಪತ್ರವನ್ನು ಆಧರಿಸಿ, ಹಿಂದೆ ಸೋಮಶೇಖರ ರೂಪಕರ ಕಾಲದಲ್ಲಿ ವೆಂಗನ್ನ ಸೋಮಯಾಜಿ ಮುಂತಾದವರು ಲಿಖಿತ ಭಕ್ತಿ ಸಾಕ್ಷಿಗಳಿಂದ ಕೂಡ್ಲಿಗಿ ನರಸಿಂಹ ಭಾರತಿ ಸ್ವಾಮಿಗಳು, ಶಿವಗಂಗಾ ಮಠದ ಸ್ವಾಮಿಗಳು ಮುಂತಾದ ಮಠಗಳಿಗೆ ಅನುಭವ ಇದ್ದ ಕಾರಣ ಶೃಂಗೇರಿ ಮಠದವರಿಗೆ ಪುಸ್ತಕಕೋಶ, ದೇವತಾರ್ಚನೆ ಮಾತ್ರ ಇಟ್ಟುಕೊಂಡು ಇರುವುದೇ ಹೊರತಾಗಿ ದೇಶಸಂಚಾರ ಆಚಾರ ವಿಚಾರಗಳಿಗೆ ಕೆಲಸವಿಲ್ಲ. ಪುಸ್ತಕ ದೇವತಾರ್ಚನೆ ಕೋಶಕ್ಕೆ ಕೂಡ್ಲಿ, ಶಿವಗಂಗೆಯವರು ಆಕ್ಷೇಪಿಸುವ ಕೆಲಸವಿಲ್ಲ ಎಂದು ತೀರ್ಮಾನಿಸಿದ್ದರಿಂದ ಆಚಾರ ವಿಚಾರಗಳು ಶಿವಗಂಗೆ ಮಠಕ್ಕೆ ಸಲ್ಲುತ್ತವೆಂದು ನಿರ್ಣಯಿಸಲಾಯಿತು.

ಅದೇ ಸಂದರ್ಭದಲ್ಲಿ ಅಮರಗಿರಿ ತಿರುಪತಿಯಲ್ಲಿ ನರಸಿಂಹ ಭಾರತೀಗಳ ಶಿಷ್ಯ ನರಹರಿ ಭಾರತೀಸ್ವಾಮಿ ಮರಣ ಹೊಂದಿದ್ದರಿಂದ ಅಲ್ಲಿ ಅವರಿಗೆ ಶಿಷ್ಯ ಪರಂಪರೆ ಇಲ್ಲದ್ದರಿಂದ ಆ ಮಠಕ್ಕೆ ಸಲ್ಲುವಂತಹ ದೇಶಕೋಶ, ಪಾಲಕಿ, ಪುಸ್ತಕ, ದೇವತಾರ್ಚನೆ, ಕೋಶ, ಮುಂತಾದವು ತಮ್ಮ ತಮ್ಮ ಮಠಗಳಿಗೆ ಸಲ್ಲಬೇಕೆಂದು ಶೃಂಗೇರಿ, ಕೂಡ್ಲಿಗಿ, ಶಿವಗಂಗಾ ಮಠಗಳ ಬ್ರಾಹ್ಮಣರು ಆಳಿದ (ಮೈಸೂರು ಅರಸರು) ಮಹಾಸ್ವಾಮಿಯವರ ಬಳಿಗೆ ಬಂದು ಅರಿಕೆ ಮಾಡಿಕೊಂಡಿದ್ದರಿಂದ, ಅರಸರು "ಅಮರಗಿರಿ ತಿರುಪತಿಯು ನಮ್ಮ ಸಂಸ್ಥಾನವನ್ನು ಹೊಂದಿದ್ದು, ಶಿವಗಂಗೆಯವರ ಮಠವು ಈ ಸಂಸ್ಥಾನವನ್ನು ಕೂಡಿದ್ದರಿಂದ ಪರ ಸಂಸ್ಥಾನದವರಿಗೆ ನಾವು ಕೊಡುವುದಿಲ್ಲ. ಇಲ್ಲಿನ ಶ್ರೇಯೋಲಾಭಕ್ಕೆ ತಗುಲಾಗಿ ಇರುವ ಶಿವಗಂಗೆ ಮಠಕ್ಕೆ ಸಲ್ಲತಕ್ಕದ್ದೆಂದು" ತೀರ್ಮಾನಿಸಲಾಗುತ್ತದೆ. ಅಲ್ಲದೆ, "ಅರಮನೆ ಶೀಮೆಯಲ್ಲಿ ನಡೆಯುವ ಗ್ರಾಮ, ಭೂಮಿ, ತೋಟ, ತುಡಿಕೆ, ಶಿಷ್ಟಾಚಾರ, ಶ್ರೀ ಚರಣ ಕಾಣಿಕೆ, ಭಟಮಾನ್ಯಗಳು ಸಹ ಶಿವಗಂಗೆ ಮಠಕ್ಕೆ ನಿರುಪಾಧಿಕವಾಗಿ ನಡೆಸಿಕೊಂಡು ಬರುವುದೆಂದು" ಹೇಳಿ ದಳವಾಯಿ ದೇವರಾಜಯ್ಯನವರು ಅರಮನೆ ಸೀಮೆ ಗಡಿಗಳ ಗುರಿಕಾರರು, ಪಾರುಪತ್ತೆಗಾರರು, ಅಟ್ಠವಣಿ ಕಂದಾಚಾರದ ಹೋಬಳಿ ಸುಂಕ, ಪೊಮ್ಮು ದೇವಸ್ಥಾನದ ಬಿಡಿ ಮಣಿಹ ಶಾನುಭೋಗರು, ಮಣೆಗಾರರಿಗೆ ನೀಡಿ ಈ ಉತ್ತರವನ್ನು ನೀವು ನೋಡಿಕೊಂಡು ಇವರಿಗೆ ಜಯರೇಖೆಯಾಗಿ ಇರುವಂತೆ ಇದನ್ನು ಪುನಃ ಹಿಂದಕ್ಕೆ ಕೊಡಬೇಕೆಂದು ಆದೇಶಿಸುತ್ತಾರೆ.

ದೊಡ್ಡಮಠಗಳು ಹೀಗೆ 'ದೇಶ ವಿಭಾಗ ಕ್ರಮ'ದ ಮೂಲಕ ಕೆಲವು ಪ್ರದೇಶಗಳನ್ನು ಹಂಚಿಕೊಂಡು ಅವುಗಳ ಮೇಲೆ ವಿಶೇಷ ಅಧಿಕಾರವನ್ನು ಸ್ಥಾಪಿಸುತ್ತಿದ್ದ ಹಲವಾರು ಉದಾಹರಣೆಗಳು ಕೈಫಿಯತ್ತು, ನಿರೂಪಗಳ ರೂಪದಲ್ಲಿ ಲಭ್ಯವಾಗುತ್ತವೆ. ಇಲ್ಲಿ ನಾನು ಪ್ರಧಾನವಾಗಿ ಜಯರೇಖೆಗಳನ್ನಾಧರಿಸಿ ಉದಾಹರಿಸುತ್ತಿರುವುದರಿಂದ ಜಯರೇಖೆಗಳೆಂದು ದಾಖಲಿಸಲ್ಪಟ್ಟ ತಾಮ್ರಶಾಸನಗಳನ್ನು ಮಾತ್ರ ಪರಿಗಣನೆಗೆ ತೆಗೆದುಕೊಂಡಿರುತ್ತೇನೆ.

ಸ್ವಾಮೀಜಿಗಳು ದೇಶ ಸಂಚಾರ ಮಾಡುವುದಕ್ಕೆ ರಹದಾರಿ ಪತ್ರಗಳನ್ನು ಸಹ ಜಯರೇಖೆ ರೂಪದಲ್ಲಿ ನೀಡಲಾಗುತ್ತಿತ್ತು. ಮಠದ ಸ್ವಾಮಿಗಳು ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಮಾತ್ರ ಸಂಚರಿಸುವುದಕ್ಕೆ ಅನುಮತಿ ನೀಡಿ ಇಂಥ ರಹದಾರಿ ಪತ್ರಗಳನ್ನು ಹೊರಡಿಸಲಾಗುತ್ತಿತ್ತು. ಇಂತಹ ರಹದಾರಿಗಳನ್ನು ಹೈದರಾಲಿ ಹಾಗೂ ಪೂರ್ಣಯ್ಯನವರ ಕಾಲದಲ್ಲಿ ಹೆಚ್ಚಾಗಿ ಹೊರಡಿಸಿರುವುದು ಕಂಡುಬರುತ್ತದೆ. ಇವುಗಳನ್ನು ಅರಮನೆ ವ್ಯಾಪ್ತಿಯಲ್ಲಿ ಬರುವ ಗುರಿಕಾರರು ಮತ್ತು ಪಾರುಪತ್ತೆಗಾರರಿಗೆ ನೀಡಿ ಅವರು ಮಠದ ಸ್ವಾಮಿಗಳು ಆ ಪ್ರದೇಶದಲ್ಲಿ ಸಂಚರಿಸುವಾಗ ಅನುಸರಿಸಬೇಕಾದ ಶಿಷ್ಟಾಚಾರ ನಿಯಮಗಳನ್ನು ನಿಯಮಿಸುತ್ತಿದ್ದವು. ಅನುಮತಿ ನೀಡಿದ ಪ್ರದೇಶದಲ್ಲಿ ಮಾತ್ರ ಸ್ವಾಮಿಗಳು ಸಂಚಾರದ ಸಮಯದಲ್ಲಿ ಶಿಷ್ಟಾಚಾರ, ಶ್ರೀಚರಣ ಕಾಣಿಕೆ ಮುಂತಾದ ಮರ್ಯಾದೆಗಳನ್ನು ಭಕ್ತರಿಂದ ಪಡೆಯಬಹುದಾಗಿತ್ತು.

ಸ್ವಾಮಿಗಳು ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನಮಾನ ಪಡೆಯುವುದರ ಜೊತೆಗೆ, ಮಠದ ಭಕ್ತರಿಂದ ಪಾದಕಾಣಿಕೆ ಮುಂತಾದ ಕಾಣಿಕೆಗಳನ್ನು ಪಡೆಯುವ ಮೂಲಕ ಆರ್ಥಿಕವಾದ ವಿಶೇಷ ಸೌಲಭ್ಯಗಳನ್ನು ಪಡೆಯುವ ಹಕ್ಕೂ ಆಗಿತ್ತು. ಇದನ್ನು ಮಠದ ಶಿಷ್ಯರೂ ಸಹ ಒಪ್ಪಿಕೊಂಡು ಕಾಣಿಕೆಗಳನ್ನು ನೀಡುತ್ತಿದ್ದರು. ಗುಂಡ್ಲುಪೇಟೆಯ ಒಂದು ಜಯರೇಖೆಯು "ವಿಜಯಪುರದಲ್ಲಿ ಇರುವ ಮಲಪಗುರು ಸ್ವಾಮಿಯವರಿಗೆ ನೀಲಗಿರಿ ನಾಲ್ಕು ನಾಡಿನ ಕೋತ ಸಿಸುಮಕ್ಕಳು, ಕಾಳಕಂಮಟ, ಕೆಂಚಕೋಡಿ, ನಮಲುಕೋಟೆ ಸೇರಿದ ಕೂಡಲೂರು ಕಂಮಟದ ಕಣಚ ಎರಡು ಸ್ಥಳದ ಶಿಷ್ಯರು ಮುಂತಾದ ಸಮಸ್ತ ಜನರು ನಂಮ ಮನೆಗಳಿಗೆ ವರುಷಕೆ ಒಂದು ಹಣ ಕಾಣಿಕೆ, ಮದುವೆ ವಸಗೆಗಳಿಗೆ ಎರಡು ಹಣ ಕಾಣಿಕೆ ಕೊಟ್ಟು, ತಪ್ಪು ನೆಪ್ಪುಗಳಿಗೆ ಒಂದು ಹಣ ಸಹ ಕೊಟ್ಟು ನಿಮಗೆ ನಂಮ ಸ್ತಳದಲಿ ಸರ್ಪರಾಯಿ ಮಾಡಿ ಮುಂದಕೆ ರವಾನೆ ಮಾಡಿ ಕಳುಹಿಸಿಕೊಡಲುಳವರು" ಎಂದು ತಾವಾಗಿಯೇ ಸ್ವ-ಇಚ್ಛೆಯಿಂದ ತಾಮ್ರದ ಜಯರೇಖೆಯನ್ನು ಬರೆದುಕೊಟ್ಟಿದ್ದನ್ನು ದಾಖಲಿಸುತ್ತದೆ.[೧೦]

ಮಠಗಳ ಸ್ವಾಮಿಗಳು ದೇಶ ಸಂಚಾರ ಬಂದಾಗ ಸಂಬಂಧಪಟ್ಟ ಪ್ರದೇಶದ ಮಠದ ಭಕ್ತರು ಕಾಣಿಕೆಗಳನ್ನು ಸಲ್ಲಿಸುವುದರ ಜೊತೆಗೆ ಅವರು ಆ ಹಾದಿಯಲ್ಲಿ ನಿರ್ಭಿಡೆಯಿಂದ ಸಂಚರಿಸುವುದಕ್ಕೆ ಭದ್ರತೆಯನ್ನು ಸಹ ನೀಡುತ್ತಿದ್ದರು. ಸ್ವಾಮಿಗಳು ತಾವು ಸಂಚಾರ ಕೈಗೊಳ್ಳುವಾಗ ತಮ್ಮೊಂದಿಗೆ ಅಂತಹ ಪತ್ರಗಳನ್ನೂ ಒಯ್ಯುತ್ತಿದ್ದರು.

ಮಠಗಳು ಭೌಗೋಳಿಕವಾಗಿ ಹೀಗೆ ಪ್ರದೇಶಗಳನ್ನು ಮತ್ತು ಕುಲಗಳನ್ನು ಹಂಚಿಕೊಳ್ಳುವ ಪ್ರವೃತ್ತಿ ಕರ್ನಾಟಕದ ಎಲ್ಲ ಸಮುದಾಯಗಳಲ್ಲಿಯೂ ಕಂಡುಬರುತ್ತದೆ. ಒಂದೇ ಸಮುದಾಯಕ್ಕೆ ವಿಭಿನ್ನ ಮಠ, ಸಂಪ್ರದಾಯಗಳು ಅಸ್ತಿತ್ವದಲ್ಲಿದ್ದಾಗ, ಇಂಥ ಸಂದರ್ಭದಲ್ಲಿ ಯಾವ ಸಂಪ್ರದಾಯಗಳನ್ನು ಅನುಸರಿಸಬೇಕು ಎಂಬ ಬಗ್ಗೆ ಹೆಚ್ಚಿನ ಗೊಂದಲಗಳು ಉದ್ಭವವಾಗಿ, ಇವು ಕಲಹಗಳಿಗೂ ಸಹ ಕಾರಣವಾಗುತ್ತವೆ. ಉದಾಹರಣೆಗೆ ಹೇಳುವುದಾದರೆ ಹಾಲುಮತ ಗುರು ಪರಂಪರೆಯಲ್ಲಿ ಮುಖ್ಯವಾಗಿ ಮೂರು ಸಂಪ್ರದಾಯಗಳಿವೆ. "ಒಂದು ರೇವಣಸಿದ್ಧ ಸಂಪ್ರದಾಯ, ಇನ್ನೊಂದು ಸಿದ್ಧರಾಮ ಸಂಪ್ರದಾಯ, ಮತ್ತೊಂದು ಅಮೋಘಸಿದ್ಧ ಸಂಪ್ರದಾಯ ಈ ಮೂರು ಸಂಪ್ರದಾಯಗಳಿಗೆ ಸಂಬಂಧಿಸಿದಂತೆ ಕರ್ನಾಟಕದಾದ್ಯಂತ ಹಾಲುಮತ ಮಠಗಳು ಇಂದಿಗೂ ಅಸ್ತಿತ್ವದಲ್ಲಿರುವುದು ಗಮನಾರ್ಹ ಸಂಗತಿ".[೧೧]

ಇಂಥ ಸಂದರ್ಭದಲ್ಲಿ ನಡೆಯುವ ಕಲಹಗಳಿಗೆ ಕಾರಣ ಕುಲಗಳ ಮೇಲಿನ ಆಧಿಪತ್ಯ. ಸಂಬಂಧಪಟ್ಟ ಮಠ ಪರಂಪರೆಯ ಕುಲಗಳ ಮನೆಗಳಿಗೆ ಒಡೆಯರು ಪ್ರತಿ ವರ್ಷ ಅಥವಾ ಜನನ, ಮರಣ, ನಾಮಕರಣ, ಮದುವೆ, ಮುಂತಾದ ಕಾರ್ಯಗಳಿಗೆ ಭೇಟಿ ನೀಡಿ ಪೂಜೆ ನೆರವೇರಿಸಿ ಪ್ರಸಾದ ಸ್ವೀಕರಿಸುತ್ತಾರೆ. ಈ ಪದ್ಧತಿ ಇಂದಿಗೂ ಅಸ್ತಿತ್ವದಲ್ಲಿದೆ. ಆಗ ಶಿಷ್ಯರು ತಾವು ಬೆಳೆದ ದವಸಧಾನ್ಯ, ಹಣ, ವಸ್ತ್ರ, ವಡವೆಗಳನ್ನು ಗುರುಗಳಾದಂಥ ಒಡೆಯರಿಗೆ ಅರ್ಪಿಸುತ್ತಾರೆ.[೧೨] ಇದು ಅವರಿಗೆ ಸಮಾಜದಲ್ಲಿ ಉತ್ತಮ ಸ್ಥಾನಮಾನ ಲಭ್ಯವಾಗುವುದರ ಜೊತೆಗೆ, ಆರ್ಥಿಕವಾಗಿಯೂ ಅವರು ಕೆಲವು ಸೌಲಭ್ಯಗಳನ್ನು ಪಡೆಯುವ ಹಕ್ಕು ಅವರಿಗೆ ಲಭಿಸುತ್ತದೆ. ಈ ಕಾರಣಕ್ಕಾಗಿಯೇ ಯಾರು ಮಠದ ಒಡೆಯರಾಗಬೇಕು ಎಂಬ ಬಗ್ಗೆ ಕಲಹಗಳೂ ಸಹ ಉದ್ಭವವಾಗುತ್ತಿದ್ದವು. ಕ್ರಿ.ಶ. ೧೫೬೮ರಲ್ಲಿ ಹಾಲುಮತಕ್ಕೆ ಮಂಕೊಡೆಯರು ಗುರುಗಳಾಗಬೇಕೇ ಅಥವಾ ಅಮೋಘಸಿದ್ಧ ಒಡೆಯರು ಗುರುಗಳಾಗಬೇಕೇ ಎಂಬ ಬಗ್ಗೆ ವ್ಯಾಜ್ಯ ಉದ್ಭವಿಸಿದಾಗ, ಅದರ ಇತ್ಯರ್ಥಕ್ಕಾಗಿ ಕಲ್ಯಾಣದ ಕುರುಬಗೌಡ ಮಾಳಗೌಡನ ಬಳಿಗೆ ಕಳುಹಿಸಲಾಯಿತು. ಆಗ ಕಲ್ಯಾಣದ ಮಾಳಗೌಡನು ಸಮಸ್ತ ಮಹಾನಾಡಪ್ರಜೆ ಕುರುಬಗೌಡರನ್ನು ಕಲ್ಯಾಣದಲ್ಲಿ ಸಭೆ ಸೇರಿಸಿ, ಕೊನೆಯದಾಗಿ "ಮಂಕನೆಂಬುವ ಗುರು ಅಲ್ಲಾ, ನಮ್ಮ ಕುರುಬಯೆಂಬು ಕುಲದೊಳು ಮಂಕನೆಂಬವ ದೇವರಲ್ಲಾ ನಮ್ಮ ಕುರುಬಯೆಂಬ ಕುಲದೊಳಗೆ ಅರಕೇರಿ ಮಕಣಾಪುರದ ಅಮ್ಮೊಗಿಶಿದ್ಧನ ವಡಿಯರು ಗುರುಮುಖ್ಯ ಪೂರ್ವತ ಹಾಲುಮತ ಕ್ಷೀರಸಾಗಕ್ಕೆ ತೀರ್ಥಪ್ರಸಾದ ಮುಖ್ಯ ನಾಯಕರು. ನಮ್ಮ ಕುಲದೊಳು ಸರ್ವಸಾಯಿ ಮತ್ತ್ಯಾಜಗಮುತ್ತ್ಯಾ ನಮ್ಮ ಹಾಲುಮತಕ್ಕೆ ಸಂಬಂಧ ಅಲ್ಲಾ. ರೇವಣಸಿದ್ಧನ ಗುಂಡಗೊಪ್ಪರಾಗಿ ಮತ್ತೂ ಜಾಂಗಟಿ ತಗೊಂಡು ಮನಿಮನಿ ಬೇಡಿಕೊಂಬವರು ಮತ್ತೆ ನಮ್ಮ ಜಾತಿಗೆ ಸಂಮಂಧ ಅಲ್ಲಾ . . . ಮಂಕನ ಪೂಜೆ ಮಾಡಿದವರು ಶಿವಾಚಾರಕ್ಕೆ ಹೊರಗು . . . .ನಮ್ಮ ಕುರುಬಯೆಂಬ ಕುಲದೊಳಗೆ ಯಲ್ಲಾ ಕುರುಬಕುಲಕ್ಕೆ ನಾವೇ ವಡಿಯರು ಎಂದು ಅಮೋಘಸಿದ್ಧನು ಪಟ್ಟದ ವಡಿಯನು, ಗುರು. ಹತ್ತಿ ಕಂಕಣ ಮತ್ತು ಉಣ್ಣೆ ಕಂಕಣ ಮತ್ತೆ ಗೌಳಿಗೇರು ಮತ್ತೆ ಕಿಲಾರಿಕುರುಬರು ಮತ್ತೆ ಕೊಂಕನೆ ಕುರುಬರು

ಮತ್ತೆ ಗೌಲೆತ್ತು ಆಡಿಸುವ ಕುರುಬರು ಮೇಲೆ ಬರೆದ ಈ ಯಲ್ಲಾ ಜಾತಿಗೆ ಅಮೋಘಸಿದ್ಧ ದೇವರ ಮನೆತನದವರ ಅಧಿಕಾರಯಿರುತ್ತದೆ"[೧೩] ಎಂದು ತೀರ್ಪು ನೀಡುತ್ತಾನೆ.

ಈ ವ್ಯಾಜ್ಯ ವಿಷಯ ಆಧುನಿಕ ಸಂದರ್ಭದಲ್ಲಿ ಉದ್ಭವವಾದರೂ, ದಾಖಲೆಗಳಲ್ಲಿ ಇದನ್ನು ೧೫೬೮ರಲ್ಲಿ ಬಗೆಹರಿಸಲಾಗಿದೆಯೆಂದು ಹೇಳಲಾಗಿದೆ. ಈ ಪ್ರಶ್ನೆ ಇಂದಿನದಲ್ಲ ತುಂಬಾ ಪ್ರಾಚೀನ ಕಾಲದಲ್ಲಿ ರಾಜರುಗಳೇ ಇವುಗಳನ್ನು ನಿರ್ಣಯಿಸಿದ್ದಾರೆಂದು ನಿರ್ಣಯಗಳಿಗೆ ರಾಜತ್ವದ ಅಧಿಕೃತ ಮುದ್ರೆಯನ್ನೊತ್ತುವುದು ಇಂಥ ಕಾಲಗಳನ್ನು ಉಲ್ಲೇಖಿಸುವುದರ ಮಹತ್ವವಾಗಿದೆ. "ಹಾಲುಮತಕ್ಕೆ ಯಾರು ಗುರುಗಳೆಂಬ ವಿಚಾರದಲ್ಲಿ ಅನೇಕ ಒಡೆಯರು ಜಗಳವಾಡಿ ಮನಸ್ತಾಪ ಮಾಡಿಕೊಂಡು ಹಾಗೂ ಇವುಗಳನ್ನು ಹಿರಿಯರ ಮಧ್ಯಸ್ತಿಕೆಯಲ್ಲಿ ಬಗೆಹರಿಸಿದ ಉದಾಹರಣೆಗಳಿವೆ. ಇದಕ್ಕೆ ನಾಡಿನಾದ್ಯಂತ ಒಡೆಯರಲ್ಲಿರುವ ಕಂಚಿನ ಪತ್ರಗಳು, ಕಾಗದ ಪತ್ರಗಳು ಸಾಕ್ಷಿಯಾಗಿವೆ".[೧೪]

ಸಮಾಜದ ಸ್ವಾಸ್ಥ್ಯತೆಗೆ ಗುರುಗಳ ಮಧ್ಯಪ್ರವೇಶ ಅನಿವಾರ್ಯವೂ ಆಗಿರುತ್ತದೆ. ಆನೇಕಲ್ಲು ಉಭಯ ಪೇಟೆಯಲ್ಲಿ ಇರುವ ಶೆಟ್ಟಿ ವರ್ತಕರು ಮುಂತಾದ ಸಮಸ್ತ ಪಣಕಟ್ಟು ಜನರಿಗೆ ದೇಶಪೇಟೆಯಲ್ಲಿ ನಂದಿಕೋಲು ಮೆರವಣಿಗೆ ನಿಮಿತ್ತವಾಗಿ, ನಗರ್ತಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆ ನಿಮಿತ್ತವಾಗಿ ಸಮಯಾಗಾರ ಮುತ್ತದಾಸರಿಯಿಂದ ಕಲಹ ಬಂದು ಎರಡು ಪೇಟೆಗಳು ಅರೂಪವಾದಾಗ ಹೊಸಪೇಟೆ ಸ್ಥಳದ ಗುರುಗಳಾದ ತಿರುಮಲ ವಿಂಜಮೂರು ಶ್ರೀನಿವಾಸಾಚಾರ್ಯರ ಪೌತ್ರರೂ, ಅನಂತಾಚಾರ್ಯರ ಪುತ್ರರೂ ಆದ ವೆಂಕಟಾಚಾರ್ಯರು ಅವರನ್ನೆಲ್ಲ ಕರೆಸಿ ಪೂರ್ವಪ್ರಕಾರ ದೇಶಪೇಟೆಯಲ್ಲಿ ನಂದಿಕೋಲು ಮೆರವಣಿಗೆಯನ್ನು, ನಗರ್ತಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆ ನಡೆಯುವಂತೆ ಮಾಡಿ ಎರಡೂ ಪೇಟೆಗಳಲ್ಲಿ ಶಾಂತಿ ನೆಲೆಸುವಂತೆ ಮಾಡಿದ್ದರಿಂದ ಅವರನ್ನು ಆನೇಕಲ್ಲು ಸ್ಥಳದಲ್ಲಿ ನಿರಂತರವಾಗಿ ವಾಸಮಾಡಿಕೊಂಡಿರುವಂತೆ ವ್ಯವಸ್ಥೆ ಮಾಡಿ, ಅವರ ಜೀವನೋಪಾಯಕ್ಕೆ ಎರಡು ಪೇಟೆ ಶೆಟ್ಟಿ ವರ್ತಕರು ಮುಂತಾದ ಸಕಲ ಪಣಸ್ತರಿಂದಾ, ಗವುಡ ಪ್ರಜೆಗಳಿಂದ ಸರ್ವಜನ ಸಮ್ಮತದಿಂದ ರಾಗಿ, ನೆಲ್ಲು, ಹಣ ಮುಂತಾದ ವಸ್ತುಗಳನ್ನು ವರ್ತನೆಯ ಪ್ರಕಾರ ಪ್ರತಿ ವರ್ಷ ನೀಡುವಂತೆ ಮಾಡಿ ಅದರ ಜೊತೆಗೆ ಭೂದಾನವನ್ನು ಸಹ ನೀಡಲಾಗುತ್ತದೆ. ಶಾಸನದ ಕೊನೆಯಲ್ಲಿ ನಮ್ಮ ಅರಮನೆ ಶ್ರೇಯಶ್ಚಿಂತನವನ್ನು, ವುಭಯಪೇಟೆ ಪ್ರಜೆಗಳ ಶ್ರೇಯಶ್ಚಿಂತನೆಯನ್ನು ನಿರಂತರವಾಗಿ ಮಾಡಿಕೊಂಡು ಯೀ ಭೂಮಿಗಳನ್ನು ಅಚಂದ್ರಾರ್ಕಸ್ಥಾಯಿಯಾಗಿ ಅನುಭವಿಸಿಕೊಂಡು ಬರಬೇಕೆಂದು ಕೋರಲಾಗಿದೆ.[೧೫]

ಹೊಸಕೋಟೆಯ ಪರಿಸರದಲ್ಲಿದ್ದ ಕುಲಗಳಿಗೆ ಗುರುಗಳಾಗಿದ್ದ ಇವರನ್ನು ಆನೇಕಲ್ಲಿಗೆ ಕರೆಸಿಕೊಂಡು ಅಲ್ಲಿ ಶಾಶ್ವತವಾಗಿ ನೆಲೆಗೊಳ್ಳುವಂತೆ ಮಾಡಿ ಅವರಿಗೆ ಜೀವನೋಪಾಯವನ್ನು ಕಲ್ಪಿಸಿಕೊಟ್ಟಿರುವುದನ್ನು ಕಾಣಬಹುದು. ಸ್ವಸ್ಥ್ಯ ಸಮಾಜಕ್ಕೆ ಧಾರ್ಮಿಕ ಪ್ರಭುತ್ವದ ಪ್ರವೇಶ ಅನಿವಾರ್ಯವಿರುವಂತೆಯೇ, ಪೌರೋಹಿತ್ಯವನ್ನು ವೃತ್ತಿಯನ್ನಾಗಿ ಹೊಂದಿರುವ ಸಮುದಾಯಗಳೂ

ಸಹ ಬದುಕಿಗಾಗಿ ಬೇರೆ ಬೇರೆ ಕಡೆ ವಲಸೆ ಬಂದು ಅಂಥ ಸ್ಥಳಗಳಲ್ಲಿ ಬದುಕನ್ನು ಕಟ್ಟಿಕೊಳ್ಳುವುದೂ ಸಹ ಸಮಾಜದ ಅರ್ಥವ್ಯವಸ್ಥೆಯ ಒಂದು ಭಾಗವಾಗಿದೆ.

ಕುಲಗಳಿಗೆ ಒಡೆಯರಾಗಿ, ಗುರುಗಳಾಗಿ ನಡೆದುಕೊಳ್ಳುವುದರ ಜೊತೆಗೆ ದೇವಾಲಯಗಳಿಗೆ ಪುರೋಹಿತರಾಗುವುದಕ್ಕೂ ಪೈಪೋಟಿ ನಡೆಯುತ್ತಿತ್ತು. ಇದೇ ಕಾರಣಕ್ಕಾಗಿ ದೇವಾಲಯದ ಪೌರೋಹಿತ್ಯದ ಹಕ್ಕು ತಮಗೆ ರಾಜರಿಂದಲೋ ಅಥವಾ ಊರ ಗೌಡರಿಂದಲೋ ಸರ್ವಮಾನ್ಯತೆಯಿಂದ ದೊರೆಯಿತೆಂದು ಹೇಳಿ ಪೌರೋಹಿತ್ಯದ ಹಕ್ಕನ್ನು ಕ್ಲೇಮು ಮಾಡಿಕೊಳ್ಳುತ್ತಿದ್ದರು. ಮುತ್ತತ್ತಿಯ ಚಪ್ಪೋಡು ಶ್ರೀರಂಗರಾಯರ ಅರಮನೆಯಲ್ಲಿ ಸ್ವಾಮಿಯು ವ್ಯಾಘ್ರ ರೂಪದಲ್ಲಿ ಮಲಗಿದ್ದು ನಂತರ ಮೈದುಂಬಿ ಬಂದು ತನ್ನ ನಿಜನಾಮಧೇಯ ಮುತ್ತತ್ತಿರಾಯ ಎಂದು ಹೇಳಿಕೊಂಡು ತನಗೆ ಮುಳ್ಳುಪಲ್ಲಕ್ಕಿ ಆಗಬೇಕು ಎಂದು ಕೇಳಲು, ಆಗ ಶ್ರೀರಂಗರಾಯ ತಾನು ಏರಿ ಬರುತ್ತಿದ್ದಂತಹ ಪಲ್ಲಕ್ಕಿಯನ್ನು, ಮುಳ್ಳುಪಲ್ಲಕ್ಕಿಯನ್ನು ಮಾಡಿಸಿಕೊಟ್ಟು ಸ್ವಾಮಿಯನ್ನು ಮುತ್ತತ್ತಿಗೆ ಕಳುಹಿಸಿಕೊಟ್ಟನು. ನಂತರ ಹಲಗೂರು ನಾರಾಯಣಯ್ಯಗೆ ಹೇಳಿ ಸ್ವಾಮಿ ದೀಪಾರಾಧನೆಗೆ ಬ್ಯಾಡರ ಹಳ್ಳಿಯ ಹೊಲವನ್ನು ಕೊಡುಗೆ ನೀಡಿದನು. ಕಾಳಮುತ್ತದಾಸ ಎಂಬುವವನು ಕಕ್ಕೆಯ ಸೊಪ್ಪಿನಿಂದ ಗುಡಿಸಲು ಕಟ್ಟಿಕೊಂಡು ಸ್ವಾಮಿಯನ್ನು ಕಾದುಕೊಂಡಿದ್ದನು. ಹಲಗೂರಿನ ಕಾಳೇಗೌಡ ಮತ್ತು ಕೆಂಚೇಗೌಡ ಎಂಬ ಅಣ್ಣತಮ್ಮಂದಿರು ದನ ಕಾಯುತ್ತಿರುವಾಗ ಹುಚ್ಚುಗಿಕ್ಕಿ ಹಿಡಿ ತಂದು ಕಾಳಮುತ್ತ ದಾಸನ ಕೈಗೆ ಕೊಟ್ಟರು. ಆಗ ಸ್ವಾಮಿಯ ಸಕಲಾಚಾರರೆಲ್ಲರೂ ಮುತ್ತತ್ತಿಯಲ್ಲಿ ಸೇರಿ ಕೆಂಚೇಗೌಡ, ಕಾಳೇಗೌಡ ಎಂಬ ಹೆಸರಿನ 'ಗೌಡ' ಎಂಬ ಉತ್ತರ ಪದ ತೆಗೆದುಹಾಕಿ ಕಾಳಮುತ್ತ, ಕೆಂಚಮುತ್ತ ಎಂಬ ಹೆಸರನ್ನು ಇಟ್ಟು, ಅವರನ್ನು ಕಾಳಮುತ್ತದಾಸನ ಹವಾಲು ಮಾಡಿ ದೇವರ ಪೂಜೆಗೆ ಎಡೆ ಮಾಡಿ ಇಟ್ಟುಕೊಂಡು ಇರಿ ಎಂದು ನಾಲ್ಕು ಮಂದಿಯ ಸಹಿಯನ್ನು ಹಾಕಿಸಿ ಚಪ್ಪೋಡನ್ನು ಬರೆಯಿಸಿ ಕಾಳಮುತ್ತದಾಸನ ಕೈಗೆ ಕೊಟ್ಟರು.[೧೬]

ಕಾಳಮುತ್ತದಾಸ ಮೊದಲಿನಿಂದಲೂ, ದೇವರನ್ನು ಕಕ್ಕೆಸೊಪ್ಪಿನ ಗುಡಿಸಲಿನಲ್ಲಿ ಕಾಯ್ದುಕೊಂಡಿದ್ದರೂ, ಆ ದೇವಾಲಯಕ್ಕೆ ನೀಡಿದ 'ಹೊಲದ' ಕಾರಣದಿಂದ ಕಾಳಮುತ್ತ, ಕೆಂಚಮುತ್ತರೂ, ಪೌರೋಹಿತ್ಯದ ಮೇಲೆ ಹಕ್ಕುಸ್ವಾಮ್ಯ ಸಾಧಿಸಲು ಪ್ರಯತ್ನಿಸಿದಂತೆ ತೋರುತ್ತದೆ. ಪೌರೋಹಿತ್ಯ ಆರ್ಥಿಕವಾಗಿ ಅನುಕೂಲಕರ ವೃತ್ತಿಯಾಗಿರುವುದರಿಂದ ಅದನ್ನು ಗಳಿಸಿಕೊಳ್ಳಲು ಸುಳ್ಳು ದಾಖಲೆಗಳನ್ನು ಸೃಷ್ಟಿಸಲಾಗಿತ್ತು. ಇಮ್ಮಡಿ ಕೆಂಪೇಗೌಡರ ಬೆಂಗಳೂರು ಪೌರೋಹಿತ್ಯ ದಾನಶಾಸನ ಪೌರೋಹಿತ್ಯದ ಹಕ್ಕಿಗಾಗಿ ಸೃಷ್ಟಿಯಾದ ಕೃತಕ ಶಾಸನವಾಗಿದೆ.[೧೭] ಇದರಲ್ಲಿ ಕಾಲ ಕ್ರಿ.ಶ. ೧೫೯೭ ಎಂದು ಉಲ್ಲೇಖಿಸಿದ್ದರೂ, ವಾಸ್ತವವಾಗಿ ಇದೊಂದು ಆ ನಂತರದ ಕಾಲದಲ್ಲಿ ರಚಿತವಾದ ಸನ್ನದಾಗಿದ್ದು, ಬಹುಶಃ ಹತ್ತೊಂಬತ್ತನೆಯ ಶತಮಾನದ್ದಿರಬಹುದೆಂದು ಊಹಿಸಬಹುದು. ಇಮ್ಮಡಿ ಕೆಂಪೇಗೌಡ ಬೆಂಗಳೂರಿಗೆ ಶಂಕುಸ್ಥಾಪನೆ ಮಾಡಿದನೆಂದು ಹೇಳಲಾಗುವ ಈ ಶಾಸನವು ಇಮ್ಮಡಿ ಕೆಂಪೇಗೌಡ ಅನಂತಭಟ್ಟ ಎಂಬುವವನಿಗೆ ಬೆಂಗಳೂರಿನ ನಾಲ್ಕು ದಿಕ್ಕುಗಳಲ್ಲಿ ಹೊಸದಾಗಿ ಕಟ್ಟಿಸಲಾದ ನಾಲ್ಕು

ಶಿಖರಗಳ ಎಲ್ಲೆಕಟ್ಟಿನೊಳಗಿರುವ ಬೆಂಗಳೂರು ಕಸಬೆ ಒಳಗಿರುವ ದೇಶದವರು ಮುಂತಾದ ಹದಿನೆಂಟು ಪಣಸ್ತರ ಪೌರೋಹಿತ್ಯದ ಹಕ್ಕನ್ನು ಸಲ್ಲತಕ್ಕದ್ದೆಂದು ಶಾಸನ ಬರೆಸಿಕೊಡುತ್ತಾನೆಂದು ಉಲ್ಲೇಖಿಸುತ್ತದೆ. ದೇವಾಲಯಗಳ ಪೂಜೆಗಳ ಹೊರತಾಗಿ, ಒಂದು ನಿರ್ದಿಷ್ಟ ಪ್ರದೇಶದ ಭೌಗೋಳಿಕ ವ್ಯಾಪ್ತಿಯಲ್ಲಿರುವ ಇಡೀ ಪ್ರದೇಶಗಳ ಮೇಲೆ ಪೌರೋಹಿತ್ಯದ ಹಕ್ಕು ಸ್ವಾಮ್ಯ ಸಾಧಿಸಿಕೊಳ್ಳಲಾಗಿದೆ.

ದೇವರುಗಳ ಪೂಜಾರಿಕೆ ಪಟ್ಟದ ಹಕ್ಕಿಗೆ ಸಂಬಂಧಪಟ್ಟಂತೆ ಹೆಚ್ಚಿನ ಕಲಹಗಳು ಏರ್ಪಡುತ್ತಿದ್ದವು. ಅಂತಹ ಸಂದರ್ಭದಲ್ಲಿ ತಾವು ಮೊದಲಿನಿಂದಲೂ ಪೂಜಾರಿಕೆ ಹಕ್ಕು ಪಡೆದಿದ್ದೆವೆಂಬುದನ್ನು ಸ್ಥಿರಪಡಿಸಲು ಬರೆಸಿದಂತಹ ಜಯರೇಖೆಗಳು ಅಥವಾ ನಿರೂಪಗಳಲ್ಲಿನ ವಿಷಯವು ಹೆಚ್ಚು ಅಸಂಗತತೆಗಳಿಂದ, ಅತಿಮಾನುಷವಾದ ಮತ್ತು ಕ್ರಿಯೆ ವಿವರಣೆಗಳಿಂದ ಕೂಡಿವೆ. ಮಧ್ಯಕಾಲೀನ ಕರ್ನಾಟಕದಲ್ಲಿ ವೈದಿಕ ದೇವಾಲಯಗಳ ಪೂಜಾರಿಕೆ ಹಕ್ಕಿಗಿಂತ ಕುಲದೇವರ ಪೂಜಾರಿಕೆ ಹಕ್ಕಿಗಾಗಿ ಹೆಚ್ಚು ವಾಗ್ವಾದಗಳು ನಡೆಯುತ್ತಿದ್ದವು. ಎಷ್ಟೋ ಸಂದರ್ಭಗಳಲ್ಲಿ ದೇವರುಗಳಿಗಾಗಿ ಸಮುದಾಯಗಳ ನಡುವೆ ಭೌತಿಕ ಆಕ್ರಮಣಗಳೂ ಸಹ ನಡೆದು ರಕ್ತಪಾತಗಳಲ್ಲಿ ಮತ್ತು ಅಂಥ ಕುಲಗಳ ನಾಶದಲ್ಲಿ ಪರಿಸಮಾಪ್ತಿಯಾಗುತ್ತಿತ್ತು.

ಗೊಲ್ಲ ಜನಾಂಗದವರ ಒಂದು ದಾಖಲೆಯು[೧೮] ನಾಯಕನಹಟ್ಟಿಯಲ್ಲಿ ದೇವರಿಗಾಗಿ ನಡೆದ ಗಲಭೆ-ಹತ್ಯೆಗಳಿಂದ ಹಿರೇದೇವರ ಪೂಜಾರಿ ವಂಶಸ್ಥರು ಭೀತರಾಗಿ ದೇವರಪಟ್ಟ ಪಡೆಯಲು ಹಿಂಜರಿದಾಗ, ಪೂಜೆ ನಿಂತುಹೋಗಿದ್ದ ದೇವರಿಗೆ ಒಂದು ನೆಲೆ ಕಲ್ಪಿಸಲು ಕಾಟಪ್ಪ ಎಂಬುವವನನ್ನು ದತ್ತು ತೆಗೆದುಕೊಂಡು ಪಟ್ಟ ಕಟ್ಟಲು ಪ್ರಯತ್ನಿಸಲಾಗುತ್ತದೆ. ಆಗ ಉದ್ಭವಿಸಿರಬಹುದಾದ ಎಲ್ಲ ಅನುಮಾನ, ಸಂಶಯ, ಪ್ರಶ್ನೆಗಳಿಗೆ ೧೬೫ ಸಾಲುಗಳ ಈ ಬೃಹತ್ ಶಾಸನದ ಮೂಲಕ ಉತ್ತರ ನೀಡಿದಂತಿದೆ. ಅಲ್ಲದೆ ಬಹುಶಃ ಹಿರೇದೇವರ ಮನೆ ಕಾಟಯ್ಯನಿಗೆ ಮೊದಲಿನಿಂದ ಪೂಜಾರಿಕೆ ಇರುವ ಬಗ್ಗೆ ವಿವಾದ ತಲೆದೋರಿದ್ದಂತೆ ತೋರುತ್ತದೆ. ಸ್ವತಃ ಚಿತ್ರದುರ್ಗದ ದೊರೆಯೇ ಮಧ್ಯಪ್ರವೇಶಿಸಿ ಸ್ಥಳೀಯರ ಸಮ್ಮತಿ ಮೇರೆಗೆ ಪೂಜಾರಿಕೆ ಹಕ್ಕನ್ನು ನೀಡಿದಂತೆ ತೋರುತ್ತದೆ. ಪೂಜಾರಿಕೆ ಹಕ್ಕು, ದೇವರ ಪಟ್ಟದ ಹಕ್ಕುಗಳು ತಮಗೆ ರಾಜನಿಂದಲೇ ಪ್ರದತ್ತವಾಗಿವೆಯೆಂಬುದನ್ನು ಮತ್ತು ಅದನ್ನು ಸುಖಾಸುಮ್ಮನೆ ಪಡೆಯಲಿಲ್ಲ, ತನ್ನ ಅಸಾಧಾರಣ, ಅತಿಮಾನುಷ ಶಕ್ತಿ ಪ್ರದರ್ಶನದ ಮೂಲಕ ರಾಜನನ್ನು ಮೆಚ್ಚಿಸಿ ಪಾರಿತೋಷಕವಾಗಿ ಪಡೆಯಲಾಯಿತೆಂಬುದನ್ನು ಸಾಬೀತುಪಡಿಸಲು ಇಂತಹ ಅತಿಮಾನುಷ ಹಾಗೂ ಅಸಂಗತ ಘಟನೆಗಳನ್ನು ತರಲಾಗಿದೆ.

ಗೊಲ್ಲತಿಲಕ, ಗೋಕುಲಕ್ಕೆ ಸಂಬಂಧಪಟ್ಟ ಹಿರೇದೇವರ ಪೂಜಾರಿ ಕಾಟಯ್ಯನ ವಂಶದವರು ಇಪ್ಪತ್ತೊಂದು ತಲೆಮಾರುಗಳಲ್ಲಿ ಕ್ಷಾಮ, ಸ್ಥಳೀಯ ಪಶುಪಾಲನಾ ಸಮುದಾಯಗಳೊಂದಿಗಿನ ಸಂಘರ್ಷ, ಪ್ರಭುತ್ವದ ಪ್ರೇರಣೆ, ಅನನುಕೂಲ ಪರಿಸ್ಥಿತಿ, ಮೂಲ ನೆಲದ ಸೆಳೆತ ಮುಂತಾದ ಕಾರಣಗಳಿಗಾಗಿ ಆರು ಸಾರಿ ವಲಸೆಯನ್ನು ಕೈಗೊಳ್ಳುತ್ತಾರೆ. ಆ ಆರು ವಲಸೆಗಳಲ್ಲೂ, ವಲಸೆ

ಪ್ರಕ್ರಿಯೆಯಲ್ಲಿ ತಮ್ಮ ದೈವವನ್ನು ಒಳಗೊಳ್ಳುವಂತೆ ಮಾಡುತ್ತಾರೆ. ಎಂದರೆ ಇದು ಕೇವಲ ಸಮುದಾಯದ ವಲಸೆ ಮಾತ್ರವಾಗಿರದೆ, ಕುಲದೈವದ ವಲಸೆಯೂ ಆಗುತ್ತದೆ.

ಮೊದಲ ಸಾರಿ ಕ್ಷಾಮದ ಕಾರಣದಿಂದ ಗೊಂದಿಹಳ್ಳಿಯಲ್ಲಿ ದೇವರನ್ನು ಮರದ ಪೊಟರೆಯಲ್ಲಿಟ್ಟು ವಲಸೆ ಹೋಗುತ್ತಾರೆ. ನಂತರ ಹನ್ನೆರಡು ವರ್ಷಗಳ ತರುವಾಯ ಮರಳಿ ಬಂದು, ಅಲ್ಲಿ ಅದನ್ನು ಕಾಪಾಡಿಕೊಂಡು ಬಂದಿದ್ದ ಬಾಲಕ ಗಾಳಿಗೌಡನಿಗೆ ಗೌಡಿಕೆಯ ಹಕ್ಕನ್ನು ನೀಡಿ ಗೌರವಿಸುತ್ತಾರೆ. ಎರಡನೆಯ ಸಾರಿ ನಾಯಕನಹಟ್ಟಿಗೆ ಹೋಗುತ್ತಾರೆ. ನಾಯಕನಹಟ್ಟಿಯಲ್ಲಿ ಮ್ಯಾಸನಾಯ್ಕರಿಗೂ, ಅವಲ್‌ದಾರ ವಂಶದ ಚನ್ನಮಲ್ಲಪ್ಪನಿಗೂ ವ್ಯಾಜ್ಯವಾಗಿ ಗೊಂದಿಹಳ್ಳಿಗೆ ಹೋಗುತ್ತಾರೆ. ಗೊಂದಿಹಳ್ಳಿ ಕಾಟಂದೇವರ ವಿಚಾರದಲ್ಲಿ ನಾಯಕನಹಟ್ಟಿಯಲ್ಲಿ ಮ್ಯಾಸನಾಯ್ಕರಿಗೂ ಚನ್ನಮಲ್ಲಪ್ಪನಿಗೂ ಏಕೆ ಘರ್ಷಣೆಗಳಾದವು? ಈ ಘರ್ಷಣೆಯ ವ್ಯಾಜ್ಯ ಕಾರಣ ದೇವರೇ? ಅಥವಾ ಮತ್ತೇನಾದರೂ ಅಂಶಗಳು ಕಾರ್ಯಪ್ರವೃತ್ತವಾಗಿವೆಯೇ? ಎಂದು ಸೂಕ್ಷ್ಮವಾಗಿ ಗಮನಿಸಿದಾಗ 'ಹುಲ್ಲುಗಾವಲುಗಳೆ' ಸಂಘರ್ಷದ ಬೀಜಗಳೆಂಬುದು ವೇದ್ಯವಾಗುತ್ತದೆ. ಮ್ಯಾಸನಾಯಕರು ಚಿತ್ರದುರ್ಗ, ಬಳ್ಳಾರಿ, ಹಂಪಿ ಪರಿಸರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನೆಲೆಗೊಂಡಿದ್ದಾರೆ. ಇವರ ವೃತ್ತಿ ಬೇಟೆಯಾದರೂ, ಪಶುಪಾಲನೆಯಲ್ಲಿ ತಮ್ಮನ್ನು ಹೆಚ್ಚಾಗಿ ತೊಡಗಿಸಿಕೊಂಡಿದ್ದಾರೆ. ನಾಯಕನಹಟ್ಟಿ ಬಕ್ಕೈರುವಿನ ಪ್ರಕಾರ ಮ್ಯಾಸನಾಯ್ಕರ ಮೂಲಪುರುಷ ಕಾಟೇಮಲ್ಲನಾಯಕ ಆಂಧ್ರದ ಕರಿಮಲೆ, ಕೊಮ್ಮುಮಲೆಗಳಿಂದ ದಕ್ಷಿಣಾಭಿಮುಖವಾಗಿ ಬಂದು ಚಿತ್ರದುರ್ಗದ ನಾಯಕನ ಹಟ್ಟಿ ಸಮೀಪ ವಾಸ್ತವ್ಯ ಹೂಡಿದಾಗ, ವಿಜಯನಗರದ ಅರಸರು ೧೨೦೦ ಜನರಿಗೆ ಆಕಳುಗಳನ್ನು ಅರಣ್ಯದಲ್ಲಿ ಮೇಯಿಸಿಕೊಳ್ಳಲು ಅನುಮತಿ ನೀಡುತ್ತಾರೆ[೯]. ಇದರಿಂದ ಇವರ ವೃತ್ತಿಯೂ ಪಶುಪಾಲನೆಯಾಗಿತ್ತೆಂದು ಸ್ಪಷ್ಟವಾಗುತ್ತವೆ. ಹಾಗಾಗಿ ಗೊಲ್ಲ ಹಾಗೂ ಮ್ಯಾಸಬ್ಯಾಡ್ಕಿ ಸಮುದಾಯಗಳೆರಡೂ ಪಶುಪಾಲನಾ ವೃತ್ತಿಯನ್ನು ಅವಲಂಬಿಸಿದ್ದರಿಂದ ಹುಲ್ಲುಗಾವಲುಗಳ ಸ್ವಾಧೀನಾನುಭೋಗಕ್ಕಾಗಿ ವೃತ್ತಿ ಸಹಜವಾಗಿ ಘರ್ಷಣೆ ನಡೆದಂತೆ ತೋರುತ್ತದೆ. ಹಾಗಾಗಿ ಅಲ್ಲಿಂದ ಚಿತ್ರದುರ್ಗದ ದೊರೆ ಮದಕೇರಿನಾಯಕ ಸುತ್ತಮುತ್ತಲ ಎಲ್ಲ ದೇವರುಗಳನ್ನು ಪೂಜಾರಿ ಸಮೇತ ಚಿತ್ರದುರ್ಗಕ್ಕೆ ಕರೆಸಿಕೊಂಡಾಗ ಇಲ್ಲಿಂದ ಚಿತ್ರದುರ್ಗಕ್ಕೆ ದೇವರ ಸಮೇತ ವಲಸೆ ಹೋಗುತ್ತಾರೆ.

ಚಿತ್ರದುರ್ಗದ ನಗರ ಜೀವನ ಈ ಸಮುದಾಯಕ್ಕೆ ಒಗ್ಗಲಿಲ್ಲವೆಂದು ತೋರುತ್ತದೆ. ಅಲ್ಲದೆ ಕಾಲಾನಂತರ ದೊರೆಗಳ ಮಾನ್ಯತೆ ಹಾಗೂ ವಿಶ್ವಾಸ ಕಳೆದುಕೊಂಡಂತೆ ಕಾಣುತ್ತದೆ. ಒಂದು ಸಮುದಾಯ ನೆಲೆ ಕಂಡುಕೊಳ್ಳಬೇಕಾದರೆ, ಸುರಕ್ಷಿತ ವಾತಾವರಣ, ಇತರ ದೈವಗಳ ಆರಾಧಕರ ಸಹಕಾರ, ಆಡಳಿತ ವರ್ಗಗಳ ಸಹಮತ ಅತ್ಯಗತ್ಯ. ಇಲ್ಲವಾದಲ್ಲಿ ಸಣ್ಣಪುಟ್ಟ ಮನಸ್ತಾಪಗಳೂ ಸಮುದಾಯಗಳನ್ನು ಅಸ್ಥಿರಗೊಳಿಸುತ್ತವೆ. ಬಹುಶಃ ಪಟ್ಟಣದಲ್ಲಿ ಅವರಿಗೆ ಅಂಥ ಅವಕಾಶಗಳಿಲ್ಲದೆ ಅಸ್ಥಿರಭಾವ ತಲೆದೋರಿದಂತೆ ತೋರುತ್ತದೆ. ಅಣ್ಣತಮ್ಮಗಳೆಲ್ಲ ಸೇರಿ ತಮ್ಮ 'ಹವಿಕವಿ' ಪಟ್ಟಣದಲ್ಲಿ

ನಡೆಯುವುದಿಲ್ಲವೆಂದು ಅಯ್ಯನಹಳ್ಳಿ ಗ್ರಾಮಕ್ಕೆ ವಲಸೆ ಹೋಗಿ ಅಲ್ಲಿ ಒಂದು ವಸತಿನೆಲೆಯನ್ನು ಸ್ಥಾಪಿಸಿ ಅದಕ್ಕೆ 'ದೇವರಹಟ್ಟಿ' ಎಂದು ಹೆಸರಿಟ್ಟು ಅಲ್ಲೇ ನೆಲೆ ನಿಲ್ಲುತ್ತಾರೆ.

ಒಂದು ವಸತಿ ನೆಲೆ ಕಟ್ಟಿಕೊಂಡು ನೆಲೆಗೊಂಡಾಕ್ಷಣ ವಲಸೆ ಪ್ರಕ್ರಿಯೆ ಮುಕ್ತಾಯಗೊಳ್ಳಲಿಲ್ಲ. ಮೂಲ ನೆಲದ ಸೆಳೆತ ಅವರನ್ನು ಬಿಡಲಿಲ್ಲ. ಹಿಂದೆ ಜಗಳವಾಡಿಕೊಂಡು ಬಂದರೂ, ಅಲ್ಲಿಂದ ಮತ್ತೆ ಹೋಗಬೇಕೆಂದು ಹಠ ಮಾಡುತ್ತಾರೆ. ದೇವರ ಪೂಜಾರಿ ದೊಡ್ಡಗೊಂಡಪ್ಪ ಬೇಡವೆಂದು ಹೇಳಿದರೂ ಮತ್ತೆ ಅಲ್ಲಿಗೇ ಹೋಗುತ್ತಾರೆ. ಅಲ್ಲಿ ಶತೃಗಳು ಜರಿಮಲೆ ಪಾಳೆಯಗಾರನ ನೆರವಿನೊಂದಿಗೆ ದೇವರನ್ನು ಮುತ್ತಿ ಸೂರೆ ಮಾಡಲು ಬಂದಾಗ, ಪೂಜಾರಿ ಅದನ್ನು ಹಾಗೂ ಪೆಟ್ಟಿಗೆಯಲ್ಲಿದ್ದ ಲಿಂಗವನ್ನು ಉಡುದಾರದಲ್ಲಿ ಕಟ್ಟಿಕೊಂಡು ದುರ್ಗದ ಕಡೆ ಓಡಿ ಬಂದು, ಕೋಟೆಯೊಳಗೆ ಅವುಗಳನ್ನು ಬಿಸಾಡುತ್ತಾನೆ. ಅವನನ್ನು ಮತ್ತು ಅವನ ಜೊತೆಗಿದ್ದವರನ್ನೆಲ್ಲ ಸೂರೆಕಾರರು ಕಡಿದುಹಾಕುತ್ತಾರೆ.

ದುರ್ಗದೊಳಕ್ಕೆ ಎಸೆಯಲ್ಪಟ್ಟ ಲಿಂಗ, ಧೂಪಾರತಿಗಳು ಹವಲ್ದಾರನ ವಂಶಸ್ಥನೊಬ್ಬನಿಗೆ ಸಿಕ್ಕಿ ಅವನು ಅದು ತಮ್ಮದೇ ದೇವರೆಂದು ಗುರುತಿಸಿ ಎತ್ತಿಟ್ಟುಕೊಳ್ಳುತ್ತಾನೆ. ನಾಯಕನಹಟ್ಟಿಯ ಘಟನೆಯಿಂದ ಹಿರೇದೇವರ ಪೂಜಾರಿ ವಂಶಸ್ಥರು ಹೆದರಿಕೊಂಡು ದೇವರಪಟ್ಟ ಪಡೆಯಲು ಯಾರೂ ಮುಂದಾಗುವುದಿಲ್ಲ. ೩೦ ವರ್ಷಗಳ ತರುವಾಯ ಪೂಜಾರಿ ಅಣ್ಣತಮ್ಮಂದಿರು ಪಟ್ಟ ಮಾಡಬೇಕೆಂದು ಜೋಗಿಹಟ್ಟಿಗೆ ಹೋಗಿ ಕಾಟಪ್ಪ ಎಂಬುವವನನ್ನು ದುರ್ಗಕ್ಕೆ ಕರೆದುಕೊಂಡು ಬಂದು ಅವನನ್ನು ಹಿರೇದೇವರ ಪೂಜಾರಿಯ ಮನೆಯ ದತ್ತುಮಗನಾಗಿ ಸ್ವೀಕರಿಸಿ ಪಟ್ಟಕಟ್ಟುತ್ತಾರೆ. ಈ ಸಂದರ್ಭದಲ್ಲಿ ಜೋಗಿಹಟ್ಟಿ ಕಾಟಪ್ಪನಿಗೆ ಪಟ್ಟ ಕಟ್ಟಬೇಕೆ ಅಥವಾ ಬೇಡವೇ ಎಂಬ ಬಗ್ಗೆ ವಿವಾದ ಉದ್ಭವಿಸಿದಾಗ, ಅವಲ್ದಾರ ಕರಿಯಪ್ಪನನ್ನು ಕರೆತಂದು ಪಂಚಾಯತಿ ಮಾಡಿಸುತ್ತಾರೆ. ಅವಲ್ದಾರ ಕರಿಯಪ್ಪ "ಸಧ್ಯಕ್ಕೆ ಕಾಟಪ್ಪನಿಗೆ ಪಟ್ಟ ಮಾಡಿರುತ್ತೆ. ಮುಂದೆ ಹಿರೇದೇವರ ಪೂಜಾರಿ ವಂಶಸ್ಥರು ಯಾರಾದರೂ ಬಂದರೆ, ಅವರಿಗೆ ಪಟ್ಟವಾಗಬೇಕೇ ಹೊರತು ಕಾಟಪ್ಪನಿಗಾಗಲೀ, ಅವನ ವಂಶಸ್ಥರಿಗಾಗಲೀ ಸಲ್ಲುವುದಿಲ್ಲವೆಂದು, ತೀರ್ಪು ನೀಡಿ, ದೈವ ಹಾಗೂ ಅಧಿಕಾರವನ್ನು ಅದೇ ಜನಾಂಗಕ್ಕೆ ನೀಡುತ್ತಾನೆ.

ದೇವರು, ಧರ್ಮ, ಧಾರ್ಮಿಕ ನಂಬಿಕೆ ಹಾಗೂ ಆಚರಣೆಗಳ ರೂಪದಲ್ಲಿ ನಡೆಯುವ ಕ್ರಿಯೆಗಳನ್ನು ಮೇಲ್ನೋಟಕ್ಕೆ ಆಧ್ಯಾತ್ಮಿಕ ವಲಯದೊಳಗೆ ಪರಿಭಾವಿಸಿದರೂ, ಜಯರೇಖೆಗಳ ಆಂತರ್ಯವನ್ನು ಪರ್ಯಾಲೋಚಿಸಿದಾಗ ಅವು ಪ್ರಧಾನವಾಗಿ ಅರ್ಥಮುಖಿಯಾಗಿರುವುದು ಗೋಚರಿಸುತ್ತದೆ. ದೇವಾಲಯಗಳ ಮೇಲೆ, ಮಠಗಳ ಮೇಲೆ, ಪೌರೋಹಿತ್ಯ ಕ್ರಿಯೆಯ ಮೇಲೆ ಹಕ್ಕು ಸಾಧಿಸುವ ಕ್ರಿಯೆ–ಇವು ಅವರು ಆರ್ಥಿಕವಾದ ಅನುಕೂಲ ಹಾಗೂ ವಿಶೇಷಾಧಿಕಾರಗಳನ್ನು ಪಡೆಯುವುದೇ ಆಗಿದೆ.

ರಾಜರುಗಳ ಸಾಮ್ರಾಜ್ಯ ದಾಹಕ್ಕೆ, ಯುದ್ಧೋದ್ಯಮಕ್ಕೆ ಪರಿಕರಗಳನ್ನು ಒದಗಿಸುವ ಕಾರ್ಯದಲ್ಲಿ ನಿರತರಾಗಿದ್ದ ಪಾಂಚಾಳರನ್ನು ಮಂಟೆಸ್ವಾಮಿ ಊರುಗಳ ಕಡೆ ಚದುರಿ ಹೋಗುವಂತೆ ಶಾಸನ

ನೀಡಿದ್ದು ಮಂಟೇಸ್ವಾಮಿ ಕಾವ್ಯದಲ್ಲಿ ಬರುತ್ತದೆ. ಇದನ್ನು ಗ್ರಾಮೀಣ ಕೃಷಿ ಚಟುವಟಿಕೆಗಳು ಹೆಚ್ಚು ಗರಿಗೆದರಲು ಪಾಂಚಾಳರ ಅವಶ್ಯಕತೆ ಇರುವುದನ್ನು ಸಂಕೇತಿಸುತ್ತದೆ.

ಒಟ್ಟಾರೆಯಾಗಿ ಜಯರೇಖೆಗಳು ಮಧ್ಯಕಾಲೀನೋತ್ತರ ಕರ್ನಾಟಕದ ಸಮಾಜದಲ್ಲಿ ಕೆಳಸಮುದಾಯಗಳು ಒಂದು ಸ್ಥಿರ ನೆಲೆಕಂಡುಕೊಳ್ಳಲು ನಡೆಸುವ ಹೋರಾಟ, ಅಂಥ ಸನ್ನಿವೇಶಗಳಲ್ಲಿ ಅನುಭವಿಸುವ ಅಸ್ಥಿರ ಭಾವ, ಆತಂಕಗಳನ್ನು ಅನಾವರಣಗೊಳಿಸುತ್ತವೆ.

### ೩.೨ ಪಾಳೆಯಗಾರಿಕೆ ಹಕ್ಕು

ಮಧ್ಯಕಾಲೀನೋತ್ತರ ದಕ್ಷಿಣ ಭಾರತದ ರಾಜಕೀಯ ವೈಲಕ್ಷಣಗಳಲ್ಲಿ ಪಾಳೆಯಪಟ್ಟುಗಳ ಸ್ಥಾಪನೆ ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಳ್ಳುತ್ತದೆ. "ಈ ವ್ಯವಸ್ಥೆಯ ವಿಕಾಸದಲ್ಲಿ ಎರಡು ಸ್ಪಷ್ಟವಾದ ಹಂತಗಳನ್ನು ಗುರುತಿಸಬಹುದು. (i) ಕ್ರಿ.ಶ. ೧೫೦೦ ರಿಂದ ೧೬೫೦ರವರೆಗೆ (ii) ಕ್ರಿ.ಶ. ೧೬೫೦ರ ನಂತರ– ೧೨೫ ವರ್ಷಗಳ ಕಾಲ ಹೆಚ್ಚು ಕಡಿಮೆ ವಿಜಯನಗರ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯ, ಅದರ ಅಧೀನ ಅಮರನಾಯಕ–ಪಾಳೇಗಾರ ಅಸ್ತಿತ್ವದ ಭಾಗವಾಗಿದ್ದು ಮೇಲಿನವರಿಗೆ ಸ್ವಾಮಿನಿಷ್ಠೆಯನ್ನು ತೋರಿಸಿಕೊಂಡು ಬಂದುದಾಗಿದೆ. ಎರಡನೇ ಹಂತದಲ್ಲಿ ಬಹುಪಾಲು ಅಮರನಾಯಕ, ಪಾಳೆಯಗಾರ ಮನೆತನಗಳು ವಿಜಯನಗರದವರಿಂದ ಸ್ವಾತಂತ್ರ್ಯಗೊಂಡು ತಮ್ಮದೇ ಆದ ಸ್ಥಳೀಯ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಿಕೊಂಡಿದುದಾಗಿದೆ"[೨೦].

ಈ ಪಾಳೆಯಗಾರರಲ್ಲಿ ಎಲ್ಲ ಸಮುದಾಯದವರೂ ಇರುತ್ತಿದ್ದರು. ಲಕ್ಷ್ಮಣ್ ತೆಲಗಾವಿಯವರು ತಮ್ಮ ಎಪ್ಪತ್ತೇಳು ಪಾಳೆಯಗಾರರು ಎಂಬ ಲೇಖನದಲ್ಲಿ ಕಮ್ಮ, ರೆಡ್ಡಿ, ಬೋಯ ಮತ್ತು ಬಲಿಜ ವರ್ಗಗಳ ನಾಯಕರು ತಮ್ಮ ಸಂಗಡಿಗರು ಮತ್ತು ಬಂಧುಗಳೇ ಆಗಿದ್ದ ವಿಜಯನಗರದ ಅರಸರ ಅಧೀನದ ನಾಯಂಕರ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದಾರೆ" ಎಂದು ಅಭಿಪ್ರಾಯಪಟ್ಟಿರುತ್ತಾರೆ.[೨೧]

ನಾಯಕ ಅಥವಾ ಪಾಳೆಯಗಾರಿಕೆ ವ್ಯವಸ್ಥೆ ಹದಿನಾರನೆಯ ಶತಮಾನದ ಪ್ರಾರಂಭದಲ್ಲಿ ವಿಜಯನಗರದ ಅರಸರ ಆಳ್ವಿಕೆಯಲ್ಲಿ ಸ್ಪಷ್ಟವಾಗಿ ಅಸ್ತಿತ್ವಕ್ಕೆ ಬಂತು. ಕ್ರಿ.ಶ. ೧೫೬೫ರಲ್ಲಿ ತಾಳಿಕೋಟೆ ಯುದ್ಧ ನಡೆಯುವವರೆಗೆ ಈ ಪಾಳೆಯಪಟ್ಟುಗಳು ವಿಶಾಲ ವಿಜಯನಗರ ಸಾಮ್ರಾಜ್ಯದ ನಿಯಂತ್ರಣದಡಿಯಲ್ಲಿ ವಿಧೇಯವಾಗಿ ನಡೆದುಕೊಳ್ಳುತ್ತಿದ್ದವು. ತಾಳೀಕೋಟೆ ಯುದ್ಧಾನಂತರ ಕೇಂದ್ರ ಪ್ರಭುತ್ವ ಪತನಗೊಂಡ ತರುವಾಯ, ಅದನ್ನವಲಂಬಿಸಿದ್ದ ಪಾಳೆಯಪಟ್ಟುಗಳಲ್ಲಿ ಕೆಲವು ಅರವೀಡು ವಂಶಸ್ಥರ ಆಳ್ವಿಕೆಯಡಿ ಅವರ ಅಧೀನವಾಗಿಯೇ ಮುಂದುವರೆದರೆ, ಮತ್ತೆ ಕೆಲವು ಪಾಳೆಯಪಟ್ಟುಗಳು ಸ್ವತಂತ್ರ ಘೋಷಿಸಿಕೊಂಡವು. ತಾಳಿಕೋಟೆ ಕದನಕ್ಕೂ ಮೊದಲು ಈ ಪಾಳೆಯಗಾರಿಕೆ ವ್ಯವಸ್ಥೆ, ವಂಶಪಾರಂಪರ್ಯವಾಗಿರಲಿಲ್ಲ. ಒಂದು ಪ್ರದೇಶದ ನಾಯಕರನ್ನು ಮತ್ತೊಂದು ಪ್ರದೇಶಕ್ಕೆ ವರ್ಗಾವಣೆ ಮಾಡಲಾಗುತ್ತಿತ್ತು. ಹೀಗಾಗಿ ಇವರು ಒಂದು ಪ್ರದೇಶದಲ್ಲಿ ಸ್ಥಿರವಾಗಿ ಅಧಿಕಾರಸ್ಥಾಪನೆ

ಮಾಡಲಾಗುತ್ತಿರಲಿಲ್ಲ. ಆದರೆ ಅರವೀಡು ವಂಶದ ಆಳ್ವಿಕೆಯಡಿ ಬಂದಾಗ ಪಾಳೆಯಗಾರರು ತಾವಿದ್ದ ಸ್ಥಳಗಳಲ್ಲೇ ನೆಲೆಗೊಂಡು ಬಲಾಢ್ಯರಾದರು. ಕೆಲವೊಮ್ಮೆ ದುರ್ಬಲವಾದ ಅನುಕೂಲಕರ ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿ ಗ್ರಾಮಗಳನ್ನು ನಿರ್ಮಿಸಿ ಕೋಟೆ-ಕೊತ್ತಲಗಳನ್ನು ಕಟ್ಟಿಕೊಂಡು ನೆಲೆಸುತ್ತಿದ್ದರು. ಇದು ವಂಶಪಾರಂಪರ್ಯವಾಗಿ ಮುಂದುವರೆದುಕೊಂಡು ಬರುತ್ತಿತ್ತು. ಹೀಗೆ "ಹದಿನೈದನೇ ಶತಮಾನದ ಕೊನೆಯ ಭಾಗದಲ್ಲಿ ಆಳುವ ವ್ಯವಸ್ಥೆಯಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಾಪನೆಯಾದ ನಾಯಕ ವ್ಯವಸ್ಥೆಯು ಹದಿನಾರನೆಯ ಶತಮಾನದ ಕೊನೆಯವರೆಗೂ ತೃಪ್ತಿಕರವಾಗಿ ಕಾರ್ಯನಿರ್ವಹಿಸುತ್ತಿತ್ತು. ಬದಲಾದ ರಾಜಕೀಯ ವಾತಾವರಣದಲ್ಲಿಯೂ ಕೂಡಾ ವಿಜಯನಗರದವರ ಮೇಲೆ ನಿಷ್ಠೆ ಇಟ್ಟುಕೊಂಡಿದ್ದ ಅಮರನಾಯಕರು ಹದಿನೇಳನೆಯ ಶತಮಾನದ ಮೊದಲ ಭಾಗದ ನಂತರ ಪೂರ್ಣ ಸ್ವಾತಂತ್ರ್ಯ ಪಡೆದು ಹದಿನೆಂಟನೆಯ ಶತಮಾನದ ಕೊನೆಯ ಭಾಗದವರೆಗೂ ಮುಂದುವರೆದರು".[೨೨] ಹದಿನೆಂಟನೆಯ ಶತಮಾನಾನಂತರ ದಕ್ಷಿಣ ಭಾರತದಲ್ಲಿ ಬದಲಾದ ರಾಜಕೀಯ ಚಿತ್ರಣ ಪಾಳೆಯಪಟ್ಟುಗಳ ಅವನತಿಗೆ ಮಾತ್ರವಲ್ಲದೆ, ಅವುಗಳ ಅಸ್ತಿತ್ವದ ಅನಾದರಣೆಗೂ ಕಾರಣವಾಯಿತು. ಬ್ರಿಟೀಷರು ಮತ್ತು ಮರಾಠರು, ಬಿಜಾಪುರದ ಆದಿಲ್‌ಷಾಹಿಗಳು, ಹೈದರಾಲಿ ಹಾಗೂ ಟಿಪ್ಪುವಿನ ಯುದ್ಧ ನೀತಿಗೆ ಹಲವಾರು ಪಾಳೆಯಪಟ್ಟುಗಳು ಛಿದ್ರಗೊಂಡವು. ಸಹಸ್ರಾರು ಪಗೋಡಗಳಷ್ಟೇ ಕಂದಾಯ ಪಡೆಯುತ್ತಿದ್ದಂತಹ ಪಾಳೆಯಪಟ್ಟುಗಳು ನಿರ್ಗತಿಕ ಸ್ಥಿತಿಗೆ ದೂಡಲ್ಪಟ್ಟವು. ಅಂಥ ಒಂದು ಪಾಳೆಯಪಟ್ಟಿನ ನಿದರ್ಶನವನ್ನು ಹಯವದನರಾವ್‌ರವರು ತಮ್ಮ ಗೆಜೆಟಿಯರ್‌ನಲ್ಲಿ ಉಲ್ಲೇಖಿಸುತ್ತಾರೆ "೪೦೦ ವರ್ಷಗಳ ಹಿಂದೆ ಹೊಸಹಳ್ಳಿ ಗೌಡ ಗುಬ್ಬಿ ಪಾಳೆಯಪಟ್ಟನ್ನು ಸ್ಥಾಪನೆ ಮಾಡಿದ. ಅವನು ಹಿಂದೆ ಆಳುತ್ತಿದ್ದ ಹೊನ್ನಪ್ಪಗೌಡನ ವಂಶಸ್ಥ. ೩೦೦೦ ಪಗೋಡಗಳಷ್ಟು ಅವರಿಗೆ ಕಂದಾಯ ಬರುತ್ತಾ ಇತ್ತು. ಮೈಸೂರು ಮಹಾರಾಜರು ಇವರಿಗೆ ೫೦೦ ಪಗೋಡಗಳನ್ನು ಕೊಡುತ್ತಾ ಇದ್ದರು. ಹೈದರಾಲಿ ಇವರಿಗೆ ೨೫೦೦ ಪಗೋಡಗಳನ್ನು ಜಾಸ್ತಿ ಮಾಡಿದ. ಟಿಪ್ಪು ಸುಲ್ತಾನ್ ಎಲ್ಲವನ್ನು ನಿಲ್ಲಿಸಿಬಿಟ್ಟ. ಅವರು ಈಗ ಸಾಮಾನ್ಯ ಜೀವನ ಮಾಡುತ್ತಾ ಇದ್ದಾರೆ."

ಕರ್ನಾಟಕದ ದಕ್ಷಿಣ ಭಾಗದಲ್ಲಿ ಹೈದರ್ ಮತ್ತು ಟಿಪ್ಪುವಿನ ನೀತಿಯಿಂದ ಅಧಿಕಾರ ಕಳೆದುಕೊಂಡಿದ್ದ ಪಾಳೆಯಗಾರರು ಅದನ್ನು ಪಡೆದುಕೊಳ್ಳುವ ಆಸೆಯಿಂದ ಟಿಪ್ಪುಸುಲ್ತಾನನ ಕಡು ವಿರೋಧಿಗಳಾಗಿದ್ದ ಬ್ರಿಟೀಷರ ಜೊತೆ ಷರತ್ತಿನ ಮೇರೆಗೆ ಸೇರಿಕೊಂಡು ಟಿಪ್ಪುವನ್ನು ಸದೆಬಡಿಯಲು ಸಹಾಯ ಮಾಡಿದರು. ಈ ರೀತಿ ಸಹಾಯ ಪಡೆದು ಟಿಪ್ಪುವನ್ನು ಸೋಲಿಸಿದ ಬ್ರಿಟೀಷರು ಮೈಸೂರನ್ನು ಒಡೆಯರಿಗೆ ಹಿಂದಿರುಗಿಸಿದರೂ, ಪಾಳೆಯಗಾರರಿಗೆ ಅವರ ಪ್ರಾಂತ್ಯಗಳನ್ನು ಬಿಟ್ಟುಕೊಡದೆ ದಿವಾನರಾದ ಪೂರ್ಣಯ್ಯನವರ ಬಳಿ ಪರಿಹಾರ ಕಂಡುಕೊಳ್ಳುವಂತೆ ಸೂಚಿಸಿದರು. ಪಾಳೆಯಗಳನ್ನು ಕಟ್ಟಿಕೊಂಡು ತಮ್ಮದೇ ಆದ ಆರ್ಥಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದ ಪಾಳೆಯಗಾರರಿಗೆ ಜೀವನ ನಿರ್ವಹಣೆ ತುಂಬಾ ಕಠಿಣವಾಯಿತು. ಪರಿಹಾರಕ್ಕಾಗಿ, ಮಾಸಾಶನ ಪಡೆಯುವುದಕ್ಕಾಗಿ ಪೂರ್ಣಯ್ಯನವರನ್ನು ಅವಲಂಬಿಸುವಂತಾಯಿತು. ಆದರೆ ಪೂರ್ಣಯ್ಯನವರು ಪಾಳೆಯಗಾರರು,

ತಾವು ಆಳುತ್ತಿದ್ದ ಪಾಳೆಯಪಟ್ಟುಗಳ ಬಗ್ಗೆ ದಾಖಲೆಗಳನ್ನು ಒದಗಿಸುವಂತೆ ಆದೇಶಿಸಿದರು. ಈ ಸನ್ನಿವೇಶ ಪಾಳೆಯಪಟ್ಟುಗಳ ಚರಿತ್ರೆಗಳನ್ನು, ಪಾಳೆಯಗಾರರ ವಂಶಾವಳಿಗಳನ್ನು ರಚಿಸುವ ಅನಿವಾರ್ಯತೆಯನ್ನು ಸೃಷ್ಟಿಸಿತು. ಪಾಳೆಯಪಟ್ಟುಗಳಿಗೆ ಸಂಬಂಧಿಸಿದ ಹಲವಾರು ಕೈಫಿಯತ್ತುಗಳು ಹದಿನೆಂಟು–ಹತ್ತೊಂಬತ್ತನೆಯ ಶತಮಾನದಲ್ಲಿ ರಚಿತವಾದ ಸಂಗತಿ ಈ ಅಂಶಕ್ಕೆ ಪೂರಕವಾಗಿದೆ. ತಮ್ಮ ಪಾಳೆಯಗಾರಿಕೆಗಳ ಹಕ್ಕುಗಳನ್ನು ಅಧಿಕೃತಗೊಳಿಸಿಕೊಳ್ಳಲು ಪ್ರಯತ್ನಿಸಿದರು. ಅದಕ್ಕೆ ಪೂರಕವಾಗಿ ತಾವಿರುವ ಸೀಮೆ ಅಥವಾ ಸ್ಥಳ ಅಥವಾ ಪಾಳೆಯಪಟ್ಟು ತಮಗೆ ವಿಜಯನಗರದ ಅರಸರಿಂದ ಪ್ರದತ್ತವಾದದ್ದೆಂದು ಪ್ರತಿಪಾದಿಸಲು ದಾಖಲೆಗಳನ್ನು ಸೃಷ್ಟಿಸಿದರು. ಇಂತಹ ದಾಖಲೀಕರಣದ ಸಂದರ್ಭದಲ್ಲಿ ಮಾಸಾಶನ ಅಥವಾ ಪರಿಹಾರವನ್ನು ಪಡೆಯಲು ಪೂರಕವಾಗುವಂತೆ ಮತ್ತು ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ತಮ್ಮ ಮೂಲಚೂಲಗಳನ್ನು ವಂಶಾವಳಿಯನ್ನು, ಸಂಗತಿಗಳನ್ನು, ಸನ್ನಿವೇಶಗಳನ್ನು ಸೇರಿಸುತ್ತಾ ಹೋದರು.

ಭೈರೆಗೌಡರ ಕೊಡಲಾಪುರದ ಜಯರೇಖೆಯು[೨೩] ಕೊಡಲಾಪುರದ ಬೈರೇಗೌಡ ಆನೆಗೊಂದಿ ಸಂಸ್ಥಾನದ ದೊರೆ ಅಚ್ಯುತರಾಯರ ಬಳಿಗೆ ಹೋಗಿ ತನಗೆ ಒಂದು ಸೀಮೆಯ ಪಾಳೆಯಗಾರಿಕೆ ಬೇಕೆಂದು ಕೇಳಿಕೊಂಡಾಗ, ದೊರೆ ಇವರ ಪರಾಕ್ರಮವನ್ನು ನೋಡಿ ಸಂತೋಷಪಟ್ಟು "ದಕ್ಷಿಣ ಸೀಮೆಯಲ್ಲಿ ಪಟ್ಟನಿರ್ಣಯ ಮಾಡಿಕೊಂಡು ಅದಕ್ಕೆ ನೀನು ಪಾಳ್ಯಾಗಾರನಾಯ್ಕನಾಗಿ ನಿನ್ನ ಸೇನೆ ಮುಂತಾದ್ದು ತೆಗೆದುಕೊಂಡು ನಮ್ಮ ರಣಾಗ್ರದ ಕೆಲಸ ಯಾವ ವೇಳೆ ಬಿದ್ದಾಗ್ಯೂ ನಮ್ಮ ಆದೇಶ ಬಂದ ಕೂಡಲೇ ಹೊರಟುಬರಬೇಕೆಂದು ಹೇಳಿ ಬಿರಿದು ಪಲ್ಲಕ್ಕಿ, ಭೂಚಕ್ರದ ಕೊಡೆ, ಚತ್ರಿ, ಚಾಮರ, ಹಗಲು ದೀವಟಿಗೆ, ದೊಡ್ಡ ಭೂರುಗ ಭೇರಿ, ಮೂವತ್ತೆರಡು ಆಯುಧಗಳನ್ನು ಪದ್ಧತಿ ಮೇರೆಗೆ ನೀಡಿ, ನಮಗೆ ಅತ್ಯಂತ ಪ್ರಿಯ ಮಗನಾಗಿದ್ದರಿಂದ ಈ ಬಿರುದುಗಳನ್ನು ಹಾಗೂ 'ದಕ್ಷಿಣರಾಯ' ಎಂಬ ನಾಮಾಂಕಿತವನ್ನು ನೀಡಿ ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಇರು ಎಂಬುದಾಗಿ ಹೇಳಿ 'ಜಯರೇಖೆ' ಮೂಲಕ ಹುಕುಂ ಅನ್ನು ಲಿಖಾವಟ್ಟು ಮಾಡಿಕೊಡಲಾಗಿದೆ" ಎಂಬ ಸಂಗತಿಗಳನ್ನು ದಾಖಲಿಸುತ್ತದೆ.

ಈ ಶಾಸನದ ಕಾಲವನ್ನುಕ್ರಿ.ಶ. ೧೨೬೪ ಮತ್ತು ಕ್ರಿ.ಶ. ೧೬೧೪ ಎಂದು ಉಲ್ಲೇಖಿಸಿದ್ದರೂ, ಲಿಪಿದೃಷ್ಟಿಯಿಂದ ಈ ಶಾಸನ ಇಪ್ಪತ್ತನೆಯ ಶತಮಾನದ್ದೆಂದು ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ. ಈ ಶಾಸನವು ತನಗೆ ಪಾಳೆಯಗಾರಿಕೆಯು ಅಧಿಕೃತವಾಗಿ ವಿಜಯನಗರದ ಅರಸರಿಂದ ಪ್ರದತ್ತವಾದದ್ದೆಂಬುದನ್ನು ನಿರೂಪಿಸಲು ಬರೆಸಿರುವಂತೆ ತೋರುತ್ತದೆ. ವಸಾಹತುಶಾಹಿ ಅವಧಿಯಲ್ಲಿ ಬದಲಾದ ರಾಜಕೀಯ ಹಾಗೂ ಸಾಮಾಜಿಕ ಸನ್ನಿವೇಶಗಳಲ್ಲಿ ಹಣಕಾಸು ಸವಲತ್ತುಗಳಿಗಾಗಿ ಅಥವಾ ಭೂಮಿಯ ಮೇಲಿನ ಒಡೆತನಕ್ಕಾಗಿ ಇಂಥ ದಾಖಲೆಗಳನ್ನು ಸೃಷ್ಟಿಸಿರುವ ಸಾಧ್ಯತೆಗಳಿವೆ. ಅಂದರೆ ಶಾಸನಗಳನ್ನು ಕೃತಕವಾಗಿ ಸೃಷ್ಟಿಸಲಾಗಿದ್ದರೂ, ಇಂತಹ ಶಾಸನಗಳನ್ನು ಬರೆಸಿರುವ ಹಿನ್ನೆಲೆಯನ್ನು

ನೋಡಿದಾಗ, ಶಾಸನಗಳಲ್ಲಿ ಅಂತರ್ಗತವಾದ ವಸ್ತುವಿಷಯವನ್ನು ಅನಧಿಕೃತವೆಂದೋ, ಮಿಥ್ಯವೆಂದೋ ಸಾರಾಸಗಟಾಗಿ ನಿರಾಕರಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ, ವಿಜಯನಗರೋತ್ತರ ಇತಿಹಾಸ ಸ್ಪಷ್ಟವಾಗಿ ಶಿಲಾಶಾಸನಗಳಲ್ಲಾಗಲೀ ಅಥವಾ ತಾಮ್ರಪತ್ರಗಳಲ್ಲಾಗಲೀ ದಾಖಲೀಕರಣಗೊಂಡಿದ್ದು ವಿರಳ. ವಸಾಹತುಶಾಹಿ ಸಂದರ್ಭವು ಸೃಷ್ಟಿಸಿದ ಅನಿವಾರ್ಯ ಸ್ಥಿತಿಯಿಂದ ಪಾಳೆಯಪಟ್ಟುಗಳು ತಮ್ಮ ತಮ್ಮ ಇತಿಹಾಸವನ್ನು ಸ್ವತಃ ತಾವೇ ದಾಖಲಿಸುವ ಪ್ರಯತ್ನಕ್ಕೆ ಕೈಹಾಕಿದವು. ಹಲವಾರು ಮಿಥ್ಯಾಂಶಗಳ ನಡುವೆಯೂ, ಪಾಳೆಯಪಟ್ಟುಗಳ ಬಗ್ಗೆ ಹಲವಾರು ಐತಿಹಾಸಿಕ ಅಂಶಗಳೂ ಬರಹ ರೂಪಕ್ಕಿಳಿದವು.

ಪಾಳೆಯಪಟ್ಟುಗಳ ಸ್ಥಾಪನೆ ಒಂದು ಕುಟುಂಬದ ಪ್ರಯತ್ನ ಮಾತ್ರದಿಂದಲೇ ಸಾಧ್ಯವಾಗುವುದಿಲ್ಲ. ಅದಕ್ಕೆ ಸಮಾಜದ ಸಮುದಾಯಗಳೆಲ್ಲದರ ಬೆಂಬಲ ಅಗತ್ಯವಾಗಿತ್ತು. ಪಾಳೆಯಪಟ್ಟುಗಳ ಸ್ಥಾಪನೆಯೊಂದಿಗೆ ಇತರ ಸಮುದಾಯಗಳು ಅವಿನಾಭಾವ ಸಂಬಂಧ ಹೊಂದಿರುತ್ತಿದ್ದವು. ಕೆಲವೊಮ್ಮೆ ಅಂಥ ಸಮುದಾಯಗಳು ಇತಿಹಾಸದ ಪುಟಗಳಲ್ಲಿ ತಮ್ಮ ಅನನ್ಯತೆಯ ಛಾಪನ್ನು ಮೂಡಿಸುತ್ತಾ ಸಾಗುತ್ತವೆ. ಅಲ್ಲದೆ ಪಾಳೆಯಪಟ್ಟುಗಳ ಸ್ಥಾಪನೆಯಲ್ಲಿ ವಲಸೆ ಪ್ರಧಾನ ಪಾತ್ರ ವಹಿಸುತ್ತದೆ. ವಿಜಯನಗರ ಕಾಲದ ಅಮರನಾಯಕ ಅಥವಾ ನಾಯಕ ಪದ್ಧತಿಯಲ್ಲಿ ನಾಯಕರನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾವಣೆ ಮಾಡಲಾಗುತ್ತಿತ್ತು. ಲಭಿಸಬಹುದಾದ ವಿಶೇಷ ಸವಲತ್ತುಗಳು, ಸ್ಥಾನಮಾನಗಳಿಂದಾಗಿ, ವಲಸೆಯನ್ನು ಒಂದು ಸಹಜ ಪ್ರಕ್ರಿಯೆಯಂತೆ ಸ್ವೀಕರಿಸಿ, ವಿಜಯನಗರದ ಅರಸರು ನಿಯೋಜಿಸಿದ ಸ್ಥಳಗಳಲ್ಲಿ ತಮ್ಮ ಆಳ್ವಿಕೆ ಪ್ರಾರಂಭಿಸುತ್ತಿದ್ದರು. ವಿಜಯನಗರದ ಅರಸರ ಆಳ್ವಿಕೆಯ ಪ್ರಾರಂಭದಲ್ಲಿ ಹಲವಾರು ತಮಿಳು ಹಾಗೂ ಆಂಧ್ರದಿಂದ ಬಂದು ಕರ್ನಾಟಕದಲ್ಲಿ ರಾಜರಿಂದ ಅಮರ ಮಾಗಣೆಗಳನ್ನು ಪಡೆದುಕೊಂಡು ನಾಯಕರು ಆಳ್ವಿಕೆ ನಡೆಸುತ್ತಿದ್ದರು. ಅಧಿಕಾರ ಯಂತ್ರದ ಸುಲಭ ನಿರ್ವಹಣೆಗೆ ವರ್ಗಾವಣೆಯ ಮೂಲಕ ಅವರನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ನಿಯೋಜಿಸಲ್ಪಟ್ಟರೂ, ವಾಸ್ತವವಾಗಿ ಅಂತಹ ಕುಟುಂಬಗಳು ತಾವಿರುವ ಪ್ರದೇಶ ಬಿಟ್ಟು 'ವಲಸೆ' ಬರುವುದು ಅನಿವಾರ್ಯವಾಗುತ್ತಿತ್ತು. ಹೊಸ ಅಪರಿಚಿತ ಸ್ಥಳಗಳಲ್ಲಿ, ಗೊತ್ತಿಲ್ಲದ ಭಾಷೆಯ ಜನರ ನಡುವೆ ಆಳ್ವಿಕೆ ನಡೆಸಬೇಕಾದಂತಹ ಸಂದರ್ಭಗಳನ್ನು ಎದುರಿಸಲು ತಮ್ಮೊಂದಿಗೆ ಇಡೀ ಕುಟುಂಬ ವರ್ಗವನ್ನು, ವಿವಿಧ ಸಮುದಾಯಗಳ ಜನರನ್ನು ಕರೆದುಕೊಂಡು ಬರುತ್ತಿದ್ದರು. ದಕ್ಷಿಣ ಭಾರತದಲ್ಲಿ ಅತಿ ಹೆಚ್ಚು 'ವಲಸೆ' ಪ್ರಕ್ರಿಯೆಗಳು ಪ್ರಾರಂಭವಾಗಿದ್ದು ವಿಜಯನಗರದ ಅರಸರ ಕೊನೆಯ ಕಾಲಘಟ್ಟದಲ್ಲಿ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಎಂಬ ಸಂಗತಿ ಶಾಸನ, ಕೈಫಿಯತ್ತುಗಳು ಹಾಗೂ ಐತಿಹ್ಯಗಳಿಂದ ವೇದ್ಯವಾಗುತ್ತದೆ.

ಜಯರೇಖೆಗಳ ಹಿನ್ನಲೆಯಲ್ಲಿ ಪಾಳೆಯಗಾರರ ವಲಸೆ ಮತ್ತು ಪಾಳೆಯಪಟ್ಟುಗಳ ಸ್ಥಾಪನೆಯ ಕಥನಗಳನ್ನು ಗಮನಿಸಿದಾಗ, ಪ್ರತಿಯೊಂದು ಪಾಳೆಯಪಟ್ಟುಗಳ ಸ್ಥಾಪನೆಗೆ ಒಂದು ತಾತ್ವಿಕ ಕಾರಣವನ್ನು ನೀಡಿರುವುದು ಕಂಡುಬರುತ್ತದೆ. ಅವುಗಳನ್ನು ಪ್ರಧಾನವಾಗಿ ವರ್ಗಾವಣೆ, ಎರಡನೆಯದಾಗಿ ಕೆಳಸಮುದಾಯಗಳ ಅಥವಾ ಅನ್ಯಧರ್ಮೀಯ ಪುಂಡ ಪಾಳೆಯಗಾರರಿಂದ

ಕುಲಗೌರವದ ರಕ್ಷಣೆ, ಮೂರನೆಯದಾಗಿ ವಲಸೆ ಬರುವಾಗ ದೈವದ ಅನುಗ್ರಹದಿಂದ ಧನಕನಕ/ನಿಧಿ ದೊರೆತು ತಾವಿರುವ ನೆಲೆಯಲ್ಲೇ ಪಾಳೆಯಪಟ್ಟುಗಳನ್ನು ನಿರ್ಮಿಸಿ ನೆಲೆಗೊಳ್ಳುವಿಕೆ–ಅಂಶಗಳು ಪ್ರಧಾನ ಆಶಯವಾಗಿ ಕಂಡುಬರುತ್ತದೆ.

ಒಂದು ಪಾಳೆಯಪಟ್ಟಿನ ಸ್ಥಾಪನೆಯಲ್ಲಿ ರಕ್ಷಣಾ ಸಾಧನಗಳಾದ ಕೋಟೆ–ಕೊತ್ತಲಗಳ ನಿರ್ಮಾಣಕ್ಕೆ, ವಿವಿಧ ಸಮಾಜಮುಖಿ ಕಾರ್ಯಗಳ ನಿರ್ವಹಣೆಗೆ ವಿಭಿನ್ನ ಸಮುದಾಯಗಳ ಪಾಲ್ಗೊಳ್ಳುವಿಕೆ ಅತಿ ಮುಖ್ಯ. ಒಬ್ಬ ನಾಯಕನಿಂದ ಅಥವಾ ಆತನ ಕುಟುಂಬದ ವ್ಯಕ್ತಿಗತ ಪ್ರಯತ್ನಗಳಿಂದ ಮಾತ್ರವೇ ಪಾಳೆಯಪಟ್ಟು ಸ್ಥಾಪನೆಗೊಳ್ಳುವುದು ಅಸಾಧ್ಯ. ಎಲ್ಲ ಸ್ತರದ, ಎಲ್ಲ ಸಮುದಾಯಗಳ ಜನರೂ ಈ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಹೀಗಾಗಿ ಒಂದು ಪಾಳೆಯಪಟ್ಟಿನ ಸ್ಥಾಪನೆಯೊಂದಿಗೆ, ಸಮುದಾಯಗಳು ಅವಿನಾಭಾವ ಸಂಬಂಧ ಹೊಂದಿರುತ್ತಿದ್ದವು. ಅಲ್ಲದೆ, ಅವುಗಳ ಇತಿಹಾಸ ರಚನೆಯಲ್ಲಿ ಇಂಥ ಸಮುದಾಯಗಳೂ ಪಾತ್ರ ಪಡೆಯುತ್ತಾ ಸಾಗಿದವು.

ಮುತ್ತಿನ ಮುಮ್ಮಡಿ ಏಳುನಾಡು ಪ್ರಭುಗಳ ಕುರಿತ ಜಯರೇಖೆಯು[೨೪] ಏಳುನಾಡು ಪ್ರಭುಗಳ ವಂಶಾವಳಿಯನ್ನು ಒಳಗೊಂಡಿದ್ದರೂ, ವಲಸೆಗೆ ಕಾರಣ, ವಲಸೆಯ ಕ್ರಮಗತಿಯಲ್ಲಿ ಮುಖಾಮುಖಿಯಾಗುವ ಗ್ರಾಮಗಳು, ದೈವಾನುಗ್ರಹ, ಸಹೋದರರಿಗೂ ಬೇರೆ ಬೇರೆ ಕಡೆ ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಡುವಿಕೆ, ನಂಬಿ ಬಂದ ನಂಬಿಕಸ್ಥರಿಗೆ ಅನ್ನದ ವ್ಯವಸ್ಥೆ ಮಾಡಿಕೊಡುವಿಕೆ, ದೇವಾಲಯಗಳ ನಿರ್ಮಾಣ ಮುಂತಾದ ವಿಷಯಗಳನ್ನು ದಾಖಲಿಸುತ್ತದೆ. ಈ ಎಲ್ಲ ಅಂಶಗಳಿಗೂ ಮುಖ್ಯವಾಗಿ ವಿವಿಧ ಭಾಗಗಳಲ್ಲಿ ಗ್ರಾಮಸ್ಥಾಪನೆ, ಪಾಳೆಯಪಟ್ಟುಗಳಲ್ಲಿ ಕೋಟೆ ಕೊತ್ತಲಗಳನ್ನು ನಿರ್ಮಿಸುವಲ್ಲಿ 'ಬೋವಿ' ಕುಟುಂಬವೊಂದರ ಪಾತ್ರವನ್ನು ಅತಿಶಯವಾಗಿ ದಾಖಲಿಸುವುದು ಈ ಜಯರೇಖೆಯ ಉದ್ದೇಶವಾಗಿದೆ. ಎಂದರೆ, ಕೋರಾದ ಮುಮ್ಮಡಿ ಏಳುನಾಡು ಪ್ರಭುಗಳ ಚರಿತ್ರೆಯನ್ನು ದಾಖಲಿಸುತ್ತಲೇ, ಅವರ ವಲಸೆಯ ಭಾಗವಾಗಿ ಅವರೊಂದಿಗೆ ಅವರು ಹೋದ ಕಡೆಯಲ್ಲೆಲ್ಲ ಹೊರಟುನಿಂತ ಬೋವಿ ಕುಟುಂಬದ ಪಾತ್ರವನ್ನು ಎತ್ತಿ ಹಿಡಿಯಲಾಗಿದೆ.

ಇಡೀ ಜಯರೇಖೆಯನ್ನು ಅವಲೋಕಿಸಿದಾಗ ಸುಮಾರು ಐದು–ಆರು ಪಾಳೆಯಪಟ್ಟುಗಳ ನಿರ್ಮಾಣದಲ್ಲಿ ರಾಮಬೋವಿ ಕುಟುಂಬ ಮಹತ್ವದ ಪಾತ್ರ ವಹಿಸಿತ್ತೆಂಬುದನ್ನು ಒತ್ತಿ ಹೇಳುವುದಾಗಿದೆ. ತಾವು ವಿವಿಧ ಪಾಳೆಯಗಾರರ ಬಳಿ ಇದ್ದು, ಅವರು ಪಾಳೆಯಪಟ್ಟುಗಳನ್ನು ನಿರ್ಮಾಣ ಮಾಡಿಕೊಳ್ಳಲು ರಾಮಬೋವಿ ಕುಟುಂಬದವರೇ ಪ್ರಧಾನ ಭೂಮಿಕೆಯಲ್ಲಿದ್ದರೆಂದು ಮತ್ತು ಅದಕ್ಕಾಗಿ ರಾಯರಿಂದ ಜಹಗೀರು, ಕುದುರೆ, ಛತ್ರಿ, ಬಂಗಾರದ ಬಳೆ, ಮೋಹನಮಾಲೆ, ಪದಕ, ಕಂಠೀಸರ, ಗೋಧಿಸರ, ಮುಂತಾದ ಅನೇಕ ವಸ್ತ್ರಗಳನ್ನು ಪಡೆದುಕೊಂಡಿದ್ದನ್ನು ದಾಖಲಿಸುತ್ತದೆ. ಬಹುಶಃ ರಾಯರೇಖೆಯೆಂದು ಕರೆಯಲ್ಪಡುವ ಈ ಜಯರೇಖೆಯನ್ನು ಬೋವಿ ಮನೆತನದವರೇ ಬರೆಸಿಟ್ಟುಕೊಂಡಿರುವ ಸಾಧ್ಯತೆಗಳು ನಿಚ್ಚಳವಾಗಿವೆ.

ವೀರೇಗೌಡ ಮುಂತಾದ ಏಳು ಮಂದಿ ಅಣ್ಣತಮ್ಮಂದಿರು ವಿಜಯನಗರವೆಂಬ ಪಟ್ಟಣದಲ್ಲಿ ಶ್ರೀಮಾನ್ ನರಪತಿಗಳಾದಂತಹ ತಿರುಮಲರಾಯರ ಹತ್ತಿರ ಇದ್ದರು. ದಿಲ್ಲಿ ಬಾದಶಹನ ಫೌಜು ವಿಜಯನಗರಕ್ಕೆ ಮುತ್ತಿಗೆ ಹಾಕಿದಾಗ, ವೀರೇಗೌಡ ಮತ್ತು ಅವನ ಅಣ್ಣತಮ್ಮಂದಿರು ತಮ್ಮಲ್ಲಿದ್ದ ನಾಗರಮುರಿ ಎಂಬ ಆಯುಧದಿಂದ ಸರದಾರನಾದ ಮುಲ್ಲಖಾನನನ್ನು ಕೊಂದುಹಾಕಿ, ಅವರಲ್ಲಿದ್ದಂತಹ ಬಿರುದು ಬಾವಲಿಗಳನ್ನು ತಿರುಮಲರಾಯರಿಗೆ ಒಪ್ಪಿಸಿದಾಗ, ತಿರುಮಲರಾಯ ಅವರಿಗೆ ವಸ್ತ್ರಾಭರಣಗಳನ್ನು ಬಿರುದು ಬಾವಲಿಗಳನ್ನು ನೀಡಿ ಸನ್ಮಾನಿಸಿದ. ವೀರೇಗೌಡ ಮತ್ತು ಅಣ್ಣತಮ್ಮಂದಿರು ದಕ್ಷಿಣದೇಶದಲ್ಲಿ ಪಟ್ಟಣ ಪಾಳ್ಯವನ್ನು ಕಟ್ಟಿಸಿ ದೊರೆತನವನ್ನು ಮಾಡಿಕೊಂಡು ಇರಿ ಎಂದು ನಮ್ಮ ಗುರುಗಳಾದ ಸಿದ್ಧರಾಮೇಶ್ವರ ಸ್ವಾಮಿ ಅಪ್ಪಣೆ ಕೊಟ್ಟಿದ್ದಾರೆಂದು ತಿರುಮಲರಾಯರಲ್ಲಿ ವಿನಂತಿಸಿಕೊಂಡಾಗ, ತಿರುಮಲರಾಯ ಇವರಿಗೆ ನಿರೂಪವನ್ನು ನೀಡಿ ದಕ್ಷಿಣ ದೇಶದಲ್ಲಿ ಪಾಳ್ಯ ಕಟ್ಟಿಸುವುದಕ್ಕೆ ತನ್ನ ಸನ್ನಿಧಾನದಲ್ಲಿದ್ದ ರಾಮನಬೋವಿ, ಶಾಂತಬೋವಿ ಎಂಬುವವರನ್ನು ಕಳಿಸಿಕೊಡುತ್ತಾನೆ.

ದಕ್ಷಿಣ ದೇಶಕ್ಕೆ ಬರುವ ಮಾರ್ಗಮಧ್ಯದಲ್ಲಿ ಮೊಹರ್ ಬಿದರೆ ಎಂಬ ಗ್ರಾಮದಲ್ಲಿ ಇದ್ದಾಗ ಆ ಗ್ರಾಮದ ಶಾನುಭೋಗನ ಮಗ ಹರಿನರಸಯ್ಯ ತನಗೂ ಒಂದು ಅನ್ನಸ್ಥಿತಿ ಮಾಡಿಕೊಡಬೇಕೆಂದು ಬೇಡಿಕೊಂಡಿದ್ದರಿಂದ, ಅವನನ್ನೂ ಜೊತೆಯಲ್ಲಿ ಕರೆದುಕೊಂಡು ಹೊರಡುತ್ತಾರೆ. ಇದೇ ಅವಧಿಯಲ್ಲಿ ತುಂಗೋಟಿ ಪಟ್ಟಣದ ತುರುಬಿನ ಮರೇಗೌಡ, ಚಳ್ಳಗುರುಮರೇಗೌಡ ಎಂಬ ಇಬ್ಬರು ಅಣ್ಣತಮ್ಮಂದಿರುವ ಅದೇ ತಿರುಮಲರಾಯರಿಂದ ನಿರೂಪವನ್ನು ತೆಗೆದುಕೊಂಡು ಬಂದು ಗಿಡಗಂಟೆಗಳನ್ನು ಕಡಿದು, ಕೋಟೆಕೊತ್ತಲಗಳನ್ನು ಕಟ್ಟಿಕೊಂಡಿರುತ್ತಾರೆ. ವೀರೇಗೌಡನ ಬಳಿ ಇದ್ದ ಹರಿನರಸಯ್ಯನನ್ನು ನೋಡಿ "ನಮ್ಮಲ್ಲಿ ಲೆಕ್ಕಪತ್ರ ಬರೆಯುವುದಕ್ಕೆ ಯಾರು ಇಲ್ಲ ಹರಿನರಸಯ್ಯನವರನ್ನು ಇಲ್ಲಿ ಬಿಟ್ಟು ನೀವು ಅನುವಾದ ಸ್ಥಳವನ್ನು ನೋಡಿ ಕೋಟೆ ಕೊತ್ತಳ ಕಟ್ಟಿಸಿ ಪಟ್ಟಣ ನಿರ್ಮಾಣವಾದ ನಂತರ ಅಪ್ಪಣೆ ಕೊಟ್ಟು ಕಳುಹಿಸಿದರೆ ಈ ಹರಿನರಸಯ್ಯನವರನ್ನು ಕಳುಹಿಸಿಕೊಡುತ್ತೇವೆಂದು" ಕೇಳಿಕೊಂಡಾಗ ಹರಿನರಸಯ್ಯನನ್ನು ಅಲ್ಲಿಯೇ ಬಿಟ್ಟು ಹೋಗುತ್ತಾರೆ.

ವೀರೇಗೌಡ ಅರಣ್ಯವೊಂದರಲ್ಲಿ ಇಳಿದು ಗುಡಾರ ಹಾಕಿಕೊಂಡು ಗಿಡಗಂಟೆ ಕಡಿಸಿ ಕೋಟೆಕೊತ್ತಳವನ್ನು ಹಾಕಿಸಿ ಈ ಗ್ರಾಮಕ್ಕೆ 'ಕೋರಾ' ಎಂದು ಹೆಸರಿಟ್ಟು ತನ್ನೊಂದಿಗೆ ಬಂದ ರಾಮನಬೋವಿ ಮತ್ತು ಶಾಂತಬೋವಿಗೆ ಉಡುಗೊರೆ ನೀಡಿದನು. ವೀರೇಗೌಡ ಮತ್ತು ಅವನ ಅಣ್ಣತಮ್ಮಂದಿರು ಮಾತನಾಡಿಕೊಂಡು, ದ್ರವ್ಯಗಳನ್ನು ಹಂಚಿಕೊಂಡು ಬೇರೆ ಬೇರೆ ಗ್ರಾಮಗಳನ್ನು ಕಟ್ಟಿಸಿಕೊಂಡು ನೆಲೆನಿಂತರೆ, ಹಿರಿಯ ಮಗ ವೀರೇಗೌಡ ರಾಮನಬೋವಿಯನ್ನು ಕರೆಸಿ ಕೋಟೆ-ಕೊತ್ತಳ ಕಟ್ಟಿಸಿ ಉತ್ತರ ದಿಕ್ಕಿನಲ್ಲಿ ನೊಣಬೇಶ್ವರ ದೇವರ ಪ್ರತಿಷ್ಠೆ ಮಾಡಿಸಿ 'ಮುಮ್ಮಡಿ ಪಟ್ಟಣ'ವೆಂದು ಹೆಸರನ್ನಿಟ್ಟ, ನಂತರ ವೀರೇಗೌಡನ ಮೊಮ್ಮಗ ಮುಮ್ಮಡಿ ಚಿಕ್ಕಪ್ಪಗೌಡನು ನರಪತಿ

ತಿರುಮಲರಾಯರಿಂದ ನಿರೂಪ ಪಡೆದು ತಿರುಮಲಬೋವಿಯ ಮಗ ರಾಮಬೋವಿಯಿಂದ ಕೋಟೆ ಕೊತ್ತಳ ಕಟ್ಟಿಸಿ, ದೇವಾಲಯಗಳ ನಿರ್ಮಾಣ ಮಾಡಿ ಬಿಜ್ಜಾವರ ಪಟ್ಟಣ ಸ್ಥಾಪನೆ ಮಾಡಿದ.

ಮುಂದೆ ಮುಮ್ಮಡಿ ಹಿರೇ ಚಿಕ್ಕಪ್ಪಗೌಡನ ಕಾಲದಲ್ಲಿ ಮುಮ್ಮಡಿ ಪಟ್ಟಣಕ್ಕೆ ರೋಗ ತಗುಲಿದ್ದರಿಂದ ಊರಿನಲ್ಲಿದ್ದ ಒಕ್ಕಲುಗಳೆಲ್ಲಾ ಚದುರಿ ಹೋಗಿ ಒಂದೊಂದು ಗ್ರಾಮ ನಿರ್ಮಿಸಿಕೊಂಡು ನೆಲೆನಿಂತು, ಅವುಗಳನ್ನು ಬಿಜ್ಜಾವರಕ್ಕೆ ಸೇರಿಸಿಕೊಂಡರು. ನಂತರ ಸಿದ್ಧಾಪುರ, ವೀರಭದ್ರದುರ್ಗ, ಮದ್ದಗಿರಿಗಳನ್ನು ಸ್ಥಾಪಿಸಲಾಯಿತು. ವಿಜಯನಗರದ ಅರಸು ಬಿಜಾವರದ ಹಿರೇವೀರಪ್ಪಗೌಡಗೆ ಮೂರು ಸಾರಿ ಹೇಳಿ ಕಳಿಸಿದರೂ, ಹೋಗದಿದ್ದುದರಿಂದ, ವಿಜಯನಗರದ ಅರಸು ಕೋಪೋದ್ರಿಕ್ತನಾಗಿ ೭೭ ಜನ ಪಾಳೆಯಗಾರರೊಂದಿಗೆ ಮಧುಗಿರಿಗೆ ಮುತ್ತಿಗೆ ಹಾಕಿದ. ಹಿರೇವೀರಪ್ಪಗೌಡ ಕಳ್ಳಭಂಟರನ್ನು ಕರೆಸಿ ವಿಜಯನಗರ ಮಹಾಸ್ವಾಮಿಗಳನ್ನು ಮಂಚದ ಸಮೇತ ಎತ್ತಿಕೊಂಡು ಮಧುಗಿರಿ ದುರ್ಗದ ಮೇಲೆ ತಂದಿಡಬೇಕೆಂದು ಆಜ್ಞೆ ಮಾಡಿದ. ಭಂಟರು ಅದೇ ರೀತಿ ಗೋಪಾಲ ಕೃಷ್ಣಸ್ವಾಮಿ ದೇವಾಲಯಕ್ಕೆ ಎತ್ತಿಕೊಂಡು ಬಂದರು. ವಿಜಯನಗರದ ಅರಸು ಬೆಳಿಗ್ಗೆ ಏಳುವ ವೇಳೆಗೆ ಹಿರೇವೀರಪ್ಪಗೌಡ ಶರಣಾಗತರಾಗಿ, ೭೭ ಪಾಳೆಯಗಾರರು ನನ್ನ ಮೇಲೆ ಕ್ಷುದ್ರ ದೂರನ್ನು ಹೇಳಿ ಮನಸ್ತಾಪ ಉಂಟುಮಾಡಿದ್ದರಿಂದ ನಾನು ರಾಜಧಾನಿಗೆ ಬರಲಿಲ್ಲ. ತಾವು ಮುದ್ದಗಿರಿಗೆ ಮುತ್ತಿಗೆ ಹಾಕಿದ್ದು ಕೇಳಿ ತಮ್ಮಲ್ಲಿ ಏಕಾಂತವಾಗಿ ಮಾತನಾಡಿ ಅರಿಕೆ ಮಾಡಿಕೊಳ್ಳಬೇಕೆಂದು ಈ ವ್ಯವಸ್ಥೆ ಮಾಡಿದೆನೆಂದು ಬಿನ್ನವಿಸಿಕೊಂಡಾಗ, ಹಿರೇವೀರಪ್ಪಗೌಡರ ಪರಾಕ್ರಮಕ್ಕೆ ಮೆಚ್ಚಿ ಪಟ್ಟಾಭಿಷೇಕ ಮಾಡಿಸಿ, ಸಕಲ ಬಹುಮಾನ, ಬಿರುದುಗಳನ್ನು, ಕುದುರೆ, ಛತ್ರಿ, ಬಂಗಾರದ ಬಳೆ, ತೊಡಾ, ಮೋಹನಮಾಲೆ . . . . ಮುಂತಾದ ಅನೇಕ ವಸ್ತ್ರಾಭರಣಗಳನ್ನು ಮಾಡಿಸಿಕೊಟ್ಟು ಏಳು ಹಳ್ಳಿ ಜಹಗೀರು ಅನುಭವಿಸಿಕೊಂಡಿರಿ ಎಂದು ೭೭ ಪಾಳೆಯಗಾರರ ಅಪ್ಪಣೆಯೊಂದಿಗೆ ಕೊಡುತ್ತಾರೆ.

ತಿರುಮಲಬೋವಿ ಸಹ "ನಾವು 'ಮೂರು ತಲಾಂತ್ರದಿಂದ' ಬಹಳ ಕಾಮಗಾರಿ ಮಾಡಿ ಇರುತ್ತೇವೆ. ನಮಗೆ ಅನ್ನಸಿಧ್ಧಿ ಮಾಡಿಕೊಡಬೇಕೆಂದು" ಅರಿಕೆ ಮಾಡಿಕೊಂಡಿದ್ದರಿಂದ, ಎರಡು ಗ್ರಾಮಗಳ ಜಹಗೀರು, ಕುದುರೆ, ಛತ್ರಿ, ಕಂಠೀಸರ, ಗೋಧಿಸರ, ಮುಂತಾದ ವಸ್ತ್ರಗಳನ್ನು ನೀಡಿ ಸುಖದಿಂದ ಇರು ಎಂದು ಹೇಳಿ ೭೭ ಪಾಳೆಯಗಾರರೊಂದಿಗೆ ವಿಜಯನಗರಕ್ಕೆ ದಯಮಾಡಿಸುತ್ತಾರೆ.

ಇಡೀ ಜಯರೇಖೆಯುದ್ದಕ್ಕೂ ವೀರೇಗೌಡ ಕುಟುಂಬದ ವಂಶಸ್ಥರು ಕೋರಾ, ಮುಮ್ಮಡಿ ಪಟ್ಟಣ, ಬಿಜ್ಜಾವರ, ಸಿದ್ಧಾಪುರ, ಮದುಗಿರಿ ಪಟ್ಟಣಗಳನ್ನು ಸ್ಥಾಪನೆ ಮಾಡಿದ್ದನ್ನು ಹಾಗೂ ವಿಜಯನಗರದ ತಿರುಮಲರಾಯ ವೀರೇಗೌಡ ಮತ್ತು ಆತನ ಅಣ್ಣತಮ್ಮಂದಿರಿಗೆ ದಕ್ಷಿಣದೇಶದಲ್ಲಿ ಪಾಳ್ಯ ಕಟ್ಟಿಸುವುದಕ್ಕೆ ತನ್ನ ಸನ್ನಿಧಾನದಲ್ಲಿದ್ದ 'ರಾಮನಬೋವಿ' ಮತ್ತು 'ಶಾಂತಭೋವಿ' ಇವರನ್ನು ಕಳುಹಿಸಿದ್ದನ್ನು ದಾಖಲಿಸಲಾಗಿದೆ. ಈ ನಾಡುಗಳ ನಿರ್ಮಾಣದಲ್ಲಿ ರಾಮನಬೋವಿ ಮತ್ತು ಶಾಂತಬೋವಿ ಕುಟುಂಬದವರು ವಹಿಸಿದ್ದ ಮಹತ್ವದ ಪಾತ್ರವನ್ನು ಈ ಜಯರೇಖೆ ದಾಖಲಿಸುತ್ತದೆ.

ಕೋಟೆಕೊತ್ತಲಗಳನ್ನು ನಿರ್ಮಿಸಿ ಪಾಳೆಯಪಟ್ಟುಗಳ ಸ್ಥಾಪನೆ ಮಾಡುವುದಲ್ಲದೆ, ಅವುಗಳಿಗೆ ಹೊಂದಿಕೊಂಡಂತೆ ಕಸಬಾ ಗ್ರಾಮಗಳನ್ನು ಸಹ ನಿರ್ಮಿಸುತ್ತಿದ್ದ ವಿವರಗಳನ್ನು ದಾಖಲಿಸಲಾಗಿದೆ. ನಾಡುಗಳನ್ನು ನಿರ್ಮಿಸಿದ ವಿವರ ನೀಡಿದ ನಂತರ ಆ ಪಾಳೆಯಪಟ್ಟುಗಳಲ್ಲಿ ನಿರ್ಮಿಸಿದ ದೇವಾಲಯಗಳು, ಅವುಗಳಿಗೆ ನೇಮಕ ಮಾಡಿದ ಪುರೋಹಿತರು, ಆ ಗ್ರಾಮಗಳಲ್ಲಿರುವ ವಿವಿಧ ಸಮುದಾಯಗಳಿಗೆ ಸೇರಿದ ಕೈವಾಡದವರು ಎಂದರೆ ಶಾನುಭೋಗ, ಕಮ್ಮಾರ, ಕುಂಬಾರ, ಕೆಲಸಿಗ, ಅಗಸ, ಉಪ್ಪಾರ, ಸುಣ್ಣಕಲ್ಲು, ಚಲುವಾದಿ, ಮಾದಿಗ ಸಮುದಾಯದವರ ವಿವರ ಹಾಗೂ ಅರಮನೆಯ ವಿವರವೂ ಸೇರಿದಂತೆ ಬೇರೆ ಬೇರೆ ಸಮುದಾಯಗಳಿಗೆ ಸೇರಿದ ಕುಟುಂಬಗಳ ಸಂಖ್ಯೆಯನ್ನು ಸಹ ದಾಖಲಿಸಲಾಗಿದೆ. ಉದಾಹರಣೆಗೆ ಮುಮ್ಮಡಿ ಪಟ್ಟಣದಲ್ಲಿ ಅರಮನೆ-೧, ದಳವಾಯಿ ಮನೆ-೧, ಬ್ರಾಹ್ಮಣರ ಮನೆ-೧೦, ಬಣಜಿಗರ ಮನೆ-೧೦, ಬೈಯಿಂದರ ಮನೆ-೧೫, ಕೋಮಟಿಗರ ಮನೆ-೧೦, ಸಾದರ ಮನೆ-೨೦, ಕಮ್ಮಾರರ ಮನೆ-೨, ಅಕ್ಕಸಾಲಿಗರ ಮನೆ-೧, ಬಲಗೈನವರ ಮನೆ-೧೦, ಎಡಗೈನವರ ಮನೆ-೫, ಒಟ್ಟಾರೆಯಾಗಿ ಆ ಗ್ರಾಮದಲ್ಲಿದ್ದಿರಬಹುದಾದ ಉಭಯ ಮನೆ-ಮಠಗಳು ೨೮೪ ಎಂದು ವಿವರ ನೀಡುತ್ತದೆ. ಹಾಗೆಯೇ ಸಿದ್ಧಾಪುರ, ಮಧುಗಿರಿ, ಬಿಜ್ಜಾವರ ಪಟ್ಟಣಗಳ ಚಿತ್ರಣವನ್ನು ಹಾಗೂ ಸಾಂಖ್ಯಿಕ ವಿವರಗಳನ್ನೂ ಸಹ ಈ ಜಯರೇಖೆ ವಿವರವಾಗಿ ನೀಡುತ್ತದೆ.

ಪಾಳೆಯಪಟ್ಟುಗಳ ಸ್ಥಾಪನೆ ಸ್ವಯಂಸಾಧ್ಯವಲ್ಲ. ಪ್ರಧಾನ ಅರಸರು ಪಾಳೆಯಗಾರಿಕೆಯನ್ನು ನಿಷ್ಕರ್ಷೆಮಾಡಿ ಕೊಡಬೇಕಾಗುತ್ತದೆ. ಪಾಳೆಯಪಟ್ಟುಗಳಿಗೆ ಸಂಬಂಧಿಸಿದ ಎಲ್ಲ ಜಯರೇಖೆ, ರಾಯರೇಖೆ ಪತ್ರಗಳ ಹಿನ್ನೆಲೆಯಲ್ಲಿ ಚರ್ಚಿಸುವುದಾದರೆ, ಪಾಳೆಯಪಟ್ಟುಗಳ ಸ್ಥಾಪನೆ ವಿಜಯನಗರದ 'ನರಪತಿ'ಗಳ ಅಪ್ಪಣೆಯಂತೆಯೇ ನಡೆದಿವೆ. ವಿಜಯನಗರದ ದೊರೆಗಳು 'ಪಾಳೆಯಪಟ್ಟು ಕಟ್ಟಿಕೊಳ್ಳುವ' ನಿರೂಪ ಬರೆದುಕೊಟ್ಟ ನಂತರವಷ್ಟೇ ಪಾಳೆಯಗಾರರಿಗೆ ಸೂಕ್ತ ಸ್ಥಳ ಆರಿಸಿ ಅಲ್ಲಿ ಕೋಟೆ ಕೊತ್ತಲಗಳನ್ನು, ಗ್ರಾಮಗಳನ್ನು ನಿರ್ಮಿಸಿ, ಅಲ್ಲಿ ವಿವಿಧ ಸಮುದಾಯಗಳನ್ನು ನೆಲೆಯೂರಲು ಅನುಕೂಲ ಮಾಡಿಕೊಡಲಾಗುತ್ತದೆ.

ವಿಜಯನಗರದಿಂದ ದೊಡ್ಡ ವೀರಭದ್ರನಾಯಕ, ವೀರಭದ್ರನಾಯಕ, ಚಂದ್ರಸೇಕರ ಒಡೆಯರು ಐವತ್ತು ಜನರ ಗುಂಪು ಕಟ್ಟಿಕೊಂಡು ಬಂದು ಹೈತೋಟಿಗೆ ಬರುತ್ತಾರೆ. ಅಲ್ಲಿ ಮೊಲ ನಾಯಿಯನ್ನು ಅಟ್ಟಿಸಿಕೊಂಡು ಹೋದ ಸನ್ನಿವೇಶವನ್ನು ನೋಡಿ ಇದು ಗಂಡುಮೆಟ್ಟಿದ ನೆಲ ಎಂದು ನಿರ್ಧರಿಸಿ ಕಲ್ಲಿನಲ್ಲಿ ಮುಹೂರ್ತಕಂಬ ಹಾಕಿಸಿ, ಊರು ಕಟ್ಟಿಸಿ ಅರಿಕುಠಾರವೆಂದು ಹೆಸರಿಟ್ಟು ಮನೆಕಟ್ಟಿಕೊಂಡು ಆ ಗ್ರಾಮಕ್ಕೆ ಮೂರು ಸಾವಿರ ಸೀಮೆ ಸೇರಿಸಿಕೊಳ್ಳುತ್ತಾರೆ.[೨೫]

ಹಲವಾರು ಪಾಳೆಯಪಟ್ಟುಗಳ ಸ್ಥಾಪನೆಯ ಕುರಿತ ಐತಿಹ್ಯಗಳೆಲ್ಲವೂ, ಮೊಲ-ನರಿ ಹೋರಾಟ, ಕೊಪ್ಪರಿಕೆಗಳಲ್ಲಿ ನಿಧಿ ಪತ್ತೆಯಾಗುವುದು, ಕೆಳಸಮುದಾಯದ ವ್ಯಕ್ತಿಯಿಂದ ಕುಲಗೌರವ ರಕ್ಷಣೆಗಾಗಿ ರಾತ್ರೋರಾತ್ರಿ ವಲಸೆ ಬಂದು ಬೇರೆಡೆ ನೆಲೆನಿಂತು ಪಾಳೆಯಪಟ್ಟುಗಳ ಸ್ಥಾಪನೆ ಮಾಡುವುದು,

ಮುಂತಾದ ಸಾರ್ವತ್ರಿಕ ಜನಪದೀಯ ಆಶಯಗಳನ್ನು ಹೊಂದಿದ್ದು, ಇವು ಯಾವುದೋ ಒಂದು ಸಮಾನಾಂತರ ಅವಧಿಯಲ್ಲಿ, ಯಾವುದೋ ಒಂದು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ಕೆಲವೇ ಕೆಲವು ವ್ಯಕ್ತಿಗಳಿಂದ ಬರೆಸಿರುವಂತೆ ತೋರುತ್ತವೆ.

### ೩.೩ ಗ್ರಾಮ ಸ್ಥಾಪನೆ, ಗೌಡಿಕೆ ಹಕ್ಕುಗಳು

ರಾಜ್ಯಾಡಳಿತದ ಪ್ರಾಥಮಿಕ ಮೂಲ ಘಟಕವಾಗಿ ಗ್ರಾಮಗಳನ್ನು ಪರಿಗ್ರಹಿಸಲಾಗಿದೆ. ಇಡೀ ಸಾಮ್ರಾಜ್ಯದ/ಪ್ರದೇಶದ ಅಧಿಪತ್ಯ ಚಕ್ರವರ್ತಿ ಅಥವಾ ರಾಜನದಾದರೆ, ಆಡಳಿತ ಶ್ರೇಣಿಯ ಕಟ್ಟಕಡೆಯ ಘಟಕವಾಗಿರುವ ಗ್ರಾಮದ ಆಳ್ವಿಕೆ ಆ ಗ್ರಾಮದ ಗೌಡನದು. ಚಿದಾನಂದಮೂರ್ತಿಯವರ ಪ್ರಕಾರ "ಸಂಸ್ಕೃತದ ಗ್ರಾಮಕೂಟ ಪ್ರಾಕೃತದ ಗ್ರಾಮುಡ, ಕನ್ನಡದ ಗಾಮುಂಡ ಆಗಿ ಇದು ಕ್ರಮೇಣ ಗಾವುಂಡ, ಗೌಂಡ, ಗೌಡ ಎಂದಾಗಿದೆ".[೨೬]

ಕೃಷಿ ಚಟುವಟಿಕೆಗಳನ್ನು ಆಧರಿಸಿದ ಗ್ರಾಮೀಣ ವ್ಯವಸ್ಥೆಯ ಆಧಾರ ಸ್ತಂಭಗಳು ಗ್ರಾಮೀಣ ಕೃಷಿಕ ಸಮುದಾಯಗಳು. ಕೃಷಿ ಚಟುವಟಿಕೆಗಳು ಉದ್ದೀಪನಗೊಳ್ಳಲು ಕೃಷಿಕ ಸಮುದಾಯಗಳಿಗೆ ಪೂರಕವಾದ ಉತ್ಪಾದಕ ವರ್ಗಗಳ ಸಹಕಾರ ಅತಿಮುಖ್ಯ. ಪರಸ್ಪರ ಸಹಕಾರ ತತ್ವಗಳ ಆಧಾರದ ಮೇಲೆ ನಡೆಯುವ ಗ್ರಾಮೀಣ ಕಾರ್ಯಚಟುವಟಿಕೆಗಳನ್ನು ನಿಯಂತ್ರಿಸುವವನೇ ಗ್ರಾಮದ ಮುಖಂಡ ಗಾವುಂಡ ಅರ್ಥಾತ್ ಗೌಡ. ತನ್ನ ಗ್ರಾಮದ ಎಲ್ಲ ರೀತಿಯ ಕೆಲಸ ಕಾರ್ಯಗಳ ನಿರ್ವಹಣೆಗೆ, ಆಗುಹೋಗುಗಳಿಗೆ ಆತನೇ ಸಂಪೂರ್ಣ ಹೊಣೆಗಾರನಾಗಿರುತ್ತಾನೆ. ಗ್ರಾಮದ ಉಸ್ತುವಾರಿಯನ್ನು ವಹಿಸುವುದರ ಜೊತೆಗೆ ಇಡೀ ಗ್ರಾಮದ ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳ ಮೇಲೆ ನೇರ ನಿಗಾ ಹಾಗೂ ನಿಯಂತ್ರಣ ಹೊಂದಿರುತ್ತಾನೆ. ಗ್ರಾಮದ ಭೂಮಿಯ ಮೇಲಿನ ಒಡೆತನ ಗೌಡನದಾಗಿತ್ತು. ದೇವಾಲಯಗಳಿಗೆ, ಮಠಮಾನ್ಯಗಳಿಗೆ ಕುಶಲಕರ್ಮಿ, ಉತ್ಪಾದಕ ವರ್ಗಗಳಿಗೆ ಮೇಲಧಿಕಾರಿಗಳ ಅನುಮತಿಯ ಮೇಲೆ ಭೂದಾನ-ದತ್ತಿಗಳನ್ನು ನೀಡುವ ಅಧಿಕಾರ ಗೌಡನಿಗಿತ್ತು. ಈ ಎಲ್ಲ ಅಧಿಕಾರಗಳೊಂದಿಗೆ ಗೌಡ ವರ್ಗವು ಸ್ಥಳೀಯ ಪ್ರಭುತ್ವವೊಂದನ್ನು ಏರ್ಪಡಿಸಿಕೊಂಡು ಪ್ರಬಲ ಆರ್ಥಿಕ ಶಕ್ತಿಯಾಗಿ ಮಾರ್ಪಟ್ಟಿತು.

ಗೌಡವರ್ಗದ 'ಊರ ಗೌಡಿಕೆ'ಯ ಕೆಲಸ ಕಾರ್ಯಗಳು, ಹೊಣೆಗಾರಿಕೆಗಳು ಹಾಗೂ ಆರ್ಥಿಕ ಹೊಣೆಗಾರಿಕೆಗಳು, ಪ್ರಾಚೀನ ಕರ್ನಾಟಕದ ಕಾಲಘಟ್ಟದಿಂದ ಮಧ್ಯಕಾಲೀನ ಕರ್ನಾಟಕದವರೆಗೆ ಅಷ್ಟೇಕೆ ಆಧುನಿಕ ಕಾಲಘಟ್ಟದಲ್ಲಿಯೂ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಚಲಾವಣೆಯಾಗುತ್ತಿರುವುದು ಕಂಡುಬರುತ್ತದೆ.

"ಸಾಮಾನ್ಯವಾಗಿ ಗಾಮುಂಡ ಪದವಿ ಅನುವಂಶೀಯವಾಗಿ ನಡೆದುಬರುತ್ತಿತ್ತೆಂದು ತಿಳಿಯಬಹುದು"[೨೭] ಎಂಬ ಅಭಿಪ್ರಾಯ ಪ್ರಾಚೀನ ಕರ್ನಾಟಕದ ಮಟ್ಟಿಗೆ ನಿಜವೆನಿಸಿದರೂ,

ವಿಜಯನಗರೋತ್ತರ ಅವಧಿಯಲ್ಲಿ, ಸಾಧನೆ-ಸಾಹಸ ಕ್ರಿಯೆಗಳ ಮೂಲಕ ರಾಜನನ್ನು ಅಥವಾ ಸ್ಥಳೀಯ ಪ್ರಬಲ ಅರಸನನ್ನು ಒಲಿಸಿಯೋ ಇಲ್ಲವೇ ಮೆಚ್ಚಿಸಿಯೋ, ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಬಂದು, ಸ್ಥಳೀಯ ಜನರ ವಿಶ್ವಾಸವನ್ನು ಗಳಿಸಿ 'ಗೌಡಿಕೆ'ಯನ್ನು ಒಂದು 'ಹಕ್ಕಾಗಿ' ಪಡೆದುಕೊಂಡ ನಿರ್ದಶನಗಳು ನಮಗೆ ಜಯರೇಖೆಗಳಲ್ಲಿ ಲಭ್ಯವಾಗುತ್ತವೆ. ಗ್ರಾಮದ ಗೌಡಿಕೆ ಹಕ್ಕನ್ನು ಯಾರಿಗೆ ಬೇಕಾದರೂ ಕೊಡಬಹುದಾಗಿತ್ತು. ಒಂದು ಗ್ರಾಮದ 'ಗೌಡಿಕೆ'ಯನ್ನು ಹೊಂದುವುದು ಪ್ರತಿಷ್ಠೆಯ ವಿಷಯವಾಗಿತ್ತು. ಅಲ್ಲದೆ ಆರ್ಥಿಕವಾಗಿ ದೊರೆಯಬಹುದಾದ ವಿಶೇಷ ಸವಲತ್ತುಗಳೂ, ಗ್ರಾಮೀಣ ಆರ್ಥಿಕ ಚಟುವಟಿಕೆಗಳ ಮೇಲೆ ಸ್ಥಾಪಿಸಬಹುದಾದ ನಿಯಂತ್ರಣಾಧಿಕಾರ ಆ ಹುದ್ದೆಯನ್ನು ಆಕರ್ಷಿಸುತ್ತಿದ್ದವು. ಹಾಗಾಗಿ ಎಷ್ಟೋ ಸಂದರ್ಭಗಳಲ್ಲಿ ಗೌಡಿಕೆ ಹಕ್ಕು ಪಡೆಯಲು ಪೈಪೋಟಿ ಕಾದಾಟಗಳು ನಡೆಯುತ್ತಿದ್ದವು.

ಗ್ರಾಮೀಣ ಚಟುವಟಿಕೆಗಳ ಬಗ್ಗೆ ಶಾಸನಗಳಲ್ಲಿ ಸ್ವಲ್ಪಮಟ್ಟಿಗೆ ಹೆಚ್ಚಿನ ಮಾಹಿತಿ ಲಭ್ಯವಾಗುತ್ತದೆ. ಗ್ರಾಮಸ್ಥಾಪನೆ, ಗೌಡರ ನೇಮಕ, ಕೃಷಿಗೆ ಪೂರಕವಾದ ವೃತ್ತಿ ಸಮೂಹಗಳು, ಕೃಷಿ ಚಟುವಟಿಕೆಗಳು ಮುಂತಾದ ಅಂಶಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಆದರೆ ಜಯರೇಖೆಗಳಲ್ಲಿ ಗ್ರಾಮೀಣ ಸಮುದಾಯದ ಬಗೆಗಿನ ಕಲ್ಪನೆಗಳು ಮತ್ತು ಸಿದ್ಧಾಂತಗಳು ಈವರೆಗೆ ವಿದ್ವಾಂಸರು ನೀಡಿದ ಸಿದ್ಧಾಂತ, ಅಭಿಪ್ರಾಯಗಳಿಗಿಂತ ಭಿನ್ನವಾಗಿವೆ.

ಹಾಗಾಗಿ ಜಯರೇಖೆಗಳ ಪರಿಪ್ರೇಕ್ಷ್ಯದಲ್ಲಿ ಗ್ರಾಮಗಳ ಸ್ಥಾಪನೆ, ಗೌಡಿಕೆ ಹಕ್ಕಿನ ನಿಷ್ಕರ್ಷೆ, ಗ್ರಾಮದಲ್ಲಿ ಗೌಡಿಕೆಗೆ ಪೂರಕವಾದ ತತ್ಸಂಬಂಧಿ ಕುಲ ಸಮುದಾಯಗಳ ನೆಲೆಗೊಳ್ಳುವಿಕೆ ಮುಂತಾದ ವಿಷಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಗ್ರಾಮಗಳ ಸ್ಥಾಪನೆ**

ಮೂಲತಃ ಅಲೆಮಾರಿಯಾದ ಮಾನವ ಒಂದಡೆ ನೆಲೆನಿಂತು ತನಗೆ ಬೇಕಾದ ಆಹಾರವನ್ನು ಬೆಳೆದುಕೊಳ್ಳಲು ಪ್ರಾರಂಭಿಸಿದ ಹಂತದಿಂದಲೇ ಗ್ರಾಮೀಣ ವ್ಯವಸ್ಥೆಯ ಬಿಂದುರೂಪಿ ಹಂತವನ್ನು ಕಾಣಬಹುದು. ಆರಂಭದಲ್ಲಿ ನೀರಿನ ಪಸೆ ಇದ್ದಂತಹ ಪ್ರದೇಶಗಳಲ್ಲಿ ಕಂಡುಬಂದ ಇಂತಹ ಚಟುವಟಿಕೆಗಳು, ತರುವಾಯದ ಹಂತದಲ್ಲಿ ಮಳೆಯಾಧಾರಿತ ಪ್ರದೇಶಗಳಿಗೆ ವಿಸ್ತರಿಸುತ್ತಿದ್ದವು. ಪ್ರಭುತ್ವಗಳು ಅಸ್ತಿತ್ವಕ್ಕೆ ಬರುವುದಕ್ಕೆ ಮೊದಲೇ ಗ್ರಾಮಗಳು ಅಸ್ತಿತ್ವಕ್ಕೆ ಬಂದು ಗ್ರಾಮ ಪ್ರಭುತ್ವಗಳು ಪ್ರಬಲವಾಗಿದ್ದವು. ವಲಸೆಗಳು, ಜನಸಂಖ್ಯೆ ಹೆಚ್ಚಳ ಮುಂತಾದ ಅಂಶಗಳು ಕಾಡನ್ನು ಕಡಿದು ನಾಡಾಗಿಸುವ ಪ್ರಕ್ರಿಯೆಗೆ ಚಾಲನೆ ನೀಡಿದವು. ಗಂಗರ ಕಾಲದ ಶಾಸನಗಳು ಕಾಡನ್ನು ಕಡಿದು ಗ್ರಾಮಗಳನ್ನು ಸ್ಥಾಪಿಸಿದ ಬಗ್ಗೆ ಮಾಹಿತಿ ನೀಡುತ್ತವೆ. ಗಂಗರ ಶಾಸನಗಳಲ್ಲಿ ಶಾಸನಾನುಪೂರ್ವಿ ಘಟಕಗಳಲ್ಲಿ ರಾಜನು 'ಗಂಗವಾಡಿ ತೊಂಬತ್ತಾರು ಸಾಸಿರಮನಾಳುತ್ತಿರೆ' ಎಂಬ ಉಲ್ಲೇಖಗಳು ಬರುತ್ತವೆ. ಗಂಗವಾಡಿಯ 'ತೊಂಬತ್ತಾರು ಸಾಸಿರ' ವೆಂಬುದು ಗ್ರಾಮಗಳ ಸಂಖ್ಯೆಯನ್ನು ಸೂಚಿಸುತ್ತದೆ.

ಮೂಲತಃ ಬಯಲು ಪ್ರದೇಶದ ಕೃಷಿಕ ಸಮುದಾಯದ ಗಂಗರು ತಮ್ಮ ರಾಜ್ಯದಲ್ಲಿ ಅಂತರ್ಗತವಾಗಿದ್ದ ಗ್ರಾಮಗಳಿಗೆ ವಿಶೇಷ ಮನ್ನಣೆ ನೀಡಿ ಅವನ್ನು ತಮ್ಮ ಸಾಮ್ರಾಜ್ಯದ ಭಾಗವಾಗೇ ಶಾಸನಗಳಲ್ಲಿ ಅಂಗೀಕರಿಸಿದ್ದಾರೆ. 'ಗಂಗವಾಡಿ'ಯ ಉತ್ತರಪದ ವಾಡಿ> ಹಾಡಿಯು ಹಳ್ಳಿಯ ಅಥವಾ ಗ್ರಾಮದ ಆರಂಭಿಕ ಅಸ್ತಿತ್ವವನ್ನು ಸೂಚಿಸುತ್ತಿರುವುದು ಸ್ಪಷ್ಟವಾಗಿದೆ. ಹಾಗೆಯೇ ನೊಳಂಬರ ನೊಳಂಬವಾಡಿ ಮೂವತ್ತೆರಡು ಸಾವಿರವೂ ನೊಳಂಬರ ಅಧೀನದಲ್ಲಿದ್ದ ಮೂವತ್ತೆರಡು ಸಾವಿರ ಗ್ರಾಮಗಳ ಅಸ್ತಿತ್ವವನ್ನು ಸೂಚಿಸುತ್ತದೆ.

ರಾಷ್ಟ್ರಕೂಟರ ಅವಧಿಯಲ್ಲಿ 'ಗೋಸಾಸ' ಕಲ್ಲುಗಳ ಉಲ್ಲೇಖ ಬರುತ್ತದೆ. ಅದರಲ್ಲೂ ಭೌಗೋಳಿಕವಾಗಿ ಮಲೆನಾಡಿದ ಪ್ರದೇಶಗಳಾದ ಶಿವಮೊಗ್ಗ, ಹಾವೇರಿ, ಶಿರಸಿ ಪರಿಸರದ ಪ್ರದೇಶಗಳಲ್ಲಿ ಇವು ಹೆಚ್ಚಾಗಿ ಪ್ರಸರಿಸಿರುವುದು ವಿಶೇಷ. ಇವುಗಳನ್ನು ಅದೇ ಶಾಸನಗಳಲ್ಲಿ 'ಗೋಸಹಸ್ರ', 'ಮೇಂಟಿ ಕಲ್ಲು' ಎಂದೂ ಸಹ ಹೆಸರಿಸಲಾಗಿದೆ. ಇವುಗಳಲ್ಲಿ ಕುಂಭದ ಜೊತೆಗೆ, ಕೃಷಿ ಪರಿಕರವಾದ ನೇಗಿಲಿನ ಚಿತ್ರವಿರುವುದು ವಿಶೇಷವಾಗಿದೆ. ಅದಕ್ಕೆ ಇವುಗಳನ್ನು ಕೆಲವು ಶಾಸನಗಳು 'ಮೇಂಟಿಕಲ್ಲು' ಎಂದೂ ಸಹ ಉಲ್ಲೇಖಿಸಿವೆ. ವಿದ್ವಾಂಸರು ಇವು ಕಾಡನ್ನು ಕಡಿದು ಗ್ರಾಮಗಳಿಗೆ ಅಸ್ತಿಭಾರ ಹಾಕುವ ಸಂದರ್ಭದಲ್ಲಿ ಹಾಕಿಸುವ ಕಲ್ಲುಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಎಂದರೆ, ಅರೆಮಲೆನಾಡಿನ ಪ್ರದೇಶಗಳಲ್ಲಿ ಕೃಷಿ ಚಟುವಟಿಕೆಗಳನ್ನು ವಿಸ್ತರಿಸುವ ಸಲುವಾಗಿ ಕಾಡುಗಳನ್ನು ಕಡಿದು ನಾಡಾಗಿಸುವ ಪ್ರಕ್ರಿಯೆಯಲ್ಲಿ, ಗ್ರಾಮಗಳಿಗೆ ಅಸ್ಥಿಭಾರ ಹಾಕಿದ ನಂತರ ಬ್ರಾಹ್ಮಣರಿಗೆ ಸಹಸ್ರ ಗೋವುಗಳನ್ನು ದಾನ ಮಾಡಲಾಗುತ್ತಿತ್ತು. ಸಹಸ್ರ ಗೋವುಗಳನ್ನು ದಾನ ಮಾಡುವ ವಿಷಯ ಸಾಂಕೇತಿಕವೆನಿಸುತ್ತದೆ. ಕೆಂಪೇಗೌಡ ಬೆಂಗಳೂರನ್ನು ಸ್ಥಾಪಿಸುವ ಮುನ್ನ ಒಂದು ಕೇಂದ್ರ ಭಾಗದಿಂದ ನಾಲ್ಕು ಎತ್ತುಗಳನ್ನು ಪೂರ್ವ-ಪಶ್ಚಿಮ ಹಾಗೂ ಉತ್ತರ-ದಕ್ಷಿಣ ದಿಕ್ಕುಗಳಲ್ಲಿ ನೇಗಿಲಿನ ಸಮೇತ ಬಿಟ್ಟಾಗ, ಅವು ನಾಲ್ಕು ಕಡೆಗೂ ಹೊರಟ ಮಾರ್ಗಗಳನ್ನು ಆಧಾರವಾಗಿಟ್ಟುಕೊಂಡು ಅದರ ಸುತ್ತಲೂ ಕೋಟೆ ನಿರ್ಮಿಸಿ ಬೆಂಗಳೂರು ಸ್ಥಾಪಿಸಿದ ಎಂಬ ಐತಿಹ್ಯಗಳನ್ನು ಈ ಗೋಸಾಸ ಕಲ್ಲುಗಳ ಸ್ಥಾಪನೆಗೆ ಅನ್ವಯಿಸಿದಾಗ, ಗ್ರಾಮಸ್ಥಾಪನೆಗೆ ಅಸ್ಥಿಭಾರ ಹಾಕುವಾಗ ಈ ಕಲ್ಲುಗಳನ್ನು ಪೂರ್ಣಕುಂಭ ಹಾಗೂ ನೇಗಿಲಿನ ಚಿತ್ರದೊಂದಿಗೆ ಸ್ಥಾಪಿಸಿ ಸಹಸ್ರ ಎತ್ತುಗಳ ಮೂಲಕ ಉಳುಮೆ ಮಾಡಿಸಿ ಗ್ರಾಮಗಳನ್ನು ನಿರ್ಮಾಣ ಮಾಡುತ್ತಿದ್ದರೆಂದು ಊಹಿಸಬಹುದು. ಗ್ರಾಮಸ್ಥಾಪನೆಯ ನಂತರ ಆ ಗ್ರಾಮಗಳಿಗೆ ಎಲ್ಲ ಸಮುದಾಯಗಳ ಜನ ವಲಸೆ ಬಂದು ನೆಲೆಗೊಳ್ಳಲು ಸಾಧ್ಯವಾಗುವಂತೆ ವಿನಾಯಿತಿಗಳನ್ನು ನೀಡಲಾಗುತ್ತಿತ್ತು. ಸ್ಥಳೀಯವಾದ ಕೃಷಿ ಸಮುದಾಯದ ಒಬ್ಬ ವ್ಯಕ್ತಿಯನ್ನು ಆ ಗ್ರಾಮದ ಗಾವುಂಡನನ್ನಾಗಿ ನೇಮಕ ಮಾಡಲಾಗುತ್ತಿತ್ತು. ಇಡೀ ಗ್ರಾಮದ ಕೃಷಿ ಚಟುವಟಿಕೆಗಳಿಗೆ ಪೂರಕವಾದಂತಹ ಕೆರೆ, ಕಟ್ಟೆ, ಕಾಲುವೆಗಳ, ಅರವಂಟಿಗೆಗಳ ನಿರ್ಮಾಣ, ಕೃಷಿಗೆ ಸಂಬಂಧಪಟ್ಟ ತೆರಿಗೆಗಳ ಸಂಗ್ರಹಣೆ, ಗ್ರಾಮದ ರಕ್ಷಣೆ, ದೇವಾಲಯಗಳ ನಿರ್ವಹಣೆ ಮುಂತಾದ ಕೆಲಸಗಳ ನಿರ್ವಹಣೆ ಗಾಮುಂಡನದಾಗಿರುತ್ತಿತ್ತು. ಇದಲ್ಲದೆ, ಗ್ರಾಮದ ಎಲ್ಲ ಸಮುದಾಯಗಳ ಮೇಲಿನ ನಿಯಂತ್ರಣ ಆಯಾ ಗ್ರಾಮದ ಮುಖಂಡನದಾಗಿರುತ್ತಿತ್ತು. ಹಲವಾರು

ಊರಳಿವು, ಪೆಣ್ಬುಯಲ್, ಕಳ್ಳರೊಂದಿಗಿನ ಹೋರಾಟ, ಸೀಮಾಕಾಳಗಗಳಲ್ಲಿ ಮೃತರಾದ ವೀರರು ಬಹುತೇಕ ಊರಗೌಡರಾಗಿರುತ್ತಿದ್ದರು. ಇಲ್ಲವೇ ಇಂಥ ಕಾಳಗಗಳಲ್ಲಿ ಮೃತರಾಗುವ ವ್ಯಕ್ತಿಗಳಿಗೆ ವೀರಗಲ್ಲುಗಳನ್ನು ನೆಡಿಸಿ, ದಾನ ನೀಡುವ ಕರ್ತವ್ಯವೂ ಗೌಡನದಾಗಿರುತ್ತಿತ್ತು.

ಈ ಹಿಂದೆ ವಿವರಿಸಲಾದ ಎಲ್ಲ ಸನ್ನಿವೇಶಗಳು ಪ್ರಾಚೀನ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿವೆ. ಮಧ್ಯಕಾಲೀನ ಇತಿಹಾಸದ ಚಿತ್ರಣ ಪ್ರಾಚೀನ ಕರ್ನಾಟಕದ ಚಿತ್ರಣಕ್ಕಿಂತ ಭಿನ್ನವಾಗಿದೆ. ವಿಜಯನಗರದ ಅರಸರು ವಿಶಾಲ ಸಾಮ್ರಾಜ್ಯಕ್ಕೆ ಬುನಾದಿ ಹಾಕಿದ್ದರಿಂದ 'ಕೇಂದ್ರೀಕೃತ ವ್ಯವಸ್ಥೆಯ' ಮಾನದಂಡದ ಆಧಾರದ ಮೇಲೆ ಇಡೀ ಸಾಮ್ರಾಜ್ಯವನ್ನು ರಾಜನೊಬ್ಬನೇ ನಿಯಂತ್ರಿಸುವುದು ಅಸಾಧ್ಯವಾಗಿತ್ತು. ಈ ಸಂದರ್ಭದಲ್ಲಿ ಹುಟ್ಟಿಕೊಂಡವರೇ ಕಾರ್ಯಕ್ಕೆ ಕರ್ತರು, ದಳವಾಯಿಗಳು, ನಾಯಕರು, ಅಮರ ನಾಯಕರು. ಒಂದೊಂದು ಪ್ರದೇಶ ಒಬ್ಬೊಬ್ಬ ನಾಯಕನ ಅಧೀನದಲ್ಲಿ ಬರುತ್ತಿದ್ದುದರಿಂದ ಎಲ್ಲ ರೀತಿಯ ತೆರಿಗೆಗಳು ಏಕರೂಪವಾಗಿರುತ್ತಿರಲಿಲ್ಲ. ಅಧಿರಾಜನ ಗಮನಕ್ಕೆ ಬಾರದಂತೆ ಅತಿಯಾದ ತೆರಿಗೆಗಳ ಬಾರದಿಂದ ಪ್ರಜೆಗಳನ್ನು ಪೀಡಿಸಲಾಗುತ್ತಿತ್ತು. ಇದರಿಂದ ಕೃಷಿ ಸಮುದಾಯಗಳ ವಲಸೆಗಳ ಪ್ರಮಾಣ ಈ ಸಂದರ್ಭದಲ್ಲಿ ಹೆಚ್ಚಾಗುವುದನ್ನು ಕಾಣಬಹುದು. ಒಂದೊಂದು ಗ್ರಾಮಗಳಿಂದ ಬೃಹತ್ ಸಮುದಾಯಗಳೇ ವಲಸೆ ಬಂದ ನಿದರ್ಶನಗಳು ಶಾಸನಗಳಲ್ಲಿ ಕಂಡುಬರುತ್ತವೆ.ಗ್ರಾಮಗಳ ಸ್ಥಾಪನೆಗೆ ಆಳುವ ಅರಸರ ಅನುಮತಿ ಕಡ್ಡಾಯವಾಗಿತ್ತು. ಒಂದು ಪ್ರದೇಶದಿಂದ ವಲಸೆ ಬಂದ ಜನ ಅಲ್ಲಿನ ಸ್ಥಳೀಯ ಅರಸ ಅಥವಾ ಅಧಿಕಾರಿಯ ಅನುಮತಿ ಪಡೆದು ಗ್ರಾಮಗಳನ್ನು ಸ್ಥಾಪಿಸಬೇಕಾಗಿತ್ತು.

ಜಯರೇಖೆಗಳ ಹಿನ್ನಲೆಯನ್ನು ಗಮನಿಸಿದಾಗ, ಪ್ರತಿಯೊಂದು ಗ್ರಾಮಗಳ ನಿರ್ಮಾಣವೂ ಸಹ ವಲಸೆ ಬಂದ ವ್ಯಕ್ತಿಗಳಿಂದಲೇ ಆಗಿದೆ. ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಬಂದು ಅಲ್ಲಿ ಗ್ರಾಮಗಳನ್ನು ಸ್ಥಾಪಿಸಿ ಅವುಗಳಿಗೆ ಹೆಸರುಗಳನ್ನಿಡಲಾಗುತ್ತಿತ್ತು. 'ಗ್ರಾಮದ' ಘಟಕ ಪರಿಪೂರ್ಣವಾಗಬೇಕಾದರೆ, ಅದರಲ್ಲಿ ಎಲ್ಲ ಸಮುದಾಯಗಳ, ವೃತ್ತಿಗಳ ಜನಸಮೂಹವೂ ನೆಲೆಗೊಳ್ಳುವುದು ಅಗತ್ಯ. ಹೀಗಾಗಿ ವಲಸೆ ಬಂದು ಗ್ರಾಮಗಳನ್ನು ಸ್ಥಾಪಿಸುವಾಗ ಗ್ರಾಮೀಣ ವ್ಯವಸ್ಥೆಯ ಅವಿಭಾಜ್ಯ ಅಂಗಗಳಾದ ಆಯಗಾರರನ್ನೂ ಸಹ ತಮ್ಮೊಡನೆ ಕರೆತರುತ್ತಿದ್ದರು.

ರೊಳ್ಳದ ಜಯರೇಖೆ ಶಾಸನ ಗ್ರಾಮಗಳ ನಿರ್ಮಾಣ, ನಿರ್ಮಾಣವಾದ ಗ್ರಾಮಗಳಿಗೆ ಗೌಡರು ಹಾಗೂ ಕಾಣಚಿಗರು ಹಾಗೂ ಕೈವಾಡದವರು ಯಾರು ಯಾರು ಇರಬೇಕೆಂಬ ಬಗ್ಗೆ ನಿಷ್ಕರ್ಷೆ ಮಾಡಿರುವುದನ್ನು ಕಾಣಬಹುದು. ಗ್ರಾಮಗಳನ್ನು ಎಲ್ಲೆಂದರಲ್ಲಿ ನಿರ್ಮಿಸುತ್ತಿರಲಿಲ್ಲ. ಎಲ್ಲ ರೀತಿಯಿಂದಲೂ ಸೂಕ್ತವಾದ ಆಯಕಟ್ಟಿನ ಸ್ಥಳವನ್ನು ಗುರುತಿಸಿದ ನಂತರ ಅಲ್ಲಿ ಗ್ರಾಮಗಳನ್ನು ನಿರ್ಮಾಣ ಮಾಡಲಾಗುತ್ತಿತ್ತು. ಗ್ರಾಮಗಳನ್ನು ನಿರ್ಮಾಣ ಮಾಡುವುದಕ್ಕೆ ಮುನ್ನ ಗೌಡರು ತಮ್ಮ ಸಾಮರ್ಥ್ಯವನ್ನು ಎಂದರೆ ತನಗಿರುವ ಜನಬಲವನ್ನು ಪ್ರದರ್ಶಿಸಬೇಕಿತ್ತು ಅಥವಾ ರಾಜನಿಗೆ ಅರಿಕೆ

ಮಾಡಿಕೊಳ್ಳಬೇಕಾಗಿತ್ತು. ಉಪ್ಪಿನ ಕೊಳಗದ ವೀರಮುದೇಗೌಡ ಬೊಂಮನಾಯಕರ ಬಳಿ ಹೋಗಿ ತನಗೆ ಕಾಣಚಿಗರು ಮತ್ತು ಕೈವಾಡದವರ ಸಮೇತ ಹೇರಳ ಜನಬಲವಿದೆಯೆಂದು ಅರಿಕೆ ಮಾಡಿಕೊಂಡದ್ದರಿಂದ, ಬೊಮ್ಮನಾಯಕನು ನನಗೆ ಹರಿಹರ ಬುಕ್ಕರಾಯರು ಯಾವ ಯಾವ ಸ್ಥಳದಲ್ಲಿ ಯಾರು 'ಬುದ್ಧಿವಂತರಾಗಿ' ಕಾಣಿಸುತ್ತಾರೋ ಅವರಿಗೆ ಸ್ಥಳಗಳನ್ನು ನಿಷ್ಕರ್ಷೆ ಮಾಡಿ, ರಾಜ್ಯವಾಳಿಕೊಂಡು ಇರಿ ಎಂದು ಅಪ್ಪಣೆ ಕೊಟ್ಟಿರುವುದಾಗಿ ತಿಳಿಸಿ 'ಅನುವಾದ' ಸ್ಥಳ ವಿಚಾರಿಸಿ ಮುಹೂರ್ತವಿಟ್ಟು ಅದಕ್ಕೆ ಮದಸಮುದ್ರವೆಂಬ ಗ್ರಾಮ ನಿರ್ಮಾಣ ಮಾಡಿ ಆ ಸ್ಥಳಕ್ಕೆ ಕಾಟೆಗೋತ್ರದ ವೀರ ಮುದೆಗೌಡನಿಗೆ ಗೌಡಿಕೆ ನಿಷ್ಕರ್ಷ ಮಾಡಿಕೊಡುತ್ತಾನೆ. ಆ ಗ್ರಾಮಕ್ಕೆ ಕಾಣಚಿಗರನ್ನಾಗಿ ಶಾನುಭೋಗ ಸಿರನಾಡ ತಿಮ್ಮರಸಯ್ಯ, ತಳವಾರ ಮಾಟ್ನ, ಬೇಡರ ಪೋಬಳಿಗೆ, ಕಮ್ಮಾರ ವುತ್ತರಾಜಿ, ಕನ್ನಡಿಗ ವೀರಪ್ಪ, ಕೆಲಸಿ ಮದುಟಜಿ, ಅಗಸವೊಬಳೇಶ, ಮಾದಿಗ ಮಲ್ಲ ಗುಂಡ, ಕೋಟೆ ಮುಚರ್ಲ ಮಾಳಿಗ ಮುಂತಾದವರನ್ನು ಕಾಣಚಿಗರನ್ನಾಗಿ ನಿಷ್ಕರ್ಷೆ ಮಾಡುತ್ತಾರೆ. ನಂತರ ಮುದೇಗೌಡನ ಮೊಮ್ಮಗ ಕಾಟಿಸಿಂಗರಿಗೌಡನ ಕಾಲಕ್ಕೆ ಸ್ಥಳದ ಅಭಾವ ಉಂಟಾಗಿ, ಬೊಮ್ಮನಾಯಕನ ಮಗ ಕಾಮಾನಾಯಕರ ಬಳಿ ಹೋಗಿ ನಮಗೆ ಒಂದು ಸ್ಥಳ ನಿಷ್ಕರ್ಷೆ ಮಾಡಿಕೊಡಬೇಕೆಂದು ಬೇಡಿಕೊಂಡಾಗ "ನಿಮಗೆ ಯಲ್ಲಿ ಸ್ಥಳ ವಳ್ಳೆಯದೋ ನೋಡಿಬಂನ್ನಿ" ಎಂದು ಅಪ್ಪಣೆ ನೀಡಿದಾಗ, ಅದೇ ಊರಿನ ದಕ್ಷಿಣ ದಿಕ್ಕಿನಲ್ಲಿ ಕರಡಿಗೊಲ್ಲರ ದಾಸರೊಡನೆಂಬವನು ಹಟ್ಟಿಹಾಕಿಕೊಂಡು ಇದ್ದಂತಹ ಸ್ಥಳ ಒಳ್ಳೆಯದು ಎಂದು ಅರಿಕೆ ಮಾಡಿದಾಗ, ಅದಂತೆಯೇ ಆ ಗೊಲ್ಲರ ಹಟ್ಟಿಗೆ ಮೂಡಲಾಗಿ ಗ್ರಾಮ ನಿರ್ಮಾಣ ಮಾಡಿ, ಕೋಟೆ ಹಾಕಿ, ಅಲ್ಲಿ ಆಂಜನೇಯ, ಮನೆ ದೇವತೆ ಲಕ್ಷ್ಮೀದೇವಿಯ ದೇವಾಲಯ ನಿರ್ಮಾಣ ಮಾಡಿ, ಅದಕ್ಕೆ ಗೋವಿಂದರಾಜಪುರ ಎಂದು ನಾಮಕರಣ ಮಾಡುತ್ತಾನೆ. ಅಲ್ಲದೆ, ಪೂರ್ವ, ಪಶ್ಚಿಮ, ಉತ್ತರ ಭಾಗಗಳಲ್ಲಿ ತೋರಣ ಮುದ್ರೆ ಕಲ್ಲನ್ನು ನೆಡಸುತ್ತಾರೆ. ದಕ್ಷಿಣ ದಿಕ್ಕಿನಲ್ಲಿ ಇನ್ನೂ ಕಾಡು ಹಾಗೆ ಉಳಿದಿದ್ದರಿಂದ ಗಿಡ ಸಾಧಿಸುವವರೆಗೆ ತೋರಣ ಮುದ್ರೆ ಕಲ್ಲು ಸ್ಥಾಪಿಸಲಿಲ್ಲ. ಊರ ಮೂಡಲದಿಕ್ಕಿನ ಬಾಗಿಲಲ್ಲಿ ಕಾಗೆ, ಗೂಬೆ ಹೊಕ್ಕಿದ್ದರಿಂದ ಆ ಬಾಗಿಲು ಬಿಟ್ಟು ದಕ್ಷಿಣದಲ್ಲಿ ಊರ ಬಾಗಿಲನ್ನು ಇಟ್ಟು ಗೋವಿಂದಪುರ ಎಂಬ ಹೆಸರನ್ನು ತೆಗೆದು 'ರೊರ್ಳೆ' ಎಂಬ ಮರುನಾಮಕರಣ ಮಾಡುತ್ತಾರೆ.[೨೮]

ಹೊಸ ಹೊಸ ಗ್ರಾಮಗಳ ನಿರ್ಮಾಣಕ್ಕೆ ಈಗಾಗಲೇ ಅಲ್ಲಿ ನೆಲೆಗೊಂಡಿದ್ದ ಮೂಲ ಬುಡಕಟ್ಟು ಒಕ್ಕಲುಗಳನ್ನು ಒಕ್ಕಲೆಬ್ಬಿಸುವ ಪ್ರಕ್ರಿಯೆಯನ್ನು ಸಹ ಇಲ್ಲಿ ಗಮನಿಸಬೇಕು. ಹೊಸ ಗ್ರಾಮಕ್ಕೆ 'ವಳ್ಳೆಯ' ಸ್ಥಳದ ಹುಡುಕಾಟದಲ್ಲಿ ಈಗಾಗಲೇ ಅಲ್ಲಿ ಹಟ್ಟಿ ಹಾಕಿಕೊಂಡಿದ್ದ ಕರಡಿಗಲ್ಲರ ದಾಸನನ್ನು ಒಕ್ಕಲೆಬ್ಬಿಸುವ ಕ್ರಮ ಈ ಇಪ್ಪೊಂತ್ತೊಂದನೆಯ ಶತಮಾನದಲ್ಲಿ ಬಂಡವಾಳಶಾಹಿಗಳಿಗೆ, ಬಲಾಢ್ಯರಿಗೆ ಮಣೆ ಹಾಕಲು ಬಡಪಾಯಿಗಳನ್ನು ತೆರವುಗೊಳಸುವ ಪ್ರಕ್ರಿಯೆಯನ್ನು ನೆನಪಿಸುತ್ತದೆ. ಕಾಲ ಯಾವುದಾದರೂ, ಸಮಾಜದಲ್ಲಿ ಕೆಲವು 'ಕ್ರಮಗಳು' ಉಳ್ಳವರಿಗೆ ಮಾತ್ರ ಅನ್ವಯವಾಗುತ್ತವೆಂಬುದು ಚಾರಿತ್ರಿಕ ಸತ್ಯವಾಗಿದೆ.

ತುಮಕೂರಿನ ಮಧುಗಿರಿ ತಾಲೂಕಿನ ಗುಂಡ್ಲಹಳ್ಳಿಯ ಜಯರೇಖೆ ಶಾಸನವು ಅದನ್ನು ಹಾಕಿಸಿದ ವ್ಯಕ್ತಿಯಿಂದಾಗಿ ಗಮನಸೆಳೆಯುತ್ತದೆ.[೨೯] ಸಿದ್ಧಾಪುರದಲ್ಲಿ ನೂರು ಮನೆಗಳ ಪೈಕಿ ಕಂಬೇಗೌಡ, ಕರೆಗೌಡ, ರಾಯಂನಗೌಡ, ರುಣೆಗೌಡ, ಗೋವಿಂದಗೌಡ, ಮುಂತಾದ ಗೌಡರು ೧೮೯೨ ವರಹ ಸಾಲ ಮಾಡಿ ಕೋಟೆ ಕಟ್ಟಿಸಿರುತ್ತಾರೆ. ಜಿರ್ಲೆ ಮಲ್ಲಮ್ಮ ಆ ಸಾಲವನ್ನು ತೀರಿಸಿ, ದೇವಾಲಯದ ಮುಂದೆ ಹಲವಾರು ಕಾಮಗಾರಿಗಳನ್ನು, ದಾನ ಧರ್ಮಗಳನ್ನು ಮಾಡುತ್ತಾಳೆ. ಅಲ್ಲದೆ ಗೋಪಾಕೃಷ್ಣ ದೇವಾಲಯದ ಬಳಿ ಬಾವಿ ಕಡಿಸಿ, ಸೋಪಾನ ಮಾಡಿಸಿ ಅಲ್ಲಿ ಪೂರ್ವಾಭಿಮುಖವಾಗಿ ಎರಡು ಕಂಬಗಳ ನೆಡಿಸಿ ಒಂದು ಕಂಬದಲ್ಲಿ ತನ್ನ ಶಿಲ್ಪವನ್ನು ಕಡಿಸುತ್ತಾಳೆ. ಯಾರಾದರೂ ಪುಣ್ಯಾತ್ಮರು ತನ್ನ ತಲೆ ಮೇಲೆ ಒಂದು ಬೊಗಸೆ ನೀರು ಹಾಕಬೇಕೆಂದು ಮತ್ತು ತನ್ನ ವಂಶಸ್ಥರ ಮನೆಯಲ್ಲಿ ಹಸು ಮತ್ತು ಎಮ್ಮೆ ಈದರೆ ತಲೆಗೆ ಮತ್ತು ಬಾಯಿಗೆ ಬೆಣ್ಣೆ ಇಡಬೇಕೆಂದು ಬೇಡಿಕೊಳ್ಳುತ್ತಾಳೆ. ಅಲ್ಲದೆ ಊರಿನ ೧೦೦ ಮನೆಗಳಿಗೆ ಸಿದ್ಧಾಪುರದ ವಂನೆಗೌಡ ಮತ್ತು ಮರಿತಿಮ್ಮನ ಹಳ್ಳಿ ದಾಸೇಗೌಡರೇ ಯಜಮಾನರಾಗಿದ್ದು, ಅವರು ಹೇಳಿದ ಮಾತಿನ ಪ್ರಕಾರ ಸಿದ್ಧಾಪುರ ಹಾಗೂ ಕುಡೂತಿ ಎರಡು ಗ್ರಾಮಗಳವರು ಎರಡು ಯೀಸೆ ಪ್ರಕಾರ ಗ್ರಾಮಸೇವೆ ನಡೆಸಿಕೊಡಬೇಕು ಮತ್ತು ನೂರು ಮನೆಯ ಸರದಿಯ ಮೇಲೆ ಎರಡು ಯೀಸೆ ಪ್ರಕಾರ ವರ್ಷಂಪ್ರತಿ ನಡೆಸಿಕೊಂಡು ೧೨ ಕೈವಾಡ ಮತ್ತು ಬಾರಾಬನೂತಿಯನ್ನು ಇಟ್ಟುಕೊಂಡು ದೇವರ ಸೇವೆ ಇತ್ಯಾದಿ ಕರ್ತವ್ಯ ನಡೆಸಿಕೊಂಡು ಹೋಗಬೇಕೆಂದು ಹೇಳಿ ಕೆಲವು ದೇವಾಲಯಗಳಿಗೆ ಪೂಜಾರಿಗಳನ್ನು ನಿಷ್ಕರ್ಷೆ ಮಾಡುತ್ತಾಳೆ. ಗೋಪಾಲಕೃಷ್ಣ ದೇವರಿಗೆ ವೈಯಿಷ್ಟಮನನ್ನು, ಯೀರಗಾರರ ಪೂಜಾರಿಯಾಗಿ ತಂಮನನ್ನು, ಲಕ್ಷ್ಮದೇವರ ಪೂಜಾರಿಯನ್ನಾಗಿ ಗುಂಡಲಹಳ್ಳಿ ಯಜಮಾನನನ್ನು ಹಿರೇವಂನೆಗೌಡನ ತಮ್ಮನನ್ನು ಹಣ್ಣು ಹೂವಿನ ಎಡೆಗೆ ನಿಯೋಜನೆ ಮಾಡುತ್ತಾಳೆ. ಇವರಿಗೆ ಗುರುವಾಗಿ ಪೆನುಗೊಂಡೆ ಬಿಜ್ಜಾವರದ ತಿರುಮಲ ತಾತಾಚಾರಿಯನ್ನು ಹಾಗೂ ವಂನೆಗೌಡ, ಮರಿತಿಮ್ಮನಹಳ್ಳಿ ದಾಸೇಗೌಡರನ್ನು ನೇಮಕ ಮಾಡಿ ೧೦೦ ಮನೆಯವರು ತಪ್ಪದೆ ಪಾಲಿಸಬೇಕೆಂದು ಹೇಳಿ ಜಯರೇಖೆ (ಜೈರೇಖೆ) ಬರೆಸುತ್ತಾಳೆ.

ಇಲ್ಲಿ ಜಿರ್ಲೆ ಮಲ್ಲಮ್ಮ ನಿಷ್ಕರ್ಷೆ ಮಾಡಿದ ಪೂಜಾರಿಗಳೆಲ್ಲರೂ, ಕೆಳಸಮುದಾಯಗಳಿಗೆ ಸೇರಿದವರೆಂಬುದು ಗಮನಾರ್ಹ. ಶ್ರೀವೈಷ್ಣವ ಧರ್ಮದ ಪ್ರಭಾವ ಪೂಜಾ ವ್ಯವಸ್ಥೆ ಮೇಲೆ ಆಗಿರುವ ಪಲ್ಲಟಗಳನ್ನು ಸಹ ಈ ಶಾಸನ ಬಿಂಬಿಸುತ್ತದೆ. ಶಾಸನದಲ್ಲಿ ಕುಡೂತಿ ಗ್ರಾಮದ ಸ್ಥಾಪನೆಯ ಬಗ್ಗೆ ನೇರವಾಗಿ ಉಲ್ಲೇಖಿಸದಿದ್ದರೂ, ಅಲ್ಲಿ ನಡೆಯುವ ಕಾಮಗಾರಿಗಳ ವಿವರಗಳು ಎಂದರೆ ಕೋಟೆ–ಕೊತ್ತಳಗಳು ಹಾಗೂ ದೇವಾಲಯ, ಬಾವಿ, ಸೋಪಾನ, ಮುಂತಾದ ನಿರ್ಮಾಣ ಕಾರ್ಯ ಹಾಗೂ ಮಣ್ಣಿನ ಕಾರ್ಯ, ಕಲ್ಲಿನ ಕಾರ್ಯ ಹಾಗೂ ಹೊಸದಾಗಿ ನಿರ್ಮಿಸಿದ ನಿರ್ಮಾಣಗಳ ಪೂಜೆಗಾಗಿ, ಅನ್ನಸಂತರ್ಪಣೆಗಾಗಿ ಮಾಡುವ ವಿಧಿವಿಧಾನಗಳನ್ನು ಗಮನಿಸಿದಾಗ, ಹೊಸ ಗ್ರಾಮವನ್ನು ನಿರ್ಮಿಸಿ, ಆ ಗ್ರಾಮದಲ್ಲಿ ೧೦೦ ಗೌಡ ಸಮುದಾಯಗಳು ನೆಲೆಗೊಳಿಸಿ ಅವರಿಗೆ ಅನುಕೂಲಕರವಾಗಿ ೧೨ ಕೈವಾಡದವರು ನೆಲೆಗೊಳ್ಳುವಂತೆ ಮಾಡಿದ ಕೆಲಸ, ಆ ಗ್ರಾಮಕ್ಕೆ ಗೌಡರ, ಪೂಜಾರಿಗಳ ನೇಮಕ,

ಅವರೆಲ್ಲರಿಗೂ ಗುರುವಾಗಿ ತಿರುಮಲೆ ತಾತಾಚಾರ್ಯರ ನಿಯೋಜನೆ, ಮುಂತಾದ ಅಂಶಗಳು ಹೊಸ ಗ್ರಾಮ ಸ್ಥಾಪನೆಯ ವಿಷಯವನ್ನೇ ಹೇಳಹೊರಟಿವೆ ಎಂದು ಆದ್ಯಾರೋಹಣ ಮಾಡಿಕೊಳ್ಳಬಹುದಾಗಿದೆ.

ಬಾಗಳಿ ಕಂಚಿನ ಪತ್ರದ ಪ್ರಕಾರ[೩೦] ಖರೇಖಂಡೇ ರಾಯನ ಬಾಗಿಲು ಕಾಯುವ ಗೊಲ್ಲರ ಗೋಪಾಲಗೌಡನು ಬಾಗಳಿ ಗ್ರಾಮವನ್ನು ಹುಗ್ಗಿ ಹೊಯ್ದು ಸ್ಥಾಪಿಸಿದ. ಅದಕ್ಕೆ ಆಯಗಾರರಾಗಿ ಮೇಟಿ ಬಣಕಾರನನ್ನು, ಶಾನುಬೋಗ ವೆಂಕಟಪತಿಯನ್ನು, ಪತ್ತಾರಿ ಕರಿಯಣ್ಣನನ್ನು, ಅಗಸರ ಮಲ್ಲಣ್ಣ, ತಳವಾರರ ಭೀಮಪ್ಪ, ಚಲವಾದಿ ಕಂಗಣನನ್ನು ಸ್ಥಿರಪಡಿಸಲಾಯಿತು. ಅಲ್ಲದೆ ಅವರು ಬಾಗಳಿ ಗ್ರಾಮಕ್ಕೆ ಮಾತ್ರವಲ್ಲದೆ ಮೂವತ್ತ ಮೂರು ಗ್ರಾಮಗಳಿಗೂ ಆಯಗಾರರಾಗಿ ಸ್ವಸ್ಥಿ ಪಡೆದಿರುತ್ತಾರೆಂದು ಶಾಸನ ಉಲ್ಲೇಖಿಸುತ್ತದೆ. ಕಾಮಭಟ್ಟ ಎಂಬುವವನಿಗೆ ಬಾಗಳಿಗೆ ಸೇರಿದ ೩೩ ಹಳ್ಳಿಗಳ ಪೌರೋಹಿತ್ಯದ ಹಕ್ಕನ್ನು ಬಿಟ್ಟುಕೊಡಲಾಗಿದೆ.

ವೀರಕ್ಯಾತರಾಯ ದಿಗ್ವಿಜಯ ಕಥನ ಪರಂಪರೆ ಪ್ರಕಾರ ದಕ್ಷಿಣಕ್ಕೆ ಹೊರಡುವ ವೀರಕ್ಯಾತರಾಯ ದನಗಳನ್ನೆಲ್ಲ ಮೇಯಿಸುತ್ತ ದೇಶದಲ್ಲೆಲ್ಲಾ ತಿರುಗಾಡಿ ವಡ್ಡಗೆರೆಗೆ ಬಂದು ಕೋಟೆ ಕೊತ್ತಲಗಳನ್ನು ಕಟ್ಟಿಸಿ ರಾಜ್ಯಭಾರ ಮಾಡುತ್ತಿರುತ್ತಾನೆ. ಇವನ ಮೇಲೆ ತುಂಬಾಡಿಯ ಮಲ್ಲನಾಯ್ಕನೆಂಬುವವನು ಹೇಳಿದ ಚಾಡಿ ಮಾತಿನಿಂದ ಪೆನುಗೊಂಡೆರಾಯ ಇವನಿಗೆ ಎಲ್ಲ ರೀತಿಯ ಪರೀಕ್ಷೆಗಳನ್ನು ಒಡ್ಡುತ್ತಾನೆ. ವೀರಕ್ಯಾತರಾಯ ಎಲ್ಲ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುತ್ತಾನೆ. ಇದರಿಂದ ಸಂಪ್ರೀತನಾದ ಪೆನುಗೊಂಡೆಯಾದ ಏನನ್ನಾದರೂ ಬೇಡಿಕೋ ಎಂದಾಗ ದನಗಳಿಗಾಗಿ ನೇಯ್ದಿದ್ದ ಕಣ್ಣಿಯನ್ನು ಬಿಸಾಕಿ, ಅದು ಎಲ್ಲಿಯವರೆಗೆ ಹೋಗುತ್ತದೆಯೋ ಅಷ್ಟು ಜಾಗವನ್ನು ಮಾತ್ರ ದೊರೆಗಳಿಂದ ಪಡೆದು ಅಲ್ಲಿ ಗ್ರಾಮ ನಿರ್ಮಾಣ ಮಾಡಿ 'ತಾಡಿ' ಎಂದು ಹೆಸರಿಡುತ್ತಾರೆ.[೩೧]

ವೀರಗಲ್ಲುಗಳನ್ನು ಹಾಕಿಸುವ ಪರಂಪರೆ ನಮಗೆ ಕರ್ನಾಟಕದಲ್ಲಿ ಐದನೆಯ ಶತಮಾನದಿಂದಲೇ ಕಂಡುಬರುತ್ತದೆ. ಹಾಕಿಸಿದ ಎಲ್ಲ ವೀರಗಲ್ಲುಗಳಿಗೆ ಕಥನಗಳು ಹುಟ್ಟಿಕೊಳ್ಳಲಿಲ್ಲ. ವೀರಕಥನಗಳು ಹೆಚ್ಚೆಚ್ಚು ಮೌಖಿಕವಾಗಿ ಜನ್ಮ ತಾಳಿದ್ದು ಪಶುಪಾಲನಾ ಅಲೆಮಾರಿ ಸಮುದಾಯಗಳಲ್ಲಿ ಮಾತ್ರ. ಏಕೆಂದರೆ, ಪಶುಪಾಲನೆಯನ್ನೇ ತಮ್ಮ ಪ್ರಧಾನವೃತ್ತಿಯನ್ನಾಗಿ ಮಾಡಿಕೊಂಡಿದ್ದ ಸಮುದಾಯಗಳಿಗೆ ಪಶುಸಂಪತ್ತೇ ಆದಾಯದ ಪ್ರಮುಖ ಮೂಲವಾಗಿತ್ತು. ಅವುಗಳನ್ನು ಮೇಯಿಸಲು ಸ್ಥಳಲಭ್ಯತೆ ತುಂಬಾ ಮುಖ್ಯ. ಅಂಥ ಸ್ಥಳಗಳ ಒಡೆತನವನ್ನು ಹೊಂದಬೇಕಾದರೆ, ಪ್ರಭುತ್ವಗಳ ಅನುಗ್ರಹ–ಅನುಮತಿ ಕಡ್ಡಾಯವಾಗಿತ್ತು. ಪ್ರಭುತ್ವದ ಒಪ್ಪಿಗೆಯನ್ನು ಪಡೆಯಲು ಹರಸಾಹಸ ಮಾಡ ಬೇಕಾಗಿತ್ತು. ಪ್ರಭುತ್ವ ಇಂಥ ಸಮುದಾಯಗಳಿಗೆ ಚಪ್ಪೋಡಿನ ಮೂಲಕ ಸ್ಥಳಾನುಗ್ರಹ ಮಾಡುತ್ತಿತ್ತು. ಇದಾದ ನಂತರ ಅನ್ಯರು ಆಕ್ರಮಣ ಮಾಡಿ ಪಶುಗಳನ್ನು ಅಪಹರಿಸುತ್ತಿದ್ದರು. ಅನ್ಯರಿಂದ ತಮ್ಮ ಪಶುಗಳನ್ನು ರಕ್ಷಿಸುವುದು ತುಂಬಾ ದುಃಸ್ಸಾಹಸದ ಕ್ರಮವಾಗಿತ್ತು. ಈ ಜವಾಬ್ದಾರಿಗಳನ್ನು

ವಹಿಸಿಕೊಂಡು ನಿರ್ವಹಿಸುವ ವ್ಯಕ್ತಿ ಸಹಜವಾಗಿಯೇ ಆ ಸಮುದಾಯದ ನಾಯಕನಾಗಿ ಕಾಲಾನಂತರ ದೈವವಾಗಿ ಪರಿವರ್ತನೆಯಾಗುವುದನ್ನು ಇಂಥ ಜಯರೇಖೆ ಸ್ವರೂಪಿ ತಾಮ್ರಪತ್ರಗಳು ದಾಖಲಿಸುತ್ತವೆ.

ಜುಂಜಪ್ಪನ ಕಾವ್ಯವು ಮೇಲ್ನೋಟಕ್ಕೆ ಸೋದರ ಮಾವಂದಿರು ಮತ್ತು ಸೋದರಳಿಯನ ನಡುವೆ ನಡೆಯುವ ಸಂಘರ್ಷದಂತೆ ಕಂಡರೂ, ಇಡೀ ಕಾವ್ಯದ ಕಥನ ಹುಲ್ಲುಗಾವಲುಗಳ ಮೇಲಿನ ಸ್ವಾಮ್ಯತೆಗಾಗಿ ನಡೆಯುವ ಸಂಘರ್ಷವೆಂದು ಸ್ಪಷ್ಟವಾಗಿ ತೋರುತ್ತದೆ. ಈ ಮಾದಲೂರು ಶಾಸನದಲ್ಲೂ ಸಹ ಮದಲೂರು ಗ್ರಾಮದ ಗೌಡಿಕೆಯ ನಿಷ್ಕರ್ಷೆ, ಮದಲೂರು ಗ್ರಾಮದ ಗೌಡಿಕೆಯನ್ನು ಕರಡಿಗೊಲ್ಲರ ನಾಗನ ಗೌಡ, ಉಪ್ಪಾರ ತಿಮ್ಮನಗೌಡ, ತಳವಾರ ಬೇಗಾರು ನಿಂಗರು ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಹೋಗುವಂತೆ ನಿಷ್ಕರ್ಷೆ ಮಾಡಿ ಶಾಸನ ಬರೆಸಿರುವುದು ಕಂಡುಬರುತ್ತದೆ.

ದಕ್ಷಿಣ ಕರ್ನಾಟಕದ ದಕ್ಷಿಣ ಭಾಗದ ಶಾಸನಗಳಲ್ಲಿ ನಿರ್ದಿಷ್ಟವಾಗಿ ಗೌಡಿಕೆ ನಿಷ್ಕರ್ಷೆಗೆ ಸಂಬಂಧಪಟ್ಟಂತೆ ಶಾಸನಗಳನ್ನು ನೀಡಿದ್ದರೆ, ಕರ್ನಾಟಕದ ಉತ್ತರ ಭಾಗದಲ್ಲಿ ಗೌಡಿಕೆ ಪದಗಳಿಗೆ ಪರ್ಯಾಯವಾಗಿ ದೇಶಗತಿ, ದೇಸಗತಿ ಗೌಡಿಕೆ, ದೇಸಾಯಿತನವನ್ನು ನೀಡಿ ಗೌರವಿಸಲಾಗಿದೆ. ಈ ಭಾಗದ ಶಾಸನಗಳಲ್ಲಿ ವಿಜಯನಗರದ 'ನರಪತಿ'ಗಳಿಗಿಂತ ಹೆಚ್ಚಾಗಿ ಬಿಜಾಪುರದ ಆದಿಲ್‌ಶಾಹಿಗಳು ಇಂಥ ಹುದ್ದೆಗಳಿಗೆ ಮಾನ್ಯತೆ ನೀಡಿರುವುದು ಕಂಡುಬರುತ್ತದೆ.

ಗುಡಗುಂಟಿ ಸಂಸ್ಥಾನದ ಸ್ಥಾಪಕ ಗಡ್ಡಿಲಿಂಗ ನಾಯಕನು ಬಿಜಾಪುರದ ಆದಿಲ್‌ಶಾಹಿಗಳೆದುರು ತನ್ನ ಶೌರ್ಯವನ್ನು ಪ್ರದರ್ಶಿಸಿ ಗುಡಗುಂಟಿ ಪರಗಣಿಯ ಸರ್‌ದೇಸಾಯಿಯಾಗಿ ಆಳ್ವಿಕೆಯನ್ನು ಪ್ರಾರಂಭಿಸುತ್ತಾನೆ.[೩೨] ಈ ಗುಡಗುಂಟಿ ಸಂಸ್ಥಾನದ ಅರಸರು ಕಡೇಚೂರಿನಿಂದ ಬಂದ ಸಿದ್ದ ಬಸಪ್ಪನವರಿಗೆ ನಮ್ಮ ಸಂಸ್ಥಾನದಲ್ಲಿ ಮೇದಿನೀರಾಯನ ಕೋಟೆ ಸೀಮೆಯ ಸೀಮೆ ದೇಸಗತಿ ಗೌಡಿಕಿ ಮಾಡಿಕೊಂಡಿರಬೇಕೆಂದು ಸರನಾಡ ಗೌಡಿಕೆ ಪತ್ರ ಬರೆದುಕೊಡುತ್ತಾರೆ. ಜರಿಮಲೆರಾಜನ ದಂಡಿನಿಂದ ತನ್ನನ್ನು ರಕ್ಷಿಸಿದ್ದಕ್ಕಾಗಿ ಕುರುಗೋಡು ಸರನಾಡಿಕೆ ೩೩ ಹಳ್ಳಿಗಳನ್ನು ಬಡೇರಾಮರಾಜನು ಹಿರೇನಾಯಕನಿಗೆ ಕೊಡುತ್ತಾನೆ.[೩೩]

ಜಯರೇಖೆಗಳ ಸ್ವರೂಪದಲ್ಲಿರುವ ಕೆಲವು ತಾಮ್ರಪತ್ರಗಳು ಒಂದು ನಿರ್ದಿಷ್ಟ ಕುಟುಂಬ ಅಥವಾ ಕೆಲವೇ ಕುಟುಂಬಗಳಿಗೆ ಸಂಬಂಧಿಸಿದ ವಂಶಾವಳಿಗಳಂತೆ ಕಂಡರೂ, ತತ್ಕಾಲೀನ ಸಮಾಜದಲ್ಲಿ ಅವರ ಬದುಕಿನ ವಿಧಾನಕ್ರಮ ಏನಾಗಿತ್ತು ಎಂಬುದನ್ನು ತಿಳಿಸುವ ದಿಕ್ಸೂಚಿಗಳೂ ಸಹ ಆಗಿವೆ. ಸಿದ್ಧಾಪುರದ ಗಡ್ಡದಮಠ ಮತ್ತು ರಾಯದುರ್ಗ ಹಿರೇಮಠಗಳಿಗೆ ಸಂಬಂಧಿಸಿದ ತಾಮ್ರಪತ್ರಗಳು[೩೪] ಗಡ್ಡದ ಶಿವಯ್ಯ ಸ್ವಾಮಿಗಳ ಶಿಷ್ಯರ ವಂಶಾವಳಿಯನ್ನು ಒಳಗೊಂಡಿದ್ದರೂ, ಅವರು ಕಾಲಾಂತರದಲ್ಲಿ ಗಳಿಸಿಕೊಂಡ ಗೌಡಿಕಿ ಸ್ಥಾನಗಳು ಮತ್ತೆ ಮತ್ತೆ ಅಲ್ಲಿಂದ ವಲಸೆ ಹೋಗಿ ಬೇರೆ ಬೇರೆ

ಕಡೆ ಗೌಡಿಕೆಯನ್ನು ಪಡೆದದ್ದು ಹಾಗೂ ಹಾಗೆ ವಲಸೆಗೆ ಕಾರಣವಾದ ಸನ್ನಿವೇಶಗಳು ಹಾಗೂ ಸಂದರ್ಭಗಳನ್ನು ತಿಳಿಸುತ್ತವೆ. ಹನುಮೇಗೌಡ ಎಂಬುವವನ ಪೂರ್ವಿಕರು ಬನ್ನಿಕೊಪ್ಪದ ಗೌಡಕಿಯನ್ನು ಗಳಿಸಿದ್ದು ಮಗಲಾದಿ ಕಾಲಕ್ಕೆ ವ್ಯಾಜ್ಯ ಮಾಡಿ ಆ ಪ್ರದೇಶ ಬಿಟ್ಟು ಬಂದು ಸುಂಕಾಪುರಕ್ಕೆ ಬಂದು ಮಾಲಿಗೌಡಕಿ ಗಳಿಸುತ್ತಾರೆ.

ಅದೇ ರೀತಿ ಮತ್ತೊಬ್ಬ ಶಿಷ್ಯ ಪರಂಪರೆಯಾದ ಅಮರೇಗೌಡನ ಪೂರ್ವಿಕರು ಅಂಕಲಕೋಟೆಯಲ್ಲಿ ದೇಸಗತಿ ಗಳಿಸುತ್ತಾರೆ. ನಂತರ ಅಮರೇಗೌಡ ತನ್ನ ಮಗಳು ತಿಮ್ಮವ್ವನನ್ನು ಕೋಟೆಗೆ ಆಹುತಿಕೊಟ್ಟು ಅಂಕಲಕೋಟೆ ದೇಸಗತಿ ಬಿಟ್ಟು ನಂದಿಲಕ್ಕುಂಡಿಗೆ ಬಂದು ಅಲ್ಲಿ ಗೌಡಿಕೆ ಗಳಿಸುತ್ತಾರೆ. ಅಲ್ಲಿ 'ದೊರೆ'ಗಳ ಜೊತೆ ವ್ಯಾಜ್ಯವಾಗಿ ನಾಡಿಗೆ ಬಂದು ಅಲ್ಲಿ ಗೌಡಿಕೆ ಗಳಿಸುತ್ತಾರೆ.

ಮತ್ತೊಬ್ಬ ಶಿಷ್ಯ ಕುಟುಂಬ ಸಂಗಪ್ಪಗೌಡನದು ಆತ ಪರಮತ ಪಾಣಗಲ್ಲ ಗೌಡ್ಕಿ ಗಳಿಸಿ ನಂತರ ಅಲ್ಲಿ ವ್ಯಾಜ್ಯ ಮಾಡಿಕೊಂಡು, ಅಲ್ಲಿಂದ ಕುಷ್ಟಗಿಗೆ ಹೋಗಿ ಅಲ್ಲಿ ವಾಲೆಶೆಟ್ಟಿತನ ಗಳಿಸಿದರು. ಗೌಡಿಕಿ ಗಳಿಸಿ ಗೌಡರಾಗಿದ್ದ ಅವರು ವಾಲೆಶೆಟ್ಟಿತನ ಗಳಿಸಿ ಶೆಟ್ಟಿಗಳಾದರು. ತಾಮ್ರಪತ್ರಗಳ ಸಂಪಾದಕರು ಅಭಿಪ್ರಾಯಪಟ್ಟಿರುವಂತೆ ಇದರಲ್ಲಿ ಉಲ್ಲೇಖಿಸಲ್ಪಟ್ಟ ಕಾಲ ಕ್ರಿ.ಶ. ೧೨೦೪ ಆದರೂ, ಲಿಪಿ ದೃಷ್ಟಿಯಿಂದ ಇದು ೧೮-೧೯ನೇ ಶತಮಾನಕ್ಕೆ ಸೇರಿದ ತಾಮ್ರಪತ್ರಗಳಾಗಿವೆ.

ಈ ಅವಧಿಯಲ್ಲಿ ಭಾರತದಂತೆಯೇ ಕರ್ನಾಟಕದ ಪ್ರಾಂತ್ಯಗಳು ಬ್ರಿಟೀಷರ ಅಧೀನಕ್ಕೊಳಪಟ್ಟಿದ್ದವು. ಹೀಗಾಗಿ ಇಲ್ಲಿ ಗೌಡಿಕೆಯನ್ನು ಸ್ಪಷ್ಟವಾಗಿ ಬ್ರಿಟೀಷ್ ಅಧಿಕಾರಿಗಳಿಂದ ಅಥವಾ ಈ ಪ್ರಾಂತ್ಯದಲ್ಲಿದ್ದ ನಿಜಾಮ ಪ್ರತಿನಿಧಿಗಳಿಂದ ಈ ವೃತ್ತಿಗಳನ್ನು ಗಳಿಸಿರುವ ಸಾಧ್ಯತೆಗಳಿವೆ. ಇವರು ಮೊಗಲಾಯಿ ಜೊತೆ, ದೊರೆಗಳ ಜೊತೆ ವ್ಯಾಜ್ಯ ಮಾಡಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗಿ, ಗೌಡಿಕಿ ಪದವಿಗಳನ್ನು ಗಳಿಸಿಕೊಳ್ಳುವುದನ್ನು ಗಮನಿಸಿದಾಗ, ಇದು ಪ್ರಾಚೀನ ಕರ್ನಾಟಕದ "ಊರ ನಾಡ ಗಾವುಂಡ" ನ ಪರಿಕಲ್ಪನೆಗಿಂತ ಭಿನ್ನವಾಗಿದ್ದು, ಗ್ರಾಮ/ಗ್ರಾಮಗಳ ಕಂದಾಯವನ್ನು ವಸೂಲು ಮಾಡುವ ಒಂದು ಹುದ್ದೆಯಾಗಿ ಪರಿವರ್ತನೆಯಾಗಿರುವುದನ್ನು ಕಾಣಬಹುದು. ಬಹುಶಃ ಇವರು ಮಾಡಿಕೊಂಡ ಕಲಹ-ವ್ಯಾಜ್ಯಗಳು ತೆರಿಗೆ ಸಂಗ್ರಹಕ್ಕೆ ಸಂಬಂಧಪಟ್ಟಿದ್ದೇ ಇರಬೇಕೆನಿಸುತ್ತದೆ. ಅಲ್ಲದೆ, ಇಂಥ ವೃತ್ತಿ ಸಂಬಂಧಿ ವಲಸೆಗಳ ಪ್ರಕ್ರಿಯೆಯಲ್ಲಿ ಸಂದರ್ಭಕ್ಕೆ ಹಾಗೂ ಅನುಕೂಲಕ್ಕೆ ತಕ್ಕ ಹಾಗೆ ವೃತ್ತಿಯನ್ನು ಬದಲಿಸಿಕೊಳ್ಳುವ ಸಂಗತಿಯನ್ನು ಗೌಡಿಕೆ ವೃತ್ತಿ ಮಾಡಿಕೊಂಡಿದ್ದ ಸಂಗಪ್ಪಗೌಡನ ವಂಶಸ್ಥರು ನಂತರ ವಲಸೆ ಹೋಗಿ ವಾಲೆಶೆಟ್ಟಿತನ ಗಳಿಸಿ ಮುಂದೆ ಕುಷ್ಟಗಿ ವಾಲೆಶೆಟ್ಟರೆಂದೇ ಪ್ರಸಿದ್ಧರಾಗುತ್ತಾರೆ.

ಕೆಲವು ಸನ್ನಿವೇಶಗಳಲ್ಲಿ ವಿರೋಧಿ ಪಾಳೆಯಗಾರರು, ಅರಸರು ಧಾಳಿ ಮಾಡಿ ಗ್ರಾಮಗಳು ನಾಶ ಆದಾಗ, ಅಂಥ ಸಂದರ್ಭದಲ್ಲಿ ಹಾಗೆ ನಾಶವಾದ ಗ್ರಾಮಗಳನ್ನು ಪುನಶ್ಚೇತನಗೊಳಿಸುವುದಕ್ಕಾಗಿ ಗೌಡಿಕೆಯಾಗಿ ನೀಡಲಾಗುತ್ತಿತ್ತು. ಮುದ್ದಾಪುರ ಗ್ರಾಮ ತರಿಕೆರೆ ದೊರೆಗಳ ದಾಳಿಯಿಂದ ಪಾಳುಬಿದ್ದಿತ್ತು.

ಇದರಲ್ಲಿ ಬೊಮ್ಮಂತರಾಜ ಎಂಬುವವನು ಅಲ್ಲಿಯೇ 'ರೊಪ್ಪ' ಹಾಕಿಕೊಂಡು ನೆಲೆನಿಂತಿದ್ದ, ಅಲ್ಲಿದ್ದ ಪಂಚಮರಶೆಟ್ಟಿ, ಊರವಾಲೆ ಹನುಮಯ್ಯ ಎಂಬುವವನು ದೊರೆಗಳ ಬಳಿಗೆ ಹೋಗಿ ಮುದ್ದಾಪುರ ಗ್ರಾಮವನ್ನು ಅಬಾದು ಮಾಡಿಕೊಂಡಿರುತ್ತೇನೆಂದು ಹೇಳಿ ಅದರಂತೆ ಆ ಗ್ರಾಮದಲ್ಲಿ ಹನುಮಂತದೇವರ ಮದ್ದಕಟ್ಟೆಯನ್ನು ದೊಡ್ಡದಾಗಿ ಕಟ್ಟಿಸಿ ಗವುಡಿಕೆಯ ಕೆಲಸ ನೋಡಿಕೊಂಡಿದ್ದರು. ಆದರೆ ನಂತರ ಹನುಮಯ್ಯನಿಗೆ ಕಾಮಗೇತಿಯವರ ಸಂಸ್ಥಾನವಾದ ದೊರೆಗಳಲ್ಲಿ ಹಾಲು ಹಾಕುವಂತಾ ಚಾಕರಿ ಗೊತ್ತಾದ್ದರಿಂದ 'ನಾನು, ನಮ್ಮವರು ಬಂದು ಗವುಡಿಕೆ ಕೆಲಸ ಬಿಡುಯೆಂದು ಹೇಳುವವರೆಗೆ ಗ್ರಾಮದ ಗವುಡಿಕೆ ಕೆಲಸ ನೋಡಿಕೊಂಡಿರು' ಎಂದು ಪಂಚಮರ ಶೆಟ್ಟಿಗೆ ಗೌಡಿಕೆ ಕೆಲಸ ನೀಡುತ್ತಾನೆ. ಗೌಡಿಕೆಯನ್ನು ಯಾರಿಗೆ ಬೇಕಾದರೂ ವಹಿಸಬಹುದು ಮತ್ತು ವಿಕ್ರಯಮಾಡಬಹುದು ಎಂಬುದಕ್ಕೆ ಈ ಶಾಸನ ನಿದರ್ಶನವಾಗಿದೆ. ಪ್ರಾರಂಭದಲ್ಲಿ ಸಂಪತ್ತಿನ ಸಂಚಯನದ ಸಾಧನವಾಗಿದ್ದ ಗೌಡಿಕೆ, ಶಾನುಭೋಗಿಕೆಗಳು, ಕಾಲಾನಂತರ ಹೊರೆಯಾಗಿ ಪರಿಣಮಿಸಿದಂತೆ ತೋರುತ್ತದೆ. ಗೌಡಿಕೆಯನ್ನು ಆರ್ಥಿಕವಾಗಿ ನಿಭಾಯಿಸಲು ಕಷ್ಟವಾದಾಗ ಅರ್ಧಭಾಗದ ಗೌಡಿಕೆಯನ್ನು ಮಾರಿಕೊಳ್ಳಲಾಗುತ್ತಿತ್ತು.[೩೫]

ಗ್ರಾಮದ ಗೌಡಿಕೆಯನ್ನು ಪಾಲು ಮಾಡಿಕೊಳ್ಳಲಾಗುತ್ತಿತ್ತು. ಪಡುನಾಡೊಳಗಣ ಹಸ್ತಿನಾವತಿ ವಳಿತದ ಕಾತರಕಿ ವೇಂಟೆಗೆ ಸಲುವ ಕೊಪ್ಪಳದ ಕಸಬೆ ಗೌಡಿಕೆ ಸಿರುಮಸೆಟ್ಟಿ ಹಾಗೂ ಲಿಂಗಣಗೌಡ ಇಬ್ಬರಿಗೂ ಸೇರಿರುತ್ತದೆ. ಅದರಲ್ಲಿ ಸಿರುಮಸೆಟ್ಟಿ ಮೃತನಾದ ನಂತರ ಅವರ ವಂಶಜರಾದ ಮಾನಿಗೌಂಡನ ಮಗ ಬೊಂಮಣ ಗೌಡನು ಬೆಳೆ ಪಾಲು ಗೌಡಿಕೆಯನ್ನು ಅನುಭವಿಸಿಕೊಂಡು ಬರುತ್ತಿದ್ದ. ಆದರೆ ಗ್ರಾಮ ನಷ್ಟಗಣವಾಗಿ ದಿವಾಣದಿಂದಲ್ಲು ಹೊಕ್ಕ ರೂಪಗಳು ಹೆಚ್ಚಿ ಅವನ ಹಾಗೂ ಬೆಳೆ ಪಾಲಿಗೆ ಉಂಟಾದ ನಷ್ಟ ತೀರಿಸಲು ಸಾಧ್ಯವಾಗದೆ, ಸಾಲ ಸಂಮಂಥಗಳು ಅಟ್ಟುಳಿಗಾರದೆ, ದಾಯಾದಿ ಸಿರುಮಣಗೌಡನನ್ನು ಕರೆದು ನೀನು ನಷ್ಟತುಷ್ಟ ತೆಕುಕೊಂಡು ಈ ಗೌಡಿಕೆ ಭಾಗ ಇಟ್ಟುಕೋ ಎಂದಾಗ ಅವನೂ ಸಹ ನಿರಾಕರಿಸುತ್ತಾನೆ. ಆಗ ಚಾಮಣಗೌಡನ ಮಗ ಜೆಡೆಗಣಗೌಡಗೆ ಕೊಪ್ಪಳದ ಕಸಬೆಯ ಗೌಡಿಕೆಯನ್ನು ಹಾಗೂ ಪಾಲು ಕ್ರಯದ ಪತ್ರವನ್ನು ೧೭೫ ಗಟ್ಟಿ ವರಹಾ ಗದ್ಯಾಣಕ್ಕೆ ಮಾರುತ್ತಾನೆ.[೩೬]

ಗೌಡಿಕೆಯ ಅರ್ಧಪಾಲು ಮಾರಾಟ ಮಾಡುವ ಮೂರು ವರ್ಷಗಳ ಮೊದಲು ಎಂದರೆ, ಕ್ರಿ.ಶ. ೧೫೮೧ರಲ್ಲಿ ಇದೇ ಕೊಪ್ಪಳ ಕಸಬೆಯ ಸೇನಬೋವಿಕೆಯ ಅರ್ಧಭಾಗವನ್ನು ದೇಮರಸಯ್ಯ ಮತ್ತು ಗೌತಮರಸಯ್ಯ ಎಂಬುವವರು ಮಲೆಯನಪಗೌಡ ಮತ್ತು ಚಂದಣಗೌಡರಿಗೆ ೫೧೫ ಗಟ್ಟಿ ವರಹಕ್ಕೆ ಮಾರಿ ಅದಕ್ಕೆ ಕೊಪ್ಪಳ ಸೀಮೆಯ ದೇಸಾಯಿ, ಅಷ್ಟಾದಶ ಪ್ರಜೆಗಳು ಮುಂತಾದ ಆಯಗಾರರು ಸುಮಾರು ಹತ್ತಕ್ಕೂ ಅಧಿಕ ವ್ಯಕ್ತಿಗಳನ್ನು ಸಾಕ್ಷಿದಾರರನ್ನಾಗಿ ಮಾಡಲಾಗಿದೆ.

ಈ ಮೂರು ವರ್ಷಗಳ ಅವಧಿಯಲ್ಲಿ ದಾಖಲಿಸಲಾದ ಈ ಎರಡೂ ಶಾಸನಗಳಲ್ಲಿ ಒಬ್ಬರು ತನ್ನ ಕಷ್ಟಕಾರ್ಪಣ್ಯಗಳನ್ನು ನೀಗಿಕೊಳ್ಳಲು ಗೌಡಿಕೆಯ ಅರ್ಧಪಾಲನ್ನು ಮಾರಾಟ ಮಾಡಿದರೆ, ಅದೇ

ಕಸಬೆಯ ಶಾನುಭೋಗರು, ಶಾನುಭೋಗದ ಅರ್ಧಪಾಲನ್ನು ಮಾರಾಟಕ್ಕಿಟ್ಟಿದ್ದಾರೆ. ಶಾನುಭೋಗಿಕೆಯ ಪಾಲನ್ನು ಕ್ರಯಕ್ಕೆ ಪಡೆದದ್ದು ಗೌಡರು ಎಂಬುದು ವಿಶೇಷ. ಇಲ್ಲಿ ಶಾನುಭೋಗಿಕೆಯ ಪಾಲೆಂಬುದು ಶಾನುಭೋಗರಿಗೆ ಪ್ರದತ್ತವಾಗಿದ್ದ ಭೂಹಿಡುವಳಿಗಳಿಗೆ? ಎಂಬ ಬಗ್ಗೆ ಇಲ್ಲಿ ಸ್ಪಷ್ಟವಿಲ್ಲ. ಗೌಡರೇ ಶಾನುಭೋಗಿಕೆ ವೃತ್ತಿಯನ್ನು ಪಾಲಿಸುತ್ತಾರಾ? ಅಥವಾ ಬೇರೊಬ್ಬರನ್ನು ಶಾನುಭೋಗರನ್ನಾಗಿ ನೇಮಕ ಮಾಡುವ ಮೂಲಕ ಅವರಿಗೆ ಅದನ್ನು ನೀಡುತ್ತಾರಾ ಎಂಬುದು. ಆದರೂ ಇಲ್ಲಿ ಉದ್ಭವಿಸುವ ಪ್ರಶ್ನೆಗಳೆಂದರೆ, ಗೌಡರು ಶಾನುಭೋಗಿಕೆಯ ಪಾಲನ್ನು ಕ್ರಯಕ್ಕೆ ಪಡೆದು, ಆ ವೃತ್ತಿಯನ್ನು, ಶಾನುಭೋಗಿಕೆ ವೃತ್ತಿಯನ್ನು ಗೌಡರೇ ಪಡೆದು ನಿರ್ವಹಿಸುತ್ತಾರೆ ಎಂದು ಊಹಿಸಬಹುದಾದರೆ, ಮಧ್ಯಕಾಲೀನ ಕರ್ನಾಟಕದಲ್ಲಿ ಆಗುತ್ತಿದ್ದ ವೃತ್ತಿಪಲ್ಲಟಗಳಿಗೆ ಇದು ಸೂಚಕವೆನಿಸುತ್ತದೆ. ಬಸವಣ್ಣನವರ ವಚನದ 'ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ' ಎಂಬ ಆಶಯದಂತೆ ಯಾವ ಕುಲದವರು ಯಾವುದೇ ವೃತ್ತಿಗಳನ್ನು ಕೈಗೊಳ್ಳಬಹುದೇ? ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ.

ಗ್ರಾಮಗೌಡಿಕೆಯನ್ನು ಅರ್ಹ ವ್ಯಕ್ತಿಗಳಿಗೆ ನೀಡಲಾಗುತ್ತಿತ್ತು. ಆದರೆ ನಾಡಗೌಡಿಕೆಯನ್ನು ಅಸಾಮಾನ್ಯ ವ್ಯಕ್ತಿಗಳಿಗೆ ಮಾತ್ರ ನೀಡಲಾಗುತ್ತಿತ್ತು. ಆನೆಗೊಂದಿ ಜಯರೇಖೆಯು ಕಟ್ಟಿಗೆ ಮಾರಣ್ಣ ಎಂಬ ವ್ಯಕ್ತಿಗೆ ಅಂಥ ನಾಡಗೌಡಿಕೆ ವೀಳ್ಯ ನೀಡಿದ ಸನ್ನಿವೇಶವನ್ನು ಕಟ್ಟಿಕೊಡುತ್ತದೆ.[೩೭]

ಆನೆಗೊಂದಿ ಜಂಭುಕೇಶ್ವರರಾಯರು ರಾಜ್ಯವನ್ನು ಆಳುತ್ತಿದ್ದಾಗ, ದೆಹಲಿಯಿಂದ ೪೮ ಕುಂಚಿಟಿಗ ಕುಲಗಳು ಬಂದು ಆನೆಗೊಂದಿಯಲ್ಲಿ ನೆಲೆನಿಲ್ಲುತ್ತಾರೆ. ಇವರ ಮೇಲಿನ ಮತ್ಸರದಿಂದಾಗಿ ಬಸವನಾಡಿವು ಸಮುದಾಯದ ನಾದರಗಿಡ್ಡ ಎಂಬುವವನು ಆನೆಗೊಂದಿ ಪೇಟೆಯೊಳಗೆ ಒಂದು ಎತ್ತನ್ನು ನಿಲ್ಲಿಸಿಕೊಂಡು ಅದಕ್ಕೆ 'ಕುಡುಕಾಲು ಚಿಂಚಿ' ಎಂಬ ಹೆಸರಿಟ್ಟು ಹಲವಾರು ಬಿರುದುಗಳ ಜೊತೆಗೆ ಕುಂಚಿಟಿಗರನ್ನು ಹೀಗಳೆಯುವಂತಹ, "ಕುಂಚಿಟಗರ ಗಂಡ, ಕುಡಿ ವಕ್ಕಲಿಗರ ಮಿಂಡ' ಎಂದು ಹೊಗಳುತ್ತಿರುತ್ತಾನೆ. ಇದನ್ನು ಕೇಳಿ ಕುಂಚಿಟಿಗರ ಕುಲ ತಲೆತಗ್ಗಿಸಿಕೊಂಡು 'ಕುಲಕ್ಕೆ ಅಪಕೀರ್ತಿ ಬಂದಿತಲ್ಲಾ' ಎಂದು ಅಪಮಾನದಿಂದ ಅವನನ್ನು ಜಯಿಸಲು ಏನು ಮಾಡಬೇಕೆಂದು ಯೋಚಿಸಿ ಕೊನೆಗೆ ಕಟ್ಟಿಗೆ ಮಾರಣ್ಣನನ್ನು ಕರೆದು ಅವನಿಗೆ ನಾದರ ಗಿಡ್ಡನನ್ನು ಗೆಲ್ಲುವ ಕೆಲಸವನ್ನು ಒಪ್ಪಿಸುತ್ತಾರೆ.

ಮಾರಣ್ಣ ಆನೆಗೊಂದಿ ಪಟ್ಟಣದಲ್ಲಿ ಹೋಗುತ್ತಿದ್ದಾಗ ನಾದರಗಿಡ್ಡ 'ಕುಂಚಿಟಿಗರ ಗಂಡ ಕುಡಿವಕ್ಕಲಿಗರ ಮಿಂಡ' ಎಂದು ಹೊಗಳಿಸಿಕೊಂಡು ಬರುತ್ತಿದ್ದುದನ್ನು ನೋಡಿ ಮಾರಣ್ಣ ಅವನ ಕಣ್ಣುಗುಡ್ಡೆ ತೆಗೆಯುವೆನೆಂದು ಕೈಹಾಕಿದ. ತಳವಾರ ಅವನನ್ನು ಪಡೆದು ರಾಯರಿಗೆ ವಿಷಯ ಮುಟ್ಟಿಸುತ್ತಾನೆ. ರಾಯರು ಸಂಸ್ಥಾನಕ್ಕೆ ಅಪಕೀರ್ತಿ ಬರುತ್ತದೆಂದು ಎಷ್ಟು ಹೇಳಿದರೂ, ಮಾರಣ್ಣ ತನ್ನ ಹಠ ಬಿಡದಿದ್ದಾಗ, ರಾಯರು ಇಬ್ಬರಿಗೂ ಒಂದು ಪಂಥಾಹ್ವಾನ ನೀಡಿ, ಮಾರಣ್ಣ ಸೋತರೆ ಗಿಡ್ಡನ ಮನೆಗೆ ಜೀವಮಾನವಿರುವವರೆಗೂ ಸೌದೆ, ನೀರು ಹೊರಬೇಕು. ಗಿಡ್ಡ ಸೋತರೆ ಅವನ ಕಣ್ಣುಗುಡ್ಡೆ

ಕೀಳಿಸಿ ಅವನ ಮನೆಯನ್ನೆಲ್ಲ ಬಾಚಿ ಅರಮನೆಗೆ ಹಾಕಬೇಕು ಎಂದು ತಿಳಿಸಿದ. ಇಬ್ಬರೂ ಈ ಪಂಥಾಹ್ವಾನಕ್ಕೆ ಒಪ್ಪಿಗೆ ನೀಡುತ್ತಾರೆ. ಇದಕ್ಕೆ ೪೮ ದಿನಗಳ ಗಡುವು ನೀಡಲಾಯಿತು.

ಮಾರಣ್ಣ ೪೮ ದಿನಗಳ ಕಾಲ ತುಪ್ಪ ಅನ್ನ ತಿಂದರೆ, ಗಿಡ್ಡ ಎತ್ತಿಗೆ ೪೮ ದಿವಸ ಕಡಲೇ ಹಾಕಿ ಸಾಕಿದ. ೪೮ ದಿನ ತೀರಿದ ಕೂಡಲೇ ಮನುಷ್ಯನ ನಡುವಿನ ಉದ್ದ ಒಂದು ಬಂಡಿ ಹೂಣಿಸಿ ಅದಕ್ಕೆ ಐದು ಖಡುಂಗದ ಐಗಳ ಅಕ್ಕಿ ತುಂಬಿಸಿ ಎಡಕ್ಕೆ ಗಿಡ್ಡನ ಎತ್ತನ್ನು ಬಲಕ್ಕೆ ಮಾರಣ್ಣನನ್ನು ಹೂಡಿದರು. ಒಬ್ಬ ವ್ಯಕ್ತಿಯ ಕೈಯಲ್ಲಿ ಬಾರುಗೋಲಿನಿಂದ ಎತ್ತನ್ನು ಮತ್ತು ಮಾರಣ್ಣನನ್ನು ಹೊಡೆಸಿದಾಗ, ಮಾರಣ್ಣನ ಕಡೆಯ ಬಂಡಿ ಚಕ್ರ ಎದ್ದು ನಿಂತಿತು. ಎತ್ತಿನ ಕಡೆ ಚಕ್ರ ಸಡಿಲವಾಗಲಿಲ್ಲ. ಗಿಡ್ಡನ ಎತ್ತಿನ ಗುಡ್ಡೆಗಳು ಹೊರಚಾಚಿದವು.

ಆಗ ರಾಯ ಮತ್ತು ೪೮ ಕುಲಗಳೂ ಅಲ್ಲಿದ್ದ ಜನರೂ ಮಾರಣ್ಣನು ಗೆದ್ದನೆಂದು ಘೋಷಿಸಿ, ಗಿಡ್ಡನ ಕಣ್ಣು ಕೀಳಿಸಿ ಅವನ ಮನೆಯನ್ನೆಲ್ಲಾ ಅರಮನೆಗೆ ಬಾಚಿಕೊಳ್ಳುತ್ತಾರೆ. ೪೮ ಕುಲದವರು ಮಾರಣ್ಣ ನಮ್ಮ ಕುಲಕ್ಕೆ ಕೀರ್ತಿ ತಂದನೆಂದು ಹೇಳಿ ರಾಯರ ಬಳಿಗೆ ಕರೆದುಕೊಂಡು ಹೋದರು. ರಾಯರು ಉಂಗುರ, ಉಡುದಾರ, ಉಡಿಗೆ ತೊಡಿಗೆಗಳನ್ನು ಬಹುಮಾನವಾಗಿ ನೀಡುತ್ತಾರೆ. ೪೮ ಕುಲದವರು ಮಾರಣ್ಣ ಅಗಾಧ ಕಾರ್ಯ ಮಾಡಿ ಗೆದ್ದವನಾದ್ದರಿಂದ ಕರೇ ಕಂಬಳಿ ಗದ್ದುಗೆ ಮೇಲೆ ನಾಡಗೌಡಿಕೆ ವೀಳ್ಯವನ್ನು ಕೊಟ್ಟು ರಾಯರ ಮುಂದೆ ಒಪ್ಪಿಕೊಂಡು ಜಯರೇಖೆ ಬರೆಸಿಕೊಡುತ್ತಾರೆ.

ತನ್ನ ಕುಲದ ಮರ್ಯಾದಾ ಹಾನಿಯನ್ನು ಪ್ರತಿಭಟಿಸಿ ಗೆದ್ದಂತಹ ಮಾರಣ್ಣನಿಗೆ ೪೮ ಕುಲಸ್ವಾಮಿಗಳು ಸೇರಿ ಆತ ಕುಂಚಿಟಿಕ ಕುಲಕ್ಕೆ ಸೇರಿಲ್ಲವಾದರೂ ಅವನಿಗೆ ಉಂಡೇನವರ ಶಿದ್ದಪ್ಪನ ಮಗಳನ್ನು ವಿವಾಹ ಮಾಡಿಕೊಡುತ್ತಾರೆ. ಜಯರೇಖೆ ಕೊನೆಯಲ್ಲಿ "ಈ ಕುಂಚಿಟಿಗ ಕುಲದಲ್ಲಿ ಗಂಡಿಗೆ ಹೆಣ್ಣು ಕೊಟ್ಟಲ್ಲಿ ತಪ್ಪು ನೆಪ್ಪು ಮುಂತಾದವನ್ನು ಮನ್ನಿಸಿ ಬಲವುಳ್ಳವರು ಯಾರು"? ಎಂಬ ಪ್ರಶ್ನೆ ಬಹುಶಃ ಈ ಅಂತರ್ಜಾತಿ(?) ವಿವಾಹವನ್ನು ಸೂಚಿಸುತ್ತಿರಬಹುದೆನಿಸುತ್ತದೆ. ಬಹುಶಃ ಇಂಥ ಒಂದು ಜಾತಿ ಸಂಕರವನ್ನು ಸ್ಥಿರೀಕರಿಸಲು ಈ ಮಾರಣ್ಣ ಅಸಾಮಾನ್ಯನಾದ್ದರಿಂದ ಅವನನ್ನು ಕುಲದ ಅಳಿಯನನ್ನಾಗಿ ಮಾಡಿಕೊಳ್ಳಲಾಯಿತೆಂಬುದನ್ನು ಧ್ವನಿಸಲು ಈ ಜಯರೇಖೆ ಹೊರಡಿಸಿರುವಂತಿದೆ.

ಕುಂಚಿಟಿಗ ಸಮುದಾಯ ಕರ್ನಾಟಕದ ಕಡೆ ವಲಸೆ ಬಂದರೆಂದು ಐತಿಹ್ಯಗಳು ಹೇಳುತ್ತವೆ. ವಡ್ಡಗೆರೆ ಮಹಾಪುರಾಣದ ಪ್ರಕಾರ.[೩೮] ಕುಂಚಿಟಿಗರ ಪೂರ್ವಿಕ ಉಂಡೆ ಎತ್ತರಾಯ ದ್ವಾರಕಾ ಪಟ್ಟಣದಲ್ಲಿ ಆಳುತ್ತಾ ದವಸ ಧಾನ್ಯಗಳನ್ನು ಹಗೇವುಗಳಲ್ಲಿ, ಹಾಲು ತುಪ್ಪಗಳನ್ನು ಮೊಗೇವುಗಳಲ್ಲಿ ತುಂಬಿಟ್ಟು ಮಾರಾಟ ಮಾಡುತ್ತಿದ್ದರು. ದಿಲ್ಲಿ ಪಾಚ್ಛಾನ (ಬಾದಷಹ) ಮನೆಯಲ್ಲಿನ ಒಂದು ಸಮಾರಂಭಕ್ಕಾಗಿ ತುಪ್ಪಕ್ಕಾಗಿ ಎಲ್ಲೆಲ್ಲಿ ಹುಡುಕಿದರು ಸಿಗದಿದ್ದಾಗ, ಕೊನೆಗೆ ದ್ವಾರಕಾಪಟ್ಟಣದಲ್ಲಿ ಸಿಗುತ್ತದೆಂದು ಕಳಿಸಿದಾಗ, ಅಲ್ಲಿ ಉಂಡೆ ಎತ್ತರಾಯನ ಮಕ್ಕಳು ಅಪ್ರತಿಮ ಸುಂದರಿಯರೆಂದು ತಿಳಿದು

ಅವರನ್ನು ತನ್ನ ಜನಾನಾದಲ್ಲಿಟ್ಟುಕೊಳ್ಳಲು ಬಾದಶಹ ಪ್ರಯತ್ನಿಸುತ್ತಾನೆ. ಇದನ್ನು ತಿಳಿದ ಗೌಡ "ನಮ್ಮ ಹಾಲಿನಂತಹ ಕುಲವು ನೀರಾಗಿ ಹೋಯಿತು" ಎಂದು ಅಲ್ಲಿಂದ ೧೨ ಕೈವಾಡದವರನ್ನು ಕರೆದುಕೊಂಡು ಜೊತೆಗೆ ಮಾದರ ಚನ್ನಯ್ಯ, ಮಡಿವಾಳ ಮಾಚಯ್ಯ, ಕಮ್ಮಾರ ನಾಗಲಿಂಗಯ್ಯ, ತಳವಾರ ರಾಮಣ್ಣ, ಬಲಗೈ ಚಿಕ್ಕ, ಎಡಗೈ ಈರ, ಬೇಲಿಗೊಲ್ಲರು, ಚಂದಮುತ್ತಿ, ಚಿತ್ತಮುತ್ತಿ, ಮಗ್ಗದ ಕುರುಬರು ಇವರನ್ನೆಲ್ಲ ಕರೆದುಕೊಂದು ತುಂಗಭದ್ರಾ ನದಿ ದಾಟಿ ದಕ್ಷಿಣಕ್ಕೆ ಬಂದರು. ಇವರ ಜೊತೆ 'ಮಯಾರ ಕುಲದ ಕೊಡಲಿ ಮಾರಪ್ಪ' ಎಂಬುವವನೂ ಇರುತ್ತಾನೆ.

ಈ ಮಾಯಾರ ಕುಲದ ಕೊಡಲಿ ಮಾರಪ್ಪನೇ ಜಯರೇಖೆಯ ಕಟ್ಟಿಗೆ ಮಾರಣ್ಣ. ಮತ್ತೊಂದು ಪುರಾಣದ ಪ್ರಕಾರ ಇವನು ಎರಡು ಕಡೆ ವಂಶದವನು.[೩೯] ವಲಸೆ ಬಂದಂತಹ ಸಮುದಾಯಗಳು ತಮ್ಮ ಮೂಲ ಬೇರುಗಳನ್ನು ಕಳೆದುಕೊಂಡು ಸ್ಥಳೀಯರ ಅನಾದರಣೆ ಹಾಗೂ ಅಪಹಾಸ್ಯಕ್ಕೆ ಗುರಿಯಾಗುವಂತಹ ಅವಮಾನ ಮತ್ತೊಂದಿರುವುದಿಲ್ಲ. ಅಂಥ ಸಂದರ್ಭದಲ್ಲಿ ಭೌತಿಕ ಹಾಗೂ ಮಾನಸಿಕ ಆಸರೆಗಾಗಿ ಸ್ಥಳೀಯ ಬಲಾಢ್ಯ ವ್ಯಕ್ತಿಯ ರಕ್ಷಣೆ ಹಾಗೂ ಆಶ್ರಯ ತುಂಬಾ ಅಗತ್ಯ. ಬಹುಶಃ ಕಟ್ಟಿಗೆ ಮಾರಣ್ಣಗೆ ತಮ್ಮ ಕುಲದ ಹೆಣ್ಣನ್ನು ಕೊಟ್ಟದ್ದರಿಂದ ಸಮಾಜ ಈ ಕುಲದ ಬಗ್ಗೆ ಅವಹೇಳನ ಹಾಗೂ ಮಾನಹಾನಿ ಮಾಡಿರುವ ಸಾಧ್ಯತೆ ಇದೆ. ಆಗ ಮಾಯಾರ ಕುಲದ ಮಾರಣ್ಣನನ್ನು ಕುಲಕ್ಕೆ ಒಳಗುಮಾಡಿಕೊಂಡಿದ್ದನ್ನು ಸಮರ್ಥಿಸುವ ಆಶಯದೊಂದಿಗೆ ಈ ಜಯರೇಖೆ ಲಿಖಿಸಿದಂತೆ ತೋರುತ್ತದೆ. ಅಸಾಮಾನ್ಯ ಪುರುಷನಾದ ಮಾರಣ್ಣ ತಮ್ಮ ಕುಲಕ್ಕೆ ಕೀರ್ತಿ ತಂದಿದ್ದರಿಂದ ಅವನಿಗೆ ತಮ್ಮ ಕುಲದ ಹೆಣ್ಣನ್ನು ಕೊಡುವುದು ತಪ್ಪಲ್ಲ ಎಂಬ ಮನೋಭಾವ ಈ ಜಯರೇಖೆಯ ಹಿಂದಿರುವುದು ಸ್ಪಷ್ಟ. ಹಾಗೆಯೇ, ಅವನಿಗೆ ನಾಡಗೌಡಿಕೆಯನ್ನು ಸಹ ನೀಡಿ ಗೌರವಿಸಲಾಗಿದೆ.

**ಶಾನುಭೋಗಿಕೆ ಹಕ್ಕು**

ಶಾನುಭೋಗಿಕೆಯೂ ಸಹ ವಂಶಪಾರಂಪರ್ಯವಾಗಿರಲಿಲ್ಲ. ಅದನ್ನು ವಂಶ ಪಾರಂಪರ್ಯದ ಹೊರತಾಗಿಯೂ ಇತರರಿಗೆ ಕೊಡಬಹುದಾಗಿತ್ತು. ಗಂಡು ಸಂತಾನವಿಲ್ಲದಿದ್ದಾಗ, ಅಳಿಯನಿಗೆ ಶಾನುಭೋಗದ ನಿಷ್ಕರ್ಷೆಯನ್ನು ಬಿಟ್ಟುಕೊಡಬಹುದಾಗಿತ್ತು. ಗಿರಿಯಪ್ಪಯ್ಯ ಎಂಬುವವನು ಚಿತ್ರಹಳ್ಳಿಯಲ್ಲಿದ್ದು (ಚಿತ್ರದುರ್ಗ) ಹದಿಮೂರು ಪಟ್ಟಡಿಗೆ ಸೇರಿದ ಗ್ರಾಮಕ್ಕೆ ಸರದೇಶಾಯಿಯಾಗಿ ಹಾಗೂ ಗ್ರಾಮಾಂತ್ರ ಸ್ಥಳದ ಹಕ್ಕು ಇವೆರಡನ್ನು ಅನುಭವಿಸಿಕೊಂಡಿದ್ದ. ಇವನಿಗೆ ಗಂಡುಸಂತಾನವಿಲ್ಲದ್ದರಿಂದ ಒಬ್ಬ ಮಗಳನ್ನು ಹುಲ್ಲೂರು ಕೆಂಚಪ್ಪ ಎಂಬುವವನಿಗೆ ಕೊಟ್ಟು ಮದುವೆ ಮಾಡಿ ಹುಲ್ಲೂರು ಪಟ್ಟಡಿಗೆ ಸೇರಿದ ಏಳು ಗ್ರಾಮಗಳ ಶಾನುಭೋಗತನದ ಹಕ್ಕನ್ನು ನೀಡಿದ. ಪುಟ್ಟಪ್ಪ ಎಂಬಾತನಿಗೆ ಒಬ್ಬ ಮಗಳನ್ನು ಕೊಟ್ಟು ಗೊಡಬನಾಳು ಪಟ್ಟಡಿ ಗ್ರಾಮದ ಹನ್ನೆರಡು ಗ್ರಾಮಗಳ ಶಾನುಭೋಗತನದ ಹಕ್ಕನ್ನು ಬಿಟ್ಟುಕೊಡುತ್ತಾನೆ. ಹಾಗೆಯೇ ಗುಂಚನೂರು ನರಸಪ್ಪಯ್ಯಗೆ ಒಬ್ಬ

ಮಗಳನ್ನು ಮದುವೆ ಮಾಡಿಕೊಟ್ಟು ಗುಂಚನೂರು ಪಟ್ಟಡಿಗೆ ಸೇರಿದ ಒಂಭತ್ತು ಗ್ರಾಮಗಳ ಅರ್ಧ ಶ್ಯಾನುಭೋಗತನದ ಹಕ್ಕು ಬಿಟ್ಟುಕೊಡುತ್ತಾನೆ.

ನಂತರದ ಹಿರೇಭರಮಪ್ಪನಾಯ್ಕನ ಕಾಲದಲ್ಲಿ ಅವನ ಪ್ರಧಾನಿ ಗುಂಟನೂರು ಮಲ್ಲಪ್ಪನ ಅಳಿಯ ತಿಮ್ಮಪ್ಪನನ್ನು ಅಗ್ರಹಾರ ಮಾಡಿ ನೇಮಕ ಮಾಡಿದ್ದರಿಂದ ಹಿಂದೆ ಗುಂಟನೂರು ನರಸಪ್ಪಯ್ಯಗೆ ಕೊಟ್ಟಿದ್ದ ಒಂಭತ್ತು ಗ್ರಾಮಗಳ ಶಾನುಭೋಗತನದ ಹಕ್ಕನ್ನು ಹಿಂಪಡೆದು ಮೂರು ಗ್ರಾಮಗಳನ್ನು ಮಾತ್ರ ನರಸಪ್ಪನಿಗೆ ಕೊಟ್ಟು ಉಳಿದದ್ದನ್ನು ಅರಮನೆಗೆ ಮುಟ್ಟುಗೋಲು ಹಾಕಿಕೊಳ್ಳುತ್ತಾನೆ.

ತಿಮ್ಮಪ್ಪನಿಗೂ ಪುತ್ರ ಸಂತಾನವಿಲ್ಲದ್ದರಿಂದ ಅವನು ನಿಂಗಪ್ಪ ಎಂಬುವವನಿಗೆ ತನ್ನ ಮಗಳನ್ನು ಕೊಟ್ಟು, ತನ್ನ ಮನೆತನದ ಹೆಸರು ಹೇಳುವುದಕ್ಕೆ ಯಾರೂ ಇಲ್ಲದ್ದರಿಂದ ಲಿಂಗಪ್ಪ ನಮ್ಮನ್ನು ಸಾಕಿ ನಮ್ಮ ಹೆಸರು ಹೇಳುವುದರಿಂದ ನಮ್ಮ ಉತ್ಪತ್ತಿ, ಹೊಲ, ಮನೆ, ಅಗ್ರಹಾರ ಮುಂತಾದ ಎರಡು ಪಾಲಿನ ಮೇಲೆ ಈ ಲಿಂಗಪ್ಪನ ಸಂತಾನಕ್ಕೆ ಅಧಿಕಾರವಿದೆ ಎಂದು ಹೇಳಿ ಪತ್ರ ಬರೆದುಕೊಡುತ್ತಾರೆ. ಇಡೀ ಶಾಸನದಲ್ಲಿ ಪುತ್ರ ಸಂತಾನವಿಲ್ಲದಿದ್ದಾಗ ಅಳಿಯಂದಿರಿಗೆ ತಮ್ಮ ಹಕ್ಕನ್ನು ಬಿಟ್ಟುಕೊಡುವುದನ್ನು ಕಾಣುತ್ತೇವೆ. ನಂತರ ಪ್ರಭುತ್ವ ಅಥವಾ ಪ್ರಭುತ್ವದ ಅಧಿಕಾರ ಬಲ ಉಪಯೋಗಿಸಿ ಇತರರು ಅವುಗಳನ್ನು ವಶಪಡಿಸಿಕೊಳ್ಳುವುದನ್ನು ಸಹ ಕಾಣುತ್ತೇವೆ.

ಪರಶುರಾಂಪುರದ ಗವುಡ, ಶಾನುಭೋಗರು ಚನ್ನಮಲ್ಲಪ್ಪ ಎಂಬುವವನಿಗೆಮಠವನ್ನು ಕಟ್ಟಿಸಿ ಇಟ್ಟುಕೊಂಡಿರುತ್ತಾರೆ. ಚೆನ್ನಮಲ್ಲಪ್ಪನಿಗೆ ವೃದ್ಧಾಪ್ಯವಾಗಿ ಶಾನುಭೋಗತನವನ್ನು ನೋಡುವವರು ಯಾರೂ ಇಲ್ಲದ್ದರಿಂದ, ಕಣಿಕುಪ್ಪೆಯ ಕಂದಾಚಾರದ ಸಬ್‌ನೇಸಿಗೆ ಮಾಡಿಕೊಂಡಿದ್ದ ಲಕ್ಷ್ಮಪ್ಪನ ಮಗ ತಿಮ್ಮಣ್ಣನನ್ನು ಕರೆದು 'ನನಗೆ ವೃದ್ಧಾಪ್ಯ ಕಾಲ ಮತ್ತು ನನ್ನ ಮಗನಿಗೆ ದೇವರ ಹುಚ್ಚು ಹಿಡಿದಿದೆ. ಆದ್ದರಿಂದ ಶಾನುಭೋಗಕ್ಕೆ ನಮ್ಮ ಕಡೆಯವರು ಬಂದು ಇನ್ನು ಮುಂದೆ ಕೆಲಸ ಮಾಡಿಕೊಳ್ಳುತ್ತೇವೆ ಎಂದು ಕೇಳುವವರೆಗೆ ನೀನು ಅನುಭವಿಸಿಕೊಂಡು ಹೋಗು' ಎಂದು ಹೇಳಿ ನಲವತ್ತ ಮೂರು ಗ್ರಾಮದ ಲೆಕ್ಕಪತ್ರಗಳನ್ನು ಒಪ್ಪಿಸುತ್ತಾನೆ.[೪೦]

### ೩.೪ ಕುಲಗೌಡಿಕೆ ಮತ್ತು ಕಟ್ಟೆಮನೆ ಹಕ್ಕುಗಳು

ಕುಲಗಳಲ್ಲಿ ಗೌಡಿಕೆ ಪಡೆದು ಆಯಾ ಕುಲಗಳ ಕಟ್ಟೆ ಮನೆಗಳ ಅಧಿಕಾರ ಪಡೆಯುವುದು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಪ್ರತಿಷ್ಠೆಯ ವಿಷಯವಾಗಿತ್ತು. ಇಂಥ ಕಟ್ಟೆಮನೆಗಳ ಅಧಿಕಾರ ಪಡೆಯಲು ಅಥವಾ ಈಗಾಗಲೇ ತಾವು ಅನುಭವಿಸುತ್ತಿರುವ ಕಟ್ಟೆಮನೆಗಳ ಆಧಿಪತ್ಯವು ರಾಜರಿಂದ ಇನಾಂ ಆಗಿ, ಕೊಡುಗೆಯಾಗಿ ನೀಡಲ್ಪಟ್ಟಿತೆಂಬುದನ್ನು ಸಮರ್ಥಿಸುವ ದೃಷ್ಟಿಯಿಂದ ಹಲವಾರು ತಾಮ್ರಪತ್ರಗಳು ಹುಟ್ಟಿಕೊಂಡಿವೆ. ಅಂಬಿಗರ ವೃತ್ತಿಯ ದೊಡ್ಡ ತಾಯಣ್ಣ ಎಂಬುವವರ ಬಳಿಯಿರುವ ಒಂದು ತಾಮ್ರಶಾಸನ ಹಾಗೂ ಹಿತ್ತಾಳೆ ಶಾಸನ ಇಂಥ ಒಂದು ಮಾಹಿತಿಯನ್ನು ಒದಗಿಸುತ್ತದೆ.

ನಾಗಜೋಗಿ, ಬಸವಜೋಗಿ ಎಂಬ ಇಬ್ಬರು ಅಂಬಿಗರ ನಿಯೋಗ ಸದಾಶಿವರಾಯನನ್ನು ಭೇಟಿ ಮಾಡಿ, ನಾವು ತುಂಗಭದ್ರಾ ನದಿ, ಆನೆಗೊಂದಿ ತಳವಾರ ಕಟ್ಟೆ, ೨ ತಟಾಕದಲ್ಲಿ ೧೦ ಹರಿಗೋಲು, ೧೦ ಮಂದಿ ಅಂಬಿಗರು ನಿರಂತರ ಸರಕಾರ ಸೀಮೆಯೊಳಗೆ ಕೆಲಸ ಮಾಡುತ್ತಿದ್ದೇವೆಂದು ಕೇಳಿಕೊಂಡಾಗ, ಸದಾಶಿವರಾಯ ಆನೆಗೊಂದಿ ಹಾಗೂ ತಳವಾರ ಕೋಟೆಯಲ್ಲಿ ತಲಾ ೧೫ ಕೊಳಗ ನೀರು, ಭೂಮಿ ನೀಡಿ ದೇವ, ಬ್ರಾಹ್ಮಣ, ಸಾಧು ಸಂತರ ಸೇವೆ ಮಾಡಿಕೊಂಡಿರಿಯೆಂದು, ಅಲ್ಲದೆ ಕಟ್ಟೆ ಮನೆ ಅಧಿಕಾರ ಹೊಂದಿ ಕುಲಾಚಾರದ ನ್ಯಾಯ-ಬಹಿಷ್ಕಾರ, ಸುದ್ದಪತ್ರ ಕೊಡುವುದಕ್ಕೆ ಅಧಿಕಾರವನ್ನೂ ನೀಡಿ ತಾಮ್ರಪತ್ರ ಬರೆಸಿಕೊಡುತ್ತಾರೆ.[೪೧] ಆನೆಗೊಂದಿ ನದಿಘಾಟನ ಬಳಿ ಶಿಲಾಶಾಸನ ಹಾಕಲಾಗಿದೆ ಎಂದು ಹೇಳುವ ಮೂಲಕ ಈ ತಾಮ್ರಶಾಸನ ಅಧಿಕೃತವೆಂದು ಹೇಳಲಾಗಿದೆ.

ಕಟ್ಟೆಮನೆ ಅಧಿಕಾರದೊಂದಿಗೆ ಎರಡು ಹುಟ್ಟುಗಳನ್ನು ಯಿನಾಂ ಆಗಿ ನೀಡಿದ ವಿಷಯವನ್ನು ಹೇಳುವ ಮತ್ತೊಂದು ಶಾಸನವು ತೆಲುಗಿನಲ್ಲಿದ್ದು ಅದೂ ಸಹ ಹತ್ತೊಂಬತ್ತನೆಯ ಶತಮಾನದಲ್ಲಿ ಕೃತವಾಗಿ ಬರೆಸಲ್ಪಟ್ಟ ಶಾಸವಾಗಿದೆ.[೪೨] ಕಮಲಾಪುರದ ಒಂದು ತಾಮ್ರಶಾಸನವು ಮಂದಯ್ಯ ಚಿತ್ತಯ್ಯ ಎಂಬುವವರಿಗೆ ಆನೆಗೊಂದಿ ಅರಸರು ಮ್ಯಾಸಬ್ಯಾಡ್ಕಿ ನಾಯಕತನ ಕೊಟ್ಟಿದ್ದನ್ನು ದಾಖಲಿಸುತ್ತದೆ. ಮ್ಯಾಸಬ್ಯಾಡ್ಕಿ ನಾಯಕತನಾ ಒಂದು ಅಧಿಕಾರಯುಕ್ತ ಗೌರವಾನ್ವಿತ ಪದವಿ. ಮ್ಯಾಸಬೇಡರಲ್ಲಿ ಬುಡಕಟ್ಟು ವೀರನಿಗೆ ಮುಖಂಡತ್ವ ವಹಿಸಿ 'ನಾಯಕ'ನಾಗಿ ನೇಮಿಸುವ ಪರಿ ಬೆಳೆದು ಬಂದಿದೆ. ಆನೆಗೊಂದಿಯು ಮ್ಯಾಸ ಬೇಡರಿಗೆ ಮೂಲ ನೆಲೆಯಾಗಿದ್ದು, ಇಂದಿಗೂ ಇವರು ರಾಜಕೀಯವಾಗಿಯೂ, ಸಾಂಸ್ಕೃತಿಕವಾಗಿಯೂ ಆನೆಗೊಂದಿಯನ್ನು ಅವಲಂಬಿಸಿದ್ದಾರೆ. ಆದರೆ ವಾಸ್ತವವಾಗಿ ಇದು ಒಂದು ಕುಲಗೌಡಿಕೆ ಪದವಾಗಿ ಬಳಕೆಗೊಂಡಿರುವಂತೆ ತೋರುತ್ತದೆ. ಬಹುಶಃ ಮ್ಯಾಸಬ್ಯಾಡ್ಕಿ ಕುಲದ ಕಟ್ಟೆಮನೆಯ ಅಧಿಕಾರ ನೀಡಿರುವುದನ್ನು ತೋರಿಸುತ್ತದೆ.[೪೩] ಇಲ್ಲಿ ಬರುವ ಮ್ಯಾಸಬ್ಯಾಡ್ಕಿ ನಾಯಕತನ, ಕಟ್ಟೆಮನೆ ಅಧಿಕಾರ, ಗ್ರಾಮ ಸ್ಥಾಪನೆ/ನಿರ್ಮಾಣ, ಕುಲಗೌಡಿಕೆ, ಮಾಲಿಗೌಡಿಕೆ, ದೇಶಗತಿಗೌಡಿಕೆ, ಶೆಟ್ಟಿತನ, ತಳವಾರಿಕೆ, ದೇಶಭಾಗದ ಹಕ್ಕು ಮುಂತಾದ ವೃತ್ತಿಗಳು ಸಾಹಿತ್ಯ ಕೃತಿಗಳ ಸೃಜನೆಗಳಲ್ಲಿ ಇಲ್ಲ. ಇವೆಲ್ಲ ಶಿಷ್ಟ ಸಮಾಜದಲ್ಲಿ, ಶಿಷ್ಟ ಸಾಹಿತ್ಯಗಳಲ್ಲಿ ಕಂಡುಬರುವ ಹುದ್ದೆ, ಪದವಿ, ಗೌರವಗಳಲ್ಲ. ಬದಲಾಗಿ ಇವು ಜನಪದೀಯರ, ಸಮಾಜ ಜನಸಮುದಾಯಗಳ ಲೋಕಗಳಲ್ಲಿ ಸೃಷ್ಟಿಗೊಳ್ಳುವ ಗೌರವಾರ್ಹ ಪದವಿಗಳು. ಅಲ್ಲದೆ ಸಾಮಾನ್ಯ ಜನರೆ ತಮಗಾಗಿ, ತಮ್ಮ ಕುಲಸಂಬಂಧಿ ಸಮುದಾಯಗಳ ಸ್ವಸ್ಥ್ಯ ಸಂರಚನೆಗಾಗಿ ಸ್ವಯಂ ಸೃಷ್ಟಿ ಮಾಡಿಕೊಂಡ ಹುದ್ದೆಗಳಾಗಿವೆ. ಹಾಗಾಗಿ ಇವು ಶಿಷ್ಟ ಸಾಹಿತ್ಯದಲ್ಲಿ, ಶಿಷ್ಟ ಶಾಸನಗಳಲ್ಲಿ ಕಂಡುಬರುವುದಿಲ್ಲ. ಕೇವಲ ಸಾಮಾನ್ಯ ಜನತೆ ದಾಖಲಿಸಿದ ಬರಹಗಳಲ್ಲಿ ಮಾತ್ರ ಇಂಥ ಒಂದು ಸಹಕಾರ ಮನೋತತ್ವವನ್ನಾಧರಿಸಿದ ಸಮಾಜದ ಸಜೀವ ಚಿತ್ರಣ ಸಿಗುತ್ತದೆ.

ನಾಡಗೌಡಿಕೆ ಜೊತೆಗೆ ಕಟ್ಟೆಮನೆಗಳ ಗೌಡಿಕೆಯನ್ನು ಪಡೆದುಕೊಳ್ಳುವುದು ಪ್ರತಿಷ್ಠೆಯ ವಿಷಯವಾಗಿತ್ತು. ಕಟ್ಟೆಮನೆಗಳ ಗೌಡಿಕೆ ಪಡೆದುಕೊಳ್ಳುವ ಮೂಲಕ ಸುತ್ತಮುತ್ತಲಿನ ಹಲವಾರು ಗ್ರಾಮಗಳ, ಸಮುದಾಯಗಳ ಮೇಲೆ ಆರ್ಥಿಕ ಹಾಗೂ ಸಾಮಾಜಿಕ ನಿಯಂತ್ರಣವನ್ನು ಹೊಂದಬಹುದಾಗಿತ್ತು.

ಕಟ್ಟೆಮನೆಗಳ ಗೌಡಿಕೆ ಹಕ್ಕಿಗೆ ಸಂಬಂಧಪಟ್ಟಂತೆ ಹೊರಡಿಸಿದ ಕಂಚಿನ ಪತ್ರ, ಜಯರೇಖೆಗಳಲ್ಲಿ ಪ್ರಧಾನವಾಗಿ ಹಂಪಿ, ಆನೆಗೊಂದಿ ಅಥವಾ ಚಿತ್ರದುರ್ಗದ ಅರಸರು ಮತ್ತು ನಾಯಕರ ಪ್ರಸ್ತಾಪವಿರುತ್ತದೆ. ಹಂಪಿ ನಗರದ ಶೃಂಗಾರ ನೋಡಬೇಕೆಂದು ಬಡೇರಾಮರಾಜ ಮತ್ತು ಲೋಕಯಂಮ ರಾಜರು ಕನಕಗಿರಿ ಯೀರನಾಯಕ, ಮುತ್ತೋಟಿ ಸಿದ್ದನಗೌಡ, ಮೇಣದಾಳದ ದೇಸಾಯಿ ಮನೆತನಕ್ಕೆ, ಕನಕಗಿರಿ ಗುರಿಕಾರ ಕರೆಸಕ್ರಪ್ಪನ ವಂಶದವರಿಗೆ, ಅಯಭಾಗದವರಿಗೆ ಆಯುಧ ಸಮೇತರಾಗಿ ಬರುವಂತೆ ಕರೆಕಳುಹಿಸಿದರು. ಅವರು ಬಂದ ನಂತರ ಹಂಪಿ ನಗರವನ್ನು ನೋಡಿ ಹೊರಟು ಬರುವಾಗ ಜರಿಮಲೆ ರಾಜನ ದಂಡು ಎದುರುಗೊಂಡಾಗ ಇವರೆಲ್ಲರೂ ಯುದ್ಧ ಎದುರಿಸಿ ದಂಡನ್ನು ಸಂಹಾರ ಮಾಡಿ, ಅವರ ಸಾಹಸದ ಟೋಪಿಗಳನ್ನು ತರುತ್ತಾರೆ. ನಂತರ ನದಿ ದಾಟುವಾಗ ಜರಿಮಲೆ ರಾಜನ ದಂಡಿಗೆ ಭಯಪಟ್ಟು ಅಂಬಿಗರು ಹೊರಗಿದ್ದರು. ಆಗ ಟೊಪ್ಪಿ ಬಸಪ್ಪ ಜರಿಮಲೆಯ ಪಾಳೆಯಗಾರರ ದಂಡನ್ನು ಎದುರಿಸಿ, ತಮ್ಮನ್ನು ರಕ್ಷಿಸಿದ್ದಕ್ಕಾಗಿ ಆನೆಗೊಂದಿ ಬಡೇರಾಮರಾಜನು ಟೊಪ್ಪಿ ಬಸಪ್ಪನಿಗೆ ಕಟ್ಟೆಮನೆ ಗೌಡಿಕೆ ನೀಡಿ, ಕುಲದಲ್ಲಿ ತಪ್ಪು-ಒಪ್ಪು ನಿರ್ಣಯ ಮಾಡುವುದಕ್ಕೆ, ಮದುವೆ ಸಂದರ್ಭಗಳಲ್ಲಿ ವೀಳ್ಯ, ತಾಂಬೂಲ ಹಾಗೂ ಗುರುದಕ್ಷಿಣೆ ತೆಗೆದುಕೊಳ್ಳುವುದಕ್ಕೆ, ಹಿರಿಯರ ಬಾಬತ್ತಿಗೆ ತೀರ್ಮಾನ ಮಾಡುವುದಕ್ಕೆ ಬಾಧ್ಯಸ್ಥನನ್ನಾಗಿ ಮಾಡಿ ಆನೆಗೊಂದಿಯಲ್ಲಿ ಒಂಭತ್ತು ಮಳ ಮನೆಯನ್ನು ಸಹ ನೀಡುತ್ತಾನೆ. ಅಲ್ಲದೆ, ತಂದೇನವರು, ಅಗದವರು, ಮಠದವರು, ಶಿಗಡೆಯವರು, ಅಕ್ಕಲವರು ಐದು ಭಾಗದ ಕುಲದವರು ಟೊಪ್ಪಿ ಬಸಪ್ಪನ ಪ್ರತಿವಾದಿ ಮಾಡಕೂಡದು, ಎಂದರೆ, ಆತ ನೀಡಿದ ತೀರ್ಮಾನವನ್ನು ಪ್ರಶ್ನಿಸಬಾರದು. ಅದೇ ಅಂತಿಮ ಎಂದು ಹೇಳಿ ಇದನ್ನು ಮುಂದೆ ಹುಟ್ಟಿದಂತಹ ದೊರೆಗಳೂ ಸಹ ನಡೆಸಿಕೊಡಬೇಕೆಂದು ಹೇಳಿ ಆ ವಿಷಯವನ್ನು ಕಂಚಿನ ಶಾಸನದಲ್ಲಿ ಬರೆಸಿಕೊಡುತ್ತಾನೆ.[೪೪]

ಕುಲಗೌಡಿಕೆಯನ್ನು ಪಡೆಯುವಂತಹ ಸಂದರ್ಭಗಳೆಲ್ಲ ಕುಲಗೌಡಿಕೆ ಇವರಿಗೆ ಏಕೆ ಕೊಡಬೇಕು? ಯಾವ ಅರ್ಹತೆಯ ಮೇಲೆ ನೀಡಬೇಕು ಮುಂತಾದ ಪ್ರಶ್ನೆಗಳಿಗೆ ಉತ್ತರ ನೀಡಿದಂತಹ ಸ್ವರೂಪದಲ್ಲಿ ಜಯರೇಖೆಗಳು ರಚಿತವಾಗಿವೆ. ತಿಮ್ಮರಾವುತನಿಗೆ ಸಂಬಂಧಿಸಿದ ಮೂರು ನಿರೂಪಗಳು[೪೫] ಹಂಡೆ ಧನುಗರ ತಿಮ್ಮರಾವುತ ವಿಜಯನಗರ ಅರಸರಿಂದ ಮೂರು ಸಾರಿ ಅವರು ಒಡ್ಡುವ ಪಂಥಾಹ್ವಾನಗಳಿಗೆ ಪಟ್ಟೆ ವೀಳ್ಯವ ಸ್ವೀಕರಿಸಿ ವಿಜಯಿಯಾಗಿ ಅರಸರಿಂದ ವಿವಿಧ ರೀತಿಯ ಅನುಕೂಲತೆಗಳನ್ನು ಪಡೆದುಕೊಳ್ಳುತ್ತಾನೆ. ಅವುಗಳಲ್ಲಿ ಮೊದಲನೆಯ ಘಟನೆಯಲ್ಲಿ ನವರಾತ್ರಿಯ

ಏಳನೆಯ ದಿನ ನಾಲ್ಕು ಮೂರು ಅಳತೆಯ ಒಂದು ಕೋಣದಲ್ಲಿ (ಕಣ?) ಒಂದು ಹುಲಿ ಮತ್ತು ಒಂದು ಸರ್ಪವನ್ನು ಹಾಕಿಸಿ ಅವೆರಡನ್ನು ಕೊಂದವರಿಗೆ ಬೇಡಿದ ಇಷ್ಟಾರ್ಥ ನೀಡುತ್ತೇವೆಂದು ಹೇಳಿ ಹನ್ನೆರಡು ಸಾವಿರ ವಜೀರರಿಗೆ ಡಂಗುರ ಹಾಕಿಸಿದರೂ, ಅವರ‍್ಯಾರೂ ಹೆದರಿ ಬರದಿದ್ದಾಗ ಹಂಡೆ ದನುಗರ ತಿಮ್ಮರಾವುತ ಬಂದು ಸರ್ಪವನ್ನು (ಮೆಟ್ಟಿ), ಹುಲಿಯನ್ನು ಕೊಂದು ಜಯಗಳಿಸುತ್ತಾನೆ. ರಾಜ ಏನನ್ನಾದರೂ ಬೇಡಿಕೋ ಎಂದಾಗ ನಮ್ಮ ಸಮುದಾಯದಲ್ಲಿ ಮದುವೆ ಮಾಡಿಕೊಳ್ಳಬೇಕಾದರೆ ಹೆಣ್ಣಿಗೆ ನೂರಾ ಒಂದು ವರಹ ತೆರ ಕೊಡಬೇಕು. ಅರಮನೆಗೆ ಏಳು ವರಹ ಸುಂಕ ಕೊಡಬೇಕು. ಎರಡೂ ಸೇರಿ ನೂರಾ ಎಂಟು ವರಹಗಳಷ್ಟಾಗುವುದರಿಂದ ಇದನ್ನು ತೆರಲು ಸಾಧ್ಯವಾಗದೆ ಹೆಣ್ಣನ್ನು ತರುವವರೂ ಇಲ್ಲ, ಗಂಡುಗಳಿಗೆ ಮದುವೆಯೂ ಇಲ್ಲ ಎನ್ನುವಂತಾಗಿದೆ. ಆದ್ದರಿಂದ ತಾವು ನೂರ ಒಂದು ವರಹ ತೆರ ರದ್ದುಮಾಡಿ ಅರಮನೆಗೆ ಸಲ್ಲುವ ಏಳು ವರಹಗಳನ್ನಷ್ಟು ತೆರ ಮಾಡಿಸಿ ಎಂದಾಗ ವಿಜಯನಗರದ ಅರಸು ಸರಿ ಎಂದು ಒಪ್ಪಿಗೆ ನೀಡಿ ಅದರಂತೆ ಪತ್ರ ಬರೆದುಕೊಡುತ್ತಾನೆ.

ಇದಾದ ಒಂದು ವರ್ಷದ ತರುವಾಯ ಕೃಷ್ಣದೇವರಾಯ ಅದೇ ತಿಮ್ಮರಾವುತನಿಗೆ ಮತ್ತೊಂದು ನಿರೂಪ ಬರೆದುಕೊಡುತ್ತಾನೆ. ಹಿಂದೆ ನೀನು ಸರ್ಪವನ್ನು ಮೆಟ್ಟಿ ವ್ಯಾಘ್ರನ ಕೊಂದ ವಿಚಾರ ಡಿಳ್ಳಿಯ ಬಾದಷಹಾರಿಗೆ ತಿಳಿದು ಅವರು ತಮ್ಮ ಲಾಯದಲ್ಲಿರುವ ಎರಡು ಕಾಲ ಪಾವಟಿಗೆ (ಎಂದರೆ ಏರಲು ಸಾಧ್ಯವಾಗದಷ್ಟು ಎತ್ತರವಿರುವ) ಕುದುರೆಯನ್ನು ಪಳಗಿಸಬೇಕೆಂದು ಆಭರಣ, ಕಾಣಿಕೆ, ಉಡುಗೊರೆಗಳ ಸಮೇತ ಕುದುರೆಯನ್ನು ಕಳಿಸಿದ್ದಾರೆ. ನಮ್ಮ ಹನ್ನೆರಡು ಸಾವಿರ ವಜೀರಿಕೆ ಮಾಡುವ ವೀರಭಟರನ್ನು ಕರೆಸಿಕೇಳಿದಾಗ ಅವರ‍್ಯಾರೂ ಒಪ್ಪಲಿಲ್ಲ. ನೀನು ಬಂದು ಒಪ್ಪಿ ಪಟ್ಟೆವೀಳ್ಯ ಸ್ವೀಕರಿಸಿ ಒಪ್ಪಿಕೊಂಡೆ ಎಂದು ಹೇಳಿ ಕುದುರೆ ಒಪ್ಪಿಸಿದಾಗ, ತಿಮ್ಮರಾವುತ ಕುದುರೆಯನ್ನು ಏರಿ ಒಂದು ಯೋಜನ ಪರ್ಯಂತ ಸವಾರಿ ಮಾಡಿ ಅದನ್ನು ದಣಿಸಿ ವಿಜಯಶಾಲಿಯಾಗಿ ಬಂದು ರಾಜರ ಮುಂದೆ ನಿಲ್ಲುತ್ತಾನೆ. ಆಗ ರಾಜನು ನಿನಗೇನು ಬೇಕೋ ಬೇಡಿಕೋ ಎಂದಾಗ, ತಿಮ್ಮರಾವುತ ಹಿಂದೆ ನೀವು ಮದುವೆ ಹೆಣ್ಣಿಗೆ ಕೊಡಬೇಕಿದ್ದ ತೆರ ಬಿಡಿಸಿದಿರಿ, ಈಗ ನಮ್ಮ ಕುಲಾಚಾರದ ಗೌಡಿಕೆ, ಕುಲಾಚಾರದಲ್ಲಿ ಆದ ಹಾದರ, ಅನ್ಯಾಯ, ಚರಾದಾಯ, ಹೊರಾದಾಯ, ಕೈತಪ್ಪು, ಬಾಯಿತಪ್ಪು, ಸಂತಾನವಿಲ್ಲದ ಬದುಕು, ದಿಕ್ಕಿಲ್ಲದ ಹೆಣ್ಣು ಇವೆಲ್ಲವನ್ನೂ ವಿಚಾರಿಸಿಕೊಳ್ಳುವ ಹಾಗೆ ಸೀಮೆನಾಡ ತಳವಾರಿಕೆ ಜಿಗರು ೧ಕ್ಕೆ ದವಸ, ರೊಕ್ಕ ೨೦/೦ ನೀಡಬೇಕೆಂದು ಬೇಡಿಕೊಂಡಾಗ, ಅರಸ ನಿನ್ನ 'ಕುಲವಿಚಾರಗಳನ್ನು ವಿಚಾರಿಸಿಕೊಂಡು ಪುತ್ರ-ಪೌತ್ರರಾದಿಯಾಗಿ ಅನುಭವಿಸಿಕೊಂಡು ಬನ್ನಿ' ಎಂದು ನಿರೂಪಿಸಿ ಶಾಸನ ನೀಡುತ್ತಾನೆ.

ಮೂರನೇ ನಿರೂಪದಲ್ಲಿ ಬಾದಷಹ ೧೨೦ ಜನ ಜಟ್ಟಿಗಳನ್ನು ಕಳಿಸಿ ಅವರ ಮೇಲೆ ಯುದ್ಧ ಮಾಡುವಂತೆ ಹೇಳಿಕಳುಹಿಸಿದಾಗ, ಆ ಸವಾಲನ್ನು ಸಹ ತಿಮ್ಮರಾವುತ ಸ್ವೀಕರಿಸುತ್ತಾನೆ. ಆದರೆ ಶಾಸನ ತ್ರುಟಿತವಾಗಿರುವುದರಿಂದ ಮುಂದೆ ಆತ ವಿಜಯಿಯಾಗಿ ಯಾವ ವಿಶೇಷಾಧಿಕಾರಗಳನ್ನು ಪಡೆದ ಎಂಬ ಸಂಗತಿ ತಿಳಿಯದಾಗಿದೆ.

ಆದರೆ ತಿಮ್ಮರಾವುತನಿಗೆ ನೀಡಿದ ಮೂರು ಸವಾಲುಗಳು, ಅಂಥ ಪಂಥಾಹ್ವಾನಗಳಲ್ಲಿ ಆತನ ವಿಜಯ, ಆದಕಾರಣ ಆತ ಪಡೆದ ವಿಶೇಷಾಧಿಕಾರಗಳನ್ನು ಸೂಕ್ಷ್ಮವಾಗಿ ವಿವೇಚಿಸಿದಾಗ, ಬಹುಶಃ ಕುಲಗೌಡಿಕೆ ಅಥವಾ ಸೀಮೆ ನಾಡತಳವಾರಿಕೆ ಪಡೆಯಲು ಬೇಕಾದಂತಹ ಮಾನದಂಡವಾಗಿ, ಸಮರ್ಥನೆಯಾಗಿ ಮೊದಲ ನಿರೂಪ ಬರೆಸಿದಂತಿದೆ. ಎಂದರೆ, ಕುಲದ ಕುಲಗೌಡಿಕೆ ಇವನಿಗೆ ಯಾಕೆ ನೀಡಬೇಕು ಎಂಬ ಪ್ರಶ್ನೆಗೆ, ಕುಲದ ಏಳ್ಗೆಗಾಗಿ ಅವನು ತನ್ನ ಪ್ರಾಣಕ್ಕೇ ಸಂಚಕಾರ ತಂದುಕೊಂಡು ಮೃತ್ಯುಪಾಶದಂತಹ ಸರ್ಪ ಮತ್ತು ಹುಲಿಗಳನ್ನು ಎದುರಿಸಿ, ಗೆದ್ದು, ತನ್ನ ಕುಲದಲ್ಲಿ ಅಧಿಕ ತೆರದ ಭಾರದಿಂದ ಕುಸಿಯುತ್ತಿದ್ದ ಮದುವೆ ವ್ಯವಸ್ಥೆಯನ್ನು ಸಮಸ್ಥಿತಿಗೆ ತಂದ ಕೀರ್ತಿ ಇವನದಾಗಿದ್ದು, ಕುಲಗೌರವಕ್ಕಾಗಿ ಆತ ಎಂಥ ಪರಾಕ್ರಮ ಸಾಹಸಗಳಿಗೂ ಸಿದ್ಧ ಎಂಬುದನ್ನೂ ದೃಢಪಡಿಸುವುದಾಗಿದೆ ಎನ್ನಬಹುದು. ಸೀಮೆ ತಳವಾರಿಕೆಯಿಂದ ಲಭಿಸುವ ಹಣ ಸಂಗ್ರಹ ಮಾಡುವ ವಿಶೇಷ ಅಧಿಕಾರವನ್ನು ಗಳಿಸಿಕೊಳ್ಳುವುದು ಸಹ ಈ ದಾಖಲೆಗಳ ಉದ್ದೇಶವಾಗಿದೆ.

**೩.೫ ವಿಶೇಷ ಹಕ್ಕು ಮತ್ತು ಅಧಿಕಾರಗಳು**

ಒಂದು ಪ್ರದೇಶದಲ್ಲಿ ನಿರ್ಬಿಡೆಯಿಂದ ಓಡಾಡುವುದಕ್ಕೆ ನೀಡುವ ವಿಶೇಷ ಹಕ್ಕಿನಲ್ಲಿ ದೇಶಭಾಗದ ಕವಳವೂ ಒಂದು. ದೇಶಭಾಗದ ಕವಳವನ್ನು ಪಡೆದಂತಹ ದೇಶಭಾಗದವರನ್ನು ಯಾರೂ ಹಿಡಿದು ಕೇಳಬಾರದಾಗಿತ್ತು. ಕರ್ನಾಟಕದ ದಕ್ಷಿಣ ಭಾಗದಲ್ಲಿ ಸಾಮಾನ್ಯ ಜನತೆ ಕ್ರಿ.ಶ. ಹನ್ನೆರಡನೆಯ ಶತಮಾನದಿಂದಲೇ ಶ್ರೀ ವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾದರು. ಶ್ರೀ ವೈಷ್ಣವ ಧರ್ಮವನ್ನು ಸ್ವೀಕರಿಸಿ ಅದಕ್ಕಾಗಿ ಮುದ್ರೆಕರ್ತರಾಗುವುದು ಅಗತ್ಯವಾಗಿತ್ತು. ರಂಗಾಪುರದ ತಾಮ್ರ ಶಾಸನ[೪೬] ವಿವಿಧ ವ್ಯಕ್ತಿಗಳ ಮುಖಾಂತರ ಕೆಲವರು ಮುದ್ರೆಕರ್ತರಾದ ವಿಷಯವನ್ನು ಉಲ್ಲೇಖಿಸುತ್ತದೆ. ತಿರುಮಲೆ ತಾತಾಚಾರ್ಯರ ಮುಖಾಂತರ ಮುಸವನೂರ ತಿರುಮಾಳಿಗೆಯಲ್ಲಿರುವವರು ರಾಮಾನುಜಯ್ಯನವರ ಮುಖಾಂತರ ಪುರುಷಾಕಾರಿ ಕೃಷ್ಣಯ್ಯ, ಸಗರದ ಉಪ್ಪಾರದೈವದವರ ಮುಖಾಂತರ ಕಟ್ಟೆಮನೆ ಗೌಡರು ಮುದ್ರೆಕರ್ತರಾಗಿರುತ್ತಾರೆ. ಸರದಾರ ಗೋಕಿಲ್ಯನು ದೇಶಭಾಗದವರಾದ ಯೀರದಾಸ, ಹನುಮದಾಸ ಮತ್ತ ತುಳಸಿ ರಾಮದಾಸರ ಬಳಿಯಿದ್ದ ಶಂಖ, ಜಾಗಟೆ, ಸಸ್ಯಗಳನ್ನು ಅಪಹರಿಸಲು ಪ್ರಯತ್ನಿಸಿದಾಗ, ಈ ಮೂವರೂ ಅವನನ್ನು ಪವಾಡಗಳ ಮೂಲಕ ಶರಣಾಗುವಂತೆ ಮಾಡಿ, ಅವನಿಂದ ವೀಳ್ಯ ಪಡೆದು ಮೂರೂ ಜನರು ಮುದ್ರೆಕರ್ತರಲ್ಲಿಗೆ ಬಂದಾಗ, ಅವರು ಗುರುವಾಂಭಲ್ಯಕ್ಕೆ ಕೀರ್ತಿ ತಂದರೆಂದು ಹೇಳಿ ಸಿರದ ಯೀರದಾಸನಿಗೆ ಹಳದಿ, ಬಿಳದಿ ಬಾರಿಯಪ್ಪು ಬಿರುದನ್ನು ನೀಡುತ್ತಾರೆ.

ನಂತರ ದೇಶಮುದ್ರೆಕರ್ತ ಹಾಗೂ ದಳವಾಯಿ ಮತ್ತಿತರ ಕರ್ತರು ಯೀರದಾಸನ ಮುಖಾಂತರ ಹಾನುಗಲ್ಲು ಸ್ಥಳದ ಸಮೆಕುಮಾರ, ಗುಂಮಗಟ್ಟಿ ಬಿಯದಾಸೈಯ, ದಳವಾಯಿ ಹನುಮ ದಾಸೈಯ್ಯ, ಚರಪತ್ತಿ ರಾಮದಾಸಯ್ಯ ಮತ್ತಿತ್ತರ ಎಲ್ಲ ವರ್ಗದ ದೇಶಭಾಗಕ್ಕೆ 'ದೇಶಭಾಗದ ಕವಳ'

ನೀಡುತ್ತಾನೆ. ಕೊನೆಯಲ್ಲಿ ಇದಕ್ಕೆ ದೇಶಭಾಗದವರನ್ನು ಯಾರೂ ಹಿಡಿದು ಕೇಳಲಾಗದು. ಕೇಳಿದರೆ ತಿರುಮಲ ತಾತ ಸಾಮುದ್ರೆಗೆ ಬಾರಸ್ತರು ಎಂಬ ಕಟ್ಟಳೆ ವಿಧಿಸಲಾಗಿದೆ.

ಈ ತಾಮ್ರಪತ್ರವು 'ದೇಶಭಾಗದ ಕವಳ' ದ ವಿಶೇಷ ಹಕ್ಕನ್ನು ಪ್ರಸ್ತಾಪಿಸುತ್ತದೆ. ಮೂಲ ಶ್ರೀವೈಷ್ಣವಧರ್ಮವನ್ನು ಧಾರಣೆ ಮಾಡಿದ ಮುದ್ರೆಕರ್ತರು, ಶ್ರೀ ವೈಷ್ಣವ ದೀಕ್ಷೆ ಪಡೆದ ಸಾಮಾನ್ಯ ಜನರ ಮನೆಗಳಲ್ಲಿ ಕೆಲವು ಕುಲಾಚಾರ ಹಾಗೂ ಧಾರ್ಮಿಕಾಚಾರಗಳನ್ನು ಪಾಲಿಸಲು ಪುರೋಹಿತರ ಬದಲಿಗೆ ದಾಸಯ್ಯಗಳನ್ನು ನೇಮಕ ಮಾಡುತ್ತಿದ್ದರು. ದಾಸಯ್ಯಗಳಿಗೆ 'ದೇಶಭಾಗದ ವೀಳ್ಯ' ನೀಡುವ ಮೂಲಕ ಇಂಥ ವೃತ್ತಿಗಳನ್ನು ನಿರ್ವಹಿಸಲು ಅನುಮತಿ ನೀಡುತ್ತಿದ್ದಂತೆ ತೋರುತ್ತದೆ. ಇವರಿಗೆ ನಿಗದಿಪಡಿಸಿದ ಪ್ರದೇಶಗಳಲ್ಲಿ ಇವರು ದಾಸಯ್ಯಗಳ ಕೆಲಸ ಮಾಡುತ್ತಿದ್ದಂತೆ ತೋರುತ್ತದೆ. ಈ ದೇಶಭಾಗದವರಿಗೆ ಶಂಕು, ಜಾಗಟೆ, ಸಸ್ಯಗಳನ್ನು ನೀಡುತ್ತಿದ್ದರು. ಸಸ್ಯ ಎಂಬುದಕ್ಕೆ ಎಚ್.ಎಸ್. ಗೋಪಾಲರಾಯರು "ಸಸ್ಯಗಳನ್ನು ಕುರಿತು 'ಬೆಳೆ' ಎಂಬ ಅರ್ಥದಲ್ಲಿ ಸ್ವೀಕರಿಸಬಹುದೆಂಬ ಅಭಿಪ್ರಾಯವಿದ್ದರೂ, ಶ್ರೀ ವೈಷ್ಣವರಿಗೆ ಪವಿತ್ರವಾದ ತುಳಸಿಯೇ ಈ ಶಾಸನದಲ್ಲಿ ಉಕ್ತವಾಗಿರುವ ಸಸ್ಯದ ಅರ್ಥವೆಂದು ತಿಳಿಯಲಾಗಿದೆ"[೪೭] ಎಂದು ಅಭಿಪ್ರಾಯಪಟ್ಟಿದ್ದಾರೆ.

ಆದರೆ ಶಂಖ-ಚಕ್ರ ಶ್ರೀ ವೈಷ್ಣವ ಧರ್ಮದ ಮುದ್ರೆಗಳಾಗಿದ್ದರೂ, ಅವು ಶ್ರೀವೈಷ್ಣವ ಧರ್ಮದ ಮೇಲ್ವರ್ಗದವರಿಗೆ ಮಾತ್ರ ಮೀಸಲಾಗಿರುತ್ತಿತ್ತು. ಶ್ರೀವೈಷ್ಣವಧರ್ಮ ಸ್ವೀಕರಿಸಿದ ಕೆಳವರ್ಗದ ಪೌರೋಹಿತ್ಯದ ಕಾರ್ಯಕ್ಕೆ ನಿಯೋಜನೆಗೊಂಡ ದಾಸಯ್ಯಗಳು ಶಂಖ-ಚಕ್ರ, ತುಳಸಿಗಿಂತ ಹೆಚ್ಚಾಗಿ ಬಳಸುತ್ತಿದ್ದುದು ಶಂಖ, ಜಾಗಟೆ, ಭವನಾಸಿ ಹಾಗೂ ಗರುಡಗಂಬಗಳನ್ನು ಮಾತ್ರ. ಬಹುಶಃ ಇಲ್ಲಿ ಸಸ್ಯ ಎಂಬುದನ್ನು ಗರುಡಗಂಬ ಎಂಬ ಅರ್ಥದಲ್ಲಿ ಬಳಸಿರಬಹುದೆನಿಸುತ್ತದೆ. "ಜಯರೇಖೆ ಮತ್ತು ಧಾರ್ಮಿಕ ಒಪ್ಪಂದಗಳ ಈ ಶಾಸನವು ದೇಶಭಾಗದವರ ಸಾಹಸ ಮತ್ತು ಒಪ್ಪಂದವನ್ನು ತಿಳಿಸುತ್ತದೆ" ಎಂದು ಅಭಿಪ್ರಾಯಪಡಲಾಗಿದೆ. ಇಲ್ಲಿ ಸಾಹಸ, ಒಪ್ಪಂದಗಳಿಗಿಂತ ಹೆಚ್ಚಾಗಿ 'ದೇಶಭಾಗದ ಕವಳ' ನೀಡುವ ವಿಶೇಷಾಧಿಕಾರ ನೀಡುವುದಕ್ಕೆ ಸಮರ್ಥನೆಯಾಗಿ ಈರದಾಸ ಪವಾಡ ಮೆರೆದು ಧರ್ಮರಕ್ಷಣೆ ಕೈಗೊಂಡಿದ್ದಕ್ಕೆ ದೇಶಭಾಗದ ಕವಳ ನೀಡುವ ಸವಲತ್ತನ್ನು ಆತನಿಗೆ ನೀಡಲಾಯಿತೆಂದು ಧ್ವನಿಸುತ್ತದೆ.

ಒಟ್ಟಾರೆಯಾಗಿ ಜಯರೇಖೆಗಳಲ್ಲಿ ಕಂಡುಬರುವ ಮಧ್ಯಕಾಲೀನ ಸಮಾಜ ಅರ್ಥಮುಖಿ ಸಮಾಜವಾಗಿರುವುದು ಕಂಡುಬರುತ್ತದೆ. ಈವರೆಗಿನ ವೃತ್ತಿಗಳು ವಂಶಪಾರಂಪರ್ಯವಾಗಿ ಬರುತ್ತಿದ್ದವೆಂಬ ಪಾರಂಪರಿಕ ಸಿದ್ಧಾಂತಕ್ಕಿಂತ ಭಿನ್ನವಾಗಿ, ಈ ಅವಧಿಯಲ್ಲಿ ವೃತ್ತಿಗಳಲ್ಲಿ ಪಲ್ಲಟ ಉಂಟಾಗುತ್ತಿದ್ದುದನ್ನು ಜಯರೇಖೆಗಳು ಕಟ್ಟಿಕೊಡುತ್ತವೆ. ಅಲ್ಲದೆ ಮೊದಲೆಲ್ಲಾ ಪ್ರತಿಷ್ಠೆಯ, ಆರ್ಥಿಕವಾಗಿ ಅನುಕೂಲಕರವಾಗಿದ್ದ ವೃತ್ತಿಗಳು, ಭಾರವಾಗಿ ಅವುಗಳನ್ನೇ ಮಾರಿಕೊಳ್ಳುತ್ತಿದ್ದ ವಿಶಿಷ್ಟ ಸನ್ನಿವೇಶಗಳಿಗೂ ಸಹ ಈ ಅವಧಿ ಸಾಕ್ಷಿಯಾಗಿತ್ತು. ಜಯರೇಖೆಗಳಲ್ಲಿನ ಅರ್ಥಮುಖಿ ಚಲನಶೀಲತೆ ಎದ್ದು ಕಾಣುವ ಅಂಶವಾಗಿದ್ದು ಮಧ್ಯಕಾಲೀನನೋತ್ತರ ಸಮಾಜದ ವೈಲಕ್ಷಣಗಳಾಗಿವೆ.

**ಅಡಿಟಿಪ್ಪಣಿಗಳು:–**

೧. ಚಂದ್ರಶೇಖರ್.ಎಸ್: ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂ. ೪, ಪು–೬೯
೨. ಎ.ಕ–೧೦ (ಪರಿಷ್ಕೃತ): ಚನ್ನಪಟ್ಟಣ. ಅಗ್ರಹಾರ ಬೆಳಗುಲಿ ೯೪, ಕ್ರಿ.ಶ. ೧೨೦೯
೩. ಮೋಹನ ಕೃಷ್ಣ ರೈ: ಪ್ರಭುತ್ವ ಮತ್ತು ಜನತೆ, ಪು. ೮೭
೪. ಎಕ–೧೦ (ಪರಿಷ್ಕೃತ): ಅರಸೀಕೆರೆ, ೨೮೮, ಕ್ರಿ.ಶ. ೧೨೮೭
೫. ಲಲಿತಾಂಬ ಎನ್.ಆರ್: ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಪು. ೯೯
೬. ನಂದಿ ಆರ್.ಎನ್: ವೀರಶೈವ ಚಳುವಳಿಯ ಹುಟ್ಟು ಮತ್ತು ಬೆಳವಣಿಗೆ, (ಉದ್ಧೃತ: ವಿಜಯಕುಮಾರ್ ಎಂ ಬೋರಟ್ಟಿ, ಹಿರಿಯರ ಹಿರಿತನ ಹಿಂದೇನಾಯಿತು) ಪು. ೨೫೮–೨೮೦
೭. ನಿಂಗಪ್ಪ ಮುದೇನೂರು: ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು, ಪು. ೧೫೫
೮. ಕ.ವಿ.ವಿ.ಶಾ.ಸಂ–೨, ಗಿಣಿಗೇರಿ–೧೩೯
೯. ನಂಜುಂಡಸ್ವಾಮಿ ಬಿ: ಶ್ರೀ ಶಿವಗಂಗಾ ಶ್ರೀ ಮಠಕ್ಕೆ ಕೊಡಲ್ಪಟ್ಟ ಸನ್ನದುಗಳು ಮತ್ತು ಕೆಲವು ಕಾಗದ ಪತ್ರಗಳು, ಇತಿಹಾಸ ದರ್ಶನ–೨೮, ಪು. ೭೬–೮೪
೧೦. ಎ.ಕ–೩ (ರೈಸ್): ಗುಂಡ್ಲುಪೇಟೆ–೨
೧೧. ಹಳ್ಳಿಕೇರಿ ಎಫ್.ಟಿ: ಅಮೋಘಸಿದ್ಧ ಪರಂಪರೆಯ ಹಾಲುಮತ ಮಠಗಳು, ಇತಿಹಾಸ ದರ್ಶನ–೨೧, ಪು. ೨೫೦
೧೨. ಅದೇ, ಪು. ೨೫೩
೧೩. ಅದೇ, ಪು. ೨೫೬
೧೪. ಹಳ್ಳಿಕೇರಿ ಎಫ್.ಟಿ, ಚಂದ್ರಪ್ಪ ಎಸ್: ದೇವಲಾಪುರದ ಅಪ್ರಕಟಿತ ನಾಲ್ಕು ತಾಮ್ರಪತ್ರಗಳು, ವಿಜಯನಗರ ಅಧ್ಯಯನ–೧೩, ಪು. ೩೦–೩೭
೧೫. ಎಕ–೯ (ರೈಸ್): ಹೊಸಕೋಟೆ ೧೦೫
೧೬. ಮುತ್ತುರಾಜು: ಮುತ್ತತ್ತಿಯ ತಾಮ್ರಶಾಸನ, ಇತಿಹಾಸ ದರ್ಶನ–೯, ಪು. ೩೬–೩೯
೧೭. ಮಂಜುನಾಥ ಎಂ.ಜಿ (ಸಂ): ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಶಾ.ಸಂ. ೪೨, ಪು. ೬೭–೬೯
೧೮. ರಾಜಶೇಖರಪ್ಪ ಬಿ: ವಿಜಯನಗರ ದೊರೆಗಳ ಪ್ರಸ್ತಾಪ ಬರುವ ಗೊಲ್ಲ ಜನಾಂಗದವರ ಒಂದು ದಾಖಲೆ, ವಿಜಯನಗರ ಅಧ್ಯಯನ–೧೨, ಪು. ೧೧೬–೧೮೧
೧೯. ವಿರೂಪಾಕ್ಷಿ ಪೂಜಾರಹಳ್ಳಿ: ಮ್ಯಾಸಬ್ಯಾಡ್ಡಿ ನಾಯಕತನಕ್ಕೆ ಸಂಬಂಧಿಸಿದ ತಾಮ್ರಶಾಸನ ಶೋಧನೆ, ವಿಜಯನಗರ ಅಧ್ಯಯನ–೫, ಪು. ೯೩–೯೭
೨೦. ಯೋಗೀಶ್ವರಪ್ಪ ಡಿ.ಎನ್: ನಾಯಕತನ ಪದ್ಧತಿ, ಪು. ೯೦
೨೧. ಲಕ್ಷ್ಮಣ್ ತೆಲಗಾವಿ: ಎಪ್ಪತ್ತೇಳು ಪಾಳೆಯಗಾರರು, ಇತಿಹಾಸ ದರ್ಶನ–೩, ಪು. ೨೨೮
೨೨. ಯೋಗೀಶ್ವರಪ್ಪ ಡಿ.ಎನ್: ನಾಯಕತನ ಪದ್ಧತಿ, ಪು. ೧೫
೨೩. ಮಂಜುನಾಥ ಎಂ.ಜಿ. (ಸಂ): ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ, ಶಾ.ಸಂ. ೫೩

೨೪. ನಂಜುಂಡಸ್ವಾಮಿ ಬಿ: ಮುತ್ತಿನ ಮುಮ್ಮಡಿ ಏಳುನಾಡು ಪ್ರಭುಗಳು ಕೋರಾ ಇವರಲ್ಲಿರುವ ಜಯರೇಖೆ, ಇತಿಹಾಸ ದರ್ಶನ–೧೦, ಪು. ೨೪೩–೨೫೧
೨೫. ಕಲಬುರ್ಗಿ ಎಂ.ಎಂ: ಕರ್ನಾಟಕದ ಕೈಫಿಯತ್ತುಗಳು, ಅರಿಕುಠಾರದ ಕೈಫಿಯತ್ತು, ಪು. ೬
೨೬. ಚಿದಾನಂದ ಮೂರ್ತಿ ಎಂ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೩೭೫
೨೭. ಮಂಜುನಾಥ್ ಸಿ.ಯು: ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೩೨೨
೨೮. ದೇವರಕೊಂಡಾರೆಡ್ಡಿ: ಶ್ರೀರಂಗರಾಯನ ರೊಳ್ಳದ ಜಯರೇಖೆ ಶಾಸನ, ವಿಜಯನಗರ ಅಧ್ಯಯನ–೮, ಪು. ೧–೪
೨೯. ಎ.ಕ–೧೨ (ರೈಸ್): ಮಧುಗಿರಿ ೨೧, (ಎಂಎಆರ್ ೧೯೧೮: ಪು. ೬೫–೬೬, ಕ್ರಿ.ಶ. ೧೬೦೬)
೩೦. ಸದಾಶಿವಪ್ಪ ಕುಂ.ಬಾ: ಬಾಗಳಿ ಕಂಚಿನಪತ್ರ, ಇತಿಹಾಸ ದರ್ಶನ–೫, ಪು. ೩೪–೩೬
೩೧. ವೀರಕ್ಯಾತಯ್ಯ ವಿ.ಡಿ: ಕುಂಚಿಟಿಗ ಜನಾಂಗ, ಪು. ೧೩–೧೪
೩೨. ಅಮರೇಶ ಯತಗಲ್: ಗುಡಗುಂಟಿ ಸಂಸ್ಥಾನದ ಮೂರು ತಾಮ್ರಪತ್ರಗಳು, ಇತಿಹಾಸ ದರ್ಶನ–೨೨, ಪು. ೧೬೬–೧೭೦
೩೩. ದುರುಗಪ್ಪ ಎಂ.ಕೆ: ಆನೆಗೊಂದಿ ಬಡೇರಾಮರಾಯನ ಶಾಸನ, ವಿಜಯನಗರ ಅಧ್ಯಯನ–೧೯, ಪು. ೪೨–೪೮
೩೪. ಅಮರೇಶ ಯತಗಲ್: ಇತಿಹಾಸ ದರ್ಶನ–೩೦, ಪು. ೭೩–೭೭
೩೫. ಕ.ವಿ.ವಿ.ಶಾ.ಸಂ–೨, ಕೊಪ್ಪಳ ಜಿಲ್ಲೆ, ಅನುಬಂಧ–೧೭೦, ಪು. ೩೯೪, ಕ್ರಿ.ಶ. ೧೫೮೩
೩೬. ಅದೇ, ಅನುಬಂಧ–೧೭೦, ಪು. ೩೯೪, ಕ್ರಿ.ಶ. ೧೫೮೩
೩೭. ಕ.ವಿ.ವಿ.ಶಾ.ಸಂ–೨, ಆನೆಗೊಂದಿ–೧೦
೩೮. ಪುಟ್ಟಯ್ಯ ಎಂ: ಕುಂಚಿಟಿಗರ ಸಮಾಜದ ಚರಿತ್ರೆ, ಪು. ೬೦–೬೧
೩೯. ಅದೇ, ಪು. ೭೬
೪೦. ಕೆಳದಿ ವೆಂಕಟೇಶ್: ಮದಕರಿ ನಾಯಕನ ಕಾಲದ ಆಯಗಾರರ ನಿರ್ಣಯ ಗ್ರಂಥ, ಇತಿಹಾಸ ದರ್ಶನ–೭, ಪು. ೧೦೫–೧೧೦
೪೧. ಕ.ವಿ.ವಿ.ಶಾ.ಸಂ.–೨, ಗಂಗಾವತಿ– ೨೬
೪೨. ಕ.ವಿ.ವಿ.ಶಾ.ಸಂ–೨, ಗಂಗಾವತಿ–೨೭
೪೩. ವಿರೂಪಾಕ್ಷಿ ಪೂಜಾರ ಹಳ್ಳಿ: ಮ್ಯಾಸಬ್ಯಾಡ್ಕಿ ನಾಯಕತನಕ್ಕೆ ಸಂಬಂಧಿಸಿದ ತಾಮ್ರಶಾಸನ ಶೋಧನೆ, ವಿಜಯನಗರ ಅಧ್ಯಯನ–೫, ಪು. ೯೩–೯೭
೪೪. ದುರುಗಪ್ಪ ಎಂ.ಕೆ: ಆನೆಗೊಂದಿ ಬಡೇರಾಮರಾಯನ ಶಾಸನ, ವಿಜಯನಗರ ಅಧ್ಯಯನ–೧೯, ಪು. ೪೨–೪೮
೪೫. ರಾಜಶೇಖರಪ್ಪ ಬಿ: ಕುರುಬ ತಿಮ್ಮರಾವುತ ವೀರನೊಬ್ಬನಿಗೆ ನೀಡಿದವೆನ್ನಲಾದ ಮೂರು ನಿರೂಪಗಳು, ಇತಿಹಾಸ ದರ್ಶನ–೧೨, ಪು. ೧೮೨–೧೯೫
೪೬. ಗೋಪಾಲರಾವ್ ಎಚ್.ಎಸ್: ರಂಗನಾಥಪುರದ ತಾಮ್ರಶಾಸನ, ಇತಿಹಾಸ ದರ್ಶನ–೧, ಪು. ೪೧–೪೭
೪೭. ಅದೇ, ಪು. ೪೬

* * *

# ಅಧ್ಯಾಯ–೪

## ಜಯರೇಖೆ ಶಾಸನಗಳ ಸಾಮಾಜಿಕ ಲೋಕದೃಷ್ಟಿ

## ಅಧ್ಯಾಯ-೪

## ಜಯರೇಖೆ ಶಾಸನಗಳ ಸಾಮಾಜಿಕ ಲೋಕದೃಷ್ಟಿ

ಜಯರೇಖೆಗಳ ಸಮಾಜ ಕ್ರಿಯಾಶೀಲವಾದ, ಚಲನಶೀಲತೆಯನ್ನು ಪಡೆದುಕೊಂಡಿರುವ ಕೆಳಸ್ತರದ ಸಮಾಜ. ಸುಮಾರು ಎಂಟು ಶತಮಾನಗಳ ದೀರ್ಘಾವಧಿಯ ಈ ಸಮಾಜದಲ್ಲಿ ತಳಸ್ತರದ ಹಲವಾರು ಕುಲಸಮುದಾಯಗಳು, ಬೇರೆ ಬೇರೆ ಮತಧರ್ಮಗಳು ನೆಲೆ ಕಂಡುಕೊಂಡಿವೆ. ಪ್ರತಿಯೊಂದು ಜಯರೇಖೆ ಶಾಸನವೂ ಸಂಬಂಧಪಟ್ಟ ಸಮುದಾಯದ ಲೋಕದೃಷ್ಟಿಯ ಪಡಿನೆಳಲಾಗಿದೆ. ಜಯರೇಖೆ ಶಾಸನಗಳಲ್ಲಿ ಕಂಡುಬರುವ ಲೋಕದೃಷ್ಟಿ ದಿಗ್ಭ್ರಮೆ ಮೂಡಿಸುವಂತಿವೆ. ಅವುಗಳಲ್ಲಿ ಕಂಡುಬರುವ ಸಮುದಾಯಗಳ ಆಚರಣೆ, ಸಂಸ್ಕೃತಿ, ಸಂಘರ್ಷ, ಅಸ್ತಿತ್ವಕ್ಕಾಗಿ ನಡೆಸುವ ಹೋರಾಟ ಮುಂತಾದ ಅಂಶಗಳು ಈವರೆಗೆ ವಿಸ್ಮೃತಿಗೆ ಸಂದಿದ್ದ ತಳಸಮುದಾಯಗಳನ್ನು ಒಳಗೊಂಡ ಅದ್ಭುತ ಸಮಾಜವೊಂದನ್ನು ನಮ್ಮ ಮುಂದೆ ತೆರೆದಿಡುತ್ತವೆ. ಶಿಷ್ಟ ಶಾಸನಗಳಲ್ಲಿ ಕಂಡುಬರುವ ಏಕಾಕೃತಿಯ ಚಿತ್ರಣಗಳಾಚೆ ಬಹುಮುಖಿ ಸಮಾಜದ ಚಿತ್ರಣವನ್ನು ಕಟ್ಟಿಕೊಡುತ್ತವೆ.

### ೪.೧ ಜಯರೇಖೆಗಳ ಸಮಾಜ

ಕರ್ನಾಟಕದ ತಳಸಮುದಾಯಗಳು ತಮ್ಮ ಸಾಂಸ್ಕೃತಿಕ ಅನನ್ಯತೆಗಳನ್ನು, ವೈಶಿಷ್ಟ್ಯತೆಗಳನ್ನು ಪ್ರತಿಪಾದಿಸಲು ಕಂಡುಕೊಂಡ ಮಾರ್ಗಗಳಾಗಿ ಜಯರೇಖೆ ಶಾಸನಗಳು ಕಂಡುಬರುತ್ತವೆ. ಅಲ್ಲದೆ ಸಮುದಾಯಗಳ ಮತ್ತು ವ್ಯಕ್ತಿಗಳ ಆಶಯ-ಅಭಿಲಾಷೆಗಳ ಧ್ವನಿಯಾಗಿಯೂ, ಸಮುದಾಯ ಪ್ರಜ್ಞೆಯ ಅರಿವಿನ ಭಾಗವಾಗಿಯೂ ರೂಪುಗೊಂಡಿವೆ. ಇವು ರಾಜಕೀಯ ಇತಿಹಾಸಕ್ಕಿಂತ ಒಂದು ಸಮುದಾಯದ ಸಾಮಾಜಿಕ ಸ್ಥಿತ್ಯಂತರಗಳು ಹಾಗೂ ಸಾಂಸ್ಕೃತಿಕ ಪಲ್ಲಟಗಳನ್ನು, ತತ್ಪರಿಣಾಮವಾಗಿ ಉಂಟಾಗುವ ಘರ್ಷಣೆಗಳನ್ನು ಧ್ವನಿಸುತ್ತವೆ. ಜಯರೇಖೆ ಶಾಸನಗಳ ಮೂಲಕ ತಳ ಹಾಗೂ ಒಳ ಸಮುದಾಯಗಳ ಲೋಕವನ್ನು ಪ್ರಸ್ತುತ ಅಧ್ಯಾಯದಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಈವರೆಗೆ ಶಾಸನಗಳ ಆಧಾರದ ಮೇಲೆ ಇತಿಹಾಸಕಾರರು ಕಟ್ಟಿಕೊಟ್ಟ ಸಮಾಜಕ್ಕಿಂತ ಭಿನ್ನ ಸಮಾಜವನ್ನು ಜಯರೇಖೆ ಶಾಸನಗಳು ಕಟ್ಟಿಕೊಡುತ್ತವೆ. ಇವುಗಳ ಸಮುದಾಯಗಳು ಸಮಾಜ ತನಗೆ ಮಾಡಿದ ತಾರತಮ್ಯದ ಬಗ್ಗೆ ದನಿ ಎತ್ತುವುದಿಲ್ಲ. ಬದಲಾಗಿ ಸಮಾಜದ ಏಣಿ-ಶ್ರೇಣಿಗಳಿಗೆ ಕಾರಣಗಳನ್ನು ತಮ್ಮದೇ ಕುಲಗಳಿಗೆ ಸಂಬಂಧಿಸಿದಂತೆ ವಿಶಿಷ್ಟ ಕಥನಗಳನ್ನು ಕಟ್ಟಿಕೊಡುವ ಮೂಲಕ ತಾತ್ವೀಕರಿಸಿಕೊಳ್ಳುವುದನ್ನು ಕಾಣಬಹುದು. ಇಂಥ ತಾತ್ವೀಕರಣದ ನೆಲೆಗಳಲ್ಲಿ ಸಮಾಜದ ಉಳಿದ ವರ್ಗಗಳೊಡನೆ ಸಂಘರ್ಷಗಳು ಉಂಟಾಗುವುದು ಸಹಜವೂ, ಅನಿವಾರ್ಯವೂ ಆಗಿದ್ದು, ಅವುಗಳನ್ನು ಸಹಜ ಪ್ರಕ್ರಿಯೆಯೆಂಬಂತೆ ಸ್ವೀಕರಿಸಲಾಗಿದೆ. ಸಮಾನ ಪಾತಳಿಯಲ್ಲಿರುವ ಹಲವಾರು ಕುಲಗಳು ಕೆಲವು ಆಚರಣೆಗಳ ಅಥವಾ ಕೆಲವು ಪದ್ಧತಿಗಳ ಅನುಸರಣೆಯ ಬಗ್ಗೆ ವಾಗ್ವಾದಕ್ಕಿಳಿದು,

ವಿವಾದಗಳನ್ನು ಏರ್ಪಡಿಸಿಕೊಂಡು, ಸಮಾಜದ ಮುಖ್ಯವಾಹಿನಿಯ ಎಲ್ಲ ಮತಧರ್ಮ–ಕುಲಗಳ ಸಮುದಾಯಗಳು ಅವುಗಳ ಭಾಗವಾಗುವಂತೆ ಮಾಡುತ್ತವೆ.

ಇವುಗಳ ಜೊತೆಗೆ ಸಮಾಜದ ವಿವಿಧ ಸಮುದಾಯಗಳಲ್ಲಾದ ಸಾಮಾಜಿಕ ಸ್ಥಿತ್ಯಂತರಗಳು, ವೈರುಧ್ಯಗಳು, ಪಲ್ಲಟಗಳ ಬಗ್ಗೆ ಶಾಸನಗಳಲ್ಲಿ ಈವರೆಗೆ ಕಟ್ಟಿಕೊಟ್ಟಿರುವ ಸಮಾಜಕ್ಕೆ ತದ್ವಿರುದ್ಧವಾದ ಸಮಾಜವನ್ನು ಜಯರೇಖೆ ಶಾಸನಗಳ ಸಮಾಜ ಕಟ್ಟಿಕೊಡುತ್ತದೆ. ಮೊದಲಿನಂತೆ ಇಲ್ಲಿಯೂ ಧರ್ಮ ಸಂಘರ್ಷವಿದೆ, ಕುಲ ಕಟ್ಟಳೆಗಳಿವೆ, ಹಲವಾರು ಜಾತಿ–ಉಪಜಾತಿಗಳ ನಿರೂಪಣೆಯಿದೆ, ಪಣವ್ಯಾಜ್ಯಗಳೂ ಇವೆ. ಆದರೆ, ಈ ಎಲ್ಲ ಅಂಶಗಳು ಈವರೆಗಿನ ಚರಿತ್ರೆಗಳು ಕಟ್ಟಿಕೊಟ್ಟ ಸಮಾಜಕ್ಕಿಂತ ಭಿನ್ನವಾಗಿವೆ. ಮಾನವನ ನಿಜ ಬದುಕಿನ ವಾಸ್ತವಿಕ ಚಿತ್ರಣದ ಸ್ಪಷ್ಟ ನಿರೂಪಣೆಯನ್ನು ನೀಡುತ್ತವೆ. ಜಯರೇಖೆ ಶಾಸನಗಳಲ್ಲಿ ಈವರೆಗೆ ಉಲ್ಲೇಖಗೊಂಡಿರದ ಅಥವಾ ಉಲ್ಲೇಖಗೊಂಡಿದ್ದರೂ ಕ್ವಚಿತ್ತಾಗಿ ಉಲ್ಲೇಖಗೊಂಡ ಸಮುದಾಯಗಳಿವೆ. ಅವುಗಳ ಜೀವನ ವಿಧಾನದ ಕಥನಗಳಿವೆ.

ಜಯರೇಖೆ ಶಾಸನಗಳ ಮತ್ತೊಂದು ಗುರುತಿಸಬಹುದಾದ, ಅತಿ ಮುಖ್ಯವೆನಿಸಬಹುದಾದ ವೈಶಿಷ್ಟ್ಯವೆಂದರೆ, ಶಿಷ್ಟ ಶಾಸನಗಳಲ್ಲಿ ಅಸ್ತಿತ್ವವನ್ನೇ ಪಡೆದುಕೊಳ್ಳದಿರುವ ಅಲೆಮಾರಿ ಬುಡಕಟ್ಟು ಸಮುದಾಯದ ದಕ್ಕಲಿಗರು, ಮಾಸ್ತೀಕರು, ಸಿಂದ್ ಮಾದಿಗರು, ಕೊರಮರು ಮುಂತಾದ ಸಮುದಾಯಗಳು ಇಲ್ಲಿ ಪ್ರಪ್ರಥಮ ಬಾರಿಗೆ ಜೀವ ತಳೆಯುತ್ತವೆ. ಒಂದು ಸ್ಥಿರ ನೆಲೆಯಲ್ಲಿ ನೆಲೆಗೊಳ್ಳದ ಈ ಸಮುದಾಯಗಳು ಬದುಕಿಗಾಗಿ ನಡೆಸುವ ಹೋರಾಟದ ಚಿತ್ರಣವಿದೆ. ಇವಲ್ಲದೆ, ಕೃಷಿಕ, ಕುಶಲಕರ್ಮಿ ಹಾಗೂ ವ್ಯಾಪಾರಿ ವರ್ಗಗಳ ಕುಲಕಥನಗಳು ಇವೆ.ಕುಲ ಸಮುದಾಯಗಳ ಶ್ರೇಷ್ಠತ್ವದ ಪ್ರತಿಪಾದನೆಯಲ್ಲಿ ಪರಸ್ಪರ ಆಂತರಿಕ ಸಂಘರ್ಷಗಳು ಹೆಚ್ಚಾಗಿ ದಾಖಲಾಗಿವೆ. ಸಂಘರ್ಷಗಳ ಹಿನ್ನಲೆಯಲ್ಲಿ ಸಾಮಾಜಿಕವಾಗಿ ಹಲವಾರು ಸಮುದಾಯಗಳ ನಡುವೆ ಸಂಕ್ಷೋಭೆಗಳು, ತಲ್ಲಣಗಳೂ ಸಹ ಉಂಟಾಗಿವೆ. ಸಮುದಾಯಗಳೊಳಗಿನ ಕುಲ ಸಂಬಂಧಿ ಕಲಹಗಳು ಜಯರೇಖೆಗಳಲ್ಲಿ ಕ್ಲುಪ್ತವಾಗಿ ಪ್ರತಿಫಲಿತವಾಗಿವೆ.

ಶಿಷ್ಟ ಶಾಸನಗಳಲ್ಲಿ ಕಾಣುತ್ತಿದ್ದ ಅವು ವೃತ್ತಿ ಸಮುದಾಯಗಳು ಪರಂಪರಾನುಗತವಾಗಿ ಬಂದ ವೃತ್ತಿಗಳನ್ನು ಅನುಸರಿಸುತ್ತಿದ್ದಅದಕ್ಕೆ ಅವು ಪ್ರತಿಫಲಗಳನ್ನು ಪಡೆಯುತ್ತಿದ್ದ ಸಂತೆ ನೆರೆಯಿಸುತ್ತಿದ್ದ, ತೆರಿಗೆ ಕಟ್ಟುತ್ತಿದ್ದ, ತೆರಿಗೆ ಸಂಗ್ರಹಿಸುತ್ತಿದ್ದ, ತೆರಿಗೆಯಿಂದ ವಿನಾಯಿತಿ ಪಡೆಯುತ್ತಿದ್ದ ಚಿತ್ರಣಕ್ಕಿಂತ ಭಿನ್ನವಾಗಿ ಇಲ್ಲಿ ಈ ಸಮುದಾಯಗಳು ಅಂಥ ವೃತ್ತಿಗಳನ್ನು ಏಕೆ ಕೈಗೊಳ್ಳುತ್ತಿದ್ದವು ಎಂಬ ಪ್ರಶ್ನೆಗೆ ತಾರ್ಕಿಕ ಕಾರಣಗಳನ್ನು ಒದಗಿಸಿಕೊಡುತ್ತವೆ. ಜೀವನೋಪಾಯಕ್ಕೆ ಕಂಡುಕೊಂಡ ಲೌಕಿಕ ವೃತ್ತಿ–ವ್ಯವಹಾರಕ್ಕೆ ಅಲೌಕಿಕ ಚೌಕಟ್ಟನ್ನು ನಿರ್ಮಿಸಿಕೊಡುತ್ತವೆ. ಹಾಗೆಯೇ ವೃತ್ತಿಗಳಿಗೆ ತಾತ್ವಿಕತೆಯನ್ನು ತಂದುಕೊಡುತ್ತವೆ.

ಜಯರೇಖೆಗಳಲ್ಲಿ ಎಲ್ಲ ಸಮುದಾಯಗಳೂ ಸಹ ಲಂಬಾಂತರ ಚಲನಶೀಲತೆಯನ್ನು ಪಡೆದುಕೊಳ್ಳಲು ನಡೆಸುವ ಹಪಹಪಿಕೆ ಕಂಡುಬರುತ್ತದೆ. ಸಮಾನಾಂತರ ಚಲನಶೀಲತೆಗೆ ನಡೆಯುವ

ಪ್ರಯತ್ನಗಳು ವಿರಳವೆಂದೇ ಹೇಳಬಹುದು. ಯಾಗ/ಯಜ್ಞಗಳ ಮೂಲಕ ಜಾತಿ ಶ್ರೇಣೀಕರಣದ ಉತ್ತುಂಗ ಸ್ಥಾನದಲ್ಲಿರುವ ವೈದಿಕರ ಮಟ್ಟಕ್ಕೆ ಮೇಲ್ಮುಖ ಚಲನೆ ಸಾಧಿಸುವ ನಿಟ್ಟಿನಲ್ಲಿ ವೈದಿಕರ ಆಚಾರ-ವಿಚಾರ, ಪದ್ಧತಿಗಳನ್ನು ಅನುಕರಿಸುವ ಪ್ರಯತ್ನಗಳು ನಡೆಯುತ್ತವೆ. ಆದರೆ ವೈದಿಕ ಸಮುದಾಯ ಇದನ್ನು ನಿರಾಕರಿಸಿದಾಗ, ಅದಕ್ಕೆ ಪ್ರತಿರೋಧಾತ್ಮಕ ಪ್ರತಿಕ್ರಿಯೆಯ ಮೂಲಕ ಪರ್ಯಾಯ ಕ್ರಮಗಳನ್ನೇರ್ಪಡಿಸಿಕೊಂಡು ಅವರ ಮಟ್ಟಕ್ಕೆ ಸಮಾನಾಂತರವಾಗಿ ಪರಿಚಲಿಸುವ ಪ್ರಯತ್ನಗಳು ನಡೆಯುತ್ತವೆ.

ಕರ್ನಾಟಕದಲ್ಲಿ ಕೋಮಟಿಗ ಜನಾಂಗವು ಇಂಥ ಪ್ರತಿರೋಧ ತೋರಿದ್ದನ್ನು ಕಾಣಬಹುದು. ೧೯೨೫ರಲ್ಲಿ ಶೃಂಗೇರಿ ಮಠಾಧೀಶರು 'ವೈಶ್ಯವೇದೋಕ್ತ ಕ್ರಿಯಾ ವಿಚಾರ ವ್ಯವಸ್ಥಾ' ಎಂಬ ಗ್ರಂಥವನ್ನು ಪ್ರಕಟಿಸಿ ಕಲಿಯುಗದಲ್ಲಿ ಕ್ಷತ್ರಿಯರೂ ಇಲ್ಲ, ವೈಶ್ಯರೂ ಇಲ್ಲ, ಬ್ರಾಹ್ಮಣರನ್ನು ಬಿಟ್ಟರೆ ಅನ್ಯರಿಗೆ ಯಾಗ ಯಜನದ ಅಧಿಕಾರವಿಲ್ಲ. ಇತರರೆಲ್ಲಾ ಶೂದ್ರರು ಎಂದು ಪ್ರತಿಪಾದಿಸಿದರು. ಈ ಗ್ರಂಥವನ್ನು ಪರಿಶೀಲಿಸುವ ಸಲುವಾಗಿಯೇ ಆಂಧ್ರ-ಕರ್ನಾಟಕದ ಕೋಮಟಿಗರು ಗದಗ-ಬೆಟಗೇರಿ ನಗರದಲ್ಲಿ ಸಮ್ಮೇಳನ ನಡೆಸಿ, ಶೃಂಗೇರಿ ಪೀಠದವರ ಗ್ರಂಥವನ್ನು ಆಧಾರ ಸಮೇತ ಖಂಡಿಸಿ, ಯಾಗಾದಿಗಳನ್ನು ತಾವೇ ನಡೆಸಿ 'ಸೋಮಯಾಜಿ' ಎಂಬ ಬಿರುದು ಧರಿಸಿದರು. ಅಂದಿನಿಂದ ಶೃಂಗೇರಿ ಪೀಠದವರು ತಮಗೆ ಗುರುಗಳಲ್ಲ, ಅವರು ಸಂಚಾರ ಬಂದಾಗ ಯಾರೂ ಅವರ ಪಾದಪೂಜೆ ಮಾಡಬಾರದು, ಕಾಣಿಕೆ ನೀಡಬಾರದು ಎಂದು ತೀರ್ಮಾನಿಸಲಾಯಿತಲ್ಲದೆ, ಹಳೇ ಮೈಸೂರು ಪ್ರಾಂತ್ಯದ ಅನೇಕ ಕಡೆ ವೇದ ಪಾಠಶಾಲೆಗಳನ್ನು ಪ್ರಾರಂಭಿಸಿ ವೈಶ್ಯರು ಪೌರೋಹಿತ್ಯ, ದೇವತಾಪೂಜೆಗಳಲ್ಲಿ ಶಿಕ್ಷಣ ಪಡೆದು ಬ್ರಾಹ್ಮಣರಿಗೆ ಮೀಸಲಿದ್ದ ಕೆಲಸಗಳನ್ನು ತಾವೇ ನಿರ್ವಹಿಸಲಾರಂಭಿಸಿದರು.[೧] ಇಂಥ ಚಲನಶೀಲತೆಗೆ ಸಮಾಜದ ಒಪ್ಪಿತ ಮುದ್ರೆ ಇತ್ತೇ? ಇರಲಿಲ್ಲವೇ? ಎಂಬ ಸಂಗತಿ ಅಪ್ರಸ್ತುತವಾಗುತ್ತದೆ. ಬದಲಿಗೆ ಸಮಾಜದಲ್ಲಿ ತನ್ನ ಸಮುದಾಯದ ಚಲನೆಯನ್ನು ಮೇಲ್ಮುಖವಾಗಿ ಏರಿಸಲು ಪ್ರಯತ್ನಿಸಲಾಗುತ್ತದೆ.

ಜಯರೇಖೆಗಳ ಸಮಾಜದಲ್ಲಿ ಮುಖಾಮುಖಿಯಾಗಿರುವುದು ಸ್ಥಳೀಕ ಕೆಳ ಸಮುದಾಯಗಳೇ. ಒಂದು ಸಮುದಾಯವು ಅನುಸರಿಸುವ ಕುಲಾಚಾರಗಳನ್ನು ಮತ್ತೊಂದು ಸಮುದಾಯದ ಪಾಲಾಗದಂತೆ ಎಚ್ಚರಿಕೆ ವಹಿಸುತ್ತವೆ. ಇದಕ್ಕಾಗಿ ಅಧಿಕೃತತೆಯನ್ನು ನೀಡಿ ಈ ಶಾಸನವನ್ನು ಹಿಂದೆ ಪೂರ್ವಜರು ರಚಿಸಿದ್ದೆಂದು ಹೇಳಲು ಪ್ರಯತ್ನಿಸುತ್ತದೆ. ಇವುಗಳಲ್ಲಿ ಬಹುತೇಕ ಶಾಸನಗಳು ಕೂಟ ಅಥವಾ ಕೃತಕ ಶಾಸನಗಳೆಂಬುದು ಸ್ಪಷ್ಟ.

ಕೆಲವು ಜಯರೇಖೆಗಳನ್ನು ಅವಲೋಕಿಸಿದಾಗ ಅಲ್ಲಿ ವ್ಯಾಜ್ಯ ಉದ್ಭವವಾಗುವುದು ಒಂದೇ ಸಮುದಾಯದ ಅಥವಾ ಜಾತಿಯ ಎರಡು ಗುಂಪುಗಳ ಮಧ್ಯೆ. ಅದೂ ಕೆಲವು ಆಚರಣೆಗಳ ಕಾರಣಕ್ಕಾಗಿ. ಬಹುಶಃ ಇಂತಹ ಕಲಹಗಳಿಗೆ ಕಾರಣ ಒಂದೇ ಸಮುದಾಯದ/ಕುಟುಂಬದ ಜನರು ಕಾಲಾನಂತರ ಬೇರೆಯಾಗಿ ವಿಭಿನ್ನ ಆಚರಣೆಗಳನ್ನು ಅನುಸರಿಸಲಾರಂಭಿಸಿದ್ದೆನಿಸುತ್ತದೆ. ಒಂದೇ

ಸಮುದಾಯ ಹೀಗೆ ಉಪ–ಪಂಗಡ/ಜಾತಿಗಳಾಗಿ, ಒಂದು ಜಾತಿ ಹಲವಾರು ಉಪ–ಜಾತಿಗಳಾಗಿ ಕವಲೊಡೆಯುವುದಕ್ಕೆ ಕಾರಣಗಳನ್ನು ರೈಸ್‌ರವರು ಹೀಗೆ ವಿವರಿಸುತ್ತಾರೆ. "ಕೆಲವು ಕುಟುಂಬಗಳು ಅಥವಾ ವ್ಯಕ್ತಿಗಳು ಮುಖ್ಯ ಸಮೂಹಗಳಿಂದ ಬೇರ್ಪಟ್ಟಾಗ ಮತ್ತು ದೇಶದ ಇನ್ನೊಂದು ಭಾಗಕ್ಕೆ ವಲಸೆ ಹೋದಾಗ ಅಥವಾ ಹೊಸ ಹೆಸರನ್ನು ಇಟ್ಟುಕೊಂಡಾಗ ಅಥವಾ ಅವರ ನೆರೆಹೊರೆಯವರು ಅವರ ಗುಂಪಿಗೆ ಹೊಸ ನಾಮಕರಣ ಮಾಡಿದಾಗ, ಹೊಸ ಜಾತಿ ಹುಟ್ಟುತ್ತಿತ್ತು. ಆದುದರಿಂದ ಜಾತಿಗಳ ಸಂಖ್ಯೆ ಹೆಚ್ಚಾಗುತ್ತಿತ್ತು. ಜಗಳಗಳು ಏರ್ಪಟ್ಟಾಗ ಮತ್ತು ಒಂದು ಜಾತಿ ಎರಡು ಗುಂಪುಗಳಾಗಿ ವಿಭಜನೆಗೊಂಡಾಗ ಪ್ರತಿ ಗುಂಪಿಗೂ ಒಬ್ಬ ಪ್ರಭಾವಶಾಲಿ ವ್ಯಕ್ತಿ ಅಥವಾ ಕುಟುಂಬ ನಾಯಕತ್ವ ವಹಿಸಿಕೊಳ್ಳುತ್ತಿತ್ತು. ಅಂತಹ ಗುಂಪುಗಳು ತಮ್ಮೊಳಗೆ ವಿವಾಹ ಮತ್ತು ಇತರೆ ಯಾವುದೇ ಸಂಪರ್ಕ ಇಟ್ಟುಕೊಳ್ಳುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಪ್ರತ್ಯೇಕ ಜಾತಿ ಮತ್ತು ಅದರ ಉಪವಿಭಾಗ ಶಾಶ್ವತವಾಗಿ ರಚಿಸಲ್ಪಡುತ್ತಿತ್ತು. ಇದಲ್ಲದೆ, ಇಂತಹ ಉಪ–ಜಾತಿ ಮೂಲಜಾತಿಗಿಂತ ಭಿನ್ನವಾಗಿ ಮತ್ತು ತನ್ನದೇ ಆದ ಲಕ್ಷಣಗಳನ್ನು ಪಡೆದುಕೊಳ್ಳುತ್ತಿತ್ತು".[೨]

ರೈಸ್‌ರವರ ಮಾತಿನ ಹಿನ್ನಲೆಯಲ್ಲಿ 'ಮಾದಿಗ' ಸಮುದಾಯವನ್ನು ವಿಶ್ಲೇಷಿಸಬಹುದು. ಮಾದಿಗ ಸಮುದಾಯದ ಸಿಂದ್ ಮಾದಿಗರು, ಮಾದಿಗ ಮಾಸ್ತೀಕರು, ಗೋಸಲರು, ದಕ್ಕಲರು ಈ ಎಲ್ಲ ಸಮುದಾಯಗಳಿಗೂ ಜಾಂಬವ ಪುರಾಣವೇ ಕುಲಪುರಾಣವಾಗಿದೆ. ಅಲ್ಲದೆ ಈ ಸಮುದಾಯಗಳು 'ಮಾದಿಗ' ಸಮುದಾಯದ ಪ್ರಧಾನಧಾರೆಗೆ ಸೇರಿದ್ದರೂ, ವಿಭಿನ್ನ ಆಚರಣೆಗಳ ಮೂಲಕ ಮೂಲಧಾರೆ ಮಾದಿಗ ಸಮುದಾಯದಿಂದ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿರುವುದನ್ನು ಅವರಿಗೆ ಸಂಬಂಧಿಸಿದ ಕಂಚಿಪತ್ರಗಳಲ್ಲಿ ನೋಡಬಹುದು. ಜಯರೇಖೆಗಳಲ್ಲಿ ಗಮನಸೆಳೆಯುವ ಕುಲಸಂಬಂಧಿ ಕಲಹಗಳು ಮತ್ತು ಮೇಲಾಟಗಳನ್ನು ಅವಲೋಕಿಸಿದಾಗ, ಇಲ್ಲಿ ಜಾತಿಗಳು ಪ್ರಧಾನ ಭೂಮಿಕೆಯಲ್ಲಿ ಕಾಣಿಸಿಕೊಳ್ಳುತ್ತವೆ. ಜಾತಿಗಳಿಗಿರುವ ಪರಮಾಧಿಕಾರಗಳನ್ನು ನಿರ್ಣಯಿಸುವುದು, ವಿಶೇಷಾಧಿಕಾರಗಳನ್ನು ಪಡೆಯುವುದು, ಮೇಲ್ಮುಖ ಜಿಗಿತಕ್ಕೆ ಹಾತೊರೆಯುವ ಪ್ರಯತ್ನಗಳು ಹೆಚ್ಚಾಗಿ ಕಂಡುಬರುತ್ತವೆ. ಜಾತಿಗಳು ಸಮಾಜದ ವಾಸ್ತವವಾದರೂ, ಅವುಗಳ ಪರಿಕಲ್ಪನೆಯನ್ನು ಅನುಕೂಲಕ್ಕೆ, ಅನುಭೋಗಕ್ಕೆ ತಕ್ಕ ಹಾಗೆ ವ್ಯತ್ಯಸ್ಥಗೊಳಿಸಿಕೊಳ್ಳುವ ಜಾಣ್ಮೆಯನ್ನು ಪ್ರಭುತ್ವ ಆದಿಯಾಗಿ ಎಲ್ಲ ಸಮುದಾಯಗಳು ಮೆರೆಯುತ್ತಿದ್ದವು. "ಐತಿಹಾಸಿಕ ವಾಸ್ತವವೆಂದರೆ, ದಕ್ಷಿಣ ಭಾರತದಲ್ಲಿ ಕ್ಷತ್ರಿಯ ಪರಂಪರೆ ಎಂದಿಗೂ ಇರಲಿಲ್ಲ. ಇಲ್ಲಿನ ಯಾವ ಚಕ್ರವರ್ತಿಯೂ, ರಾಜನೂ ಕ್ಷತ್ರಿಯನಲ್ಲ. ರಾಷ್ಟ್ರಕೂಟ, ಚಾಲುಕ್ಯ, ಕದಂಬ, ಗಂಗ, ಹೊಯ್ಸಳ, ಯಾದವ, ಬಲ್ಲಾಳ, ಕೃಷ್ಣದೇವರಾಯ, ಮೈಸೂರು ಅರಸರು ಇವರಾರು ಕ್ಷತ್ರಿಯರಲ್ಲ. . . . . . .ಎಲ್ಲರೂ ಚಿಕ್ಕ–ಪುಟ್ಟ ಜಾತಿಗಳವರೇ. ತೋಳ್ಬಲ, ಸಂಘಟನೆ, ಶಕ್ತಿಯ ಮೂಲಕ ನಾಯಕ, ಪಾಳೆಯಗಾರ, ಸಾಮಂತರಾಗಿ ಮುಂದೆ ರಾಜರಾದವರು, ಸಾಮ್ರಾಜ್ಯ ಕಟ್ಟಿದವರು. ಸಿಂಹಾಸನ, ಕಿರೀಟ, ಭುಜಕೀರ್ತಿ, ಪ್ರಭಾವಳಿ, ಛಾಮರಗಳು ದೊರೆತ ಮೇಲೆ ಸಾಮಾಜಿಕ ಅಂತಸ್ತು ಇವರಿಗೆ ಅನಿವಾರ್ಯವಾಗಿದ್ದು ಸಹಜವೇ.

ಇವರುಗಳಿಗೆ ಬಿರುದು ಬಾವಲಿ, ಅಂತಃಪುರ, ಆಸ್ಥಾನ, ಮುಜರೆಗಳ ಸಲ್ಲಿಕೆಗೆ ಇವರು ಶೂದ್ರತ್ವದಿಂದ ಹೊರಬರಬೇಕಾದರೆ, ಇವರಿಗೆ ಜನಿವಾರದ, ಕ್ಷತ್ರಿಯ ಸ್ಥಾನದ ಅವಶ್ಯಕತೆ ಇದ್ದೇ ಇತ್ತು".[೩] ಶಾಸನಗಳಲ್ಲಿ ಕಂಡುಬರುವ ವಂಶಾವಳಿಗಳೂ ಈ ಅಂಶವನ್ನೇ ಎತ್ತಿ ಹಿಡಿಯುತ್ತವೆ. ಬುಡಕಟ್ಟು ಅಥವಾ ಕೃಷಿ ಮೂಲದಿಂದ ಬಂದು ಆಳ್ವಿಕೆ ನಡೆಸಿದ ರಾಜವಂಶಗಳು, ತಮ್ಮ ಶಾಸನಗಳಲ್ಲಿನ ವಂಶಾವಳಿಗಳಲ್ಲಿ ನಿಜಮೂಲಗಳನ್ನು ಮರೆ ಮಾಡಿ, ಸೂರ್ಯ ವಂಶ ಅಥವಾ ಚಂದ್ರವಂಶ, ಪೌರಾಣಿಕ ವ್ಯಕ್ತಿಗಳಿಂದ ತಮ್ಮ ವಂಶ ಬಂತೆಂದು ಅಥವಾ ತಮ್ಮ ವಂಶ ದೈವಮೂಲದಿಂದ ಉದ್ಭವವಾಯಿತೆಂದು ಕತೆಗಳನ್ನು ಹೆಣೆದುಕೊಂಡಿರುವುದನ್ನು ಕಾಣಬಹುದು. ಈ ಕತೆಗಳು 'ಮುಕ್ಕಣ್ಣ ಕದಂಬ' ನಿಂದ ಉದ್ಭವವಾದ ಕದಂಬ ವಂಶದಿಂದ ಹಿಡಿದು, ಮೈಸೂರು ಅರಸರವರೆಗೆ ಯಾವ ವಂಶವನ್ನೂ ಬಿಡದೆ ಹೆಣೆದುಕೊಂಡಿವೆ. ಇದಕ್ಕೆ ನಿದರ್ಶನವಾಗಿ ದೇವಚಂದ್ರ ನೀಡುವ ಚಿಕ್ಕದೇವರಾಜರ ವಂಶಾವಳಿಯನ್ನು ಗಮನಿಸಬಹುದು. ಮೈಸೂರು ವಂಶ ಮೂಲತಃ ಶೂದ್ರ ವಂಶ. ಶೂದ್ರತ್ವವನ್ನು ಕ್ಷತ್ರಿಯತ್ವದ ಮಟ್ಟಕ್ಕೆ ಏರಿಸುವ ಅನಿವಾರ್ಯತೆ ಉಂಟಾಗುತ್ತದೆ. ಇದಕ್ಕಾಗಿ ಚಿಕ್ಕದೇವರಾಜ ಒಡೆಯರು ತಮ್ಮ ವಂಶಪರಂಪರೆ ನಿರ್ಣಯಿಸಲು ಅರಸುಗಳ ಪರಂಪರೆಯ ಪೂರ್ವಿಕರಾದ 'ಬುದ್ಧಿವಂತರನ್ನು' ಕರೆಸುತ್ತಾರೆ. ಬುದ್ಧಿವಂತರು ಆತನಿಗೆ ಚಂದ್ರವಂಶವನ್ನು, ಆತ್ರೇಯ ಗೋತ್ರವನ್ನು, ಆಶ್ವಲಾಯನ ಸೂತ್ರ ಹಾಗೂ ಋಕ್ ಶಾಖೆಯನ್ನು ನಿರ್ಣಯಿಸಿ ಶೂದ್ರತ್ವದಿಂದ ಬಿಡುಗಡೆಗೊಳಿಸುತ್ತಾರೆ. ಹಾಗೆಯೇ ಕನ್ಯಾ ಸ್ವೀಕಾರಕ್ಕೆ ಹದಿಮೂರು ಮತ್ತು ಹದಿನೆಂಟು ಮನೆತನದಲ್ಲಿ ಸ್ವೀಕರಿಸಬಹುದೆಂದು ನಿರ್ಣಯವಾಗುತ್ತದೆ. ಆದರೆ ಕೆಲವರು ಹದಿಮೂರು ಮನೆತನದವರು ಪಟ್ಟಕ್ಕೆ ಯೋಗ್ಯರು, ಉಳಿದವರು ಪಟ್ಟಕ್ಕೆ ಅಯೋಗ್ಯರು ಎಂದು ವಾಗ್ವಾದ ಪ್ರಾರಂಭವಾದಾಗ, ರಾಜನು ಈ ಕಾಲದಲ್ಲಿ ಜಾತಿ ಕ್ಷತ್ರಿಯ, ತೀರ್ಥ ಕ್ಷತ್ರಿಯ ಎಂಬ ಎರಡು ಬಗೆಯ ಕ್ಷತ್ರಿಯರಲ್ಲಿ ನಾನಾ ವಿಧವಾಗಿ ಸಂಕರವಾಗಿರುವುದರಿಂದ ಮತ್ತು ಭೂಪತಿಯು 'ಸ್ವಯಮೇವ ಮೃಗೇಂದ್ರತಾ' ಎಂಬುದರಿಂದ ಯಾವ ಜಾತಿಯಾದರೂ, ಜಾತಿಗಿಂತ ಮಿಗಿಲಾಗಿ ಪೂರ್ವಜನ್ಮದ ಪುಣ್ಯದಿಂದ ಶೌರ್ಯ, ವೀರ್ಯ, ಪರಾಕ್ರಮವುಳ್ಳವರು ಯಾರೇ ಆಗಲಿ ಪಟ್ಟವೇರಬಹುದೆಂದು ನಿರ್ಣಯಿಸುತ್ತಾರೆ. ಆದ್ದರಿಂದ ಈ ಕಾಲದಲ್ಲಿ ತುರುಷ್ಕ, ರಜಪುತ್ರ, ಮರಾಟ, ಅರೆ, ತೆಲುಂಗ, ಕುರುಂಬ, ಕುಂಬಾರ, ವೈತಾಳಿ, ಕುಂಡಗೊಳಕ, ಉಗ್ರ ಪಾಷಡರ್ ಮೊದಲಾಗಿ ಬ್ರಾಹ್ಮಣರಿಂದ ಪ್ರಾರಂಭವಾಗಿ ಚಾಂಡಾಲ ಮಾತಂಗ ಜಾತಿಗಳಲ್ಲಿ ಹುಟ್ಟಿದವರೆಲ್ಲರೂ ಸಿಂಹಾಸನಕ್ಕಧಿಪರಾಗಿ ಕುಲಜರೆನಿಸಿಕೊಳ್ಳುತ್ತಾ ರಾಜ್ಯವನ್ನಾಳುವರೆಂದು ಹೇಳಿ ನಿಯಮಿಸುತ್ತಾನೆ[೪]. ಪ್ರಭುತ್ವವೂ ಹೇಗೆ ತನ್ನ ಅನುಕೂಲಕ್ಕೆ ತಕ್ಕ ಹಾಗೆ ಸಂದರ್ಭ ಸನ್ನಿವೇಶಗಳೊಂದಿಗೆ ಅನುಸಂಧಾನವಾಗುತ್ತದೆಂಬುದಕ್ಕೆ ಇದೊಂದು ದೃಷ್ಟಾಂತವಾಗಿದೆ. ಅಲೌಕಿಕವಾದ, ಅಮೂರ್ತವಾದ ಧರ್ಮ-ಜಾತಿಗಳನ್ನು ಲೌಕಿಕ ಪರಿವೇಷದೊಳಗೆ ಬಂಧಿಸುವ ಮತ್ತು ತನ್ನ ಅನುಕೂಲಕ್ಕೆ ಬಳಸಿಕೊಳ್ಳುವ ಇಂಥ ಹಲವಾರು ದೃಷ್ಟಾಂತಗಳು ನಮ್ಮ ಇತಿಹಾಸದಲ್ಲಿವೆ.

ಇಂತಹುದೇ ಮತ್ತೊಂದು ನಿದರ್ಶನವನ್ನು ಹಟ್ಟಿದೆರೆ ವಕ್ಕಲಿಗರಿಗೆ ಸಂಬಂಧಿಸಿದ ಜಯರೇಖೆಯಲ್ಲಿ ಕಾಣಬಹುದು.[೫] ಕಾಪಗೌಡ ಎಂಬ ವ್ಯಕ್ತಿ ಹಟ್ಟಿದೆರೆಯ ಕುಳದ ಒಕ್ಕಲಾಗಿದ್ದು, ಆತ ಹಟ್ಟಿದೆರೆಯ ಹೊನ್ನನ್ನು ನೀಡಬೇಕೆಂಬುದು ಹಟ್ಟಿದೆರೆಯ ಅಪ್ಪರಸರ ಬಸವರಸರ ತಿಮ್ಮಯ್ಯನ ವಾದ. ಅದಕ್ಕೆ ಕಾಪಗೌಡ ತಾನು ಹಟ್ಟಿದೆರೆಯ ಒಕ್ಕಲೇ ಅಲ್ಲ ಎಂದು ವಾದ ಮಾಡುತ್ತಾನೆ. ಈ ಬಗ್ಗೆ ಕುಲವಹಿಯನ್ನು ನೋಡಿದಾಗ, ಅದರಲ್ಲಿರುವ ಹೆಸರು ತಮ್ಮ ಕುಲ ಹಿರಿಯರದ್ದಲ್ಲವೆಂದು ವಾದಿಸುತ್ತಾನೆ. ಕೊನೆಗೆ ಆಣೆ ಪ್ರಮಾಣಗಳೊಂದಿಗೆ ಆತ ಹಟ್ಟಿದೆರೆ ಒಕ್ಕಲಲ್ಲ ಎಂಬ ಸಂಗತಿ ಸಾಬೀತಾದ ತರುವಾಯ ಆತನಿಗೆ ಜಯರೇಖೆ ಬರೆದುಕೊಡಲಾಗುತ್ತದೆ. ಹಾಗಿದ್ದರೆ, ಹಟ್ಟಿದೆರೆ ಒಕ್ಕಲು ಉಪಜಾತಿ ಸೂಚಕವೇ? ಅಥವಾ ಇದು ಒಂದು ವೃತ್ತಿಯನ್ನು ಸೂಚಿಸುತ್ತದೆಯೇ? ಎಂಬ ಪ್ರಶ್ನೆ ಈ ಶಾಸನದಿಂದ ಉದ್ಭವವಾಗುತ್ತದೆ. ಜಾತಿ ಎಂದು ಸ್ವೀಕರಿಸಿದಲ್ಲಿ, ಒಬ್ಬ ವ್ಯಕ್ತಿಯು ಒಂದು ಜಾತಿ ಅಥವಾ ಉಪ ಜಾತಿಯನ್ನು ಒಪ್ಪಿಕೊಳ್ಳುವುದು/ಬಿಟ್ಟುಬಿಡುವುದು ಐಚ್ಛಿಕವಾಗಿತ್ತೇ? ಎಂಬ ಪ್ರಶ್ನೆ ಸಹ ಈ ಸಂದರ್ಭದಲ್ಲಿ ಹುಟ್ಟಿಕೊಳ್ಳುತ್ತದೆ.

ಇಲ್ಲಿ ಗಮನಿಸಬಹುದಾದಂತಹ ಮತ್ತೊಂದು ಅಂಶವೆಂದರೆ, ಜಯರೇಖೆಗಳಲ್ಲಿ 'ಜಾತಿ' ಪದ ಬಳಕೆಗೊಂಡ ಉದಾಹರಣೆಗಳು ಕಂಡುಬಂದಿರುವುದಿಲ್ಲ. ಕರ್ನಾಟಕದ ಪ್ರಾಚೀನ ಶಾಸನಗಳಲ್ಲೂ 'ಪ್ರಕೃತಿ' ಎಂಬ ಪದವನ್ನು ಬಳಸಲಾಗಿದೆ. ಗಂಗರ ಎಂಟನೆಯ ಶತಮಾನದ ಶಾಸನದಲ್ಲಿ 'ಕೊಟ್ಟ ದಾನಕ್ಕೆ ಗಂಗವಾಡಿ ತೊಂಬತ್ತಾರು ಸಾಸಿರ ಪ್ರಕೃತಿಗಳೇ ಸಾಕ್ಷಿ'–ಎಂಬ ಉಲ್ಲೇಖವಿದೆ. ಕ್ರಿ.ಶ. ೭೨೫ರ ಲಕ್ಷ್ಮೇಶ್ವರ ಶಾಸನದಲ್ಲಿ 'ಮಹಾಜನಕ್ಕುಂ ನಗರಕ್ಕುಂ ಪದಿನೆಣ್ಬುಂ ಪ್ರಕೃತಿಗಳ್ಗುಂ ಕೊಟ್ಟ ಆಚಾರ ವ್ಯವಸ್ಥೆ'.[೬] ಎಂಬ ಉಲ್ಲೇಖವಿದೆ. ವಚನಕಾರರು 'ಜಾತಿ' ಎಂಬ ಪದವನ್ನು ಬಳಸಿದಂತೆ ತೋರುತ್ತದೆ. ಆನಂತರ ಜಾತಿಗೆ ಪರ್ಯಾಯವಾಗಿ 'ಕುಲ' ಎಂದು ಕರೆಯುತ್ತಿದ್ದರು. ಬಹುಶಃ ಹದಿನೇಳನೆಯ ಶತಮಾನದವರೆಗೆ ಕುಲಗಳು ಪರಸ್ಪರ ತಾವು ಆಚರಿಸಬೇಕಾದ ಆಚರಣೆ–ವಿಧಿವಿಧಾನಗಳ ಬಗ್ಗೆ ಜಿಜ್ಞಾಸೆ ಮಾಡಿಕೊಂಡಂತೆ ತೋರುತ್ತದೆ. ಅಂಥ ಕುಲಾಚಾರಗಳಿಗೆ ಸಂಬಂಧಿಸಿದಂತೆ ಕಟ್ಟಳೆಗಳನ್ನು ವಿಧಿಸಿ ಆಚರಣೆಗಳನ್ನು ನಿರ್ದಿಷ್ಟಪಡಿಸುವ ಪ್ರವೃತ್ತಿ ಈ ಅವಧಿಯಲ್ಲಿ ಹೆಚ್ಚಾಗಿರುವುದನ್ನು ಕಾಣಬಹುದು.

ವಸಾಹತುಶಾಹಿ ಆಡಳಿತದ ಅವಧಿಯಲ್ಲಿ ಆಡಳಿತದ ಸುಗಮ ನಿರ್ವಹಣೆಗಾಗಿ ಬ್ರಿಟೀಷರು ಅನುಸರಿಸಿದ ವಿಧಾನಗಳು 'ಜಾತಿ' ಪದ ನಿರ್ದಿಷ್ಟವಾಗಿ ಠಂಕಗೊಳ್ಳುವುದಕ್ಕೆ ಕಾರಣವಾದಂತೆ ತೋರುತ್ತದೆ. ಅಂದರೆ ಇದರ ಅರ್ಥ ಜಾತಿ ವ್ಯವಸ್ಥೆ ಭಾರತದಲ್ಲಿ ಇರಲಿಲ್ಲ ಎಂದಲ್ಲ. ಭಾರತದಲ್ಲಿದ್ದ ಜಾತಿ ಪದ್ಧತಿಯು ಜಾತಿ, ವರ್ಣ, ಸಮಯ, ಪ್ರಕೃತಿ, ಧರ್ಮ, ಕುಲ, ಆಯಗಾರ, ಬಾರಾಬಲೂತಿ, ಪಣಕಟ್ಟು ಮುಂತಾದ ಬೇರೆ ಬೇರೆ ವ್ಯವಸ್ಥೆಗಳ ಅಡಿಯಲ್ಲಿ ಮತ್ತು ಅವುಗಳ ಹೆಸರಿನಲ್ಲಿ ಆಳವಾಗಿಯೇ ಬೇರುಬಿಟ್ಟಿತ್ತು. ಆದರೆ, ಬ್ರಿಟೀಷರು ಚಾಲ್ತಿಗೆ ತಂದ ಸರ್ವೆ ಕಾರ್ಯ, ಜನಾಂಗಿಕ ಅಧ್ಯಯನಗಳು,

ಜನಗಣತಿ ಮುಂತಾದ ವಿಧಾನಗಳು ಜಾತಿ ಪದವನ್ನು ಖಾಯಂ ಆಗಿ ಟಂಕಿಸಿ ಪ್ರಸಿದ್ಧಿಪಡಿಸಿದವು. ನಾಲ್ಕನೆಯ ಮೈಸೂರು ಯುದ್ಧದಲ್ಲಿ ಟಿಪ್ಪು ಮರಣ ಹೊಂದಿದ ತರುವಾಯ ಆಡಳಿತದ ಅನುಕೂಲಕ್ಕಾಗಿ ಬ್ರಿಟೀಷರು ಆ ಪ್ರದೇಶಗಳ ಸಮೀಕ್ಷೆ ಕೈಗೊಳ್ಳಲು ಫ್ರಾನ್ಸಿಸ್ ಬುಕಾನನ್ ಎಂಬ ಅಧಿಕಾರಿಯನ್ನು ನೇಮಕ ಮಾಡಿದರು. ಬುಕಾನನ್ ಟಿಪ್ಪು ಸುಲ್ತಾನನ ಆಳ್ವಿಕೆಗೆ ಒಳಪಟ್ಟಂತಹ ಮದ್ರಾಸ್, ಮೈಸೂರು ಹಾಗೂ ದಕ್ಷಿಣ ಕರ್ನಾಟಕದ ಪ್ರದೇಶದಲ್ಲಿ ಸಂಚರಿಸಿ ಅಲ್ಲಿನ ಜನರ ಜೀವನ ವಿಧಾನವನ್ನು ದಾಖಲಿಸಲಾರಂಭಿಸಿದ. ಹಾಗೆಯೇ ಎಡ್ಗರ್ ಥರ್‌ಸ್ಟನ್ ದಕ್ಷಿಣ ಭಾರತದ ಹಲವಾರು ಸಮುದಾಯಗಳನ್ನು ಸಂದರ್ಶಿಸಿ, ಅಂಥ ಸಮುದಾಯಗಳಲ್ಲಿ ಒಳಧಾರೆಯಾಗಿ ಹರಿಯುತ್ತಿದ್ದ ಆಚರಣೆಗಳನ್ನು, ರೀತಿ-ರಿವಾಜು, ಕಟ್ಟಳೆಗಳನ್ನು, ಕುಲಮೂಲಗಳ ಬಗೆಗೆ ಅಂಥ ಸಮುದಾಯಗಳು ಹೇಳುವ ಐತಿಹ್ಯಗಳನ್ನು ಹಾಗೂ ಕಥನಗಳನ್ನು ದಾಖಲಿಸಿದ. ಮೆಕೆಂಜಿ ದೇವಚಂದ್ರನಿಗೆ ೨೫ ಕುಂಪಣಿ ರೂಪಾಯಿಗಳನ್ನು ನೀಡಿ 'ಈ ಕರ್ನಾಟಕ ದೇಶದೊಳು ನಡೆದ ಪ್ರಪಂಚಗಳನ್ನೆಲ್ಲ ಕ್ರೋಢೀಕರಿಸಿ' ಬರೆದುಕೊಡುವಂತೆ ಹೇಳಿ 'ರಾಜಾವಳಿ ಕಥೆ' ಬರೆಸುತ್ತಾನೆ. ಹಾಗೆಯೇ ವೆಂಕಟಕೃಷ್ಣ ಬೋರಯ್ಯನಂತಹ ದೇಶೀಯ ವಿದ್ವಾಂಸರ ನೆರವಿನಿಂದ ಹಲವಾರು ಕುಲಕಟ್ಟಳೆಗಳು, ರೀತಿ ರಿವಾಜುಗಳಿಗೆ ಸಂಬಂಧಿಸಿದ ಮಾಹಿತಿಯನ್ನು, ಕುಲಮೂಲ ಕಥನಗಳನ್ನು ಕೈಫಿಯತ್ತುಗಳಲ್ಲಿ ದಾಖಲಿಸುತ್ತಾ ಸಾಗುತ್ತಾನೆ. ಹೀಗೆ ಬ್ರಿಟೀಷರು ಸ್ಥಳೀಯರಲ್ಲಿ ಬಾಯ್ದೆರೆಯಾಗಿ ಹರಿದುಬರುತ್ತಿದ್ದ, ಜನರ ವಾಡಿಕೆಯಲ್ಲಿ ಪ್ರಚಲಿತದಲ್ಲಿದ್ದ ಶಾಸನ, ಜಾನಪದ, ಸ್ಥಳಪುರಾಣ, ಐತಿಹ್ಯಗಳನ್ನು ಲಿಖಿತ ರೂಪದಲ್ಲಿ ದಾಖಲಿಸುವ ಮೂಲಕ ಮಧ್ಯಕಾಲೀನ ಸಮುದಾಯಗಳ ಸಮಾಜದ ಚಿತ್ರಣವನ್ನು ಕಟ್ಟಿಕೊಟ್ಟರು.

ಇಂಥ ದಾಖಲೀಕರಣದ ಪ್ರಕ್ರಿಯೆಯಲ್ಲಿ, ಆಯಾ ಕುಲಗಳು ಅನುಸರಿಸಬೇಕಾದ ಪದ್ಧತಿಗಳ ಬಗ್ಗೆ ಅವರವರಲ್ಲೇ ಜಗಳ ಮೂಡುತ್ತಿತ್ತು. ಅವುಗಳ ತತ್ಫಲಗಳೇ ಕುಲಾಚಾರ ಸಂಬಂಧ ಕಲಹಗಳು ಮತ್ತು ಕುಲ ಚಹರೆಗಳಿಗಾಗಿ ಹೋರಾಟಗಳು ಪ್ರಾರಂಭವಾಗಿರಬಹುದು. ಇವೆಲ್ಲ ಸೀಮಿತ ಸಂಖ್ಯೆಯ ಲಭ್ಯ ಜಯರೇಖೆ ಆಕರಗಳ ಅಧ್ಯಯನದಿಂದ ಊಹಿಸಬಹುದಾದ ಪ್ರಮೇಯವಾಗಿದೆಯೆ ವಿನಾ, ಸಂಕೀರ್ಣಮಯವಾದ ಹಾಗೂ ಜಟಿಲವಾದ 'ಜಾತಿ' ಪದ್ಧತಿಯ ಬಗ್ಗೆ 'ಇದಮ್ಮಿತ್ಥಂ' ಎಂದು ಹೇಳಬಹುದಾದ ವ್ಯಾಖ್ಯಾನವಂತೂ ಅಲ್ಲ.

ಕೈಫಿಯತ್ತುಗಳ ಬರಹಗಳನ್ನು ಗಮನಿಸಿದಾಗ ಜಾತಿಗೆ ಸಂಬಂಧಿಸಿದ ಬಹುತೇಕ ಕೈಫಿಯತ್ತುಗಳನ್ನು 'ಕುಲಗುರು'ಗಳಿಂದ ಬರೆಸಿರುವುದು ಕಂಡುಬರುತ್ತದೆ. ತಮ್ಮ ಸಮುದಾಯಗಳ ಬಳಿ ಇರುವ ಚಪ್ಪೋಡು, ತಾಮ್ರಪತ್ರ, ಭಾಷಾಪತ್ರಗಳ ಆಧಾರದ ಮೇಲೆ ತಮ್ಮ ಕುಲಮೂಲಗಳನ್ನು, ತಮ್ಮ ಮೂಲನೆಲೆ, ಕುಲಮೂಲ ಕಥನ, ತಮ್ಮ ಸಮುದಾಯ ಅನುಸರಿಸಬೇಕಾದ ರೀತಿ-ರಿವಾಜುಗಳು, ಮುಂತಾದ ವಿಷಯಗಳನ್ನು ದಾಖಲೀಕರಿಸಲಾಗಿದೆ. ಅಲ್ಲದೆ, ಕೈಫಿಯತ್ತುಗಳ ಆರಂಭವೇ

'ನಿವೇದನೆಯ' ಮಾದರಿಯಲ್ಲಿರುತ್ತದೆ. 'ಸ್ವಾಮಿ', 'ಅವಧಾರಿಸಬೇಕು ಮಹಾಸ್ವಾಮಿ', 'ಬಿನ್ನಹ ಮಾಡುವೆನು ಸ್ವಾಮಿ'[೭] ಮುಂತಾದ ಬಿನ್ನಹರೂಪದ ಪದಗಳನ್ನು ಪ್ರಯೋಗಿಸಲಾಗಿದೆ.

ಇದಲ್ಲದೆ, ಹೆಚ್ಚಿನ ಕುಲಸಂಬಂಧಿ ಕೈಫಿಯತ್ತುಗಳನ್ನು 'ತಾತಾಚಾರ್ಯರು' ಬರೆದುಕೊಟ್ಟಿದ್ದಾರೆ. ಚನ್ನಯ್ಯನ ಕುಲಕ್ಕೆ ಗುರುವಾದ ತಾತಾಚಾರ್ಯರು ಬರೆಸಿಕೊಟ್ಟ ಕೈಫಿಯತ್ತು,[೮] ತಾತಾಚಾರ್ಯ ವ್ರಾಯಿಚ್ಚಿನ (ಬರೆದುಕೊಟ್ಟ) ಕೈಫಿಯತ್ತು,[೯] ಮಣ್ಣುವಡ್ಡಿ ಜಾತಿಯ ಗುರುವಾದ ತಾತಾಚಾರ್ಯರು ಬರೆದುಕೊಟ್ಟ ಕೈಫಿಯತ್ತು,[೧೦] ಎಂದು ದಾಖಲಿಸುತ್ತವೆ. ಬಹುಶಃ ವಸಾಹತುಶಾಹಿ ಅವಧಿಯಲ್ಲಿ ಬ್ರಿಟೀಷ್ ಅಧಿಕಾರಿಗಳು, ಸಮೀಕ್ಷೆ, ಅಧ್ಯಯನಕ್ಕೆ ಬಂದಾಗ ತಮ್ಮ ಸಮುದಾಯಗಳೊಳಗೆ ಮೌಖಿಕವಾಗಿದ್ದ ಕುಲ ಮೂಲಗಳನ್ನು, ಆಚರಣೆಯಲ್ಲಿದ್ದ ಕುಲ ಸಂಪ್ರದಾಯಗಳನ್ನು ತಮ್ಮ ಕುಲಗುರುಗಳ ಬಳಿ ದಾಖಲಿಸಲಾರಂಭಿಸಿದರೆಂದು ಭಾವಿಸಬಹುದಾಗಿದೆ. ಇಲ್ಲಿ 'ತಾತಾಚಾರ್ಯ' ಎಂಬುದನ್ನು ವ್ಯಕ್ತಿಯಾಗಿ ಪರಿಭಾವಿಸದೆ, ಗುರುಪರಂಪರೆ ಎಂಬುದಾಗಿ ಭಾವಿಸಬೇಕಾಗುತ್ತದೆ. ಏಕೆಂದರೆ, ಕರ್ನಾಟಕದಲ್ಲಿ ವೈಷ್ಣವ ಧರ್ಮದ ಪ್ರಚಾರದಲ್ಲಿ ಈ ತಾತಾಚಾರ್ಯ ಪರಂಪರೆಯ ಆಚಾರ್ಯರ ಪಾತ್ರ ಮಹತ್ವದ್ದಾಗಿದೆ. ರಾಮಾನುಜ ಪಂಥದ ಪ್ರತಿಪಾದಕರಾದ ಇವರು ಮೂಲತಃ ತಮಿಳು ನಾಡಿನವರಾದ್ದರಿಂದ ಇವರ ಪ್ರಭಾವಕ್ಕೆ ಒಳಗಾದ ಎಲ್ಲ ವೈಷ್ಣವ ಸಮುದಾಯಗಳು ತಮ್ಮ ಕುಲಕಟ್ಟಳೆಗಳಿಗೆ ಸಂಬಂಧಿಸಿದಂತಹ ಕಂಚಿಪತ್ರ ಶಾಸನ ಕಂಚಿಯಲ್ಲಿ ಇದೆ ಎಂದೇ ಭಾವಿಸುತ್ತಾರೆ. (ಕಂಚಿಪತ್ರ ಮತ್ತು ಕರ್ನಾಟಕದಲ್ಲಿ ತಾತಾಚಾರ್ಯ ಪರಂಪರೆಯ ಸಂಬಂಧವನ್ನು ಮುಂದಿನ ಕಂಚಿ– ಕಂಚಿಪತ್ರಗಳು– ಪಣವ್ಯಾಜ್ಯಗಳು' ಎಂಬ ಉಪ ಅಧ್ಯಾಯದಲ್ಲಿ ಚರ್ಚಿಸಲಾಗಿದೆ).

ಒಂದು ಸಮುದಾಯ ತನ್ನ ಅನನ್ಯತೆಯನ್ನು ಬಿಂಬಿಸುವಾಗ ಅಪ್ರಜ್ಞಾಪೂರ್ವಕವಾಗಿ ಮತ್ತೊಂದು ಸಮುದಾಯವನ್ನು ಹೀಗಳೆಯುವ ಪರಿಸ್ಥಿತಿ ಸಹ ಸಾಮಾನ್ಯ ಸಂಗತಿ. ಜಯರೇಖೆಗಳಲ್ಲಿಯೇ ಕಂಡುಬಂದಿರುವಂತೆ ಜಾತಿ ಬಿರುದುಗಳನ್ನು ಎಕ್ಕಡದಲ್ಲಿ ಹಾಕಿಕೊಂಡು ಮೆಟ್ಟುವುದು; ಬಿರುದುಗಳನ್ನು ಸಂತೆಯಲ್ಲಿ ಪರಭಾರೆ ಮಾಡುವುದು; ಪ್ರಾಣಿ ರೂಪಕಗಳನ್ನು ಬಳಸಿ ಒಂದು ಸಮುದಾಯವನ್ನು ಬಯ್ಯುವುದು ಮುಂತಾದ ಮಾರ್ಗಗಳ ಮೂಲಕ ಮತ್ತೊಂದು ಸಮುದಾಯವನ್ನು ಮಣಿಸಲು ಪ್ರಯತ್ನಗಳು ನಡೆಯುತ್ತವೆ. ಇಂಥ ಹೀಗೆಳೆಯುವ ಪ್ರಕ್ರಿಯೆ ಸಮುದಾಯಗಳ ನಡುವೆ ಸಂಘರ್ಷ ಉಂಟಾಗಲು ಕಾರಣವಾಗುತ್ತದೆ. ಈ ಸಂಘರ್ಷಗಳಿಗೆ ನ್ಯಾಯವಾದಿಗಳಾಗಿ, ಸಾಕ್ಷಿಗಳಾಗಿ ಬರುವ ಸಮಾಜದ ಮೇಲ್ವರ್ಗದ ಇತರ ಸಮುದಾಯಗಳ ಜನರು ಚಲನಶೀಲ ಸಮಾಜದಲ್ಲಿ 'ತಟಸ್ಥ' ಮನೋಭಾವನೆ ತಳೆದಂತೆ ಕಂಡುಬಂದರೂ, ಸಹ ಅಂತಿಮವಾಗಿ ನ್ಯಾಯ ಹೊರಹೊಮ್ಮಿದಾಗ ಅದು 'ಬಲಾಢ್ಯರ' ಪರವಾಗೇ ಇರುತ್ತದೆಂಬ ಸಂಗತಿ ವಾಸ್ತವವಾಗಿರುತ್ತದೆ.

ಜಯರೇಖೆ ಶಾಸನಗಳಲ್ಲಿ ಪ್ರತಿಫಲಿತವಾದ ಕೆಲವು ಸಮುದಾಯಗಳನ್ನು ಅವುಗಳ ಮೂಲದ ಬಗ್ಗೆ ಬಂದಿರುವ ಕಥನಗಳ ಹಿನ್ನೆಲೆಯಲ್ಲಿ, ಆ ಸಮುದಾಯದ ಜನರ ಜೀವನ ಚಿತ್ರಣವನ್ನು ಇಲ್ಲಿ ಕ್ವಚಿತ್ತಾಗಿ ಚರ್ಚೆಗೆ ತೆಗೆದುಕೊಳ್ಳಲಾಗಿದೆ.

**ಅಗಸರು:** ಐತಿಹ್ಯಗಳ ಪ್ರಕಾರ ತ್ರಿಮೂರ್ತಿಗಳ ಪತ್ನಿಯರಾದ ಸರಸ್ವತಿ, ಲಕ್ಷ್ಮಿ, ಪಾರ್ವತಿ ಮತ್ತು ಸೂರ್ಯನ ಪತ್ನಿ ಛಾಯಾದೇವಿ ಹಾಗೂ ಇಂದ್ರನ ಪತ್ನಿಯರಾದ ಶಚಿದೇವಿ ಮುಟ್ಟಾದಾಗ, ತಮ್ಮ ಬಟ್ಟೆಗಳನ್ನು ಶುಚಿಗೊಳಿಸಲು ಯಾರೂ ಸಿಗದೆ ತುಂಬಾ ಕಷ್ಟಪಡುತ್ತಾರೆ. ಆಗ ಒಬ್ಬ ಮಹಿಳೆ ಒಂದು ಮಗುವನ್ನು ಕರೆದುಕೊಂಡುಬರುತ್ತಿದ್ದುದನ್ನು ನೋಡುತ್ತಾರೆ. ಮುಟ್ಟಿನ ಬಟ್ಟೆ ಒಗೆದುಕೊಟ್ಟರೆ ಅವಳು ಕೇಳಿದ್ದನ್ನು ಕೊಡುವುದಾಗ ಹೇಳುತ್ತಾರೆ. ಅದರಂತೆ ಮಹಿಳೆ ಆ ಬಟ್ಟೆಗಳನ್ನು ತೆಗೆದುಕೊಂಡು ಸಮುದ್ರಕ್ಕೆ ಹೋಗುತ್ತಾಳೆ. ಅಲ್ಲಿ ಬಂಡೆ ಇರಲಿಲ್ಲ. ಆಗ ತನ್ನ ಮಗನ ತಲೆಯನ್ನು ಕತ್ತರಿಸಿದಳು, ಕಣ್ಣುಗಳನ್ನು ನೀಲಿಯಾಗಿ, ಬೆನ್ನನ್ನು ಕಲ್ಲಾಗಿ, ಕಾಲುಗಳನ್ನು ಇಂಧನವಾಗಿ, ಮುಂಗೈಗಳನ್ನು ಕಬ್ಬಿಣದ ದೊಣ್ಣೆಯನ್ನಾಗಿಸಿ, ಹೊಟ್ಟೆಯನ್ನು ಮಡಕೆಯನ್ನಾಗಿ ಮಾಡಿಕೊಳ್ಳುತ್ತಾಳೆ. ಅಗ್ನಿಯನ್ನು ಪ್ರಾರ್ಥಿಸಿ ಬೆಂಕಿ ಪಡೆಯುತ್ತಾಳೆ. ಹೀಗೆ ಬಟ್ಟೆಗಳನ್ನು ಶುಚಿಗೊಳಿಸಿ ಅವರ ಬಳಿಗೆ ತೆಗೆದುಕೊಂಡು ಹೋಗುತ್ತಾಳೆ. ಅವರು ಅವಳ ಕೆಲಸದಿಂದ ತುಂಬಾ ಸಂತೋಷಪಡುತ್ತಾರೆ. ಆದರೆ ಅವಳ ಜೊತೆ ಮಗ ಇಲ್ಲದ್ದನ್ನು ನೋಡಿ ಎಲ್ಲಿ ಎಂದು ಕೇಳುತ್ತಾರೆ. ಆಗ ಅವಳು ನಡೆದ ವಿಷಯವನ್ನು ಹೇಳಿದಳು. ಸಂಪ್ರೀತರಾದ ದೇವಿಯರು ಮಗನ ಹೆಸರನ್ನು ಕರೆಯುವಂತೆ ಹೇಳಿದರು. ಮಗನನ್ನು ಕರೆದಾಗ ಮಗ ಅವಳ ಮುಂದೆ ಬಂದು ನಿಂತ. ಅಲ್ಲದೆ ಅವಳಿಗೆ ಬಟ್ಟೆ ಒಗೆಯಲು ಮೊಣಕಾಲುದ್ದ ನೀರು ಹಾಗೂ ಬಟ್ಟೆ ಒಗೆಯುವುದಕ್ಕೆ ಹಕ್ಕನ್ನು ನೀಡುತ್ತಾರೆ.ಈ ಮಹಿಳೆಯ ಮಗನ ಸಂತತಿಯವರು ಅಗಸರಾದರು.ಇವರಿಗೆ ನಾಯಿಂದರು ಮದುವೆಯಲ್ಲಿ ಉಗುರು ಕತ್ತರಿಸುವುದಿಲ್ಲ. ಪ್ರತಿಯಾಗಿ ಅಗಸರು ನಾಯಿಂದರಿಗೆ ಪಂಜು ಹಿಡಿಯುವುದಿಲ್ಲ.[೧೧]

ಕ್ರಿ.ಶ. ೧೭೦೦ರ ಕಾಲಾವಧಿಗೆ ಸೇರಿದ ಎರಡು ಕಂಚಿಪತ್ರ ಶಾಸನಗಳು ಅಗಸರ ವ್ಯಾಜ್ಯವನ್ನು ಉಲ್ಲೇಖಿಸುತ್ತವೆ. ಬೂತಾಲಹಳ್ಳಿಯಲ್ಲಿ ವಾಲಗದವರು ಡೊಳ್ಳಿನ ಮೇಲೆ ಬಿಳೀವಸ್ತ್ರ ಹಾಕಿಕೊಂಡಿರುವುದನ್ನು ನೋಡಿ ಇದು ವಾಲಗದವರಿಗೆ ಸಲ್ಲದೆಂದು ಅಗಸರು ಆಕ್ಷೇಪಿಸುತ್ತಾರೆ. ಈ ವ್ಯಾಜ್ಯ ಕಂಚಿಯವರೆಗೂ ಹೋಗಿ ಅಲ್ಲಿ ಅಂತಿಮವಾಗಿ ನ್ಯಾಯ ಕ್ಷವುರಿಕರ ಪರವಾಗಿ ಆಗುತ್ತವೆ.[೧೨]

ಈ ಎರಡು ಸಮುದಾಯಗಳ ನಡುವೆ ನಡೆದ ಇಂಥದೇ ಒಂದು ವಿವಾದವನ್ನು ಕಾನಕಾನಹಳ್ಳಿಯ ಇದೇ ಅವಧಿಯ ಶಾಸನ ಉಲ್ಲೇಖಿಸುತ್ತದೆ.[೧೩] ಈ ಶಾಸನದ ವ್ಯಾಜ್ಯ ಕಾರಣ ಹಜಾಮರು ವಾಲಗಕ್ಕೆ ಮಲ್ಲಿಗೆ ಹೂವು ಮುಡಿದದ್ದು. ಅಗಸರು ನ್ಯಾಯಕ್ಕಾಗಿ ಕಂಚಿಗೆ ಹೋದಾಗ ನ್ಯಾಯ ಅಗಸರ ಪಾಲಾಗುತ್ತದೆ. ಮಡಿವಾಳರಿಗೆ ಬಿಳೀ ಕಣಗಿಲೆ ಹೂವು, ಬಿಳಿ ಛತ್ರಿ, ಬಿಳಿ ಹೊದಪು, ಕುದುರೆ, ಮಲ್ಲಿಗೆ ಹೂವು ಸಲ್ಲುವುದೆಂಬ ತೀರ್ಪು ನೀಡಲಾಯಿತು.

ಇದೇ ಸ್ಥಳದಲ್ಲಿ ಲಭ್ಯವಾದ ೮೯ನೆಯ ಶಾಸನವು ಕೆಲವು ವಿಶೇಷ ಸಂದರ್ಭಗಳಲ್ಲಿ ಮಡಿವಾಳರಿಗೆ ನೀಡಬೇಕಾದ ಕಾಣಿಕೆಗಳನ್ನು ಹಾಗೂ ಬಿರುದುಗಳನ್ನು ಪ್ರಸ್ತಾಪಿಸುತ್ತದೆ.ಮಡಿವಾಳರು ಆಯಗಾರರಾಗಿರುವ ಮನೆಗಳಲ್ಲಿ ಗಂಡುಮಗ ಹುಟ್ಟಿದರೆ ಒಂದು ರೂಪಾಯಿ, ಹೆಣ್ಣು ಮಗು ಹುಟ್ಟಿದರೆ ಅರ್ಧ ರೂಪಾಯಿ, ಋತುಮತಿಯಾದರೆ ವಸ್ತ್ರ, ಸಾಕಿ ವಸ್ತ್ರ, ತುಪ್ಪ, ಧಾನ್ಯ, ಅಕ್ಷತೆ ಅಕ್ಕಿ, ಒಂದು ಸೊಲೆ ಅಡಿಕೆ ಹಾಗೂ ಹನ್ನೆರಡು ಎಲೆ, ಅರಿಶಿನ ಕೊಂಬು ನೀಡಬೇಕೆಂದು ವಿಹಿತಗೊಳಿಸುತ್ತದೆ. ಅಲ್ಲದೆ ಮಡಿವಾಳರಿಗೆ ಸಲ್ಲಬೇಕಾದ ವಸ್ತುಗಳ ಪಟ್ಟಿಯನ್ನು ಸಹ ನೀಡುತ್ತದೆ. ಮಲ್ಲಿಗೆ ಹೂ, ಧಾರೆ ಅಕ್ಕಿ, ಜೋಡುಗಂಟೆ, ಪುಲಿತೋಲು, ಕಾಲಿಪೆಂಧರಾಬೀಯಂ, ತುರಿಕಾಸುಲು, ಪುಸುವುತೋಕ ಮುಂತಾದ ಬಿರುದುಗಳು ಐವತ್ತಾರು ದೇಶದ ಮಡಿವಾಳರಿಗೆ ಸಲ್ಲುತ್ತದೆಂದು ತಿಳಿಸುತ್ತದೆ.[೧೪]

**ನಾಯಿಂದರು/ಕ್ಷವುರಿಕರು:** ಐತಿಹ್ಯಗಳ ಪ್ರಕಾರ ಇವರು ಶಿವನ ಕಣ್ಣಿನಿಂದ ಹುಟ್ಟಿದವರು. ಆದ್ದರಿಂದ ನಯನ ಕ್ಷತ್ರಿಯರೆಂಬ ಹೆಸರನ್ನು ಪಡೆದಿದ್ದಾರೆ. ಒಮ್ಮೆ ಶಿವ ಪಾರ್ವತಿ ಕುಳಿತಿರುವಾಗ ಶಿವ ಕ್ಷೌರವಿಲ್ಲದೆ ಕಳಾಹೀನ ವದನನಾಗಿ ಇರುವುದನ್ನು ಕಂಡು ಪಾರ್ವತಿ ಶುಭ್ರತೆಗೆ ಹೆಚ್ಚು ಗಮನ ನೀಡುವಂತೆ ಹೇಳುತ್ತಾಳೆ. ಆಗ ಶಿವ ತನ್ನ ಎಡಗಣ್ಣಿನಿಂದ ಒಬ್ಬ ವ್ಯಕ್ತಿಯನ್ನು ಸೃಷ್ಟಿಸುತ್ತಾನೆ. ಅವನು ಕ್ಷೌರಿಕ ಉಪಕರಣಗಳೊಂದಿಗೆ ಪ್ರತ್ಯಕ್ಷನಾಗುತ್ತಾನೆ. ಅವನ ಸೇವೆಯಿಂದ ಸುಪ್ರೀತನಾದ ಶಿವ ಅವನಿಗೆ ಸಂಗೀತ ವಾದ್ಯಗಳನ್ನು ನೀಡುತ್ತಾನೆ. ಅವನೇ ಈ ಕುಲದ ಮೂಲ ಪುರುಷನಾಗುತ್ತಾನೆ.[೧೫]

ನಾಯಿಂದರ ಬಗ್ಗೆ ದೊರೆತಿರುವ ಎರಡು ಕಂಚಿಪತ್ರ ಶಾಸನಗಳಲ್ಲಿ ಒಂದು ಶಾಸನದಲ್ಲಿ ಇವರು ಡೋಲಿನ ಮೇಲೆ ಬಿಳಿವಸ್ತ್ರ ಹಾಕಿಕೊಳ್ಳಬಹುದೇ ಎಂಬ ವಿಷಯಕ್ಕೆ ವಿವಾದ ಉಂಟಾದರೆ, ಮತ್ತೊಂದು ಕಂಚಿಪತ್ರ ಶಾಸನದಲ್ಲಿ ವಾಲಗಕ್ಕೆ ಮಲ್ಲಿಗೆ ಹೂವು ಸುತ್ತಿಕೊಳ್ಳಬಹುದೇ ಎಂಬ ಬಗ್ಗೆ ವಿವಾದವುಂಟಾಗಿರುವುದನ್ನು ಕಾಣಬಹುದು. ಧರ್ಮಸ್ಥಳದ ಶಾಸನದಲ್ಲಿ ವಾಲಗದವರು ಹಿಡಿಯುವ ಆಯುಧ ಸೂರ್ಯನಿರ್ಮಿತವಾದ ಕಲ್ಲು, ಚಂದ್ರ ನಿರ್ಮಿತವಾದ ಆಯುಧವಾದ್ದರಿಂದ ನೃಪಾಲರಿಗೆ ಸರಿಯಾದ ಸಮಗದ್ದುಗೆ ಕ್ಷವುರಿಕನಿಗೂ ಸರಿ ಗದ್ದುಗೆಯಾಗಿರುವುದರಿಂದ, ಕೃಷ್ಣರಾಯರಿಗೆ ಸಲ್ಲತಕ್ಕ ಬಿರುದುಗಳು, ಬಿಳಿವಸ್ತ್ರ ಇವರಿಗೆ ಸಲ್ಲತಕ್ಕದ್ದೆಂದು ತೀರ್ಮಾನ ನೀಡಿ, ಇವರು ಚತುರ್ದಿಕ್ಕುಗಳಿಗೆ ಅಯ್ವತ್ತಾರು ದೇಶಗಳಿಗೆ ಸರ್ವವಿಧದಲ್ಲಿ ಬೇಕಾಗಿರುವುದರಿಂದ ಕೈದಾರೆ ಅಕ್ಕಿ, ಮಲ್ಲಿಗೆ ಹೂವು ಸಹ ಪ್ರಸ್ತಕಾಲದಲ್ಲಿ ಸಲ್ಲುತ್ತವೆ. ಅಲ್ಲದೆ, ವಾಲಗದವರ ಮನೆಯಲ್ಲಿ ಮದುವೆಯಾದರೆ, ಅಗಸರು ಬಟ್ಟೆ ಬರೆ ಮಡಿ ಮಾಡುವುದು, ಪಂಕ್ತಿ ಊಟಕ್ಕೆ ಬಟ್ಟೆ ಹಾಸುವುದು, ದೀವಟಿಗೆ ಹಿಡಿಯುವುದು, ನೆಲಮುಡಿ ಹಾಸುವುದು, ಚಪ್ಪರಕ್ಕೆ ಮೇಲುಕಟ್ಟುವುದು, ಮುಂತಾದ ಕೆಲಸಗಳನ್ನು ಮಾಡಬೇಕೆಂದು ವಿಧಿಸಲಾಗಿದೆ. ವಿಜಯನಗರದ ಅರಸ ಸದಾಶಿವರಾಯನ ಅವಧಿಯಲ್ಲಿ ಕ್ಷವುರಿಕರು ನೀಡುತ್ತಿದ್ದ ಕೆಲವು ತೆರಿಗೆಗಳಿಗೆ ವಿನಾಯಿತಿ ನೀಡಿರುವ ಬಗ್ಗೆ ಹಲವಾರು ಶಾಸನಗಳು ಉಲ್ಲೇಖಿಸುತ್ತವೆ.

**ಕೊರಮರು:** ಅಪರಾಧಿಕ ಬುಡಕಟ್ಟುಗಳ ಅಧಿನಿಯಮ, ವಿಚಾರಣಾ ಸಮಿತಿಯ ವರದಿ ಪ್ರಕಾರ[೧೬] ಕೊರಚರು, ಕೊರವರು, ಎರುಕುಲರು, ಮುಂತಾದ ಹೆಸರುಗಳನ್ನು ಹೊಂದಿರುವ ಕೊರಚರು ಹೈದರಾಬಾದ್, ಮೈಸೂರು ರಾಜ್ಯ ಮತ್ತು ಮದ್ರಾಸಿನ ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ನೆಲೆಗೊಂಡಿರುವ ಅಪರಾಧಿಕ ಬುಡಕಟ್ಟಿನ ಜನರೆಂದು ಗುರುತಿಸಲಾಗಿದೆ. ಇವರು ನೆರೆಯ ಗಡಿರಾಜ್ಯಗಳಿಂದ ಮೈಸೂರು ರಾಜ್ಯಕ್ಕೆ ವಲಸೆ ಬಂದರೆಂದು ಹೇಳಲಾಗುತ್ತದೆ. ಇವರು ಭಿಕ್ಷೆ ಬೇಡುವುದು, ಹಗ್ಗ ಹೊಸೆಯುವುದು, ಹಚ್ಚೆ ಹಾಕುವ ಕಾಯಕವನ್ನು ನಡೆಸುವ ಮೂಲಕ ಜೀವನ ಸಾಗಿಸುತ್ತಾರೆ. ಅಲೆಮಾರಿಗಳಾಗಿರುವ ಇವರು ರಾಷ್ಟ್ರದ ಎಲ್ಲಾ ಕಡೆಗಳಲ್ಲೂ ಕಂಡುಬರುತ್ತಾರೆ.

ಕರ್ನಾಟಕ ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆಯ ಪುಸ್ತಕವಾಗಿ ಮಲ್ಲಿಕಾರ್ಜುನ ಬಿ ಮಾನ್ಪಡೆಯವರು ಬರೆದ 'ಕೊರಮ' ಕೃತಿಯಲ್ಲಿ ಒಂದು ಕಂಚಿ ಶಾಸನವಿದೆ. ಆದರೆ ಈ ಶಾಸನ ಕೊರಮರಿಗೆ ಸಂಬಂಧಪಡದೆ ಕಂಚಿ ಗೊಲ್ಲನಾದ ಹನುಮಂತನಿಗೆ ನೀಡಿದ್ದಾಗಿದೆ. ಕಂಚಿಯ ಕಾಮಾಕ್ಷಮ್ಮನ ತೇರು ಮೂರು ವರ್ಷಗಳಿಂದ ಕದಲದೆ ಹೂತುಕೊಂಡಿದ್ದರಿಂದ ಇದನ್ನು ಸಾಗಹಾಕಿದವರಿಗೆ ಮೂರು ಆಳುದ್ದ ಬಂಗಾರ, ಮೂರು ವಂಟೆ ದ್ರವ್ಯ ಕೊಡುತ್ತೇನೆಂದು ಹೇಳಿ ಡಂಗೂರ ಸಾರಿದಾಗ, ಹನುಮಂತ ತನ್ನ ಅಣ್ಣಂದಿರೊಂದಿಗೆ ಬಂದು ನೋಡಿದಾಗ, ತೇರನ್ನು ಭೂತವೊಂದು ಏರಿ ಕುಳಿತಿರುತ್ತದೆ. ಆಗ ಹನುಮಂತ ಮತ್ತು ಆತನ ಅಣ್ಣಂದಿರು ತಮ್ಮ ಗರ್ಭಿಣಿ ಹೆಂಡತಿಯರನ್ನು ಬಲಿಕೊಟ್ಟು ರಕ್ತವನ್ನು ತೇರಿಗೆ ಏರಿಸಿ, ಹೊಟ್ಟೆಯೊಳಗಿರುವ ಕೂಸನ್ನು ತೇರಿನ ಕಳಸಕ್ಕೆ ಕಟ್ಟಿ ಭೂತವನ್ನು ವಶಮಾಡಿಕೊಂಡು ನಂತರ ತಮ್ಮ ಮಂತ್ರಬಲದಿಂದ ತಮ್ಮ ಪತ್ನಿಯರನ್ನು ಬದುಕಿಸಿಕೊಳ್ಳುತ್ತಾರೆ. ವಿಶ್ವಕರ್ಮರ ಬಳಿ ತಮ್ಮ ದಕ್ಷಿಣೆಯನ್ನು ಕೇಳಿದಾಗ, ಅವರಲ್ಲೇ ಈ ಗೊಲ್ಲರಿಗೆ ದ್ರವ್ಯಕೊಟ್ಟರೆ ಹಾಳುಮಾಡಿ ಬಿಡುತ್ತಾರೆಂದು ಅವರಿಗೆ ಬಹುಮಾನ ಹಾಗೂ ಕೆಲವು ಬಿರುದುಗಳನ್ನು ನೀಡಿ ಇವರು ಪಾಂಚಾಳರ ಮಕ್ಕಳು, ಇವರಿಗೆ ಯಾರೂ ಅಡ್ಡಿ ಮಾಡಬಾರದೆಂದು ಇವರಿಗೆ ಬೇರೆ ಬೇರೆ ಕಡೆ ವಿಶ್ವಕರ್ಮರಿರುವ ಬೇರೆ ಪ್ರದೇಶಗಳಲ್ಲಿ ಭಿಕ್ಷೆ ಪಡೆಯುವ ಹಕ್ಕು ನೀಡುತ್ತಾರೆ. ಇದೇ ಕಥನ ಬಹುಪರ್ಯಾಯ ನೆಲೆಗಳಲ್ಲಿ ಲಭ್ಯವಾಗುತ್ತದೆ.

**ಮಾದಿಗರು, ಮಾಷ್ಟೀಕರು, ಸಿಂಧ್ ಮಾದಿಗರು, ಗೋಸಂಗಿಗಳು, ದಕ್ಕಲರು:** ಈ ಎಲ್ಲ ಸಮುದಾಯಗಳು ಮಾದಿಗ ಅಥವಾ ಮಾತಂಗ ಸಮುದಾಯದ ಒಳಪಂಗಡಗಳಾಗಿವೆ. ಅಲೆಮಾರಿ ಸಮುದಾಯಗಳಾದ ಮಾಷ್ಟೀಕರು, ಸಿಂಧ್ ಮಾದಿಗರು, ಗೋಸಂಗಿ, ದಕ್ಕಲರು ಜೀವನೋಪಾಯಕ್ಕಾಗಿ ಮಾದಿಗರ ಕೇರಿಗಳಲ್ಲಿ ಭಿಕ್ಷೆ ಬೇಡುವ ಹಕ್ಕನ್ನು ಪಡೆದುಕೊಂಡಿದ್ದೇವೆಂದು ಹೇಳಿ ಅದಕ್ಕೆ ತಮ್ಮಲ್ಲಿರುವ ಕಂಚಿಪತ್ರ ಶಾಸನಗಳನ್ನು 'ಪ್ರಮಾಣ'ಗಳಾಗಿ ಮುಂದಿಡುತ್ತಾರೆ. ಈ ಎಲ್ಲ ಒಳಸಮುದಾಯಗಳು ಹೊಂದಿರುವ ಕಂಚಿಪತ್ರ ಶಾಸನಗಳ ಕಥಾನಕಗಳು (ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ) ಒಂದೇ ರೀತಿಯ ಹೆಣಿಗೆಯನ್ನೊಳಗೊಂಡ ಕಥಾಹಂದರವನ್ನು ಹೊಂದಿದೆ.

ಈ ಎಲ್ಲ ಕಂಚಿಪತ್ರಗಳ ಕಥನ ಚಲವಾದಿ ಹಾಗೂ ಮಾತಂಗ ಸಮುದಾಯಗಳ ನಡುವೆ ಮದುವೆಯಲ್ಲಿ ಬಳಸಬೇಕಾದ/ಬಳಸಬಾರದ ಕೆಲವು ಪರಿಕರಗಳ ಹಿನ್ನಲೆಯಲ್ಲಿ ಹುಟ್ಟಿಕೊಳ್ಳುತ್ತವೆ. ಗೋಸಂಗಿ ಕುಲದ ಹುಲ್ಲಪ್ಪನ ಮಗ ಮಾರಪ್ಪನ ಮದುವೆ ಮಾಡುವಾಗ ಅವರು ಹನ್ನೆರಡು ಕಂಬ, ಹನ್ನೆರಡು ಕುಂಭ, ಜೋಡಿ ಪಂಜು, ಕೆಂಪು ಕುದುರೆ ವಾಹನ, ನಾಲ್ಕು ಮೂಲೆ ತಳಿ, ಬಾನತಿ ಚಪ್ಪರ, ಕರಿಕಂಬಳಿ ಗದ್ದುಗೆ ಇವುಗಳನ್ನು ಬಳಸಿದಾಗ, ಚಲವಾದಿ ವೀರಬಸಯ್ಯ ಕುಲಸ್ಥರನ್ನು ಕೂಡಿಕೊಂಡು ಈ ವಸ್ತುಗಳು ಗೋಸಂಗಿಗಳಿಗೆ ಸಲ್ಲದೆಂದು ತಕರಾರು ಮಾಡುತ್ತಾನೆ. ಈ ಬಗ್ಗೆ ನ್ಯಾಯ ನಿರ್ಣಯ ನೀಡಬೇಕೆಂದು ಕಂಚಿಯ ಸಿಂಹಾಸನಾಧೀಶರನ್ನು ಬೇಡಿಕೊಂಡಾಗ, ಅಲ್ಲಿ ಇರುವಂತಹ ವಜ್ರ ಸಿಂಹಾಸನಾಧೀಶ್ವರರಾದ ಮಹಾರಾಜ ಅಪ್ಪರಾಯರು, ನರಸಿಂಹರಾಯರು, ಕಂಚಿ ವರದಪ್ಪ ಗೌಡರು, ಕರಣಿಕ ಮಲ್ಲಯ್ಯ, ಮಾಚೇಗೌಡ, ತಿಮ್ಮೇಗೌಡ, ಪಂಚಾಂಗದ ಬ್ರಾಹ್ಮಣರು, ಕ್ಷತ್ರಿಯರು, ದೇವಾಂಗದವರು, ಗಾಣಿಗರು, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ ಇವರೆಲ್ಲರೂ ಮಾದಿಗರು ಭೂಮಿಯ ಕರ್ತರೆಂದು ಬ್ರಹ್ಮಾಂಡ ಪುರಾಣ, ವಿಷ್ಣು ಪುರಾಣ, ಶಿವ ಪುರಾಣ, ಇತಿಹಾಸ, ಭಾರತ, ರಾಮಾಯಣಗಳಲ್ಲಿ ಪಂಕ್ತಿರೂಪದಲ್ಲಿ ಹೇಳಿರುವುದರಿಂದ, ಮಾತಂಗಿ ವಂಶಸ್ಥರ ಮದುವೆಗಳಲ್ಲಿ ಹನ್ನೆರಡು ಕಂಬ, ಹನ್ನೆರಡು ಕುಂಭ, ಜೋಡಿ ಪಂಜು, ಕರಿಕಂಬಳಿ, ಗದ್ದಿಗೆ, ನಾಲ್ಕು ಮೂಲೆ ತಾಳಿ, ಮೆರವಣಿಗೆ, ತಾಂಬೂಲ, ಬಾಸಿಂಗ, ಮಲ್ಲಿಗೆ ಹೂವಿನ ಹಾರ, ಕೆಂಪು ಕುದುರೆ ವಾಹನ, ಜೋಡಿ ಕಳಸ, ಕನ್ನಡಿ, ವೀರಕಂಕಣ, ದೇವತಾ ಮುದ್ರಿಕೆ, ಹನುಮ ನಿಶಾನಿ, ಗರುಡ ನಿಶಾನಿ, ಬಟ್ಟೆ, ಪಟ್ಟಾವಳಿ, ವಾದ್ಯ, ನಂಗಾರಿಯ ಬತ್ತು, ಬೇರಿ ಮೃದಂಗ, ತಮಟೆ, ಮಲ್ಲಿಗೆ ಹೂವಿನ ತುರಾಯಿ ಮುಂತಾದ ಬಿರುದುಗಳೊಂದಿಗೆ ಗ್ರಾಮದೇವರ ಗುಡಿಯ ಬಳಿಯಿಂದ ಮೆರವಣಿಗೆ ಮಾಡಬಹುದು ಎಂದು ಅಪ್ಪಣೆ ಕೊಡುತ್ತಾರೆ.

ಹಾಗೆಯೇ ಚಲವಾದಿಯವರಿಗೆ ನಿಮಗೆ ಕುಲ ಗುರುವು ಇಲ್ಲ. ನಿಮಗೆ ಬಿರುದುಗಳಾದ ಒಂಭತ್ತು ಕಂಬ, ಒಂಭತ್ತು ಪಂಜು, ಮೂರು ಕಳಸ, ಎಲೆ ಕಳಸ, ಮೂರು ಮೂರ್ತಿ ಪಟ್ಟಿ, ಮೂರು ಮೂಲೆ ಬಿಳಿ ತಾಳಿ, ವಾದ್ಯಗಳಾದ ಠಕೋರಿ, ಶಂಖ, ಜಾಗಟೆ, ಎತ್ತಿನ ಮೇಲೆ ಅವರವರ ಕೇರಿಗಳಲ್ಲಿ ಮೆರವಣಿಗೆ ಮಾಡಬೇಕು. ಹದ್ದುಮೀರಿ ದಾಟಿ ಹೋಗಬಾರದು. ವಾದ್ಯದ ಮೇಲೆ ಬಿಳಿ ಬಟ್ಟೆ ಇಡಬೇಕು. ಕೆಂಪು ಬಟ್ಟೆ ಇಡಬಾರದು. ಛಲವಾದಿ ಜಾತಿಯವರಾದ ನೀವುಗಳು ಮಾದಿಗರಾದ ಮಾದಿಗರು, ಮಾತಂಗರು, ಗೋಸಂಗಿಗಳ ಜೊತೆ ತಂಟೆ ತಕರಾರು ಮಾಡಬಾರದು ಎಂದು ತೀರ್ಪು ನೀಡಿ ಒಂದೂವರೆ ಗಜ ಪ್ರಮಾಣದ ತಾಮ್ರದ ತಗಡಿನಲ್ಲಿ ಕಂಚಿನಗರದ ರಾಯ ಸಿಂಹಾಸನಾಧೀಶ್ವರರು ಶಾಸನವನ್ನು ಹುಟ್ಟಿಸಿದರು.[೧೭]

ಮಾದಿಗ ಸಮುದಾಯದ ಒಳಪಂಗಡವಾದ 'ದಕ್ಕಲಿಗ'ರಲ್ಲೂ ಇದೇ ಕಥನ ಪುನರಾವರ್ತನೆಗೊಂಡಿದೆ. ಆದರೆ ಈ ಸಮುದಾಯಕ್ಕೆ ದಕ್ಕಲಿಗ ಹೆಸರು ಬರುವುದಕ್ಕೆ ಇರುವ

ತಾತ್ವಿಕತೆಗೆ ಇಲ್ಲಿ ಹೆಚ್ಚು ಒತ್ತನ್ನು ನೀಡಲಾಗಿದೆ. ದಕ್ಕಲಿಗ ಸಮುದಾಯವು ಮಾದಿಗರ ಒಂದು ಉಪ-ಪಂಗಡವಾಗಿದ್ದು ಅವರು ತಮ್ಮನ್ನು ಜಾಂಬವಮುನಿ ಕುಲದ ಹಾಗೂ ದಕ್ಷಬ್ರಹ್ಮನ ವಂಶಸ್ಥರ ವಾರಸುದಾರರೆಂದೂ ನಂಬುತ್ತಾರೆ. ಕಂಚಿಪತ್ರ ಶಾಸನದ ಪ್ರಕಾರ ದಕ್ಷ ಬ್ರಹ್ಮನ ಅರವತ್ತಾರು ಮಕ್ಕಳಲ್ಲಿ ಏಕೈಕ ಗಂಡುಮಗ ದಕ್ಕಲಕುಮಾರ. ಹಾಗಾಗಿ ಹಿರಿಯವಳಾದ ಪಾರ್ವತಿ ಈತನನ್ನು ತುಂಬಾ ಅಕ್ಕರೆಯಿಂದ ಕುಳಿತಲ್ಲಿಗೇ ಎಲ್ಲ ಸೌಲಭ್ಯಗಳನ್ನು ಕಲ್ಪಿಸಿ ಪ್ರೀತಿಯಿಂದ ಸಾಕುತ್ತಿರುತ್ತಾಳೆ.

ಆದಿಕಾಲದಲ್ಲಿ ಆದಿಜಾಂಬಮುನಿಯೇ ಎಲ್ಲ ಸಮುದಾಯಗಳಿಗೂ ಮಠಪತಿಯಾಗಿ ಲಿಂಗ-ಜಂಗಮರ ಗುರುವಾಗಿರುತ್ತಾನೆ. ಇವನನ್ನು ಪರೀಕ್ಷೆ ಮಾಡಬೇಕೆಂದು ಶಿವ ದಾಸಯ್ಯನ ರೂಪದಲ್ಲಿ ಅಸಹ್ಯಕರ ವೇಷಭೂಷಣ ಹಾಗೂ ದುರ್ವಾಸನೆಯೊಂದಿಗೆ ಮಠಕ್ಕೆ ಬಂದಾಗ ಜಾಂಬವಮುನಿ ಇವನು ನನ್ನ ಮಠಕ್ಕೆ ಅವಮಾನ ಮಾಡುತ್ತಿದ್ದಾನೆಂದು ಭಾವಿಸಿ ಖಡ್ಗದೊಂದಿಗೆ ದಾಸಯ್ಯನನ್ನು ಕೊಂದು ಬಿಡುತ್ತೇನೆಂದು ಹಿಂಬಾಲಿಸುತ್ತಾನೆ. ಜಾಂಬವಮುನಿ ಶಿವನ ಬಳಿ ಸಮೀಪಿಸುತ್ತಿದ್ದಂತೆ ತನ್ನ ದೇಹದ ಮೇಲಿದ್ದ ಸತ್ತ ಕೋಣದ ದೇಹದ ಡೋರ್ ಡಕ್ಕಯ್ಯನನ್ನು ಪ್ರತ್ಯೇಕಿಸಿ ನೀನು ಜಾಂಬವಮುನಿಗೆ ಸಿಗದಂತೆ ಓಡಿಹೋಗು ಎಂದು ಆಜ್ಞೆ ಮಾಡಿ ತನ್ನ ಸುತ್ತಲೂ ಜಲಕೋಟೆ ನಿರ್ಮಿಸಿಕೊಳ್ಳುತ್ತಾನೆ. ಮಠಪತಿ ಜಾಂಬವಮುನಿಗೆ ದಾಸಯ್ಯ ಸಿಗದಿದ್ದರಿಂದ ಡೋರ್ ಡಕ್ಕಯ್ಯನನ್ನೇ ಕೊಂದು ಹಾಕಿದ. ಆಗ ಡೋರ್ ಡಕ್ಕಯ್ಯನ ರಕ್ತ ಜಾಂಬವಮುನಿಯ ದೇಹದ ಮೇಲಿದ್ದ ಲಿಂಗ, ಜನಿವಾರ, ಕಾವಿ, ಕಮಂಡಲ, ರುದ್ರಾಕ್ಷಿಗಳ ಮೇಲೆ ಬೀಳಲು ಜಾಂಬವಮುನಿಯು ಅವುಗಳನ್ನೆಲ್ಲ ತೆಗೆದು ನೀರಿನಲ್ಲಿ ಹಾಕಿ ತಾನು ಇನ್ನು ಮುಂದೆ ಮಠಕ್ಕೆ ಹೋಗುವ ಚೈತನ್ಯ ಕಳೆದುಕೊಂಡಿರುವುದರಿಂದ ಮಠಕ್ಕೆ ಹೋಗಬಾರದೆಂದು ತೀರ್ಮಾನಿಸುತ್ತಾನೆ.

ಒಬ್ಬಂಟಿಯಾದ ಜಾಂಬುಮುನಿ ತನ್ನ ಒಂಟಿತನವನ್ನು ಕಳೆದುಕೊಳ್ಳಲು ಶಿವ ಬಳಿ ಬಂದು ತನ್ನ ಮಠದಲ್ಲಿ ಉಂಡು ಬೆಳೆಯದ ಒಂದು ಮಗುವನ್ನು ಸಲಹಬೇಕೆಂದಿದ್ದೇನೆ ಅಪ್ಪಣೆ ನೀಡಬೇಕೆಂದಾಗ, ಶಿವನು ನಿನ್ನ ಮಠಕ್ಕೆ ಬಾರದಿರುವ, ಉಂಡು ಬೆಳೆಯದ ಜಾರಿ ಜಂತುವನ್ನೂ ನಾನು ಕಾಣೆ. ನಿನ್ನ ಮಠದಲ್ಲಿ ಉಂಡು ಬೆಳೆಯದಂತಹ ಮಗುವನ್ನು ನಿನಗೆ ಕೊಡಲು ನನ್ನಿಂದ ಆಗುವುದಿಲ್ಲ. ನೀನೇ ಹುಡುಕಿಕೊಂಡು ಬಾ ಎಂದು ಆದೇಶಿಸಿದೆ. ಜಾಂಬುಮುನಿ ಎಲ್ಲಿ ಹುಡುಕಿದರೂ ಇವರ ಮಠಕ್ಕೆ ಬಂದು ಪ್ರಸಾದ ಸ್ವೀಕರಿಸಿದವರೇ ಕಾಣುತ್ತಾರೆ. ಜಾಂಬುಮುನಿ ಹುಡುಕುತ್ತಾ ಬಂದು ಗುಹೆಯ ಬಳಿ ವಿಶ್ರಾಂತಿ ಪಡೆಯುತ್ತಿದ್ದಾಗ, ಗುಹೆಯೊಳಗಿಂದ ಶಬ್ದ ಕೇಳಿ ಬರುತ್ತಿದ್ದುದ್ದನ್ನು ನೋಡಿದಾಗ ದಕ್ಷಬ್ರಹ್ಮನ ಮಗ ದಕ್ಕಲಕುಮಾರ ಅಲ್ಲಿ ಭಕ್ತಿಯಿಂದ ಜಪ ಮಾಡುತ್ತಿರುತ್ತಾನೆ. ಹರ್ಷಗೊಂಡ ಮುನಿ ಅವನನ್ನು ಕರೆದುಕೊಂಡು ಶಿವನ ಬಳಿ ಬರುತ್ತಾನೆ.

ಮಗುವನ್ನು ನೋಡಿದ ಶಿವನು ಇವನು ನನ್ನ ಪತ್ನಿಯಾದ ಪಾರ್ವತಿಯ ತಮ್ಮ, ದಕ್ಷ ಬ್ರಹ್ಮನ ಮಗನು, ಇವನು ನನಗೆ ಭಾವನಾಗಬೇಕು. ಇವನು ದಕ್ಕಲ ಕುಮಾರ. ಇವನು ಯಾರಿಗೂ

ದಕ್ಕುವವನಲ್ಲ. ಇವನನ್ನು ಸಲಹುವುದು ಸುಲಭವಲ್ಲ ಎಂದು ಹೇಳಿದ. ಆದರೆ ಜಾಂಬುಮುನಿ ಹಠ ಹಿಡಿದಾಗ, ಶಿವ ಇವನಿಗೆ ಯಾವುದೇ ರೀತಿಯ ಕಷ್ಟ, ತೊಂದರೆ, ಕೊರತೆ ಕೊಡದ ಹಾಗೆ ಸಾಕಬೇಕೆಂದು ಹೇಳಿ ಜಾಂಬುಮುನಿಯೊಂದಿಗೆ ಕಳಿಸಿದ.

ಮನೆ ಸಮೀಪಿಸುತ್ತಿದ್ದಂತೆ, ಜಾಂಬುಮುನಿ ಬಾಗಿಲಲ್ಲೇ ನಿಲ್ಲಿಸಿ ಬೆಂಕಿ ಹಾಗೂ ನೀರಿನಿಂದ ದೃಷ್ಟಿ ನಿವಾಳಿಸಿ ಅವನ ಮುಂದೆ ಚೆಲ್ಲಿ, ಅದನ್ನು ದಾಟಿಕೊಂಡು ಮನೆ ಪ್ರವೇಶಿಸುವಂತೆ ಹೇಳಿದ. ಆಗ ದಕ್ಕಲಕುಮಾರ ನೀನು ದೃಷ್ಟಿ ತೆಗೆದು ನನ್ನ ಮುಂಭಾಗದಲ್ಲಿ ಹಾಕದಿದ್ದರೆ ನಾನು ಮನೆಯೊಳಗೆ ಪ್ರವೇಶ ಮಾಡುತ್ತಿದ್ದೆ. ನೀನು ದೃಷ್ಟಿ ತೆಗೆದು ಹಾಕಿರುವ ನೀರು ಗಂಗಮ್ಮ ನನ್ನ ಸಂಬಂಧಿ, ಅಗ್ನಿ ನನ್ನ ಒಡಹುಟ್ಟಿದ ಸಹೋದರನಾಗಬೇಕು. ಆದ್ದರಿಂದ ಅದನ್ನು ದಾಟಿ ಯಾವುದೇ ಕಾರಣಕ್ಕೂ ಮನೆಯೊಳಗೆ ಪ್ರವೇಶಿಸಲು ಸಾಧ್ಯವಿಲ್ಲ ಎಂದು ಹೇಳಿ ಶಿವನ ಬಳಿಗೆ ಓಡಿಹೋದ. ಅವನನ್ನು ಹಿಂಬಾಲಿಸಿದ ಜಾಂಬುಮುನಿ ಇವನನ್ನು ಬಿಟ್ಟರೆ ಬೇರೆ ಯಾರು ಸಹ ನನ್ನ ಮಠಕ್ಕೆ ಬಾರದವರು ಸಿಗುವುದಿಲ್ಲ ಇವನೇ ಬೇಕು ಎಂದು ಹಠ ಹಿಡಿದಾಗ, ಶಿವ ಈ ದಕ್ಕಲ ಕುಮಾರ ಮನೆ ಒಳಗೆ ಬರುವುದಿಲ್ಲವಾದ್ದರಿಂದ, ಮನೆಯ ಅಂಗಳದಲ್ಲಿ ಒಂದು ಚಿಕ್ಕ ಗುಡಿಸಲನ್ನು ಮಾಡಿ, ಅವನಿಗೆ ಯಾವುದೇ ತೊಂದರೆ ಕೊಡದೆ, ಅವನು ಇರುವಲ್ಲಿಗೆ ಅನ್ನ, ವಸ್ತ್ರ, ಊಟ, ಉಪಚಾರ ನೀಡಬೇಕು. ಇದಕ್ಕೆ ಒಪ್ಪಿದರೆ ಇವನು ನಿನ್ನ ದತ್ತು ಮಗನಾಗುತ್ತಾನೆ. ಇಲ್ಲವಾದರೆ ಯಾರಿಗೂ ದಕ್ಕುವುದಿಲ್ಲ ಎಂದು ಹೇಳಿದಾಗ, ಜಾಂಬುಮುನಿಯು, ಸೂರ್ಯ, ಚಂದ್ರ ಹಾಗೂ ಮುನ್ನೂರು ಕೋಟಿ ದೇವಾನುದೇವತೆಗಳೇ ಸಾಕ್ಷಿಯಾಗಿ ಒಪ್ಪಿಕೊಂಡು ಅದರಂತೆ ಕಂಚಿಪತ್ರದ ಕೈಫಿಯತ್ತು ಬರೆದುಕೊಡುತ್ತಾನೆ. ಹೀಗೆ ದಕ್ಕಲಕುಮಾರ ಆದಿ ಜಾಂಬವಂತನ ಮಗನಾಗುತ್ತಾನೆ. ಇವನೇ ದಕ್ಕಲ ಸಮುದಾಯದ ಮೂಲಪುರುಷನಾಗುತ್ತಾನೆ.[೧೮]

ಈ ಕಥನದಲ್ಲದೆ, 'ದಕ್ಕಲ' ಸಮುದಾಯದ ಉಗಮ ಮತ್ತು ಅಸ್ತಿತ್ವದ ಬಗ್ಗೆ ಹಲವಾರು ಅವತರಣಿಕೆಗಳು ಕಂಡುಬರುತ್ತದೆ. ಕೆ.ಎಸ್. ಸಿಂಗ್‌ರವರ ಪೀಪಲ್ಸ್ ಆಫ್ ಇಂಡಿಯಾ ಕೃತಿಯ ಮೊದಲ ಸಂಪುಟದಲ್ಲಿ ದೊಕ್ಕಲಿಗ ಸಮುದಾಯವು, ಆಂಧ್ರಪ್ರದೇಶದಿಂದ ಕರ್ನಾಟಕಕ್ಕೆ ವಲಸೆ ಬಂದಿದ್ದಾರೆ. ಅವರ ಮನೆಮಾತು ತೆಲುಗು. ಇವರು ಬೆಂಗಳೂರು, ಕೋಲಾರ, ತುಮಕೂರು ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ ಎಂದು ಉಲ್ಲೇಖಿಸಲಾಗಿದೆ.[೧೯] Castes and Tribes of Southern India ಸಂಪಾದಕರು ದಕ್ಕಲರೆಂದರೆ, ಮಾದಿಗ ಸಮುದಾಯದಲ್ಲಿ ಮಾತ್ರ ಭಿಕ್ಷೆ ಬೇಡುವ ಒಂದು ವರ್ಗದ ಹೆಸರೆಂದು ಹೇಳುತ್ತಾರೆ.

ಈ ಸಮುದಾಯದ ಉಗಮದ ಬಗೆಗಿರುವ ಐತಿಹ್ಯಗಳ ಬಗ್ಗೆ ತಿಳಿಸುತ್ತಾ, ಶಿವನ ಮದುವೆಗೆ ತಾಳಿಬೊಟ್ಟನ್ನು ಮಾಡಲು ಆಚಾರಿಗೆ ಹೇಳಲಾಯಿತು. ಇದಕ್ಕೆ ತಿದಿ, ಬೆಂಕಿ, ಬಡಿಗೆ ಅವಶ್ಯಕವಾಗಿತ್ತು. ಆಗ ಜಾಂಬುಮುನಿ ತನ್ನ ದೊಡ್ಡ ಮಗನನ್ನು ಕರೆದು, ಬೆನ್ನುಮೂಳೆಯನ್ನು ಹೊರತುಪಡಿಸಿ ದೇಹದ

ಬೇರೆ ಬೇರೆ ಭಾಗಗಳಿಂದ ವಿವಿಧ ಸಲಕರಣೆಗಳನ್ನು ತಯಾರಿಸಿದ. ಇದರಿಂದ ಸಂಪ್ರೀತರಾದ ದೇವತೆಗಳು ಜಾಂಬುಮುನಿಯ ಮಗನನ್ನು ಬದುಕಿಸಿದರು. ಅವನು ಜಾಂಬವಮುನಿ ಬಳಿಹೋದಾಗ ಮುನಿ ಅವನನ್ನು ತನ್ನ ಮಗನೆಂದು ಗುರುತು ಹಿಡಿಯದೆ ತಿರಸ್ಕರಿಸಿದ. ಬದಲಿಗೆ ಮಾದಿಗರಲ್ಲಿ ಭಿಕ್ಷೆ ಬೇಡುವಂತೆ ಆದೇಶಿಸಿದ. ದಕ್ಕದಿಂದ ಜೀವ ಪಡೆದಿದ್ದರಿಂದ ಅವನ ವಂಶಸ್ಥರು ದಕ್ಕಲಿಗರಾದರು.[೨೦] ಒಂದೇ ರೀತಿಯ ಪವಾಡಮಯ ಮೂಲವನ್ನು ಹೊಂದಿರುವ ಸಮುದಾಯಗಳಲ್ಲಿ ಪ್ರತಿಯೊಂದು ಸಮುದಾಯವೂ ತಮ್ಮದೇ ಶ್ರೇಷ್ಠವೆಂಬ ಹಕ್ಕನ್ನು ಪ್ರತಿಪಾದಿಸಲು ಪ್ರಯತ್ನಿಸುತ್ತವೆ. ಮಾದಿಗತನದ ಕಾಣಾಚಿಗೆ ಸಂಬಂಧಿಸಿದ ಶಾಸನದಲ್ಲಿ, ಮಾದಿಗತನದ ವೃತ್ತಿಯ ಮೇಲೆ ಹಕ್ಕುಸ್ವಾಮ್ಯ ಸಾಧಿಸುವ ಸಂಬಂಧದಲ್ಲಿ ದೊಡ್ಡೇರಿಯ ಮಾದಿಗರ ಹೊಟ್ಟೆರಂಗನ ವಿರುದ್ಧ ಮಾದಿಗರ ಚಿಕ್ಕ, ಮಧುರೆಗಿರಿಯ ತಿಮ್ಮ, ಬೆಳಗೆರೆಯ ದನ್ನ, ಕೊಡಿ ದಾಸರು ಮಾದಿಗತನದ ಹಕ್ಕು ತಮಗೇ ಸೇರಿದ್ದೆಂದು ಪ್ರತಿಪಾದಿಸಿದಾಗ, ಎಲ್ಲ ಸಾಕ್ಷಿ–ಸಾಕ್ಷ್ಯಗಳನ್ನು ಸೇರಿಸಿ, ನ್ಯಾಯ ಮಾಡಿ ಅಂತಿಮವಾಗಿ ಇದು ಹೊಟ್ಟೆ ರಂಗನಿಗೇ ಸೇರಿದ್ದೆಂದು ಉಳಿದವರು ಸೋತಪತ್ರ ಬರೆದುಕೊಡುತ್ತಾರೆ.[೨೧]

**ಗೊಲ್ಲರು:** ಕಾಳಿಕಾದೇವಿಯ ರಥ ಕದಲದೆ ಇದ್ದಾಗ ಪೆದ್ದಿಂಟಿ ಗೊಲ್ಲನಾದ ವಂಟಿಪುಲಿ ಗಜಾ ಹನುಮಂತ ಎಂಬ ವ್ಯಕ್ತಿ ತನ್ನ ಹೆಂಡತಿ ಮಕ್ಕಳನ್ನು ಬಲಿ ನೀಡಿ ರಥ ಚಲಿಸುವಂತೆ ಮಾಡುತ್ತಾನೆ.[೨೨] ರಾಜಶೇಖರಪ್ಪನವರು ಪ್ರಕಟಿಸಿರುವ ಗೊಲ್ಲ ಜನಾಂಗದವರ ದಾಖಲೆ ಪ್ರಕಾರ, ಹಿರೇದೇವರ ಪೂಜಾರಿ ಗೊಂದಿಹಳ್ಳಿ ಕಾಟಂದೇವರ ಪೂಜಾರಿ ಕಾಟಯ್ಯ ಎಂಬುವನನ್ನು ಯಾದವ ಕುಲ ವಂಶೋದ್ಧಾರಕ, ಗುತ್ತಿ ಮಹರಗುತ್ತಿ ಗುಪ್ತಾಂಗ ಹರಣೀ, ಕನೀಕರೇ ಪಟ್ಟಾ (?) ಸಿಂಹಾಸನಾರೂಢರು, ಶ್ರೀ ಗೋಪಾಲಕೃಷ್ಣ ದೇವರ ಪಾದ ಪೂಜಿತರು, ಹಂಚಿನ ಸೀರೆ ಪವಳದ ಕಡಗ, ದಿನಾರಕಲ್ಲ ಚಿಪ್ಪು ಕೊಡಲಿ, ಗೊಲ್ಲತಿಲಕ ಕೊಲಾಹಲ ಇತ್ಯಾದಿ ಬಿರುದುಗಳಿಂದ ಸತ್ಯಸಂದನೆಂದು ಪ್ರಶಂಸಿಸುತ್ತಾರೆ.[೨೩]

ಇದೇ ಶಾಸನದಲ್ಲಿ ಬೇರೆ ಬೇರೆ ಕಾರಣಗಳಿಗಾಗಿ ಸುಮಾರು ೨೧ ತಲೆಮಾರುಗಳು ಆರು ಸಾರಿ ವಲಸೆ ಹೋಗುವುದು, ವಲಸೆ ಹೋಗುವಾಗ ತಮ್ಮ ದೈವವನ್ನು ವಲಸೆಯ ಭಾಗವನ್ನಾಗಿ ಮಾಡಿಕೊಂಡಿರುವುದನ್ನು ಕಾಣಬಹುದು.

**ಗೋಣಿಗರು (ಸಾಧುಶೆಟ್ಟರು):** ಸಾಧುಶೆಟ್ಟರ ಕಂಚಿಪತ್ರದ ಪ್ರಕಾರ[೨೪] ಅಂಧಕಾಸುರನೆಂಬ ರಾಕ್ಷಸ ಪ್ರಪಂಚಕ್ಕೆ ಚಿತ್ರಹಿಂಸೆ ಕೊಡುತ್ತಿದ್ದ. ಇದನ್ನು ತಿಳಿದ ಬ್ರಹ್ಮ, ದೇವತೆಗಳೊಂದಿಗೆ ಸಮಾಲೋಚಿಸಿ ಗಂಗಾ ತೀರಕ್ಕೆ ಬಂದು 'ಗುಂಡಾಗ್ನಿ' ಎಂಬ ಒಂದು ಯಾಗವನ್ನು ಮಾಡಿದ. ಆ ಯಾಗದಲ್ಲಿ ಒಬ್ಬ ಲಾವಣ್ಯ ಸುಂದರಾಕಾರ ಪುರುಷ ಉದ್ಭವಿಸಿದ. ಆತ ಅಂಧಕಾಸುರನೊಡನೆ ಯುದ್ಧ ಮಾಡಿ ಸಾಯಿಸಿ. ಅವನ ಕಪಾಲವನ್ನು ಒರೆಗಲ್ಲಾಗಿ, ಮುಂಗೈ ಹೆಬ್ಬೆರಳನ್ನು ಕೋಲಾಗಿ, ಪಕ್ಕೆಲುಬುಗಳನ್ನು ಕತ್ತಿಯಾಗಿ, ಮೇದಸ್ಸು ಸಾರವನ್ನು ಮೈಣವಾಗಿ, ಧರ್ಮವನ್ನು ಹೊದಿಕೆಯಾಗಿ, ಮಾಂಸರಾಶಿಯನ್ನು ಮಣಿಮಯಾಸನವನ್ನಾಗಿ

ಮಾಡಿಕೊಂಡು ಪ್ರತಿಯೊಬ್ಬ ದೇವರನ್ನು ತೂಗಿಸುತ್ತಾರೆ. ಆಗ ಶಿವನ ತೂಕವೇ ಎಲ್ಲರಿಗಿಂತ ಹೆಚ್ಚಾಗುತ್ತದೆ. ಸಂಪ್ರೀತನಾದ ಶಿವ ನೀನು ಪೃಥ್ವೀಶ್ವರನಾಗಿ ಸಕಲ ಸಂಪತ್ತು ಅಷ್ಟೈಶ್ವರ್ಯದಿಂದ ಬಾಳು. ನೀನು ಚತುರ್ದಶ ಭುವನವಾಸಿಗಳಾದ ಪುರುಹೂತಾದಿ ದೇವತೆಗಳಿಗೆ ವಜ್ರ, ವೈಢೂರ್ಯ, ಗೋಮೇದಿಕ, ಪುಷ್ಯರಾಗ, ಮರಕತ, ಮೌಕ್ತಿಕ, ಮಾಣಿಕ್ಯ, ಮೃಗಮದ, ಮಲಯಜ, ಚೀಣೀ-ಚೀಣಾಂಬರ ಮೊದಲಾದ ಯೋಗ-ಭೋಗ ವಸ್ತುಗಳನ್ನು ಸಂಘಟನೆ ಮಾಡಿ ವರ್ತಕಧರ್ಮವನ್ನು ಆಚರಿಸಿ, ದೇವಸಭೆಗಳಲ್ಲಿ ಪೂಜ್ಯನಾಗೆಂದು ಆಶೀರ್ವದಿಸಿದ. ಆಗ ಪಾರ್ವತಿ ಈ ಪೃಥ್ವೀಶ್ವರನಿಗೆ ವಿವಾಹ ಮಾಡಬೇಕೆಂದು ಶಿವನಿಗೆ ಹೇಳಿದಾಗ, ಶಿವ ಕುಂಬೋಧರನೆಂಬ ಗಂಧರ್ವನ ಮಗಳು ಸುಪ್ರಭೆಯೊಂದಿಗೆ ವಿವಾಹ ಮಾಡಿ ವಿಶಾಲಾವತಿ ಎಂಬ ನಗರ ಕೊಡುತ್ತಾರೆ. ಇವರಿಗೆ ಏಳು ಜನ ಗಂಡು ಮಕ್ಕಳು ಜನಿಸುತ್ತಾರೆ. ಅವರಲ್ಲಿ ಸುನೇತ್ರ, ಸುನಾಥರೆಂಬವರ ವಂಶದಲ್ಲಿ ಮುಕ್ಕಡಿ ಬಿಲ್ಲುಶೆಟ್ಟಿ ಮೊದಲಾದ ಇಪ್ಪತ್ತ ನಾಲ್ಕು ಜನರು ಹುಟ್ಟುತ್ತಾರೆ. ಇವರು ಇಪ್ಪತ್ತ ನಾಲ್ಕು ಗೋತ್ರಗಳಿಗೆ ಆದಿಯಾದರು. ಕಾಂಚೀ ಪಟ್ಟಣದ ರಾಜ ಚೋಳಭೂಪಾಲನು ಇವರನ್ನು ಕರೆಸಿ ನೀವು ಭೂಮಂಡಲದಲ್ಲಿ ಉತ್ಪನ್ನವಾಗುವ ವಸ್ತುಗಳನ್ನು ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ತರಿಸಿ ಕಳಿಸುವುದರ ಮೂಲಕ ಅವುಗಳನ್ನು ಪ್ರಪಂಚಕ್ಕೆ ಹರಡಿ ಎಂದು ಆಜ್ಞಾಪಿಸಿದ. ಇವರು ಅದರಂತೆ ಎಲ್ಲ ಕಡೆ ಸುಭಿಕ್ಷವಾಗುವಂತೆ ಮಾಡಿ ತಮ್ಮ ಸಾತ್ವಿಕ ಗುಣದಿಂದ ಸಾಧುಶೆಟ್ಟರೆಂಬ ಹೆಸರು ಪಡೆದರು. ಒಮ್ಮೆ ಇಪ್ಪತ್ತನಾಲ್ಕು ಜನ ಕಳ್ಳರು ಇವರ ಆಶ್ರಯ ಬೇಡಿ ಬರುತ್ತಾರೆ. ರಾಜ ಅವರನ್ನು ಬಿಡುವಂತೆ ಆದೇಶಿಸಿದರೂ ತಾವು ಶರಣಾಗತ ರಕ್ಷಕರೆಂದೂ, ಈ ಬಿರುದು ಕಾಪಾಡಲು ತಮ್ಮ ತಲೆ ದಂಡಕ್ಕೆ ಸಿದ್ಧರೆಂದೂ ಹೇಳಿ ಕಾಮಾಕ್ಷಮ್ಮನ ಗುಡಿಯಲ್ಲಿ ತಮ್ಮ ತಲೆ ಕೊಡಲು ಸಿದ್ಧರಾದಾಗ ಸಮಸ್ತ ದೇವತೆಗಳು ಪ್ರತ್ಯಕ್ಷರಾಗಿ ವರಗಳನ್ನು ನೀಡಿ ಮಾಯವಾಗುತ್ತಾರೆ. ರಾಜ ಒಮ್ಮೆ ಸಾಧು ಶೆಟ್ಟರ ಕುಲದಲ್ಲಿ ಒಬ್ಬ ಕನ್ಯೆ ಬೇಕೆಂದು ಕೇಳುತ್ತಾನೆ. ಸಾಧು ಶೆಟ್ಟರು ಕೋಪವನ್ನು ತಾಳುತ್ತಾರೆ. ಆದರೆ, ನಂತರ ರಾಜನನ್ನು ಹೇಗಾದರೂ ವಂಚಿಸಬೇಕೆಂದು ಹೇಳಿ ಕನ್ಯೆಯನ್ನು ಕೊಡಲು ಒಪ್ಪುತ್ತಾರೆ. ಒಂದು ಆಳೆತ್ತರದ ಚಿನ್ನದ ಪುತ್ಥಳಿಯನ್ನು ಮಾಡಿ ರಾಜನಿಗೆ ಧಾರೆಯೆರೆದುಕೊಡುತ್ತಾರೆ. ಮದುವೆಯೆಲ್ಲ ಮುಗಿದ ನಂತರ ಚೋಳ ರಾಜ ಪುತ್ಥಳಿಯ ಕೈ ಎಳೆದಾಗ ತೋಳು ದೇಹದಿಂದ ಕಳಚುತ್ತದೆ. ರಾಜನಿಗೆ ಮೋಸದ ಅರಿವಾಗುತ್ತದೆ. ಆಗ ಕೋಪದಿಂದ "ನಿಮ್ಮಲ್ಲಿ ಕನಕವು ಕಡಿಮೆಯಾಗಲಿ, ಸುಂದರಿಯರ ಸುಳಿವು ಇಲ್ಲದೇ ಹೋಗಲಿ" ಎಂದು ಶಪಿಸುತ್ತಾರೆ. ಋಷಿಗಳು ಬಂದು ತಮ್ಮ ಹೆಸರಿನ ಗೋತ್ರಗಳನ್ನು ಇವರಿಗೆ ನೀಡಿ ಹೋಗುತ್ತಾರೆ.

ಮತ್ತೊಂದು ಕಥನದ ಪ್ರಕಾರ ಚೋಳರಾಜ ತನ್ನ ಸೈನ್ಯಕ್ಕೆ ಆಹಾರ ಮತ್ತಿತರ ವಸ್ತುಗಳನ್ನು ಸರಬರಾಜು ಮಾಡಲು ಗೋಣಿ ಚೀಲಗಳು ಇಲ್ಲದ್ದರಿಂದ, ಇವರೇ ಗೋಣಿಚೀಲಗಳನ್ನು ಉತ್ಪಾದಿಸಿ ರಾಜನಿಗೆ ಕೊಡುತ್ತಾರೆ. ಇದರಿಂದ ಇವರಿಗೆ ಗೋಣಿಗರೆಂದು ಸಹ ಹೆಸರಾಯಿತು.

ವೆಂಕಟೇಶ ಇಂದ್ವಾಡಿಯವರು ಅಭಿಪ್ರಾಯ ಪಡುವಂತೆ 'ಕಂಚಿ ಕಾಮಾಕ್ಷಮ್ಮ ಇವರ ಕುಲದೇವತೆ. ಕುಲದ ಎಲ್ಲ ವ್ಯಾಜ್ಯಗಳನ್ನು ಇವಳ ಹೆಸರು ಹೇಳಿ ಮಾಡುತ್ತಾರೆ ಹಾಗು ತಮ್ಮ ಕುಲದ

ಇಪ್ಪತ್ತನಾಲ್ಕು ಬಳಿಗಳಿಗೆ ಕಂಚಿ ತಾಮ್ರ ಶಾಸನವೇ ಮೂಲ ಆಕರವೆಂದು ಹೇಳಿಕೊಳ್ಳುತ್ತಾರೆ. ಆದರೆ ಈ ತಾಮ್ರಶಾಸನವೆಲ್ಲಿದೆ ಎಂಬುದರ ಬಗ್ಗೆ ಯಾರಿಗೂ ಮಾಹಿತಿಯಿಲ್ಲ'.[೨೫]

**ಅಂಬಿಗರು (ಗಂಗಾಪುತ್ರರು):** ಸದಾಶಿವರಾಯ ತುಂಗಭದ್ರಾ ನದಿಯ ಆನೆಗೊಂದಿ ತಳವಾರಕಟ್ಟೆಯಲ್ಲಿ ಹತ್ತು ಹರಿಗೋಲು ಮತ್ತು ಅಂಬಿಗರು ನಿರಂತರವಾಗಿ ಸರಕಾರದ ಸೀಮೆಯಲ್ಲಿ ಕಾರ್ಯನಿರತವಾಗಿದ್ದರಿಂದ ಅವರಿಗೆ ಒಟ್ಟು ಮೂವತ್ತು ಕೊಳಗ ನೀರು ಭೂಮಿಯನ್ನು ನೀಡುತ್ತಾನೆ.[೨೬] ಗಂಗಾವತಿಯ ಮತ್ತೊಂದು ಶಾಸನದಲ್ಲಿ[೨೭] ಅಂಬಿಗರ ಬರಮ ಮತ್ತು ಬಸವ ಎಂಬುವವರು ಸಂಸ್ಥಾನದ ಕಾರ್ಯವನ್ನು ದಕ್ಷತೆಯಿಂದ ಮಾಡಿದ್ದರಿಂದ ಇವರಿಗೆ ತುಂಗಭದ್ರಾ ನದಿಯಲ್ಲಿ ಅವರು ನಡೆಸುತ್ತಿದ್ದ ಐದು ಹುಟ್ಟುಗಳಲ್ಲಿ ಎರಡು ಹುಟ್ಟುಗಳನ್ನು ಇನಾಂ ಆಗಿ ನೀಡುತ್ತಾರಲ್ಲದೆ, ಇವರು ಕಟ್ಟೆ ಮನೆಯವರಾಗಿದ್ದು, ಅವರ ಜಾತಿ, ರೀತಿ ರಿವಾಜುಗಳನ್ನು ನಿಯಂತ್ರಿಸುವ ಅಧಿಕಾರ ನೀಡುತ್ತಾರೆ.

ಚನ್ನಭೈರಾದೇವಿಯ ಶಾಸನದಲ್ಲಿ ಗಂಗಾಪುತ್ರರಾದ ಅಂಬಿಗರ ಬಟ್ಟೆಗಳನ್ನು ಅಗಸರು ಒಗೆದುಕೊಡುವುದಿಲ್ಲವೆಂದು ಮತ್ತು ನಾಯಿಂದರು ಕ್ಷೌರ ಮಾಡುವುದಿಲ್ಲವೆಂದು ಹೇಳಿದಾಗ, ಚನ್ನಭೈರಾದೇವಿ 'ಇವರು ಗಂಗಾಪುತ್ರರಾದ್ದರಿಂದ ಅಷ್ಟಾರುವೇನೋ ಇಲ್ಲ' ಎಂದು ಹೇಳಿ ಇನ್ನು ಮುಂದೆ ರಜಕರು ಬಟ್ಟೆಯನ್ನು, ನಾಯಿಂದರು ಕ್ಷೌರವನ್ನು ಮಾಡಬೇಕೆಂದು ಕಟ್ಟಳೆ ವಿಧಿಸುತ್ತಾಳೆ.

**ಮುದ್ರೆಕರ್ತರು:** ರಂಗನಾಥಪುರದ ತಾಮ್ರಶಾಸನ ಮುದ್ರೆಕರ್ತರು ಮತ್ತು ದೇಶಭಾಗದವರ ಬಗ್ಗೆ ಉಲ್ಲೇಖಿಸುತ್ತದೆ.[೨೮] ಮುದ್ರೆಕರ್ತರು ಎಂದರೆ ಬಹುಶಃ ಶ್ರೀವೈಷ್ಣವ ಧರ್ಮವನ್ನು ಅಂಗೀಕರಿಸಿದವರೆಂದು ತಿಳಿಯಬಹುದೆನಿಸುತ್ತದೆ. ಬಹುಶಃ ಶ್ರೀವೈಷ್ಣವ ಧರ್ಮವನ್ನು ಅಂಗೀಕರಿಸಿದ ಸಮಾಜದ ಮೇಲ್ವರ್ಗದ ಸಮುದಾಯವೆನಿಸುತ್ತದೆ. ಇದರಲ್ಲಿ ಕೆಲವರು ಮುಂದೆ ಶೈವಧರ್ಮದೆಡೆ ಆಕರ್ಷಿತರಾದರೂ, ಮೂಲತಃ ಶ್ರೀವೈಷ್ಣವ ಅನುಯಾಯಿಗಳೆಂದು ಊಹಿಸಬಹುದು. ಚಿದಾನಂದಮೂರ್ತಿಯವರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸ್ವತಃ ತಾವೇ ಗಮನಿಸಿದ ಸಂಗತಿಯ ಬಗ್ಗೆ ಗಮನಸೆಳೆಯುತ್ತಾ ಅರಸೀಕೆರೆ, ಸಮೀಪದ ಬಾಣಾವರದಲ್ಲಿ ಲಿಂಗಾಯಿತರ ಒಂದು ಮದುವೆಯ ತಂಡ ರಾತ್ರಿ ಗಂಗಾಪೂಜೆಗಾಗಿ ಒಂದು ಕೊಳದ ಬಳಿ ಬಂದಿದ್ದಾಗ, ವಾದ್ಯದವರ ಜೊತೆ ಒಂದು 'ದೇಶಮುದ್ರೆ ಬಟ್ಲು' ತಂದಿದ್ದರು. 'ದೇಶಮುದ್ರೆ ಬಟ್ಲ'ನ್ನು ಲಿಂಗಾಯರು ಮಾಡಿಸಿಕೊಟ್ಟಿದ್ದು, ಅವರ ಮದುವೆ, ಸಾವುಗಳ ದಿನ ಊರಿನ ಒಬ್ಬ ಹರಿಜನ ವ್ಯಕ್ತಿ ಅದನ್ನು ಮೆರವಣಿಗೆ ಮುಂದೆ ಹೊತ್ತುತರಬೇಕು . . . ಅಲ್ಲಿದ್ದ ಒಬ್ಬ ವಾದ್ಯದಾತ ಅಪ್ಪಟ ದೇಶಮುದ್ರೆ ಬಟ್ಟಲಲ್ಲಿ ಹದಿನೆಂಟು ಜಾತಿಗಳ ಚಿಹ್ನೆಗಳಿರುವುದನ್ನು ತಿಳಿಸಿದ. ಗಾಣಿಗರ, ಗಾಣ, ಲಿಂಗಾಯರ ಲಿಂಗ ಇತ್ಯಾದಿ' ನಾನು ನೋಡಿದ ಬಟ್ಟಲಲ್ಲಿ ಅಷ್ಟು ಚಿಹ್ನೆಗಳು ಇರಲಿಲ್ಲ ಎಂದು ತಿಳಿಸುತ್ತಾರೆ.[೨೯] ಮುಂದುವರೆಸುತ್ತಾ 'ರಾಜನಿಗಾಗಿ ತೆರಿಗೆ

ಸಂಗ್ರಹಿಸಿಕೊಡುವ, ಸಮಾಜದ ಚಿಕ್ಕಪುಟ್ಟ ಜಗಳಗಳನ್ನು ಪರಿಹರಿಸುವ ಹಾಗೂ ಸಮಾಜದ ಮದುವೆಗಳಲ್ಲಿ ಅಗ್ರ ತಾಂಬೂಲ ಹಕ್ಕನ್ನು ಪಡೆದಿದ್ದ ಕುಟುಂಬ ಎಂದು ಊಹಿಸುತ್ತಾರೆ.[೩೦]

ರಂಗಾಪುರದ ತಾಮ್ರಶಾಸನದಲ್ಲಿ 'ಮುದ್ರೆಕರ್ತರ' ಉಲ್ಲೇಖ ಬರುತ್ತದೆ. ಅದರಲ್ಲಿ ತಿರುಮಲ ತಾತಾಚಾರ್ಯರ ಮುಖಾಂತರ ಯಸವನೂರ ತಿರುಮಾಳಿಗೆಯಲ್ಲಿ ಇರುವಂತಹ ಮುದ್ರೆಕರ್ತರನ್ನು ಉಲ್ಲೇಖಿಸಲಾಗಿದೆ. ಇವರು ತಾತಾಚಾರ್ಯ, ರಾಮಾನುಜಯ್ಯನವರ ಮುಖಾಂತರ ಮುದ್ರೆಕರ್ತ ರಾದುದನ್ನು ತಾಮ್ರಪತ್ರ ತಿಳಿಸುತ್ತದೆ. ಇವರು ದೇಶಭಾಗದವರಾದ ಹನುಮದಾಸ, ಯೀರದಾಸ, ತೊಳಸಿ ರಾಮದಾಸರು ಒಬ್ಬ ಮುಸಲ್ಮಾನ ಸರದಾರನನ್ನು ಪವಾಡದ ಮೂಲಕ ಮಣಿಸಿ ಬಂದಾಗ ಇವರಿಗೆ ಮುದ್ರೆಕರ್ತರು ಗುರುವಾಂಚಲ್ಯಕ್ಕೆ ಕೀರ್ತಿ ತರಿಸಿದರು ಎಂದು ಕೆಲವು ಹಳದಿ, ಬಿಳದಿ ಭಾರಿಯಷ್ಟು ಬಿರುದುಗಳ ಸಮೇತ ಜಯರೇಖೆ ಕೊಟ್ಟು ಕಳುಹಿಸುತ್ತಾರೆ. ಈ ಹಿನ್ನೆಲೆಯಲ್ಲಿ ಗಮನಿಸಿದಾದ ಇವರು ಬಹುಶಃ ವೈಷ್ಣವ ದೀಕ್ಷೆಯನ್ನು ನೀಡುತ್ತಿದ್ದ ಗುರುಗಳಿರಬಹುದೆಂದು ಊಹಿಸಬಹುದು.

**ದೇಶಭಾಗದವರು:** ದೇಶಭಾಗದವರೆಂದರೆ ಬಹುಶಃ ವೈಷ್ಣವ ದೀಕ್ಷೆಯನ್ನು ಸ್ವೀಕರಿಸಿದ ದಾಸಯ್ಯಗಳಿರಬಹುದೆನಿಸುತ್ತದೆ. ಇವರು ವೈಷ್ಣವ ದೀಕ್ಷೆ ಸ್ವೀಕರಿಸಿದ ಹದಿನೆಂಟು ಪಣಗಳ ಕುಟುಂಬಗಳಲ್ಲಿ ಮದುವೆ, ತಿಥಿ ಮತ್ತಿತ್ತರ ಕಾರ್ಯಗಳಲ್ಲಿ ಪೌರೋಹಿತ್ಯದ ವೃತ್ತಿಯಲ್ಲಿ ತೊಡಗಿಕೊಂಡಿದ್ದರೆಂದು ತೋರುತ್ತದೆ. ಇವರು ತಮ್ಮೊಂದಿಗೆ ತಮ್ಮ ವೃತ್ತಿ ಲಾಂಛನಗಳಾದ ಶಂಖ, ಜಾಗಟೆ, ಸಸ್ಯ(?), ಗರುಡಗಂಭ ಅಥವಾ ಬವನಾಸಿಗಳನ್ನು ಇಟ್ಟುಕೊಂಡಿರಬೇಕಾಗಿತ್ತು. ರಂಗಾಪುರದ ತಾಮ್ರಪತ್ರ ದೇಶಭಾಗದವರಾದ ವೀರದಾಸ, ಹನುಮದಾಸ, ತುಳಸಿ ರಾಮದಾಸರ ಉಲ್ಲೇಖಿಸುತ್ತಾ ಇವರ ಬಳಿಯಿದ್ದ ಶಂಖ, ಜಾಗಟೆ, ಸಸ್ಯಗಳನ್ನು ಸರದಾರ ಗೋಕಿಲ್ಯ ಕಸಿದುಕೊಳ್ಳಲು ಪ್ರಯತ್ನಿಸಿದಾಗ, ಇವರು ಪವಾಡ ಮೆರೆದು ಅವನ್ನು ಉಳಿಸಿಕೊಂಡಿದ್ದರಿಂದ ಗುರುವಾಂಛಲ್ಯಕ್ಕೆ ಕೀರ್ತಿ ತಂದು ಮುದ್ರೆಕರ್ತರ ಕೃಪೆಗೆ ಪಾತ್ರರಾಗುತ್ತಾರೆ. ಅವರಲ್ಲಿ ಯೀರದಾಸ ದೇಶಮುದ್ರೆಕರ್ತರ ಮುಖಾಂತರ ಹಾನಗಲ್ಲು ಸ್ಥಳದ ಸಮೆಕುಮಾರ, ಗುಮ್ಮಗಟ್ಟಿ ಬಿಯದಾಸಯ್ಯ, ದಳವಾಯಿ ಹನುಮದಾಸಯ್ಯ, ಚರಪತ್ತಿ ರಾಮದಾಸಯ್ಯ, ಮತ್ತಿತ್ತರ ದಾಸಯ್ಯಗಳಿಗೆ 'ದೇಶಭಾಗದ ಕವಳವನ್ನು' ನೀಡುತ್ತಾರೆ. ಇಲ್ಲಿ ದೇಶಭಾಗದ ಕವಳವೆಂದರೆ, ದಾಸಯ್ಯ ವೃತ್ತಿ ಕೈಗೊಳ್ಳುವುದಕ್ಕೆ ನೀಡುವ ಸಮ್ಮತಿಪೂರ್ವಕ ವೀಳ್ಯ ಎಂದು ಭಾವಿಸಬಹುದು.

**ಕುಂಚಿಟಗರು:** ಆನೆಗೊಂದಿಯ ಜಯರೇಖೆಯು ಕುಂಚಿಟಿಗರು ಮತ್ತು ನಾರದಗಿಡ್ಡನ ನಡುವೆ ಆದ ವ್ಯಾಜ್ಯವನ್ನು ಪ್ರಸ್ತಾಪಿಸುತ್ತದೆ.[೩೧] ಅದರ ಪ್ರಕಾರ ಕುಂಚಿಟಗರ ೪೮ ಕುಲದವರು ಆನೆಗೊಂದಿ ಸೀಮೆಗೆ ಬಂದಾಗ, ಚೆನ್ನಾಡಿ ನಾದರ ಗಿಡ್ಡ ಎಂಬುವವನು, ಆನೆಗೊಂದಿ ಪೇಟೆಯಲ್ಲಿ ಒಂದು ಎತ್ತನ್ನು ನಿಲ್ಲಿಸಿಕೊಂಡು, ಕೊಡುಗೊಂಬಿನ ಚೆಲ್ವ, ಬಸವನರೆಕ್ಕೆವಕ್ಕಳ, ಗಂಟೆಹುಲಿ ಚರ್ಮ, ಹಗಲ ದೀವಟಿಗೆ

ಬಿರುದುಗಳನ್ನು ಹೊರಿಸಿಕೊಂಡು 'ಕುಂಚಿಟಿಗರ ಗಂಡ, ಕುಡಿ ವಕ್ಕಲಿಗರ ಮಿಂಡ' ಎಂದು ಭಟ್ಟರ ಸಂಗಡ ಹೊಗಳಿಸಿಕೊಂಡು ಹೋಗುತ್ತಾನೆ. ಇದನ್ನು ಕೇಳಿ ಕುಂಚಿಟಿಗರು ಏನು ಮಾಡಲೂ ಸಾಧ್ಯವಾಗದೆ, ಕುಲಕ್ಕೆ ಅಪಕೀರ್ತಿ ಬಂತಲ್ಲ ಎಂದು ಅವಮಾನದಿಂದ ತಲೆತಗ್ಗಿಸಿಕೊಂಡು ಹೋಗುತ್ತಾರೆ.

ಕಟ್ಟಿಗೆ ಮಾರುವ ಮಾರಣ್ಣ ಎನ್ನುವವನು ಗಿಡ್ಡನಿಗೆ ಪಂಥಾಹ್ವಾನ ಮಾಡಿ ಗೆದ್ದು ಗಿಡ್ಡನ ಕಣ್ಣನ್ನು ಕಿತ್ತುಹಾಕುತ್ತಾನೆ. ಕಟ್ಟಿಗೆ ಮಾರಣ್ಣ ತಮ್ಮ ಮನೆಗೆ ಕೀರ್ತಿ ತಂದನೆಂದು, ಅವನನ್ನು ರಾಯನ ಬಳಿಗೆ ಕರೆದುಕೊಂಡು ಹೋಗಿ ರಾಯನ ಮುಂದೆ ನಿಮ್ಮ ಕರಿಕಂಬಳಿ ಗದ್ದುಗೆ ಮೇಲೆ ನಾಡಗೌಡಿಕೆ ವೀಳ್ಯ ಕೊಡುವುದಾಗಿ ಹೇಳಿ ಜಯರೇಖೆ ಬರೆದುಕೊಡುತ್ತಾರೆ.

ಈ ಸಮುದಾಯದ ಮೂಲ ಮತ್ತು ನೆಲೆನಿಲ್ಲುವುದಕ್ಕೆ ಸಂಬಂಧಿಸಿದಂತೆ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್ ಕೃತಿಯಲ್ಲಿ ಐತಿಹ್ಯವಿದೆ. ಈ ಸಮುದಾಯದ ಮೂಲ ಪುರುಷ ಉಂಡೆ ಎತ್ತರಾಯ, ಕೆಲವು ಶತಮಾನಗಳ ಹಿಂದೆ ಉಂಡೆ ಎತ್ತರಾಯನ ಮಗಳನ್ನು ಮುಸಲ್ಮಾನ ದೊರೆಯೊಬ್ಬ ಮದುವೆಯಾಗುವುದಾಗಿ ಒತ್ತಾಯ ಮಾಡಿದಾಗ ಆತ ಅಲ್ಲಿಂದ ದಕ್ಷಿಣದ ಕಡೆ ಓಡಿಬಂದ. ಆದರೆ ದಾರಿಯಲ್ಲಿ ಮಧ್ಯೆ ಗೋದಾವರಿ ನದಿ ಅಡ್ಡ ಬಂತು. ಆಗ ಕುರುಬನೊಬ್ಬ ತನ್ನ ನೆರವನ್ನು ಸದಾ ನೆನೆಯಬೇಕೆಂಬ ಷರತ್ತಿನೊಂದಿಗೆ ನದಿಗೆ ಧುಮುಕಿ ತನ್ನನ್ನು ತಾನು ಆಹುತಿ ನೀಡಿಕೊಳ್ಳುತ್ತಾನೆ. ಆಗ ನದಿ ಇಬ್ಭಾಗವಾಗಿ ದಾರಿ ಮಾಡಿಕೊಡುತ್ತದೆ. ಅಲ್ಲಿಂದ ಬಂದ ಈ ವಕ್ಕಲಿಗರು ಕುರುಬ ನೇಕಾರನು ಬಿಟ್ಟು ಹೋದ ಕುಂಚಿಯ ನೆನಪಿಗೆ ಕುಂಚಿಟಿಗರೆಂದು ಹೆಸರನ್ನು ಇಟ್ಟುಕೊಂಡರು.

ಇನ್ನೊಂದು ಹೇಳಿಕೆಯ ಪ್ರಕಾರ, ಸ್ವತಃ ಆತ್ಮಾಹುತಿ ಮಾಡಿಕೊಂಡು ವಕ್ಕಲಿಗರನ್ನು ಉಳಿಸಿದ ವ್ಯಕ್ತಿ ಎಂದರೆ ಕುರುಬ ಬೀರಣ್ಣ ಎಂಬುವವನು. ಇವನು ಉಂಡೆ ಎತ್ತರಾಯನ ಸೇವಕ. ಬೀರಣ್ಣನಿಗೆ ಮಕ್ಕಳಿರಲಿಲ್ಲ. ಒಂದು ದಿನ ಕಾಡಿನಲ್ಲಿ ಕುರಿ ಮೇಯಿಸುವಾಗ ಎರಡು ಸುಂದರವಾದ ಮಕ್ಕಳು ಕಾಡಿನಲ್ಲಿ ತೊಟ್ಟಿಲಿನಲ್ಲಿ ಮಲಗಿದ್ದವು. ಅವುಗಳನ್ನು ಹಾವು ಮತ್ತು ಯಕ್ಷಿ ಸಾಕುತ್ತಿದ್ದವು. ಅವನು ಆ ಮಕ್ಕಳನ್ನು ತಂದು ಹೆಂಡತಿಗೆ ನೀಡಿದ. ಅವರಿಗೆ ಆವಿನ ಮತ್ತು ಜಾಲ್ದಿ ಎಂಬ ಹೆಸರಿಟ್ಟರು. ಅವರಲ್ಲಿ ಜಲದಿರಾಯನು ತನ್ನ ಯಜಮಾನನ ಮಗಳನ್ನು ತಾನು ಸತ್ತ ನಂತರ ತನ್ನ ದೇಹಕ್ಕೆ ಮದುವೆ ಮಾಡಿಕೊಡಬೇಕೆಂದು ಹೇಳಿ, ಆ ಕುಟುಂಬಕ್ಕಾಗಿ ತನ್ನ ತಲೆ ಕತ್ತರಿಸಿಕೊಂಡು ಆತ್ಮಾಹುತಿ ಮಾಡಿಕೊಳ್ಳುತ್ತಾನೆ. ಅದರಂತೆ ಸತ್ತ ಜಲದಿರಾಯನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡುತ್ತಾರೆ. ಶಿವ ಮತ್ತು ಪಾರ್ವತಿ ಅವನನ್ನು ಬದುಕಿಸುತ್ತಾರೆ. ಈ ಮೂವರು ಎಂದರೆ ಉಂಡೆ ಎತ್ತರಾಯ, ಜಲದಿಬೊಪ್ಪರಾಯ ಮತ್ತು ಆವಿನ ಶಾಮರಾಯ ಈ ಮನೆತನದ ಮೂಲಪುರುಷರಾದರು. ಈ ಸಮುದಾಯದವರು ಗೋದಾವರಿ ನದಿಯನ್ನು ದಾಟಿ ಬಂದ ನಂತರ ವಿಜಯನಗರದಲ್ಲಿ ಮೊದಲು ನೆಲೆ ನಿಲ್ಲುತ್ತಾರೆ. ನಂತರ ಚಿತ್ರದುರ್ಗದ ನಂದನಹೊಸೂರಿಗೆ ಹೋಗಿ ಅಲ್ಲಿಂದ ಶಿರಾಗೆ ಬಂದು

ನೆಲೆಸುತ್ತಾರೆ. ಇದು ಇವರ ಕೇಂದ್ರವಾಗಿದೆ. ಶಿರಾ ತಾಲೂಕಿನ ಬಿಜ್ಜೇನಹಳ್ಳಿಯಲ್ಲಿ ಜಲದಿಬೊಪ್ಪರಾಯನ ದೇವಾಲಯವಿದೆ.

ಇವರು ದೆಹಲಿಯ ಬಳಿ (ಪಾಂಡವಪುರವೆಂಬ ಪಟ್ಟಣದಲ್ಲಿ) ವಾಸಿಸುತ್ತಿದ್ದರು. ನೂರ ಒಂದು ಕುಲಗಳಾಗಿ ವಿಭಜನೆಯಾಗಿ ಅದರಲ್ಲಿ ನಲವತ್ತೆಂಟು ಒಕ್ಕಲು ದಕ್ಷಿಣದ ಕಡೆ ವಲಸೆ ಬಂದು, ಅದರಲ್ಲಿ ೪೮ ಕುಲಗಳು, ೧೬ ಅನ್ಯಗೋತ್ರಗಳಾಗಿ ವಿಭಜನೆ ಹೊಂದಿದವು.[೨೨]

**ಕುಂಬಾರರು:** ಆನೆಗೊಂದಿಯ ತಾಮ್ರಪತ್ರ, ಜಯರೇಖೆಗಳ ಸ್ವರೂಪದಲ್ಲಿರುವ ಸಂಕೀರ್ಣಮಯವಾದ ಸೃಷ್ಟಿಪುರಾಣ/ ಕುಲೋತ್ಪತ್ತಿ ಶಾಸನಗಳ ಸಾಲಿಗೆ ಸೇರಿಸಬಹುದಾದಂತಹ ಶಾಸನ.[೨೩] ಇದು ಗಿರಿಜಾ ಕಲ್ಯಾಣದ ಕತೆ, ಅಮೃತ ಮಂಥನದ ವಸ್ತುವನ್ನು ಒಳಗೊಂಡಿದ್ದು ಕುಂಬಾರ ಸಮುದಾಯ ಸೃಷ್ಟಿಯಾಗಿರುವ ವಿಷಯಕ್ಕೆ ತಳುಕು ಹಾಕಲಾಗಿದೆ. ಕುಂಬಾರ ಸಮುದಾಯ ಮೊದಲು ರೂಪುಗೊಂಡ ರೀತಿ, ಅವರ ಕುಲ ಸಂಕೇತಗಳಾದ ಹೂಜೆ, ಗಳೆ, ಹಡೆಯ, ಕುಂಚುಳಿಗೆಗಳಂತಹ ವಸ್ತುಗಳನ್ನು ಇಟ್ಟುಕೊಳ್ಳುವುದಕ್ಕೆ ವಿಶೇಷಾಧಿಕಾರ ನೀಡಿದುದನ್ನು ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಮಹದೇವ ಬೇಟೆಯಾಡಬೇಕೆಂದು ಬೇಡನಾಗಿ ಕಾಡಿಗೆ ಬಂದಾಗ, ಒಂಟಿಕಾಲಲ್ಲಿ ಪಂಚಾಗ್ನಿಗಳ ಮಧ್ಯೆ ನಿಂತು ತಪಸ್ಸು ಮಾಡುತ್ತಿದ್ದ ಗಿರಿಜೆಯನ್ನು ನೋಡಿ ಮರುಳಾಗಿ ಮದುವೆಯಾಗಬೇಕೆಂದು ಅಪೇಕ್ಷಿಸುತ್ತಾನೆ. ಮನ್ಮಥನೇ ಬ್ರಹ್ಮ, ವಿಷ್ಣು, ದೇವೇಂದ್ರ, ಬೃಹಸ್ಪತಿಯನ್ನು ಗಿರಿರಾಜನ ಬಳಿಗೆ ಕಳುಹಿಸಿ ಮದುವೆಗೆ ಒಪ್ಪಿಸುತ್ತಾನೆ. ಮದುವೆಗೆ ಸಕಲ ಸಿದ್ಧತೆಗಳು ಆಗುತ್ತವೆ. ವಿವಾಹ ಮಂಟಪದಲ್ಲಿ ಕಳಸ,ಸೊನ್ನಲಿಗೆ, ಹೂಜೆಗಳಿರುವುದಿಲ್ಲ. ಗಿರಿರಾಜ ಶಿವನನ್ನು ಕೇಳಿದಾಗ ನಾರಾಯಣನು ಚಕ್ರವನ್ನು ತಿಗರಿ ಮಾಡಿ, ಬ್ರಹ್ಮನ ವೇದ ಪುಸ್ತಕದ ಕಂಬಿಯಿಂದ ಬಾಂಬ ಕಂಬಿ ಮಾಡಿ . . . ಹಾಗೆ ಅಲ್ಲೇ ಸಿಗುತ್ತಿದ್ದ ಬೇರೆ ಬೇರೆ ವಸ್ತುಗಳನ್ನು ಕುಂಬಾರಿಕೆಗೆ ಅನುಕೂಲವಾಗುವಂತೆ ಮಾಡಿ ಹೂಜೆ, ಸೊನ್ನಲಿಗೆ, ಕುಂಭಗಳನ್ನು ಮಾಡಿ ಮದುವೆ ಮುಗಿಸಿಕೊಂಡು ಕೈಲಾಸಕ್ಕೆ ಮರುಳುತ್ತಾನೆ.

ಶಿವ ತನ್ನ ಮದುವೆ ಧಾರೆಗೆ ಸಹಾಯ ಮಾಡಿದವರನ್ನು 'ಸಾಲೆ ಸಾಸಿರ್ವರು' ಎಂಬ ಹೆಸರಿನಿಂದ ಪ್ರಸಿದ್ಧರಾಗಿರೆಂದು ಹೇಳಿ ಅವರಿಗೆ 'ಅಯ್ಯಾವಂತ'ರೆಂಬ ಹೆಸರನ್ನು ಕೊಡುತ್ತಾನೆ. ಕುಂಬಾರ ಸಮಯ ಹೇಗೆ ಉದ್ಭವವಾಯಿತೆಂದು ಶಾಸನ ತಿಳಿಸುತ್ತದೆ. ಶಾಸನದಲ್ಲಿ ಕಲ್ಯಾಣ, ಬೋಧನ, ಹೊಟ್ಟೆಳಗೆರೆ, ಕಂದಾರ, ಕರಹಡ, ಕೊಲ್ಲಾಪುರ—ಮುಂತಾದ ೧೮ ಕೇಣಿಗಳನ್ನು ವಿವರಿಸಿ, ಇವುಗಳಿಗೆಲ್ಲಾ ಶ್ರೇಷ್ಠವಾದುದು ಮೂವಚ್ಛಾಸಿರದ ಕೇಣಿಯಾಗಿದ್ದು, ಇವರು ಗಿರಿರಾಜನ ಕುಲದವರು, ಮಹಾದೇವನ ಮಯ್ದುನರು, ಗೊರವನ ಮಾವಂದಿರೆಂದು ಹೇಳಿದೆ. ಕುಂಬಾರ ಸಮುದಾಯದ ಹೆಗ್ಗಳಿಕೆಯನ್ನು ತಿಳಿಸುವುದಕ್ಕೆ ಹಾಗೂ ಸಮುದಾಯದ ಶ್ರೇಷ್ಠತೆಯನ್ನು ಎತ್ತಿಹಿಡಿಯುವುದಕ್ಕೆ ಕಥನ ವಿನ್ಯಾಸದಲ್ಲೂ ಸಹ ಬದಲಾವಣೆ ಮಾಡಿಕೊಳ್ಳಲಾಗಿದೆ. ಇಲ್ಲಿ ಕಾಮದಹನದ ಕತೆ ಹಾಗೂ

ಪಾರಂಪಾರಿಕವಾಗಿ ಬಂದ ಶಿಷ್ಟ ಸಾಹಿತ್ಯದ 'ಗಿರಿಜಾ ಕಲ್ಯಾಣ' ಕತೆ ಕಣ್ಮರೆಯಾಗಿ ಬದಲಿಗೆ ಮನ್ಮಥನೇ ಶಿವನ ಮದುವೆಗೆ ಬ್ರಹ್ಮ, ವಿಷ್ಣು, ಇಂದ್ರ, ಬೃಹಸ್ಪತಿಯನ್ನು ರಾಯಭಾರಿಗಳನ್ನಾಗಿ ಕಳುಹಿಸುತ್ತಾನೆ. ಶಾಸನದ ಕೊನೆಯಲ್ಲಿ ಅಮೃತ ಮಂಥನದ ಕತೆಯನ್ನು ತರಲಾಗಿದೆ. ಆದರೆ, ಇಲ್ಲಿ ಶಿವ ಹಾಲಾಹಲವನ್ನು ಕುಡಿಯುವ ಸಂಗತಿ ಇಲ್ಲ. ಬದಲಿಗೆ ಸಮುದ್ರಮಂಥನ ಸಮಯದಲ್ಲಿ ಉದ್ಭವ ವಾಗುವ ವಸ್ತುಗಳನ್ನು ಸುರರಿಗೆ ಹಾಗೂ ನರರಿಗೆ ಹಂಚಿ ಕೈಲಾಸಕ್ಕೆ ಹೋಗುತ್ತಾನೆ.[೩೪]

ಐತಿಹ್ಯಗಳನ್ನಾಧರಿಸಿ ಕೆಲವರು ಕುಂಬಾರರ ಕುಲವು ಗುಂಡಬ್ರಹ್ಮಯ್ಯನಿಂದ ಪ್ರಾರಂಭವಾಯಿತೆಂದು ಅಭಿಪ್ರಾಯಪಟ್ಟರೆ, ಇನ್ನು ಕೆಲವರು ಶಾಲಿವಾಹನನಿಂದ ಪ್ರಾರಂಭವಾಗುವು ದಾಗಿ ಹೇಳುತ್ತಾರೆ. ಕುಂಬಾರರ ಮೂಲಪುರುಷ ಗುಂಡಬ್ರಹ್ಮ ಯಜ್ಞಕುಂಡದಲ್ಲಿ ಹುಟ್ಟಿದವನೆಂದು ಮತ್ತು ಜನಗಳ ಉಪಯೋಗಕ್ಕೆ ಕುಡಿಕೆಗಳನ್ನು ಮಾಡಲು ತ್ರಿಮೂರ್ತಿಗಳು ಅವನನ್ನು ನೇಮಿಸಿದರೆಂದು ಹೇಳಲಾಗುತ್ತಿದೆ.[೩೫]

ಮತ್ತೊಂದು ಐತಿಹ್ಯದ ಪ್ರಕಾರ ಕುಂಬಾರ ಕನ್ನೆಗೆ ಬ್ರಾಹ್ಮಣ ಕುಲದ ವ್ಯಕ್ತಿಯಿಂದ ಹುಟ್ಟಿದ ಶಾಲಿವಾಹನನೆಂಬುವವನಿಂದ ಕುಂಬಾರ ಸಮುದಾಯ ಹುಟ್ಟಿತೆಂದು ಅಭಿಪ್ರಾಯಪಡುತ್ತಾರೆ. ಒಮ್ಮೆ ಒಬ್ಬ ಬ್ರಾಹ್ಮಣ ಪ್ರವಾಹಕ್ಕೆ ಸಿಲುಕಿ (ಕೃಷ್ಣಾ ನದಿ ದಂಡೆಗೆ ಬಂದಾಗ) ದೂರ ಬಂದುಬಿಡುತ್ತಾನೆ. ಆಶ್ರಯಕ್ಕಾಗಿ ಮನೆಯನ್ನು ಹುಡುಕಿ ಬರುತ್ತಿರುವಾಗ ಒಬ್ಬ ಕುಂಬಾರನ ಮನೆ ಕಾಣಿಸುತ್ತದೆ. ಅವನಿಗೆ ಒಬ್ಬ ಮಗಳಿರುತ್ತಾಳೆ. ಇವರ ಸಮಾಗಮದಿಂದ ಶಾಲಿವಾಹನನೆಂಬ ಮಗ ಹುಟ್ಟಾತ್ತಾನೆ. ಮಗುವನ್ನು ಕುಂಬಾರನ ಮನೆಯಲ್ಲಿ ತಾಯಿಯೊಂದಿಗೆ ಬಿಟ್ಟು ಬ್ರಾಹ್ಮಣ ಹೊರಟುಹೋಗುತ್ತಾನೆ. ಮಗು ಬೆಳೆದಂತೆ ಪಾರಂಪರಿಕವಾದ ಕುಂಬಾರಿಕೆ ಕೆಲಸ ಬಿಟ್ಟು ಸೈನಿಕ, ಕುದುರೆ ಮುಂತಾದ ಯುದ್ಧ ಸಂಬಂಧಿ ಗೊಂಬೆಗಳನ್ನು/ಆಟಿಕೆಗಳನ್ನು ತಯಾರು ಮಾಡಲಾರಂಭಿಸಿ ಒಂದು ಕೊಠಡಿಯಲ್ಲಿ ಅವುಗಳನ್ನೆಲ್ಲಾ ಜಾಗ್ರತೆಯಿಂದ ಇಡುತ್ತಾ ಬರುತ್ತಾನೆ. ಅಲ್ಲಿಯ ರಾಜ ಜನರಿಂದ ಬಲತ್ಕಾರವಾಗಿ ಹಣ ವಸೂಲಿ ಮಾಡಿ ತರಲು ಸೈನಿಕರನ್ನು ಕಳಿಸಿದ. ಸೈನಿಕರು ಕುಂಬಾರನ ಮನೆಗೆ ಬಂದಾಗ ಬಾಲಕ ಶಾಲಿವಾಹನ ಅವರನ್ನು ಸೋಲಿಸಿ ಕಳಿಸುತ್ತಾನೆ. ಇದರಿಂದ ಕೆರಳಿದ ರಾಜ ತನ್ನ ಸಮಸ್ತ ಸೈನ್ಯವನ್ನು ಕಳಿಸಿದ. ಶಾಲಿವಾಹನ ತಾನು ಆಟಿಕೆ ಇಟ್ಟಿದ್ದ ಕೊಠಡಿ ತೆಗೆದು ಪವಿತ್ರ ಜಲವನ್ನು ಅದರ ಮೇಲೆ ಚಿಮುಕಿಸಿದ. ಅಲ್ಲಿದ್ದ ಆಟಿಕೆಗಳು ಜೀವ ತಳೆದು ರಾಜನನ್ನು ಸೋಲಿಸಿ ಸಾಯಿಸಿದವು. ಶಾಲಿವಾಹನ ಸಿಂಹಾಸವನ್ನು ಆಕ್ರಮಿಸಿ ರಾಜನಾಗಿ ರಾಷ್ಟ್ರದ ಆಳ್ವಿಕೆ ನಡೆಸಿದ.

"ಕುಂಬಾರರು ೧೮ ಪಣಕಟ್ಟುಗಳಿಗೆ ಸೇರುತ್ತಾರೆ. ಕುಂಬಾರರಿಗೆ ಸಂಬಂಧಿಸಿದಂತೆ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕುಲಕಥನಗಳು ಅಥವಾ ತಾಮ್ರಪತ್ರಗಳು ದೊರೆಯುತ್ತವೆ. ಇವರನ್ನು ಪ್ರಥಮ ಶೂದ್ರ ಅಥವಾ ಇಂದ್ರ ಶೂದ್ರೆಂದೂ ಸಹ ಕರೆಯಲಾಗುತ್ತಿತ್ತು. ಈ ಸಮುದಾಯದ ಮೂಲಕ್ಕೆ

ಸಂಬಂಧಿಸಿದಂತೆ ರೇಣುಕಾ ಕಾವ್ಯ, ರುದ್ರ ಭಾರತ ಮತ್ತು ಚನ್ನಪಟ್ಟಣದಲ್ಲಿ ಒಬ್ಬ ವ್ಯಕ್ತಿಯ ಬಳಿಯಿರುವ 'ಚಪ್ಪೋಡು'ವಿನಲ್ಲಿ ಇದೆಯೆಂದು ಹೇಳಲಾಗುತ್ತದೆ".[೩೬]

**ಕುರುಬರು:** ಈ ಮನೆತನದ ಮೂಲಪುರುಷ ಪದ್ಮಾಕ್ಯ ಎಂಬುವವನು ಕೃಷಿಗಾಗಿ ಭೂಮಿ ಉಳುವಾಗ ಹುತ್ತವನ್ನು ಅಗೆಯುತ್ತಾನೆ. ಆಗ ಆರು ಬಗೆಯ ಕುರಿಗಳು ಹೊರಬಂದವು. ಇವು ಶಾಪದಿಂದ ಭೂಮಿಗೆ ಬಂದಿದ್ದ ದೇವತೆಗಳು, ಅವುಗಳನ್ನು ಹೇಗೆ ಸಾಕಬೇಕೆಂದು ತಿಳಿಯದೆ ಪದ್ಮಾಕ್ಯಾ ದೇವರನ್ನು (ಶಿವನನ್ನು) ಪ್ರಾರ್ಥಿಸಿದ. ಶಿವ ಅವನಿಗೆ ಸಹಾಯ ಮಾಡಲು ಬೀರದೇವರನ್ನು ಕಳಿಸಿದ.

ಮತ್ತೊಂದು ಐತಿಹ್ಯದ ಪ್ರಕಾರ ಕೈಲಾಸದಲ್ಲಿ ಭೃಂಗಿ, ಮೂರು ಕಾಲಿನ ನೃತ್ಯ ಮಾಡುವಾಗ ಕಳಪೆ ಪ್ರದರ್ಶನ ಮಾಡುತ್ತಾನೆ. ಆಗ ಅಲ್ಲಿದ್ದ ದೇವಕನ್ಯೆಯರು ನಗುತ್ತಾರೆ. ದೇವಕನ್ಯೆಯರಿಗೆ ಭೂಮಿಯಲ್ಲಿ ಕುರಿಗಳಾಗಿ ಹುಟ್ಟುವಂತೆ ಭೃಂಗಿ ಶಾಪ ನೀಡುತ್ತಾನೆ. ಒಕ್ಕಲಿಗ ಜಾತಿಯ ಹೆಗ್ಗಡೆಗೆ ಪದ್ಮ (ಉಂಡಡಭಟ್ಟ) ಎಂಬ ಹೆಸರಿನ ಮಗನಿದ್ದು, ಅವನಿಗೆ ಕೃಷಿ ಮಾಡುವಂತೆ ತಂದೆ ತಿಳಿಸುತ್ತಾನೆ. ಇವನು ಹೊಲ ಉಳುವಾಗ ಹೊಲದಲ್ಲಿದ್ದ ಹುತ್ತ ಅಗೆದಾಗ ಆರು ರೀತಿಯ ಕುರಿಗಳು ಹೊರಬಂದವು. ಅವನಿಗೆ ದಿಕ್ಕು ತೋಚದಂತಾಯಿತು. ಆಗ ಶಿವ ಬೀರದೇವರನ್ನು ಕಳಿಸಿದ. ಇವನಿಗೆ ಹಿಡಂಬಿಯ ಮಗಳಿಂದ ಕಾಡು ಕುರುಬರು, ಸುನಂದ ಎಂಬುವವಳ ಮಗಳು ಸುಮಾಲಿನಿಯಿಂದ ಊರು ಕುರುಬರು ಜನಿಸಿದರು.ಊರು ಕುರುಬನಿಂದ ಹಾಲು ಕುರುಬ, ಅಂಡೆ ಕುರುಬ ಮತ್ತು ಕಂಬಳಿ ಕುರುಬ ಕುಲಗಳು ಹುಟ್ಟಿದವು.

ಜನಪ್ರಿಯ ನಂಬಿಕೆಯ ಪ್ರಕಾರ ಇವರು ಮೂಲತಃ ಕಾಪುಗಳು. ಇವರ ಮೂಲದವರು ಮಸಿರೆಡ್ಡಿ–ನೀಲಮ್ಮ. ಇವರು ಪೂರ್ವಘಟ್ಟಗಳಲ್ಲಿ ಉರುವಲು ಮಾರುತ್ತಾ ಜೀವನ ನಡೆಸುತ್ತಿದ್ದರು. ಇವರಿಗೆ ೬ ಜನ ಮಕ್ಕಳು. ಇವರ ಬಡತನ ನೋಡಿ ಶಿವ ಜಂಗಮನ ವೇಷದಲ್ಲಿ ಭಿಕ್ಷೆಗೆ ಬಂದು ನೀಲಮ್ಮನಿಗೆ ವಿಭೂತಿ ನೀಡಿದ. ನಿಮಗೆ ಪದ್ಮಣ್ಣನೆಂಬ ಮಗ ಹುಟ್ಟುತ್ತಾನೆಂದು ಆಶೀರ್ವದಿಸಿದ. ಅದರಂತೆ ಹುಟ್ಟಿದ ಉಂಡಾಲ ಪದ್ಮಣ್ಣ ಇತರ ಮಕ್ಕಳಂತೆ ಕೆಲಸಕ್ಕೆ ಹೋಗದೆ ಇರುತ್ತಿದ್ದ. ಅಣ್ಣಂದಿರು ಇವನನ್ನು ತೊಲಗಿಸಿಕೊಳ್ಳಲು ಹುತ್ತಕ್ಕೆ ಬೆಂಕಿ ಹಚ್ಚುವಂತೆ ಹೇಳಿದರು. ಇದರಿಂದ ಆತ ಹಾವು ಕಡಿದು ಸಾಯುತ್ತಾರೆಂದು ನಂಬಿದ್ದರು. ಅದರಂತೆ ಪದ್ಮಣ್ಣ ಬೆಂಕಿ ಹಚ್ಚಿದಾಗ ಹಾವಿಗೆ ಬದಲಾಗಿ ಅಸಂಖ್ಯ ಕುರಿಗಳು ಹೊರಬಂದವು. ಇದನ್ನು ನೋಡಿ ಪದ್ಮಣ್ಣ ಭಯಭೀತನಾದ. ಶಿವ ಪ್ರತ್ಯಕ್ಷನಾಗಿ ಅವನ ಜೀವನೋಪಾಯಕ್ಕೆ ಅವುಗಳನ್ನು ಸೃಷ್ಟಿಸಿರುವುದಾಗಿ ತಿಳಿಸಿ, ಹಾಲು ಕರೆದು ಕಾಯಿಸುವುದನ್ನು ಕಲಿಸಿದ. ಬೆಂಕಿ ತರಲು ದೂರದಲ್ಲಿ ರಾಕ್ಷಸರು ಇದ್ದ ಪಟ್ಟಣಕ್ಕೆ ಕಳುಹಿಸಿದ. ರಾಕ್ಷಸರು ಬ್ರಾಹ್ಮಣನ ಮಗಳನ್ನು ಸೆರೆಯಲ್ಲಿಟ್ಟುಕೊಂಡಿದ್ದರು. ಅವಳು ಪದ್ಮಣ್ಣನೊಡನೆ ಅನುರಾಗ ಬೆಳೆಸಿಕೊಳ್ಳುತ್ತಾಳೆ. ಅಲ್ಲಿಂದ ತಪ್ಪಿಸಿಕೊಂಡು ಬರಲು ಪ್ರಯತ್ನಿಸಿ ಅವನನ್ನು ಹಲ್ಲಿಯಾಗಿ ಮಾಡುತ್ತಾಳೆ. ತನ್ನ ನೆಲೆಗೆ ಬಂದ ಮೇಲೆ ತನ್ನ ಜಾತಿಯ ಕನ್ನೆಯೊಂದಿಗೆ ಹಾಗೂ ಬ್ರಾಹ್ಮಣ ಜಾತಿಯ ಕನ್ನೆಯೊಂದಿಗೆ ಮದುವೆಯಾದ. ತನ್ನ

ಜಾತಿಯ ಮಹಿಳೆಗೆ ಜನಿಸಿದ ಮಕ್ಕಳಿಗೆ ಉಣ್ಣೆ ಕಂಕಣವನ್ನು, ಬ್ರಾಹ್ಮಣ ಮಹಿಳೆಯ ಮಕ್ಕಳಿಗೆ ಹತ್ತಿ ಕಂಕಣ ನೀಡುತ್ತಾನೆ. ಹಾಲು ಕರೆಯುತ್ತಿದ್ದ ಅಂಡೆಯಿಂದ ಅಂಡೆ ಕುರುಬರ ಕುಲ ಉದ್ಭವವಾಯಿತು.[೩೭]

**ಬಣಜಿಗರು:** ಬಣಜಿಗರು ಪಣಕಟ್ಟು ವ್ಯವಸ್ಥೆಯಲ್ಲಿ ಬಲಗೈ ಗುಂಪಿನ ಮುಂಚೂಣಿಯಲ್ಲಿದ್ದಾರೆ. ಐತಿಹ್ಯದ ಪ್ರಕಾರ ದಕ್ಷನ ಪುತ್ರಿ ದಾಕ್ಷಾಯಿಣಿ ತನ್ನ ತಂದೆ ದಕ್ಷ ಪ್ರಜಾಪತಿ ಹಾಕಿದ ಒಡವೆಗಳಿಂದ ಸುಪ್ರೀತಳಾಗಲಿಲ್ಲ. ಆಗ ದಕ್ಷ ಪ್ರಜಾಪತಿ ಬ್ರಹ್ಮನನ್ನು ಅವಳನ್ನು ಹೇಗೆ ತೃಪ್ತಿಪಡಿಸುವುದೆಂದು ಕೇಳಿದ. ಬ್ರಹ್ಮ ಅವಳಿಗೆ ಯಾಗ ಮಾಡುವಂತೆ ಹೇಳಿದ. ಬ್ರಹ್ಮನ ನೆರವಿನಿಂದ ಯಾಗ ನೆರವೇರಿಸಿದಳು. ಯಜ್ಞದಿಂದ ಗಾಜಿನ ಬಳೆ, ಅರಿಶಿನ ಮತ್ತಿತ್ತರ ಮಂಗಲ ವಸ್ತುಗಳೊಂದಿಗೆ ಒಬ್ಬ ವ್ಯಕ್ತಿ ಬಂದು ಅವುಗಳನ್ನು ದಾಕ್ಷಾಯಣಿಗೆ ನೀಡಿದ. ಅವಳು ಅವುಗಳನ್ನು ಧರಿಸಿ ಸಂತೋಷಪಟ್ಟು ಎಲ್ಲ ಹೆಂಗಸರೂ ಅವುಗಳನ್ನು ಧರಿಸಬೇಕೆಂದು ನಿರ್ದೇಶಿಸುತ್ತಾಳೆ. ಆ ವ್ಯಕ್ತಿ ಬಲಿಜರ ಮೂಲಪುರುಷನಾದ. ಅವರು ಗೌರಿಪುತ್ರರೆನಿಸಿಕೊಂಡರು.[೩೮]

ಬುಕನಾನ್ ಪ್ರಕಾರ ಪೃಥ್ವೀಮಲ್ಲಶೆಟ್ಟಿ ತೆಲುಗು ಬಣಜಿಗರ ಮೂಲಪುರುಷ. ಇವರ ಮೊದಲ ಹೆಂಡತಿಯ ಮಕ್ಕಳು ವೈಷ್ಣವರು. ಎರಡನೇ ಹೆಂಡತಿ ಮಕ್ಕಳು ಲಿಂಗವಂತರು. ಕೆಲವರ ಪ್ರಕಾರ ಇವರು ಕೃಷ್ಣನ ಸಹೋದರ ಬಲರಾಮನ ಶೂದ್ರ ಹೆಂಡತಿಯಲ್ಲಿ ಜನಿಸಿದ ೧೦೧ ಮಕ್ಕಳು. ಅವರು ಶೂದ್ರರಾದ್ದರಿಂದ ಬ್ರಾಹ್ಮಣ ವಿದ್ಯಾರ್ಥಿಗಳು ಪಠಿಸುತ್ತಿದ್ದ ವೇದಗಳನ್ನು ಕೇಳುತ್ತಾ ಕಲಿತರು. ಇದರಿಂದ ಅನಾವೃಷ್ಟಿ ಉಂಟಾಗಿ ಬರಗಾಲ ಶುರುವಾಯಿತು. ಇದನ್ನು ಕೇಳಿದ ಬಲರಾಮ ಅವರನ್ನು ಅವರ ಕುಲದೇವರ ಬಳಿ ಕಳಿಸಿದರು. ಕುಲದೇವತೆ ಅವರಿಗೆ ಅವರ ನಿಜ ಧರ್ಮ ಮತ್ತು ಮೂಲವನ್ನು ತೋರಿಸಿ, ಏಳು ಚಿನ್ನದ ನಾಣ್ಯಗಳ ಚೀಲಗಳನ್ನು ನೀಡಿ ವ್ಯಾಪಾರ ಮಾಡಿಕೊಂಡಿರುವಂತೆ ಆದೇಶಿಸಿದಳು.[೩೯]

ಕುರುಬರು ಮತ್ತು ಬಣಜಿಗರಿಗೆ ಕುಲಗಳ ಸಾಂಸ್ಕೃತಿಕ ಚಹರೆಗಳ ಆಧಿಪತ್ಯಕ್ಕಾಗಿ ವ್ಯಾಜ್ಯ ಹುಟ್ಟಿಕೊಂಡಿದ್ದನ್ನು ಜಯರೇಖೆಯೊಂದು ದಾಖಲಿಸುತ್ತದೆ. ಅದರಲ್ಲಿ, ಬಣಜಿಗರು, ಕುರುಬರಿಗೆ, ಕುರುಬರ ದೇವರಿಗೆ ಸಾಲುಸತ್ತಿಗೆ, ಸುರುಟು, ಹನುಮನ ದಕ್ಕೆ, ಹಗಲು ದೀವಟಿಗೆ, ಮೇಳ, ಸಿಂಹಲಲಾಟ, ಜಲ್ಲಿಸಾಲೆ, ರುಂಡ ಮಾಲೆ, ಸಾವಿರ ಬಿರುದುಗಳು ಸಲ್ಲುವುದಿಲ್ಲವೆಂದು ಆಕ್ಷೇಪಿಸುತ್ತಾರೆ. ಇದಕ್ಕೆ ಕುರುಬರೂ ಸಹ ಬಣಜಿಗರು ಅಡ್ಡ ಪಲ್ಲಕ್ಕಿ ಹಾಕಿ ಎತ್ತಿನ ಮೇಲೆ ಏರು ಹಾಕಬಾರದು, ಕುರುಬರ ಬದುಕು ಮುಟ್ಟಲಾಗದು, ಕುರುಬರ ಧಾರಾಕಂಕಣ ಕಟ್ಟಬಾರದೆಂದು ಹೇಳುತ್ತಾರೆ. ಬಣಜಿಗರು ಕುರುಬರ ದೇವರುಗಳನ್ನು ಸಾವಿರ ಸಾಲು ಮಂಟಪದೊಳಗೆ ಹಾಕಿಕೊಂಡು ಪರಭಾರೆ ಮಾಡುತ್ತಾರೆ. ಇವರಿಬ್ಬರ ನಡುವಿನ ಕಲಹಗಳಲ್ಲಿ ಸಾವಿರಾರು ಪ್ರಾಣಿಗಳು ಹತವಾದಾಗ, ಎಲ್ಲ ಹಿರಿಯರೂ ಸೇರಿ ಇವರು ಹೆಚ್ಚು ಅಲ್ಲ, ಅವರು ಕಡಿಮೆ ಅಲ್ಲ, ವ್ಯಾಜ್ಯಕ್ಕೆ ಏನೂ ಕಾರಣವಿಲ್ಲವೆಂದು ಸಮಾಧಾನಪಡಿಸುತ್ತಾರೆ.[೪೦]

ಇವಲ್ಲದೆ, ಇನ್ನೂ ಹಲವಾರು ಸಮುದಾಯಗಳನ್ನು, ಅವುಗಳ ವೃತ್ತಿಗಳನ್ನು ಸಂದರ್ಭಾನುಸಾರ ಜಯರೇಖೆಗಳಲ್ಲಿ ಉಲ್ಲೇಖಿಸಲಾಗಿದೆ. ಕೇವಲ ಜಯರೇಖೆ ಮತ್ತು ಕಂಚಿಪತ್ರಗಳಲ್ಲಿ ದಾಖಲಾಗಿರು ವಂತಹ ಸಮುದಾಯಗಳನ್ನು ಮಾತ್ರ ಇಲ್ಲಿ ವಿಶ್ಲೇಷಣೆಗೆ ತೆಗೆದುಕೊಂಡಿರುತ್ತೇನೆ. ಉಳಿದವುಗಳನ್ನು ಅತಿವ್ಯಾಪ್ತಿ ದೋಷವಾಗುವ ಹಿನ್ನೆಲೆಯಲ್ಲಿ ಇಲ್ಲಿ ಅಧ್ಯಯನಕ್ಕೆ ತೆಗೆದು ಕೊಂಡಿರುವುದಿಲ್ಲ. ಮೇಲ್ನೋಟಕ್ಕೆ ಜಯರೇಖೆ ಶಾಸನಗಳು, ಸಮಾಜದಲ್ಲಿ ಕಂಡು ಬರುವ ಸಮುದಾಯಗಳ ಬಗ್ಗೆ ಕಟ್ಟುಕತೆಗಳನ್ನು ಅಥವಾ ಕಲ್ಪಿತ ಕತೆಗಳನ್ನು ಹುಟ್ಟು ಹಾಕುತ್ತಿರುವಂತೆ ಕಂಡರೂ, ಇಂಥ ಸೃಷ್ಟಿ ಪುರಾಣಗಳು "ಆಯಾಯ ಜನಾಂಗದ ಮೂಲ ಪುರುಷರನ್ನು ಮತ್ತು ಸಾಂಸ್ಕೃತಿಕ ನಾಯಕರನ್ನು ಸ್ಮರಿಸುತ್ತಾ ಅವರ ಜಾತಿಗೆ ಮತ್ತು ವೃತ್ತಿಗೆ ಒಂದು ಬಗೆಯ ಘನತೆಯನ್ನು ಕಲ್ಪಿಸಿ ಆ ಮೂಲಕ ಆಯಾಯ ಜನಾಂಗಗಳ ಅಸ್ಮಿತೆಯನ್ನು ಕಟ್ಟಿಕೊಡುತ್ತದೆ".[೪೧]

**೪.೨ ಪಣಕಟ್ಟು ಸಮಾಜ**

ಕರ್ನಾಟಕದ ಮಧ್ಯಕಾಲೀನ ಸಾಮುದಾಯಿಕ ಚರಿತ್ರೆಯಲ್ಲಿ ಪಣಕಟ್ಟುಗಳು ವೈಶಿಷ್ಟ್ಯಪೂರ್ಣ ಪಾತ್ರವಹಿಸುತ್ತವೆ. ಇಂದಿನ ತಮಿಳುನಾಡಿನ ಕಾಂಚೀಪುರಂ ಅಥವಾ ಕಂಚಿಯನ್ನು ಕೇಂದ್ರವಾಗಿಟ್ಟುಕೊಂಡು ಅದರ ಪರಿಧಿಯಲ್ಲಿಯೇ ಪರಿಭ್ರಮಿಸುವ ಪಣಕಟ್ಟುಗಳು, ದಕ್ಷಿಣ ಭಾರತದ ಇತಿಹಾಸಕ್ಕೆ ಮಾತ್ರ ಸೀಮಿತವಾಗಿದ್ದು, ದಕ್ಷಿಣ ಭಾರತದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯ ಅನನ್ಯ ಘಟಕಗಳಾಗಿವೆ.

ಪಣಕಟ್ಟುಗಳೆಂದರೆ ಸ್ಥೂಲವಾಗಿ ಹಲವಾರು ಕೃಷಿ ಹಾಗೂ ಕೃಷಿಯೇತರ ಕೆಳ ಹಾಗೂ ತಳಸಮುದಾಯಗಳ ಸಮೂಹವನ್ನೊಳಗೊಂಡ ಘಟಕವನ್ನು ಲಂಬಾಂತರವಾಗಿ ವಿಭಜಿಸಿ ವರ್ಗೀಕರಿಸಲ್ಪಟ್ಟ, ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದ ಎರಡು ಪ್ರಧಾನ ಪಂಗಡಗಳಾಗಿವೆ. ಇದನ್ನು ಬಲಗೈ ಹಾಗು ಎಡಗೈ ಪಂಗಡಗಳೆಂದು ಗುರುತಿಸಲಾಗಿದೆ. ಪಣಕಟ್ಟು ಸಮಾಜದಲ್ಲಿನ ಹಲವಾರು ಜಾತಿಗಳು ಈ ಬಲಗೈ ಹಾಗೂ ಎಡಗೈ ಎಂಬ ಇಬ್ಬಣಗಳಲ್ಲಿ ತಮ್ಮ ತಮ್ಮ ಅಸ್ಮಿತೆಯನ್ನು ದಾಖಲಿಸಿಕೊಳ್ಳಬಯಸುತ್ತಿದ್ದವು. ಈ ಎರಡು ಪ್ರಧಾನ ಜಾತಿಧಾರೆಗಳೊಳಗೆ ಹಲವಾರು ಕುಲವರ್ಗಗಳು ಪರಸ್ಪರ ಒಂದು ಒಳಹೆಣಿಗೆಯನ್ನು ಏರ್ಪಡಿಸಿಕೊಂಡಿರುತ್ತವೆ. ವಾಸ್ತವವಾಗಿ ಈ ಬಲಗೈ ಮತ್ತು ಎಡಗೈ ಪಂಗಡಗಳು ಜಾತಿಗಳಾಗಿರದೆ, ಹಲವಾರು ಜಾತಿಗಳ ಸಮೂಹಗಳ ಘಟಕಗಳಾಗಿವೆ. ಹಾಗಾಗಿ ಇವು ಭಾರತದಲ್ಲಿ ಪ್ರಚಲಿತವಿರುವ ಜಾತಿ ವ್ಯವಸ್ಥೆಗಿಂತ ಭಿನ್ನ ಮಾದರಿಗಳಾಗಿದ್ದವು.

ಮಧ್ಯಕಾಲೀನ ಜಾತಿ ವ್ಯವಸ್ಥೆಯ ಇತಿಹಾಸವನ್ನು ಗಮನಿಸಿದಾಗ ಸಮಾಜದಲ್ಲಿ ಎಷ್ಟೇ ರೀತಿಯ ಕ್ರೌರ್ಯ, ಶೋಷಣೆ, ತುಳಿತ, ದಬ್ಬಾಳಿಕೆಗಳಿದ್ದರೂ, ಅದಕ್ಕೆ ಇತಿಹಾಸದಲ್ಲಿ ಎದುರುಬಿದ್ದ ಉದಾಹಣೆಗಳು ವಿರಳ. ಆದರೆ ಪಣಕಟ್ಟು ಸಮಾಜ ಹಾಗಲ್ಲ. ಈ ವ್ಯವಸ್ಥೆಯಲ್ಲಿ ಹೆಚ್ಚಿನ ಕಲಹಗಳು/

ವ್ಯಾಜ್ಯಗಳು ಉದ್ಭವವಾಗುತ್ತಿದ್ದವು. ಅದು ತಮಗಿಂತ ಮೇಲಿನ ಅಥವಾ ಕೆಳಗಿನ ಸಮುದಾಯಗಳಿಗಿಂತ ಹೆಚ್ಚಾಗಿ ಸಮಾನಾಂತರ ಸಮುದಾಯಗಳ ಮಧ್ಯೆ ಅತಿ ಹೆಚ್ಚಿನ ವ್ಯಾಜ್ಯಗಳು ನಡೆಯುತ್ತಿದ್ದವು. ವಸಾಹತುಶಾಹಿ ಅವಧಿಯಂತೂ ಅತಿ ಹೆಚ್ಚಿನ ಪಣ ವ್ಯಾಜ್ಯಗಳಿಗೆ ಸಾಕ್ಷಿಯಾದ ಕಾಲವಾಗಿದೆ.

ಚಾರಿತ್ರಿಕವಾಗಿ ಭಾರತದಲ್ಲೆಲ್ಲೂ ಕಂಡುಬರದ, ದಕ್ಷಿಣ ಭಾರತದಲ್ಲಿ ಮಾತ್ರ ಕಂಡು ಬರುವ ಪಣಕಟ್ಟುಗಳ ವ್ಯವಸ್ಥೆ ಯಾವ ಕಾಲಘಟ್ಟದಲ್ಲಿ ಪ್ರಾರಂಭವಾಯಿತು? ಪಣಕಟ್ಟುಗಳ ವಿಂಗಡಣೆಯನ್ನು ಯಾರು ರೂಪಿಸಿದರು? ಯಾವ ಪ್ರದೇಶದಲ್ಲಿ ಆಯಿತು? ಯಾವ ಮಾನದಂಡ ಅನುಸರಿಸಿ ಪಣಕಟ್ಟುಗಳನ್ನು ವಿಂಗಡಣೆ ಮಾಡಲಾಯಿತು? ಮುಂತಾದ ಪ್ರಶ್ನೆಗಳಿಗೆ ಇತಿಹಾಸದಲ್ಲಿ ಸ್ಪಷ್ಟ ಆಧಾರಗಳು ಹಾಗೂ ಉತ್ತರಗಳು ಲಭ್ಯವಾಗುವುದಿಲ್ಲ. ದಕ್ಷಿಣ ಭಾರತದಲ್ಲಿ ಪಣಕಟ್ಟುಗಳ ಮೊದಲ ಉಲ್ಲೇಖ ನಮಗೆ ಕಂಡುಬರುವುದು ಹನ್ನೊಂದನೆಯ ಶತಮಾನದ ಪ್ರಥಮಾರ್ಧ ಅವಧಿಯ ಒಂದನೆಯ ಕುಲೋತ್ತುಂಗ ಚೋಳನ ಕಾಲದಲ್ಲಿ. ಬರ್ಟನ್ ಸ್ಟೈನ್‌ರವರು ಕುಲೋತ್ತುಂಗನ ಶಾಸನವನ್ನು ಪ್ರಸ್ತಾಪಿಸಿ, "ಬಲಗೈ ಮತ್ತು ಎಡಗೈ ಜಾತಿಗಳ ನಡುವಿನ ಸಂಘರ್ಷದಲ್ಲಿ ರಾಜಮಹೇಂದ್ರ ಚತುರ್ವೇದಿ ಮಂಗಲಂ ಗ್ರಾಮವನ್ನು ಸುಟ್ಟು ಹಾಕಿ, ಪವಿತ್ರ ಸ್ಥಳಗಳನ್ನೆಲ್ಲಾ ನಾಶ ಮಾಡಲಾಯಿತು. ದೇವರ ವಿಗ್ರಹಗಳನ್ನು, ಮುಮ್ಮಡಿ ಚೋಳ ವಿನ್ನಾಗರ್ ಆಳ್ವಾರ್ ದೇವಾಲಯವನ್ನು ಲೂಟಿ ಮಾಡಲಾಯಿತೆಂದು" ಉಲ್ಲೇಖಿಸುತ್ತಾರೆ.[೪೨]

ಆದರೆ ಕೆ.ಎ. ನೀಲಕಂಠ ಶಾಸ್ತ್ರಿಯವರು "ಸಮಾಜದ ಬಲಗೈ ಮತ್ತು ಎಡಗೈ ವರ್ಗಗಳ ವಾಸ್ತವಿಕ ಇತಿಹಾಸ ನಾವು ಊಹಿಸಿರುವುದಕ್ಕಿಂತಲೂ ತುಂಬಾ ಪ್ರಾಚೀನವಾಗಿದೆಯೆಂದು" ಅಭಿಪ್ರಾಯಪಡುತ್ತಾರೆ.[೪೩]

ಎಡ್ಗರ್ ಥರ್ಸ್ಟನ್‌ರವರು ಪಣಕಟ್ಟುಗಳು ತಮಿಳುನಾಡಿನ ಕಮ್ಮಾಳರು ಮತ್ತು ವೆಲ್ಲಾಳರ ನಡುವಿನ ಸಂಘರ್ಷದಿಂದ ಹುಟ್ಟಿಕೊಂಡಿದೆಯೆಂದು ಅಭಿಪ್ರಾಯಪಡುತ್ತಾರೆ. ಈ ಎರಡು ಪಣಗಳು ತಮ್ಮ ನಡುವೆ ಉಂಟಾದ ವಿವಾದವನ್ನು ಬಗೆಹರಿಸುವುದಕ್ಕಾಗಿ ಕಂಚಿಯಲ್ಲಿದ್ದ ಚೋಳರಾಜನ ಬಳಿಗೆ ಹೋಗುತ್ತಾರೆ. ಆಗ ರಾಜನ ಎಡಭಾಗದಲ್ಲಿ ನಿಂತ ಕಮ್ಮಾಳರು ಮತ್ತು ಅವರ ಬೆಂಬಲಿಗರು ಎಡಪಣದವರಾದರೆ, ರಾಜನ ಬಲಭಾಗದಲ್ಲಿ ನಿಂತ ವೆಲ್ಲಾಳರು ಮತ್ತು ಅವರ ಬೆಂಬಲಿಗರು ಬಲಗೈ ಪಣಕ್ಕೆ ಸೇರುತ್ತಾರೆ.[೪೪]

ಮತ್ತೊಂದು ಐತಿಹ್ಯದ ಪ್ರಕಾರ ಕಮ್ಮಾಳನನ್ನು ಕಂಚಿಯ ರಾಜ ನಿಷ್ಕಾರುಣವಾಗಿ ಕೊಲ್ಲುತ್ತಾನೆ. ಅವನಿಗೆ ಬಲಿಜ ಸಮುದಾಯದ ಮಹಿಳೆಯ ಹೊಟ್ಟೆಯಲ್ಲಿ ಒಬ್ಬ ಮಗ ಹಾಗೂ ಕಮ್ಮಾಳ ಸಮುದಾಯದ ಮಹಿಳೆಯ ಹೊಟ್ಟೆಯಲ್ಲಿ ಒಬ್ಬ ಮಗ, ಹೀಗೆ ಇಬ್ಬರು ಮಕ್ಕಳಿದ್ದು, ಅವರಿಬ್ಬರೂ ರಾಜನನ್ನು ಕೊಂದು ಆತನ ದೇಹವನ್ನು ಪಾಲು ಮಾಡಿಕೊಳ್ಳುತ್ತಾರೆ. ಕಮ್ಮಾಳ ತಾಯಿಯಲ್ಲಿ ಜನಿಸಿದ

ಮಗ ರಾಜನ ತಲೆಯನ್ನು ತಕ್ಕಡಿಯನ್ನಾಗಿ (weighing pan) ಮಾಡಿಕೊಂಡರೆ, ಬಲಿಜ ಸಮುದಾಯದ ಹೆಣ್ಣಿನಲ್ಲಿ ಹುಟ್ಟಿದ ಮಗ ರಾಜನ ಚರ್ಮ, ನರಗಳಿಂದ ಅಡಿಗಲ್ಲನ್ನು ಮಾಡಿದ. ಆದರೆ ಇಬ್ಬರಲ್ಲೂ ರಾಜನ ದೇಹದ ಉತ್ತಮ ಭಾಗ ಯಾರು ತೆಗೆದುಕೊಂಡರು ಎಂಬ ಬಗ್ಗೆ ಜಗಳ ಹುಟ್ಟಿಕೊಂಡಿತು. ಉಳಿದ ಜಾತಿಗಳಲ್ಲಿ ಕೆಲವು ಕಮ್ಮಾಳರ ಜೊತೆ ಸೇರಿಕೊಂಡರೆ, ಮತ್ತೆ ಕೆಲವು ಬಲಿಜರ ಜೊತೆ ಸೇರಿಕೊಂಡರು. ಈ ವ್ಯಾಜ್ಯ ಇಬ್ಬಣಗಳಿಗೆ ಕಾರಣವಾಯಿತು.[೪೫]

ಕರ್ನಾಟಕದಲ್ಲಿ ೧೮೯೧ರ ಮೈಸೂರು ಸೆನ್ಸಸ್ ರಿಪೋರ್ಟ್‌ನಲ್ಲಿ ಹೊಲೆಯ ಮತ್ತು ಮಾದಿಗರಂತಹ ಅಸ್ಪೃಶ್ಯ ಗುಂಪುಗಳಿಗೆ ಸೇರಿದ ಬಲಗೈ ಮತ್ತು ಎಡಗೈ ಜಾತಿಗಳ ಮೂಲವನ್ನು ಉಲ್ಲೇಖಿಸಲಾಗಿದೆ. ಅದರ ಪ್ರಕಾರ ಜಾಂಬವ ಮುನಿ ಶಿವನ ದೇವಸಭೆಗೆ ಪ್ರತಿನಿತ್ಯ ತಡವಾಗಿ ಬರುತ್ತಿರುತ್ತಾನೆ. ಒಂದು ದಿನ ಶಿವ ದೇವಸಭೆಗೆ ಏಕೆ ಯಾವಾಗಲೂ ತಡವಾಗಿ ಬರುತ್ತೀಯ ಎಂದು ಕೇಳಿದಾಗ, ತಾನು ತನ್ನ ಮಕ್ಕಳ ಬೇಕು ಬೇಡಗಳನ್ನು ನೋಡಿಕೊಂಡು ಬರಲು ತಡವಾಗುತ್ತಿದೆ ಎಂದು ಉತ್ತರಿಸುತ್ತಾನೆ. ಆಗ ಶಿವ ಕರುಣೆಯಿಂದ ಒಂದು ಕಾಮಧೇನುವನ್ನು ಜಾಂಬವಮುನಿಗೆ ನೀಡುತ್ತಾನೆ. ಒಮ್ಮೆ ಜಾಂಬವ ಮುನಿ ಮನೆಯಲ್ಲಿಲ್ಲದಿದ್ದಾಗ ಸಾಂಖ್ಯ ಮುನಿ ಜಾಂಬವಮುನಿ ಆಶ್ರಮಕ್ಕೆ ಬರುತ್ತಾನೆ. ಅಲ್ಲಿ ಜಾಂಬಮುನಿಯ ಮಗ ಯುಗಮುನಿ ಅವನಿಗೆ ಆದರಾತಿಥ್ಯಗಳಿಂದ ಸತ್ಕರಿಸುತ್ತಾನೆ. ಸಾಂಖ್ಯ ಮುನಿ ರುಚಿಯಿಂದ ಕೂಡಿದ ಹಾಲಿನ ಕೆನೆಯನ್ನು ಸವಿದು ಕೆನೆಯೇ ಇಷ್ಟು ರುಚಿಕರವಾಗಿದೆ, ಮಾಂಸ ಇನ್ನೆಷ್ಟು ರುಚಿಯಾಗಿರಬಹುದು ಎಂದು ಯೋಚಿಸಿ, ಹಸುವನ್ನು ಕೊಂದು ಅದರ ಮಾಂಸವನ್ನು ಸವಿಯೋಣವೆಂದು ಹುರಿದುಂಬಿಸುತ್ತಾನೆ. ಯುಗಮುನಿ ಒಪ್ಪದಿದ್ದಾಗ ತಾನೇ ಅದನ್ನು ಕೊಂದು, ಇತರರನ್ನೂ ಅದನ್ನು ತಿನ್ನಲು ಆಹ್ವಾನಿಸುತ್ತಾನೆ.

ಆಶ್ರಮಕ್ಕೆ ಬಂದ ಜಾಂಬವಮುನಿ ಆಶ್ರಮದಲ್ಲಿ ಎಲ್ಲರೂ ಪವಿತ್ರವಾದ ಹಸುವಿನ ಮಾಂಸ ಸವಿಯುತ್ತಿದ್ದುದನ್ನು ನೋಡಿ ಕೋಪಗೊಂಡು ಸಾಂಖ್ಯಮುನಿ ಹಾಗೂ ತನ್ನ ಮಗ ಯುಗಮುನಿ ಇಬ್ಬರನ್ನೂ ಶಿವನ ಆಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾನೆ. ಆದರೆ ಇಬ್ಬರೂ ಒಳಗೆ ಪ್ರವೇಶಿಸದೆ ಬಾಗಿಲಿನ ಎಡ ಮತ್ತು ಬಲ ಭಾಗಗಳಲ್ಲಿ ನಿಂತುಕೊಳ್ಳುತ್ತಾರೆ. ಶಿವ ಅವರಿಬ್ಬರನ್ನೂ ಚಂಡಾಲರಾಗುವಂತೆ ಶಾಪ ಕೊಡುತ್ತಾನೆ. ಸಾಂಖ್ಯಮುನಿ ಬಲಭಾಗದಲ್ಲಿ ನಿಂತಿದ್ದರಿಂದ ಅವನ ಸಂತತಿಯವರು ಬಲಗೈಯವರು ಅಥವಾ ಹೊಲೆಯರಾದರೆ, ಎಡಗಡೆ ನಿಂತಿದ್ದ ಯುಗಮುನಿ ಮತ್ತು ಆತನ ಪತ್ನಿ ಮಾತಂಗಿ ಸಂತತಿಯವರು ಎಡಗೈ ಎಂದರೆ, ಮಾದಿಗರಾದರು.[೪೬]

ತಮಿಳು ಮೂಲದ ಅಗಸ್ತ್ಯ ಪರಂಪರೆಯ ಪ್ರಕಾರ ಅಗಸ್ತ್ಯ ಕೃಷ್ಣನನ್ನು ಕಂಡು ೧೮ ಜನ ನಾಯಕರನ್ನು ಮತ್ತು ೧೮೦೦೦ ಜನ ಕೃಷಿಕರನ್ನು ತನ್ನೊಟ್ಟಿಗೆ ಕರೆದುಕೊಂಡು ಬಂದು ದಕ್ಷಿಣದಲ್ಲಿ ನೆಲೆಗೊಂಡ.[೪೭] ಮತ್ತೊಂದು ಐತಿಹ್ಯದ ಪ್ರಕಾರ ಕಾಡುಗೊಲ್ಲರೂ ಸಹ ತಮ್ಮ ಮನೆಯ ಹೆಣ್ಣುಮಕ್ಕಳನ್ನು

ನವಾಬನೊಬ್ಬ ಮದುವೆಯಾಗಲು ಬಯಸಿದಾಗ, ಅದಕ್ಕೊಪ್ಪದೆ ಹನ್ನೆರಡು ಜಾತಿ ಮತ್ತು ಹನ್ನೆರಡು ಕೈವಾಡದವರೊಂದಿಗೆ ದಕ್ಷಿಣಕ್ಕೆ ವಲಸೆ ಬಂದರಂತೆ.[೪೮] ಈ ಎರಡು ಐತಿಹ್ಯಗಳ ಹಿನ್ನೆಲೆಯಲ್ಲಿ ಹದಿನೆಂಟು ಜಾತಿಗಳು ಪೂರ್ವದಲ್ಲೆಂದೋ ಉತ್ತರ ಭಾರತದಿಂದ ದಕ್ಷಿಣ ಭಾರತದತ್ತ ಬಂದವೆಂಬ ಕ್ಷೀಣ ಅನುಮಾನಗಳನ್ನು ಬೆನ್ನೆತ್ತಿದ ಲಕ್ಷ್ಮೀಪತಿ ಕೋಲಾರರವರು, ಅದರ ಮೂಲವನ್ನು ಬೌದ್ಧ ಮತ್ತು ಜೈನ ಧರ್ಮದ ಸಮಕಾಲೀನ ಧರ್ಮವಾಗಿದ್ದ ಆಜೀವಿಕ ಪಂಥದೆಡೆಗೆ ಕೊಂಡೊಯ್ಯುತ್ತಾರೆ. ಉತ್ತರ ಭಾರತದಲ್ಲಿ ವ್ಯಾಪಾರೀ, ಕುಶಲಕರ್ಮಿ ವರ್ಗಗಳ ಬೆಂಬಲವನ್ನು ಅಪಾರವಾಗಿ ಪಡೆದಿದ್ದ ಆಜೀವಿಕ ಧರ್ಮ ಬಹುಶಃ ಗುಪ್ತರ ಕಾಲಕ್ಕೆ ಶೂದ್ರರ ದೈನ್ಯ ಸ್ಥಿತಿಯನ್ನು ಪಡೆಯಿತು. ಇಂಥ ಸಾಮಾಜಿಕ ನೆಲೆಯನ್ನು ಹೊಂದಿದ್ದ ಆಜೀವಿಕ ಧರ್ಮ ತುಂಬಾ ಸಹಜವಾಗಿಯೇ ದಕ್ಷಿಣದಲ್ಲೂ ಅದೇ ವರ್ಗವನ್ನು ಅರಸಿಬಂದಿದೆ. ಕನಿಷ್ಠ ಒಂದು ಸಾವಿರ ವರ್ಷಗಳವರೆಗೂ (ಕ್ರಿ.ಶ. ೪೪೬–ಕ್ರಿ.ಶ. ೧೩೪೬) ಚೋಳ ಮಂಡಲವನ್ನು ಕೇಂದ್ರವಾಗಿಟ್ಟುಕೊಂಡು, ದಕ್ಷಿಣ ಪೂರ್ವ ದಖ್ಖನಿನಾದ್ಯಂತ ಈ ಧರ್ಮ ಹರಡಿದೆ. ಆಜೀವಿಕ ಧರ್ಮ ಉತ್ತರದಲ್ಲಿ ಯಾವ ಯಾವ ಜನವರ್ಗಗಳ ಬೆಂಬಲವನ್ನು ಗಳಿಸಿತ್ತೋ ಆ ಮೂರು ಜನವರ್ಗಗಳ ಸಮಾಜವೇ ಚೋಳಮಂಡಲದಲ್ಲಿ ಪಣಕಟ್ಟಿನ ಸಮಾಜವಾಗಿರುವುದು.[೪೯]

ಎಂ. ಶ್ರೀನಿವಾಸ ಅಯ್ಯಂಗಾರರು ಪಣಕಟ್ಟುಗಳು ಚೋಳ ರಾಜ್ಯದಲ್ಲಿ ಮೊದಲಿಗೆ ಅಸ್ತಿತ್ವಕ್ಕೆ ಬಂದಿವೆಯೆಂದು ತಿಳಿಸುತ್ತಾ, ಹನ್ನೊಂದನೆಯ ಶತಮಾನದಲ್ಲಿ ರಾಜರಾಜಚೋಳ ಪರರಾಜ್ಯಗಳ ವಿರುದ್ಧದ ಯುದ್ಧದಲ್ಲಿ ತನಗೆ ಜಯವನ್ನು ತಂದಿತ್ತ ಸೈನಿಕರನ್ನೊಳಗೊಂಡ ಭಾಗವನ್ನು ಬಲಗೈ ಸೈನ್ಯವೆಂದು (ವಲಂಗೈ ವೇಲಕ್ಕಾರರ್) ಹಾಗೂ ತನ್ನ ವಿರುದ್ಧ ಹೋರಾಡಿ ಪರಾಜಿತರಾಗಿ, ಶರಣಾಗತರಾಗಿದ್ದ ಪಾಂಡ್ಯ, ತೆಲುಗು, ಕರ್ನಾಟಕದ ಹೊಸ ಸೈನಿಕರನ್ನೊಳಗೊಂಡ ಗುಂಪನ್ನು ಎಡಗೈ ಸೈನ್ಯವೆಂದು ವಿಭಾಗಿಸುತ್ತಾನೆ ಎಂದು ಅಭಿಪ್ರಾಯಪಡುತ್ತಾ, ಈ ಎಲ್ಲಾ ಅಂಶಗಳು ಬಲಗೈ ಮತ್ತು ಎಡಗೈ ಪಣಕಟ್ಟುಗಳ ಮೂಲ ನಿಸ್ಸಂಶಯವಾಗಿ ಸೈನಿಕ ಅಥವಾ ರಾಜಕೀಯ ಸ್ವರೂಪವನ್ನಾಧರಿಸಿ ರೂಪುಗೊಂಡಿದೆಯೆಂದು ಅಭಿಪ್ರಾಯಪಡುತ್ತಾರೆ.[೫೦] ಅರ್ಜುನ್ ಅಪ್ಪಾದೊರೈರವರು ಸಹ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಅವರು ಚೋಳರ ಅವಧಿಯ ಸೈನ್ಯದ ವರ್ಗೀಕರಣದ ವಿಧಾನವೇ ಈ ಪಣಕಟ್ಟುಗಳಿಗೆ ಕಾರಣವೆಂದು ಅಭಿಪ್ರಾಯಪಡುತ್ತಾರೆ.[೫೧] ಹನ್ನೊಂದನೆಯ ಶತಮಾನದಲ್ಲಿ ರಾಜರಾಜಚೋಳ ವೆಂಗಿನಾಡು, ರಟ್ಟಪಾಡಿ, ಗಂಗವಾಡಿ, ಕೊಲ್ಲಂ, ಕಳಿಂಗ, ಇಳಂ, ಮಧುರೈ ಮತ್ತಿತ್ತರ ರಾಜ್ಯಗಳ ಮೇಲೆ ಆಕ್ರಮಣ ಮಾಡಿದ ಈ ಸಂದರ್ಭದಲ್ಲಿ ಚೋಳಮಂಡಲಂನಿಂದ ಸ್ವಂತ ಪಡೆಯನ್ನು ಸೃಷ್ಟಿಸಿದ. ಎರಡನೆಯ ಪಡೆಯನ್ನು ಪಾಂಡ್ಯ, ತೆಲುಗು, ಕರ್ನಾಟಕದ ರಾಜ್ಯಗಳ ಸೈನಿಕರಿಂದ ಸೃಷ್ಟಿಸಿದ. ವೇದನ್, ನಾಟ್ಟಂ, ವಲಯನ್, ಪರಿಯಾರ್ ಜಾತಿಗಳಿಂದ ರಚಿಸಿದ ಪಡೆ ಬಲಗೈ ಸೈನ್ಯವೆಂದು ಮತ್ತು ಪಲ್ಲನ್, ಪಲ್ಲ, ಮಾದಿಗ, ಬೇಡರಿಂದ ರಚಿಸಿದ ಪಡೆಯು ಎಡಗೈ ಸೈನ್ಯವೆಂದು ಕರೆಯಲಾಯಿತು.

ಐತಿಹ್ಯಗಳ ಪ್ರಕಾರ ಅಧಿದೇವತೆ ಕಾಳಿಯ ಆದೇಶದಿಂದ ಬಲಗೈ ಮತ್ತು ಎಡಗೈ ಗುಂಪುಗಳು ಜನ್ಮ ತಳೆದವು. ಕಾಂಚೀಪುರದಲ್ಲಿ ವಲಂಗೈ ಮಂಟಪ್ಪಂ ಮತ್ತು ಇಡಂಗೈ ಮಂಟಪ್ಪಂ ಎಂಬ ಹೆಸರಿನ ಎರಡು ಪಂಗಡಗಳಿಗೆ ಸೇರಿದ ವಿಶೇಷ ಮಂಟಪಗಳು ಇಂದಿಗೂ ಸಹ ಅಸ್ತಿತ್ವದಲ್ಲಿವೆ.[೩೨] ಚಂಗಲ್ಪಟ್ಟು ಡಿಸ್ಟ್ರಿಕ್ಟ್ ಮ್ಯಾನ್ಯುಯೆಲ್‌ನ ಪ್ರಕಾರ ಕರಿಕಾಲ ಚೋಳ ೯೮ ಬುಡಕಟ್ಟುಗಳಿಗೆ ಅವರ ಹಬ್ಬ ಹರಿದಿನ ಹಾಗೂ ಜಾತಕರ್ಮಾದಿಗಳಲ್ಲಿ ವಿಶೇಷವಾಗಿ ಬಳಸುವುದಕ್ಕಾಗಿ ಧ್ವಜಪತಾಕಾದಿಗಳನ್ನು ಹಾಗೂ ವಾದ್ಯಗಳನ್ನು ನೀಡಿ ಅವರನ್ನು ಎರಡು ಬಣಗಳನ್ನಾಗಿ ವಿಂಗಡಿಸುತ್ತಾನೆ.[೩೩]

ಬ್ರೆಂಡಾ ಬೆಕ್ (Brenda Beck) ರವರು ಎಡಗೈ ಮತ್ತು ಬಲಗೈ ಪದಗಳ ಬಗ್ಗೆ ಚರ್ಚಿಸುತ್ತಾ, ಇದನ್ನು ಶಿವನ ಅರ್ಧನಾರೀಶ್ವರ ಕಲ್ಪನೆಯ ಹಿನ್ನೆಲೆಯಲ್ಲಿ ನಿರ್ವಚಿಸುತ್ತಾರೆ. ಎಡಗೈ ಮತ್ತು ಬಲಗೈಗಳು ಸಾಮಾಜಿಕ ಶರೀರದ ಸಾಂಕೇತಿಕ ಭಾಗಗಳೆಂದು ಅರ್ಥೈಸುತ್ತಾರೆ. ಭಾರತೀಯ ಪರಂಪರಾಗತ ನಂಬಿಕೆಯ ಪ್ರಕಾರ ಮಾನವ ಶರೀರವನ್ನು ಸ್ಪಷ್ಟವಾಗಿ ಎರಡು ಲಿಂಗಗಳಾಗಿ ಎಂದರೆ ಎಡಭಾಗ ಹೆಣ್ಣೆಂದೂ, ಬಲಭಾಗ ಗಂಡೆಂದು ಪರಿಗಣಿಸಲಾಗಿತ್ತು. ಒಂದೇ ಶರೀರದಲ್ಲಿ ಸ್ತ್ರೀ ಮತ್ತು ಪುರುಷತ್ವವನ್ನು ಪ್ರತಿನಿಧಿಸುವ ಶಿವನನ್ನು ಅರ್ಧನಾರೀಶ್ವರನೆಂದು ಕರೆಯಲಾಗುತ್ತದೆ. . . . ಸಾಂಪ್ರದಾಯಿಕವಾಗಿ, ಸ್ತ್ರೀ ಪುರುಷರಿಬ್ಬರೂ ಪಾಲ್ಗೊಳ್ಳುವ ಸಂದರ್ಭದಲ್ಲಿ ಮಹಿಳೆಯರಿಗೆ ಎಡಗಾಲು, ಕೈಯನ್ನು ಬಳಸಲು ಸೂಚಿಸಿದರೆ, ಗಂಡಸರಿಗೆ ಬಲಗೈಯನ್ನು ಬಳಸಲು ಸೂಚಿಸುತ್ತಿದ್ದರು.[೩೪]

ಇರ್ಫಾನ್ ಹಬೀಬ್‌ರವರು ಧರ್ಮ ಮತ್ತು ವೃತ್ತಿಯ ಆಧಾರದ ಮೇಲೆ ಈ ಬಣಗಳನ್ನು ವಿಂಗಡಿಸುತ್ತಾರೆ. ಅವರ ಪ್ರಕಾರ ಬಲಗೈ ಜಾತಿಗಳು ಮೂಲಭೂತವಾಗಿ ವೈಷ್ಣವರಾಗಿದ್ದು, ಕೃಷಿಕರಾಗಿರುತ್ತಾರೆ ಮತ್ತು ಸ್ಥಳೀಯವಾಗಿ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುತ್ತಾರೆ. ಎಡಗೈ ವರ್ಗಗಳು ಬಹುತೇಕ ಶೈವರಾಗಿದ್ದು, ಕುಶಲಕರ್ಮಿ ವರ್ಗದವರಾಗಿದ್ದು, ಕೃಷಿಯೇತರ ಸರಕು ಸಾಮಗ್ರಿಗಳ ಉತ್ಪಾದಕರು ಹಾಗೂ ಮಾರಾಟಗಾರರಾಗಿರುತ್ತಾರೆ.[೩೫]

ಕರ್ನಾಟಕದ ಎಲ್ಲ ಭಾಗಗಳಲ್ಲಿ ಪಣಕಟ್ಟು ಸಮಾಜ ಕಂಡುಬರುವುದಿಲ್ಲ. ತಮಿಳುನಾಡಿಗೆ ಹೊಂದಿಕೊಂಡ ಕರ್ನಾಟಕದ ಭೂಭಾಗಗಳಲ್ಲಿ ಹಾಗೂ ಕರ್ನಾಟಕದ ದಕ್ಷಿಣ ಭಾಗಗಳಲ್ಲಿ ಮಾತ್ರ ಪಣಕಟ್ಟು ಸಮಾಜವಿದ್ದ ಬಗ್ಗೆ ತಿಳಿದುಬರುತ್ತದೆ. ಐತಿಹ್ಯಗಳ ಪ್ರಕಾರ ಕಾಳಿ ತನ್ನ ಬಲಗೈಯಲ್ಲಿ ಕೆಲವು ಜಾತಿಗಳನ್ನು, ತನ್ನ ಎಡಗೈಯಲ್ಲಿ ಕೆಲ ಜಾತಿಗಳನ್ನು ಇಟ್ಟುಕೊಂಡಿದ್ದರಿಂದ ಅವು ಬಲ ಮತ್ತು ಎಡ ಜಾತಿಗಳಾಗಿವೆ.[೩೬]

ಕಂಚಿ ಕಾಳಿಯ ಐತಿಹ್ಯವನ್ನು ವಿವೇಚಿಸುತ್ತಾ ಲಕ್ಷ್ಮೀಪತಿ ಕೋಲಾರರವರು "ಕಂಚಿ ಕಾಳಿಯ ಎಡಗೈ ಮತ್ತು ಬಲಗೈಗಳೇ ಪಣಕಟ್ಟು ಸಮಾಜದ ಮೂಲವೆಂಬ ನಂಬಿಕೆಯ ಮಾತನ್ನು ಐತಿಹ್ಯದ ತೆಕ್ಕೆಯಿಂದ ಬಿಡಿಸಿ ನೋಡಿದಾಗ ಏನಿಲ್ಲವಾದರೂ–ಎಡಗೈ, ಬಲಗೈಗಳ ಪಣಸಮಾಜದ ಹುಟ್ಟಿಗೆ

ಕಾಳಿಕಾ ದೇವಿಯ ಶಕ್ತಿ ಆರಾಧನಾ ವಿಧಾನಗಳೇ ಕಾರಣವಾಗಿರಬಹುದೆಂಬ ಅಂಶವಾದರೂ ಸ್ಪಷ್ಟವಾಗುತ್ತದೆ. ಬಲಗೈನ ಉಪಾಸಕರು ಕೇವಲಮಾಂತ್ರಿಕ ವಿದ್ಯೆಗಳು ಮತ್ತು ಆಚರಣೆಗಳಿಗೆ ಸೀಮಿತವಾಗಿ ಶ್ರೇಷ್ಠರಾದರೆ, ಎಡಗೈನ ಉಪಾಸಕರು ರಕ್ತಬಲಿ, ಆವೇಗ, ಕುಣಿತ ಮತ್ತು ಮಿಥುನಗಳ ಕ್ರೂರ ಹಾಗೂ ಅಸಭ್ಯ ಆಚರಣೆಗಳಿಂದ ಕನಿಷ್ಠರಾಗಿ ಪರಿಗಣಿಸಲ್ಪಟ್ಟಂತಿದೆ[೨೭] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಅವರು ಬಲಗೈನ ಹೊಲೆಯ ಮಾಸ್ತೀಕರು ಮತ್ತು ಎಡಗೈನ ಮಾದಿಗ ಮಾಸ್ತೀಕರ ಆಚರಣೆ ಮತ್ತು ಆರಾಧನಾ ವಿಧಾನಗಳ ಹಿನ್ನೆಲೆಯಲ್ಲಿ ಈ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಈ ಎರಡೂ ಪಣಕಟ್ಟುಗಳಲ್ಲಿ ಮಾದಿಗ ಮಾಸ್ತೀಕ ಹಾಗೂ ಹೊಲೆಯ ಮಾಸ್ತೀಕರನ್ನು ಹೊರತುಪಡಿಸಿ ಇನ್ನೂ ಹಲವಾರು ಪಣಕಟ್ಟುಗಳು ಇರುವುದರಿಂದ ಇದನ್ನು ಸಾರ್ವತ್ರಿಕಗೊಳಿಸಿ, ಆರಾಧನಾ ಮೂಲದಿಂದ ಎಡ–ಬಲ ಪಣಸಮಾಜ ಹುಟ್ಟಿತೆಂಬ ಅಭಿಪ್ರಾಯ ನಂಬಲರ್ಹ ಆಧಾರವಲ್ಲವೆನಿಸುತ್ತದೆ.

ಕಂಚಿ ಪುರಾಣದ ಪ್ರಕಾರ ಕಾರ್ತ್ಯವೀರನು ಜಮದಗ್ನಿ ಮಹರ್ಷಿಯನ್ನು ಕೊಂದ ನಂತರ, ಜಮದಗ್ನಿ ಮಹರ್ಷಿಯ ಮಗ ಪರಶುರಾಮ ಭೂಮಂಡಲದಲ್ಲಿರುವ ಕ್ಷತ್ರಿಯರನ್ನೆಲ್ಲ ಸಂಹಾರ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಅದರಂತೆ ಕಾರ್ತ್ಯವೀರ್ಯನನ್ನು ಸಂಹರಿಸಿ, ಅವರ ಮಕ್ಕಳಾದ ಇಂದ್ರಸೇನ, ಭದ್ರಸೇನರರನ್ನು ಸಂಹರಿಸಬೇಕೆಂದು ಅವರ ಬೆನ್ನತ್ತುತ್ತಾನೆ. ಕಾರ್ತ್ಯವೀರ್ಯನ ಮಕ್ಕಳು ಕಲ್ಯಾಣ ಪಟ್ಟಣದ ತ್ವಷ್ಟಬ್ರಹ್ಮನಿಗೆ ಶರಣಾಗತರಾಗಿ ರಕ್ಷಿಸುವಂತೆ ಬೇಡುತ್ತಾರೆ. ಆ ವೇಳೆಗೆ ಅಲ್ಲಿಗೆ ಬಂದ ಪರಶುರಾಮ ಆ ಮಕ್ಕಳನ್ನು ತನಗೆ ಒಪ್ಪಿಸುವಂತೆ ಬೇಡುತ್ತಾನೆ. ಆ ವೇಳೆಗೆ ಅಲ್ಲಿಗೆ ಬಂದ ಅಶ್ವತ್ಥಾಮ, ಕೃಪ, ಹನುಮ, ವಿಭೀಷಣರ ಬುದ್ಧಿಮಾತಿನಿಂದ ಹಾಗೂ ಮಕ್ಕಳ ಪರಾಕ್ರಮದಿಂದ ತಾಮಸನಾದ ಪರಶುರಾಮ ಬಾಲಕರ ರಕ್ಷಣೆಗೆ ಇಷ್ಟೆಲ್ಲಾ ಲೋಕಗಳಿದ್ದರೆ, ಅವರನ್ನು ಬಿಡುವುದೇ ಸರಿಯೆಂದು ಭಾವಿಸಿ ಹಿಂತಿರುಗುತ್ತಾನೆ.

ಇಂದ್ರಸೇನ, ಭದ್ರಸೇನರು ತ್ವಷ್ಟಬ್ರಹ್ಮನ ಚರಣಗಳಿಗೆ ವಂದಿಸಿ ನಮಗೆ ಮುಂದಿನ ದಾರಿ ತೋರಿಸುವ ಕೃಪೆ ಮಾಡಬೇಕೆಂದು ಕೋರಿದಾಗ, ತ್ವಷ್ಟಬ್ರಹ್ಮನು ಅವರನ್ನು ಕಾಳಿಕಾದೇವಿಯ ಬಳಿಗೆ ಕರೆದೊಯ್ದು, ದೇವಿಗೆ ನಮಸ್ಕಾರ ಮಾಡಿಸಿ, ಕಂಚಿನ ಉಪಕರಣಗಳನ್ನು ತಯಾರಿಸಿ ಮಾರುತ್ತಾ, ಐವತ್ತಾರು ದೇಶಗಳಲ್ಲಿ ಜನರಿಗೆ ಅವನ್ನು ತಲುಪಿಸುವ ಕೆಲಸ ಮಾಡಿಕೊಂಡಿರೆಂದು ಹೇಳಿ, ಐದು ಲೋಹಗಳಿಗೆ ಸುಂಕವೆಂಬುದು ಛಪ್ಪನ್ನಾರು ದೇಶಗಳಲ್ಲೂ ಇಲ್ಲ ಎಂದು ಹೇಳಿ ಕಳಿಸಿದ. ಅದರಂತೆ ಇಂದ್ರಸೇನ, ಭದ್ರಸೇನರು ಬಗೆ ಬಗೆಯ ಲೋಹದ ವಸ್ತುಗಳನ್ನು ತಯಾರಿಸಿ ದೇಶ ಸಂಚಾರ ಮಾಡುತ್ತಾ ಮಾರಾಟ ಮಾಡುವ ಕೆಲಸವನ್ನು ನಿರ್ವಹಿಸಿಕೊಂಡು ಬರುತ್ತಿರುತ್ತಾರೆ. ಹೀಗೆಯೇ ದೇಶಸಂಚಾರ ಮಾಡಿಕೊಂಡು, ತಮ್ಮ ವಸ್ತುಗಳನ್ನು ಮಾರಾಟ ಮಾಡಿಕೊಂಡು ಬರುವಾಗ ಆಚಾರ್ಯ ಶಂಕರರು ಭೇಟಿಯಾಗಿ "ಚೋಳನು ಆಳುತ್ತಿರುವ ದೇಶದಲ್ಲಿ ಕಂಚು ಸ್ವಲ್ಪವೂ ಇಲ್ಲ. ಮಕ್ಕಳು ಮರದ ಬಟ್ಟಲುಗಳಲ್ಲಿ ಊಟ ಮಾಡುತ್ತಾರೆ. ನೀವು ಅಲ್ಲಿಗೆ ಬಂದರೆ ಬಂಗಾರದ ಸಮ ಹಣ

ಕೊಡುತ್ತಾರೆಂದು" ಹೇಳಿದಾಗ, ಸಹೋದರರು ತಮ್ಮ ವಸ್ತುಗಳನ್ನು ತೆಗೆದುಕೊಂಡು ಕಂಚಿಗೆ ಬರುತ್ತಾರೆ. ಕಂಚಿಯಲ್ಲಿ ಚೋಳ ಭೂಪಾಲನ ಪುತ್ರಿ ದರ್ಪಣವನ್ನು ನೋಡಿ ಆಕರ್ಷಿತಳಾಗಿ ಅದು ತನಗೆ ಬೇಕೆಂದು ಕೇಳುತ್ತಾಳೆ. ದರ್ಪಣವನ್ನು ರಾಜನಿಗೆ ಕೊಟ್ಟು ಅದರ ಬೆಲೆ ಮೂರು ಲಕ್ಷ ಹೊನ್ನೆಂದು ಹೇಳಿದಾಗ, ರಾಜ ಅದಕ್ಕೆ ತಗಲುವ ಸುಂಕವನ್ನು ಕೊಟ್ಟು ಉಳಿದ ಹಣವನ್ನು ಕೊಂಡೊಯ್ಯುವಂತೆ ಹೇಳುತ್ತಾನೆ.

ಶಿಲ್ಪಿಗಳು "ಶಿವನ ಅಣತಿಯಂತೆ ದೇವಶಿಲ್ಪಿ ವಿಶ್ವಕರ್ಮನು ಪಾರ್ವತಿಗಾಗಿ ದರ್ಪಣವನ್ನು ನಿರ್ಮಿಸಿಕೊಟ್ಟಿದ್ದರಿಂದ, ಸಂತುಷ್ಟನಾದ ಶಿವ ಲೋಹಕ್ಕೆ ಸುಂಕವೆಂಬುದು ಧರೆಯಲ್ಲಿ ಇರುವುದಿಲ್ಲ ಎಂಬ ವರವನ್ನು ಕೊಟ್ಟಿದ್ದಾನೆ. ತ್ವಷ್ಟಬ್ರಹ್ಮ ಕರುಣೆ ತೋರಿ ಜನರ ಸುಖಸೌಕರ್ಯಗಳಿಗಾಗಿ ಲೋಹವೃತ್ತಿ ಈ ಭೂಮಿಯಲ್ಲಿ ನೆಲೆಗೊಳ್ಳುವಂತೆ ವ್ಯವಸ್ಥೆ ಮಾಡಿದ್ದಾನೆ. ಅದಕ್ಕಾಗಿ ಸುಂಕವೆಂಬುದು ಲೋಹಗಳಿಗೆ ಇಲ್ಲ. ಈ ಮೊದಲು ಆಳಿದ ಹದಿನಾರು ರಾಜರೂ ಯಾರು ಒಂದು ಕಾಸಿನ ಸುಂಕವನ್ನು ಕೇಳಿದ್ದಿಲ್ಲ. ಈಗ ಭಂಗ ತರಬೇಡಿ. ಅಲ್ಲದೆ, ಕಾಂಸ್ಯ ಶಿಲ್ಪಿಗಳೇ ಹರನಿಗೆ ಪಾಶುಪತಾಸ್ತ್ರ, ಬ್ರಹ್ಮನಿಗೆ ಕಂಠ, ಹರಿಗೆ ಚಕ್ರ, ಇಂದ್ರನಿಗೆ ವಜ್ರಾಯುಧ ಮುಂತಾಗಿ ಮೂವತ್ಮೂರು ಕೋಟಿ ದೇವತೆಗಳಿಗೆ ಬೇಕಾದ ಆಯುಧಗಳನ್ನು, ಭೂಮಿಯಲ್ಲಿನ ಅರಸರಿಗೆ ರಾಜ್ಯ ರಕ್ಷಣೆಗೆ ಬೇಕಾದ ಮೂವತ್ತೈದು ಆಯುಧಗಳನ್ನು ಮಾಡಿಕೊಟ್ಟಿದ್ದಾರೆ. ಹೀಗೆ ದೇವತೆಗಳಿಂದ, ಪೃಥ್ವೀಪಾಲಕರಿಂದ ಪಾರಂಪರಿಕವಾಗಿ ಬಂದಿರುವ ಈ ಗೌರವವನ್ನು ಮುರಿಯುವುದು ಸರಿಯಲ್ಲವೆಂದು ಈ ಪ್ರಪಂಚದಲ್ಲಿ ಪಂಚಲೋಹಗಳಿಗೆ ಸುಂಕ ಉಂಟೆ" ಎಂದು ಹೇಳಿ, ಸುಂಕ ನೀಡಲು ನಿರಾಕರಿಸಿದಾಗ, ಇಬ್ಬರ ನಡುವೆ ಘೋರಯುದ್ಧವಾಗಿ ಅದರಲ್ಲಿ ಚೋಳಭೂಪಾಲ ಪರಾಜಿತನಾಗುತ್ತಾನೆ.

ಚೋಳರಾಜ ಸೋತರೂ ಸಹ ಸಹೋದರರಿಬ್ಬರನ್ನು ಮೋಸದಿಂದ ಕಾರಾಗೃಹದಲ್ಲಿರಿಸಿ ಸುಂಕ ನೀಡಿದರೆ ಬಿಡುಗಡೆ ಮಾಡುವುದಾಗಿ ಹೇಳಿದರೂ, ಸಹ ಸುಂಕ ಕೊಡುವುದಿಲ್ಲವೆಂದು ಹೇಳಿದಾಗ, ಅವರನ್ನು ರುದ್ರಭೂಮಿಗೆ ಕರೆದೊಯ್ದು, ಅವರ ಶಿರಗಳನ್ನು ತರಿಯಲು ಕತ್ತಿ ಎತ್ತಿದರೆ ಕತ್ತಿಗಳು ಮುರಿದುಹೋಗುತ್ತವೆ. ಆಯುಧಗಳೆಲ್ಲಾ ನಿಷ್ಪ್ರಯೋಜಕವಾಗುತ್ತವೆ. ಚೋಳ ಭೂಪಾಲ ಅವರೇ ಮಾಡಿಕೊಟ್ಟಿರುವ ಆಯುಧಗಳಿಂದ ಅವರ ಹತ್ಯೆ ಸಾಧ್ಯವಿಲ್ಲವೆಂದು ಯೋಚಿಸಿ, ವೇದ ಪುರಾಣ-ಶಾಸ್ತ್ರ-ಆಗಮಗಳ ರಹಸ್ಯ ಅರಿತುಕೊಂಡಿರುವ ಜ್ಞಾನಿಗಳೊಂದಿಗೆ ಚರ್ಚಿಸಿದಾಗ, ಅವರು ಮೂವತ್ತೈದು ಆಯುಧಗಳ ಹೊರಗಿರುವ ಆಯುಧವೆಂದು ಪರಿಗಣಿತವಾಗದಿರುವ ಆಯುಧದಿಂದ ಅವರನ್ನು ಕೊಲ್ಲಬಹುದು ಎಂದು ಸಲಹೆ ನೀಡಿದಾಗ, ನೆಲವನ್ನು ಹರಡುವ ಕುಂಟೆ ಆಯುಧವಲ್ಲ ಎಂದು ತಿಳಿದುಕೊಂಡು ಶಿಲ್ಪಿಗಳನ್ನು ನೆಲದಲ್ಲಿ ಶಿರದವರೆಗೆ ಹೂತು ಕುಂಟೆ ಹೊಡೆದು ತಲೆಗಳನ್ನು ಕತ್ತರಿಸುತ್ತಾರೆ. ಗಗನಮಾರ್ಗವಾಗಿ ಶಿಲ್ಪಿಗಳ ತಲೆಗಳ ಹೋಗುವಾಗಲೂ 'ಸುಂಕವನ್ನು ಕೊಡುವುದಿಲ್ಲ' ಎಂದೇ ಘೋಷಣೆ ಕೂಗುತ್ತಿದ್ದವು.

ಕಂಚುಗಾರನಾದ ಧರ್ಮಪಾಲನೆಂಬುವವನು ಆಚಾರ್ಯ ಶಂಕರನನ್ನು ಭೇಟಿ ಮಾಡಿ ಕಂಚಿಯ ವಿಷಯ ತಿಳಿದುಕೊಂಡು ಕಾಳಿಕಾದೇವಿ ಗುಡಿಗೆ ಬಂದು ಪ್ರಾರ್ಥಿಸಿದ. ದೇವಿ ಪ್ರತ್ಯಕ್ಷಳಾಗಿ ಸತ್ತ ಶಿಲ್ಪಿಗಳನ್ನು ಬದುಕಿಸುವುದಾಗಿ ತಿಳಿಸಿ, ಕಂಚಿಯನ್ನು ಸುಟ್ಟು ಹಾಳುಗೆಡುವುವಂತೆ ಹೇಳುತ್ತಾಳೆ.

ಧರ್ಮಪಾಲ ಕಂಚಿ ಪ್ರವೇಶಿಸಿ, ಶಿಲ್ಪಗಳ ಗುಡಾರಗಳನ್ನು ಎತ್ತಿ ನಿಲ್ಲಿಸಿ, ಕೈಯಲ್ಲಿರುವ ತಟ್ಟೆಗಳನ್ನು ಆಕಾಶಕ್ಕೆ ಎಸೆಯತೊಡಗಿದ. ಮೇಲಕ್ಕೇರಿದ ತಟ್ಟೆಗಳು ಜನರನ್ನು ಕೊಲ್ಲಲಾರಂಭಿಸಿದವು. ಚೋಳರಾಜ ಧರ್ಮಪಾಲನ ಮೇಲೆ ಯುದ್ಧ ಸಾರಿದ. ಆದರೆ ಸೋತುಹೋದ. ರಾಜ ನಾರದ ಮುನಿಯನ್ನು ಸ್ಮರಿಸಿ ಪರಿಹಾರ ಕೇಳಿದಾಗ, ನಾರದ ಮುನಿ 'ನೀನು ಬಾಡಿದ ಮಾಲೆ ಧರಿಸಿ, ಕಂಬಳಿಯನ್ನು ಹೊದ್ದು, ಧರ್ಮಪಾಲನ ಪಾದಗಳನ್ನು ಹಿಡಿದು ಕ್ಷಮೆ ಕೋರುವುದೊಂದೇ ದಾರಿ' ಎಂದು ಹೇಳಿದಾಗ, ರಾಜ ತನ್ನ ಪರಿವಾರದೊಡನೆ ಧರ್ಮಪಾಲನ ಬಳಿ ಹೋಗಿ ಕ್ಷಮೆ ಕೋರಿದ. ಧರ್ಮಪಾಲ ರಾಜನನ್ನು ಕ್ಷಮಿಸಿ, ರಾಜನಿಂದ ಛಪ್ಪನ್ನಾರು ದೇಶಗಳಲ್ಲಿ ಪಂಚಲೋಹಕ್ಕೆ ಸುಂಕ ಇಲ್ಲ ಎಂಬ ರಾಯಸವನ್ನು ಕಾಮಾಕ್ಷಿದೇವಿಯ ಮುಂದೆಯೇ ಲೋಹದ ಮೇಲೆ ಶಿಲೆಗಳ ಮೇಲೆ ಶಾಸನವನ್ನು ಬರೆಸಿಕೊಳ್ಳುತ್ತಾನೆ. ಬದುಕಿದ ಶಿಲ್ಪಿಗಳಲ್ಲಿ ಭದ್ರಸೇನನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತಾನೆ.[೫೮]

ಕಂಚಿಪುರಾಣದ ಮತ್ತೊಂದು ಕಥನದ ಪ್ರಕಾರ[೫೯] ಷಣ್ಬುಲಿ ಚೋಳ ಮಹಾರಾಜನ ಕಾಲದಲ್ಲಿ ವಿಶ್ವಕರ್ಮ ಬ್ರಾಹ್ಮಣರು ಆಸ್ಥಾನದಲ್ಲಿ ಪ್ರಮುಖ ಸ್ಥಾನಗಳನ್ನು ಹೊಂದಿದ್ದರು. ಚೋಳರಾಜ ತನ್ನ ಮಗ ಪಾಲನ ಚೋಳನಿಗೆ ಪಟ್ಟಾಭಿಷೇಕ ಮಾಡಬೇಕೆಂದುಕೊಂಡಾಗ, ಅರಮನೆಯ ಉಪಾಧ್ಯಾಯನಾಗಿದ್ದ ಸಪ್ತಾರ್ಷೇಯ ಬ್ರಾಹ್ಮಣ ವ್ಯಾಸ ಎಂಬುವವನು ಷಣ್ಬುಲಿ ಚೋಳ ರಾಜನ ಔರಸ ಪುತ್ರ ಕರ್ಪಕ ಚೋಳನನ್ನು ಪ್ರಚೋದಿಸಿ, ರಾಜನನ್ನು ಬೇಟೆಗೆ ಕರೆದುಕೊಂಡು ಹೋಗಿ ಕೊಂದು, ಅವನ ಮಗ ಪಾಲನ ಚೋಳನನ್ನು ಸೇರೆಯಲ್ಲಿಟ್ಟು ಕರ್ಪಕ ಚೋಳನಿಗೆ ಪಟ್ಟಾಭಿಷೇಕ ಮಾಡಿದ.

ಈ ಸಂದರ್ಭದಲ್ಲಿ ವ್ಯಾಸ, ಶಿಲ್ಪಿಗಳನ್ನು ನಗೆಪಾಟಲಿಗೆ ಗುರಿಯಾಗುವಂತೆ ಮಾಡಬೇಕೆಂದು ಪ್ರಚೋದಿಸಿ, ಶಿಲ್ಪಿಗಳನ್ನು ಕೇವಲ ಶಿಲ್ಪವೃತ್ತಿಗಳಿಗೆ ಮಾತ್ರವೇ ಮೀಸಲಾಗಿರಬೇಕೆಂದು ಹೇಳಿ, ಆಡಳಿತದ ಎಲ್ಲ ಹುದ್ದೆಗಳಿಂದಲೂ ಅವರನ್ನು ತಪ್ಪಿಸಿ, ಅರಮನೆಯಲ್ಲಿ ಅವರಿಗೆ ಸ್ಥಾನವಿಲ್ಲದಂತೆ ಮಾಡಿದ. ವಿಶ್ವಕರ್ಮ ಬ್ರಾಹ್ಮಣರು ಮಾಡುತ್ತಿದ್ದ ವೇದಾಧ್ಯಯನ, ಪೌರೋಹಿತ್ಯವನ್ನೆಲ್ಲಾ ನಿಲ್ಲಿಸಿದ. ಕೇವಲ ಶಿಲ್ಪವೃತ್ತಿಯನ್ನು ಆಶ್ರಯಿಸಿದ್ದ ಶಿಲ್ಪಿಗಳನ್ನು ಮತ್ತೂ ನಿರಾಶ್ರಿತರನ್ನಾಗಿ ಮಾಡುವ ಉದ್ದೇಶದಿಂದ ಇವರನ್ನು ಕೃಷಿ ಕೂಲಿಗಳೆಂದು ಪರಿಗಣಿಸಿ ಇವರಿಗೆ ವಾರ್ಷಿಕವಾಗಿ ಕಾಳು ಕೊಟ್ಟರೆ ಸಾಕು, ಕೂಲಿ ಕೊಡಬೇಕಾಗಿಲ್ಲ ಎಂದು ಹೇಳಿ, ಆಯ ಪದ್ಧತಿಯ ಮೂಲಕ ಅವರನ್ನು ಕೃಷಿಕರ ಗುಲಾಮರನ್ನಾಗಿ ಮಾಡಿದ. ಶಿಲ್ಪಿಗಳು ಕೆಲಸ ಮಾಡುತ್ತಿದ್ದ ಎಲ್ಲ ವಿಭಾಗಗಳಲ್ಲೂ ಬ್ರಾಹ್ಮಣರು ಅವರ ಮೇಲಿನ ಉಸ್ತುವಾರಿ ಅಧಿಕಾರಿಗಳಾದರು. ಸಾಧ್ಯವಿರುವ ಕಡೆಗಳಲ್ಲೆಲ್ಲಾ ಶಿಲ್ಪಿಗಳನ್ನು ಕೆಲಸದಿಂದ

ತೆಗೆದುಹಾಕಲಾಯಿತು. ಆಡಳಿತದಿಂದ ದೂರವಿರಿಸಲ್ಪಟ್ಟ ಶಿಲ್ಪಿಗಳಿಗೆ ತಮ್ಮ ವೃತ್ತಿಯ ವಿನಾ ಬೇರೆಯ ಜೀವನಾಧಾರವೇ ಇಲ್ಲದಂತಾಗಿ, ಆಯಗಾರರೆಂದು ಕರೆಸಿಕೊಂಡು, ಕೃಷಿಕರ ಗುಲಾಮರಾಗಿ ಅವರು ಹೇಳಿದಾಗಲೆಲ್ಲಾ ಹೋಗಿ ಕೆಲಸ ಮಾಡಿ ಬರುತ್ತಿದ್ದರು. ಇದು ರೈತರಿಗೆ ವರಪ್ರದವಾಗಿದೆ ಎಂಬ ಭ್ರಮೆಯನ್ನು ಭಿತ್ತಿ ಎಲ್ಲರೂ ರಾಜನನ್ನು ಬೆಂಬಲಿಸುವಂತಾಯಿತು.

ರಾಜ್ಯದಲ್ಲಿ ಉಂಟಾದ ಈ ಗೊಂದಲದ ವಾತಾವರಣದ ಬಗ್ಗೆ ಕೇಳಿದ ಜಯವೀರ ಮಹಾರಾಜನು ಕರ್ಪಕ ಚೋಳನನ್ನು ವಿಚಾರಣೆ ಮಾಡಲು ಬಂದ. ಈ ವೇಳೆಗೆ ಕರ್ಪಕ ಚೋಳ ವ್ಯಾಸನ ಮೂಲಕ ಬಹುಜನರನ್ನು ತನ್ನೆಡೆಗೆ ಆಕರ್ಷಿಸಿಕೊಂಡಿದ್ದ. ವಿಚಾರಣೆಯ ಕಾಲದಲ್ಲಿ ಅವರೆಲ್ಲ ರಾಜನ ಬಲಪಾರ್ಶ್ವದಲ್ಲಿ ನಿಂತಿದ್ದರು. ಅದನ್ನು ವಿರೋಧಿಸುವವರು ಎಡಪಾರ್ಶ್ವದಲ್ಲಿದ್ದರು. ವಿಚಾರಣೆ ಮಾಡಿದ ರಾಜ ಸಹ ಆಯ ವ್ಯವಸ್ಥೆಯು ಒಳ್ಳೆಯ ಸುಧಾರಣೆ ಎಂಬ ಅಭಿಪ್ರಾಯಕ್ಕೆ ಬಂದ. ಕರ್ಪಕನ ವಿರುದ್ಧದ ಪ್ರತಿರೋಧ ಧ್ವನಿಯು ಬಹುಸಂಖ್ಯಾತ ಬೆಂಬಲಿಗರಿಂದ ಹತ್ತಿಕ್ಕಲ್ಪಟ್ಟಿತು. ರಾಜ್ಯದ ವಿರೋಧಿಗಳೆಂದು ಇವರನ್ನು ದೂಷಿಸಿ ತಿರಸ್ಕಾರದಿಂದ ಕಾಣಲಾಯಿತು.

ಹೀಗೆ 'ರಾಜ ವಿರೋಧಿ' ಹಣೆಪಟ್ಟ ಕಟ್ಟಿಕೊಂಡ ಎಡಗೈ ಬಣ ತಿರಸ್ಕಾರಕ್ಕೆ ತುತ್ತಾಯಿತು. ಇವರನ್ನು ಅಪಮಾನಿಸುವುದು ತಮ್ಮ ಹಕ್ಕು ಎಂದು ಬಲಗೈ ಬಣದವರು ನಿರ್ಣಯಕ್ಕೆ ಬಂದಂತಾಗಿ, ಎಡಗೈ ಎಂಬುದು ಗುಲಾಮರ ಗುಂಪು ಎಂದು ಹೆಸರಾಗಿ– ಇವರನ್ನು ಸೇವಕರು ಎಂದು ಕರೆದರು. ಹೀಗೆ ಕರ್ಪಕ ಚೋಳನು ಎಡಪಾರ್ಶ್ವ, ಬಲಪಾರ್ಶ್ವದವರೆಂದು ಗುರುತಿಸಿ ಸಮಾಜವನ್ನು ಎರಡಾಗಿ ಸೀಳಿದ ಈ ರೂಢಿ, ಬಹುಕಾಲದ ತನಕ ಎಡಗೈ ಬಣ, ಬಲಗೈ ಬಣ ಎಂದು ಸಮಾಜದಲ್ಲಿ ರೂಢಿಯಲ್ಲಿತ್ತು. ಇದು ಬಣವೇ ಹೊರತು ಜಾತಿಯಲ್ಲ. ಎಡಗೈನವರು ಎಂದರೆ ಆಡಳಿತ ವಿರೋಧ ಇರುವವರು ಎಂದು ಮಾತ್ರ ಅರ್ಥ.[೬೦]

ಈ ಹಿಂದಿನ ಎಲ್ಲ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಹಾಗೂ ಕಂಚಿಪುರಾಣದ ಕಥಾನಕದ ಮೂಲಕ ಪಣಕಟ್ಟುಗಳ ಮೂಲವನ್ನು ನಿರ್ವಚಿಸಿದಾಗ, ಪಣಕಟ್ಟುಗಳ ಮೂಲದ ಬಗ್ಗೆ ಮತ್ತೆ ಮತ್ತೆ ಹೆಚ್ಚಿನ ಗೊಂದಲಗಳು ಉಂಟಾಗುತ್ತವೆ. ಪಣಕಟ್ಟುಗಳು ಸೈನಿಕ ವಿಭಜನೆಯಿಂದ ಹುಟ್ಟಿಕೊಂಡವೋ, ಅರ್ಧನಾರೀಶ್ವರ ಕಲ್ಪನೆಯಿಂದ ಒಡಮೂಡಿದವೋ ಅಥವಾ ಧಾರ್ಮಿಕ ಹಿನ್ನೆಲೆಯಲ್ಲಿ ರೂಪು ಗೊಂಡವೋ ಎಂಬ ಬಗ್ಗೆ ನಿರ್ದಿಷ್ಟವಾಗಿ ಉತ್ತರಿಸುವುದು ಕಷ್ಟ. ಕಂಚಿಪುರಾಣ ಈ ನಿಟ್ಟಿನಲ್ಲಿ ಕೆಲವು ಸುಳುಹುಗಳನ್ನು ನೀಡುತ್ತದೆ. ವೇದ–ವೇದಾಂಗ–ಪುರಾಣಗಳ ಅಧ್ಯಯನದಲ್ಲಿ ಬ್ರಾಹ್ಮಣ ರೊಂದಿಗೆ ಸರಿಸಮವಾಗಿ ಗುರುತಿಸಿಕೊಂಡಿದ್ದ ವಿಶ್ವಕರ್ಮ ಸಮುದಾಯವನ್ನು, ಬ್ರಾಹ್ಮಣ್ಯ ವೃತ್ತಿಯಿಂದ ಪರಿತ್ಯಕ್ತಗೊಳಿಸಿದುದಲ್ಲದೆ, 'ಸುಂಕವೇ ಇಲ್ಲದೆ ಹೇರುಗಟ್ಟಳೆ ಆದಾಯ ಸಂಪಾದಿಸುತ್ತಿದ್ದ ಅವರ ಸ್ವಂತ ಕುಲಕಸುಬಾದ ಲೋಹದ ವಸ್ತುಗಳ ವ್ಯಾಪಾರವನ್ನು ಬಿಡುವಂತೆ ಮಾಡಿ ಆ ವೃತ್ತಿಯನ್ನು ವಾರ್ಷಿಕ ವಾಗಿ ಜೀವನ ನಿರ್ವಹಣೆಗೆ ನೀಡುವ 'ಆಯ' ವ್ಯವಸ್ಥೆಯೊಳಗೆ ಲೀನಗೊಳಿಸಿರುವ ಸ್ಥಿತಿಯ

ಹಿನ್ನೆಲೆಯಲ್ಲಿ ಪಣಕಟ್ಟುಗಳ ಹಾಗೂ ಪಣವ್ಯಾಜ್ಯಗಳ ಸಮಾಜಕ್ಕೆ ಹಾಗೂ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿದೆಯೆಂದು ಊಹಿಸಬಹುದಾಗಿದೆ. ಈವರೆಗಿನ ಎಲ್ಲ ಪಣವ್ಯಾಜ್ಯಗಳು ಕಂಚಿಯನ್ನೇ ಕೇಂದ್ರವಾಗಿಟ್ಟುಕೊಂಡಿರುವುದನ್ನು ಗಮನಿಸಿದಾಗ ಮತ್ತು ಎಲ್ಲ ಪಣಕಲಹಗಳಲ್ಲೂ ವಿಶ್ವಕರ್ಮ ಸಮುದಾಯದ ಉಪಸ್ಥಿತಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕಂಡುಬರುವುದು ಈ ಊಹೆಯನ್ನು ಪುಷ್ಟೀಕರಿಸುವಂತಿದೆ.

ವಿಶ್ವಕರ್ಮನಿಗೆ ಅಗಸ್ತ್ಯ ನೀಡಿದ ಶಾಪವನ್ನು ಈ ಹಿನ್ನಲೆಯಲ್ಲಿಯೇ ವಿಮರ್ಶಿಸಬೇಕಾಗುತ್ತದೆ. ಮಾದಿಗರ ತಂಗಡಿ ದ್ಯಾವ್ರ ಕತೆಯ ಪ್ರಕಾರ ಅಗಸ್ತ್ಯ ಶಿವನ ಮದುವೆಯನ್ನು ಭಂಗಪಡಿಸಬೇಕೆಂದು ಯೋಜಿಸಿ ಒಂದು ದೊಡ್ಡ ಊಟದ ಎಲೆಯನ್ನು ಸಿದ್ಧಪಡಿಸಿಕೊಂಡು ಎಲ್ಲ ಊಟವನ್ನೂ ತಾನೇ ಭಕ್ಷಣೆ ಮಾಡಿ ಶಿವನಿಗೆ ಅವಮಾನ ಮಾಡಬೇಕೆಂದು ಬಯಸಿದ್ದ. ಇದನ್ನರಿತ ಜಾಂಬವಮುನಿ ವಿಶ್ವಬ್ರಹ್ಮನನ್ನು ಕರೆದು ಅಗಸ್ತ್ಯನ ತಂತ್ರವನ್ನು ಹಾಳುಮಾಡುವಂತೆ ಹೇಳುತ್ತಾನೆ. ವಿಶ್ವಬ್ರಹ್ಮ ಬ್ರಾಹ್ಮಣ ವೇಷಧಾರಿಯಾಗಿ ಅಗಸ್ತ್ಯನಿಗೆದುರಾಗಿ ಬಂದು ತಾನು ಈಗಾಗಲೇ ಶಿವನ ಮದುವೆಯನ್ನು ಮುಗಿಸಿಕೊಂಡು ಬಂದುದಾಗಿ ಹೇಳಿದಾಗ, ಅಗಸ್ತ್ಯ ಎಲೆ ಇನ್ನು ಪ್ರಯೋಜನವಿಲ್ಲವೆಂದು ಬಿಸಾಕುತ್ತಾನೆ. ತಕ್ಷಣವೇ ವಿಶ್ವಬ್ರಹ್ಮ ಗೆದ್ದಲು ಹುಳು ಸೃಷ್ಟಿಸಿ ಆ ಊಟದೆಲೆಯನ್ನು ತಿನ್ನಲು ಬಿಡುತ್ತಾನೆ.

ಅಗಸ್ತ್ಯನಿಗೆ ಅನುಮಾನ ಬಂದು ಪಂಚಾಂಗ ನೋಡಿದಾಗ ಶಿವನ ಮದುವೆಯ ಮುಹೂರ್ತ ಮುಂದಿನ ದಿನ ಇರುವುದು ತಿಳಿಯುತ್ತದೆ. ಕುಪಿತನಾದ ವಿಶ್ವಾಮಿತ್ರ ವಿಶ್ವಬ್ರಹ್ಮನಿಗೆ 'ಇನ್ನು ಮುಂದೆ ನೀನು ವಿಶ್ವಬ್ರಹ್ಮನಲ್ಲ. ಇಂದಿನಿಂದ ನೀನು ವಿಶ್ವಕರ್ಮನಾಗು. ವಿಶ್ವಬ್ರಹ್ಮನಾಗಿ ನೀನು ಕೋರಿದ್ದೆಲ್ಲ ಆಗುತ್ತಿದ್ದಂತೆ ಮುಂದೆ ಆಗದಿರಲಿ' ಎಂದು ಶಾಪ ನೀಡಿದ. ಅಗಸ್ತ್ಯನ ಶಾಪಗಳಿಂದ ಐದು ತಲೆಗಳ 'ವಿಶ್ವಬ್ರಹ್ಮ' ಒಂದೇ ತಲೆಯ ವಿಶ್ವಕರ್ಮನಾದ. ಐದು ತಲೆಯ ಒಂಭತ್ತು ಗೊಡಗುಗಳ ವಿಶ್ವಬ್ರಹ್ಮ ದೃಷ್ಟಿಸಿ ನೋಡಿದರೇನೇ ಆಭರಣಗಳು ಸಿದ್ಧವಾಗುತ್ತಿದ್ದವು. ಅಂತಹ ಕೋರಿದ್ದೆಲ್ಲ ನೆರವೇರುವ ಶಕ್ತಿಯನ್ನು ವಿಶ್ವಬ್ರಹ್ಮ ಕಳೆದುಕೊಂಡ'.[೬೧]

ಈ ಕಥನ ಕಂಚಿಯ ಚೋಳಭೂಪಾಲ ರಾಜನ ಆಸ್ಥಾನದಲ್ಲಿ ಜ್ಞಾನಾಧಾರಿತ ಹುದ್ದೆಗಳನ್ನು ಕಳೆದುಕೊಂಡ ವಿಶ್ವಕರ್ಮ ಸಮುದಾಯ ಕೇವಲ ಲೋಹಗಳನ್ನು ಮಾತ್ರ ತಯಾರಿಸುವ ಕ್ರಿಯಾತ್ಮಕ ಕಾರ್ಯಗಳಿಗೆ ಮಾತ್ರ ಸೀಮಿತವಾದುದನ್ನು ಸೂಚಿಸುತ್ತದೆ.

ಕರ್ನಾಟಕದಲ್ಲಿ ಪಣಕಟ್ಟುಗಳು ಮೊದಲಿನಿಂದಲೂ ಇವೆಯೇ? ಅಥವಾ ಕರ್ನಾಟಕದಲ್ಲಿ ಕಂಡುಬರುವ ಪಣವ್ಯಾಜ್ಯಗಳು ತಮಿಳುನಾಡಿನಲ್ಲಿ ಆದ ಕಲಹಗಳ ಪ್ರತಿರೂಪಗಳೇ? ಎಂಬ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರಿಸಲು ಸಾಧ್ಯವಾಗುವುದಿಲ್ಲ. ಕರ್ನಾಟಕದ ಪ್ರಾಚೀನ ಶಾಸನಗಳಲ್ಲಿ ಎಂಟು ಹಿಟ್ಟುಗಳು, ಹನ್ನೆರಡು ಹಿಟ್ಟುಗಳು, ಹದಿನೆಂಟು ಪ್ರಕೃತಿಗಳು, ಹದಿನೆಂಟು ಸಮಯ, ಅಷ್ಟಾದಶ ಪ್ರಕೃತಿ, ಸಕಲ

ಪಣಕಟ್ಟುಗಳು ಎಂಬ ಪಾರಿಭಾಷಿಕ ಪದಗಳು ಕಂಡುಬರುತ್ತವೆ. ಸ್ಮೃತಿಚಂದ್ರಿಕಾದಲ್ಲಿ ಅಗಸ, ಚರ್ಮಕಾರ ಮುಂತಾದ ಹದಿನೆಂಟು ಪ್ರಕೃತಿಗಳನ್ನು ಉಲ್ಲೇಖಿಸಲಾಗಿದೆ.[೬೨] ಚಿದಾನಂದ ಮೂರ್ತಿಯವರು 'ಎಂಟು ಹಿಟ್ಟು' ಎಂಬ ಜಾತಿಯ ವ್ಯಕ್ತಿಗಳ ಹೆಸರು ಕೆಲವು ಶಾಸನಗಳಲ್ಲಿದೆ. 'ಪ್ರಭುಗಾವುಂಡುಗಳುಂ ಮೂಲಿಗರುವೆಂಟು ಹಿಟ್ಟು ಸಹಿತ', ಮಾಲಿಗ ಹಂಪಗೌಡನುಂ ಎಂಟು ಹಿಟ್ಟುಗಳುವಿರ್ದುಕೂಡಿ ಹಡೆದ ವೃತ್ತಿ' ಎಂಬ ಉದಾಹರಣೆಗಳನ್ನು ನೀಡುತ್ತಾ 'ಹಿಟ್ಟು' ಎನ್ನುವುದು ಏನನ್ನೂ ಸೂಚಿಸುವುದೋ ಹೇಳುವುದು ಕಷ್ಟ ಎಂದು ಅಭಿಪ್ರಾಯಪಡುತ್ತಾರೆ.[೬೩] ಮಂಜುನಾಥ್‌ರವರು ಎಂಟು ಹಿಟ್ಟು ಎಂಬುದನ್ನು ಒಂದು ಸಂಘವಾಗಿ ಪರಿಭಾವಿಸುತ್ತಾರೆ.[೬೪] ಡಾ॥ ಎಸ್.ಜಿ. ಘಟಪಣದಿಯವರು 'ಕರ್ನಾಟಕದಲ್ಲಿ ಊರಿನ ಬಡಗಿ, ಕಮ್ಮಾರ ಮುಂತಾದ ವೃತ್ತಿವಂತರಿಗೆ 'ಆಯ' ಎಂದು ವರ್ಷಕ್ಕೆ ನಿಗದಿತ ಧಾನ್ಯವನ್ನು ಕೊಡುವ ಪದ್ಧತಿ ಇಂದಿಗೂ ಇದೆ. ಬಹುಶಃ ಆ ಕಾಲದಲ್ಲಿಯೂ ಈ ರೀತಿ ಕೂಲಿಯ ರೂಪದಲ್ಲಿ ಸಂಪಾದಿಸಿದ ಧಾನ್ಯವು ಕುಶಲ ಕೆಲಸಗಾರರ ಜೀವನಾಧಾರವಾದುದರಿಂದ ಧಾನ್ಯರೂಪದಲ್ಲಿ ಕೂಲಿಯನ್ನು ಸಂಪಾದಿಸುತ್ತಿದ್ದ ಕೆಲಸಗಾರರನ್ನು ಹಿಟ್ಟುಕಾಱರೆಂದು ಕರೆದಿರಬಹುದೆಂದು ತೋರುತ್ತದೆ ಎಂದು ಅಭಿಪ್ರಾಯಪಡುತ್ತಾರೆ.[೬೫] ಈ ಎಲ್ಲಾ ಹಿಟ್ಟುಗಳ ಉಲ್ಲೇಖಗಳು ಬಡಗಿ, ಕಮ್ಮಾರ, ತಳವಾರ, ಸೇನಬೋವ ಮತ್ತು ಅಕ್ಕಸಾಲಿಗರ ಹೆಸರಿನೊಂದಿಗೆ ಸಂಯೋಜನೆ ಹೊಂದಿರುತ್ತವೆಂಬುದು ಗಮನಾರ್ಹ. ಬಹುಶಃ ಸಂಸ್ಕೃತದ 'ಪಿಷ್ಠ' ಪದ ಹಿಟ್ಟಿನ ರೂಪ ತಾಳಿದ್ದು, ಹಿಟ್ಟಿಗಾಗಿ ಎಂದರೆ 'ಆಯಕ್ಕಾಗಿ' ದುಡಿಯುವ ವೃತ್ತಿನಿರತರನ್ನು ಸೂಚಿಸುತ್ತಿರಬಹುದು. ಇದು ಕರ್ನಾಟಕದಲ್ಲಿ ಪ್ರಚಲಿತವಿದ್ದ 'ಆಯಗಾರ' ವ್ಯವಸ್ಥೆ ಅಥವಾ ಬಾರಾಬಲೂತಿಯ ಪ್ರಾಚೀನ ರೂಪವಾಗಿದ್ದು, ಇಲ್ಲಿ ಬರುವ ವೃತ್ತಿಗಳು ಪಣಕಟ್ಟುಗಳ ಸಮಾಜದಲ್ಲಿ ಕಂಡುಬರುವ ಜಾತಿಗಳನ್ನೇ ಒಳಗೊಂಡಿವೆ.

ಹದಿನೆಂಟು ಜಾತಿಗಳ ಬಗ್ಗೆ ಚರ್ಚಿಸುತ್ತಾ ಸೂರ್ಯನಾಥ ಕಾಮತ್‌ರವರು "ಈ ಹದಿನೆಂಟು ಜಾತಿ ಆರ್ಯರು ತಂದ ಚಾತುರ್ವರ್ಣ್ಯಕ್ಕಿಂತಲೂ ಪ್ರತ್ಯೇಕವಾದ ವ್ಯವಸ್ಥೆ ಇದ್ದಿರಬೇಕು. ಬಹುಶಃ ನಾಗರಿಕ ಜೀವನ ಆರಂಭ ಆದಾಗ ಇದ್ದ ಮುಖ್ಯ ಉದ್ಯೋಗಗಳನ್ನು ಗಮನಿಸಿ ಸಮಾಜವನ್ನು ಹದಿನೆಂಟು ಜಾತಿಗಳಾಗಿ ವಿಭಜಿಸಿದ್ದಿರಬೇಕೆಂದು" ಅಭಿಪ್ರಾಯಪಡುತ್ತಾರೆ.[೬೬] ಕರ್ನಾಟಕದಲ್ಲಿ ಹದಿನೆಂಟು ಜಾತಿಗಳ ಮೊದಲ ಉಲ್ಲೇಖ ಕ್ರಿ.ಶ. ೭೨೫ರ ಲಕ್ಷ್ಮೇಶ್ವರದ ಶಾಸನದಲ್ಲಿ ಕಂಡುಬರುತ್ತದೆ.[೬೭] ಇಲ್ಲಿ ವರ್ತಕರನ್ನು ಹಾಗೂ ಬ್ರಾಹ್ಮಣರನ್ನು 'ಹದಿನೆಂಟು ಪ್ರಕೃತಿ'ಗಳಿಂದ ಹೊರತುಪಡಿಸಿ ಪ್ರತ್ಯೇಕವಾಗಿ ಹೆಸರಿಸಲಾಗಿದೆ. ಇಲ್ಲಿ 'ಪ್ರಕೃತಿಗಳು, ಎಂಬ ಶಬ್ದ ಜಾತಿಯನ್ನಷ್ಟೇ ಅಲ್ಲದೆ 'ಪ್ರಜೆ' ಎಂಬ ಅರ್ಥವನ್ನು ಸೂಚಿಸುತ್ತದೆ. ಗಂಗ ಶ್ರೀಪುರುಷನ ಕ್ರಿ.ಶ. ಸುಮಾರು ಎಂಟನೆಯ ಶತಮಾನದ ಶಾಸನದಲ್ಲಿ ನೀಡಿದ ದಾನಕ್ಕೆ 'ಗಂಗವಾಡಿ ತೊಂಬತ್ತಾರು ಸಾಸಿರ ಪ್ರಕೃತಿಗಳು ಸಾಕ್ಷಿ' ಎಂದು ಉಲ್ಲೇಖಿಸಿದ್ದು, ಇದು ಸ್ಪಷ್ಟವಾಗಿ 'ಪ್ರಕೃತಿ' 'ಪ್ರಜೆ' ಎಂಬುದನ್ನು ಪ್ರತಿನಿಧಿಸುತ್ತದೆ.

ಡಾ॥ ಚಿದಾನಂದ ಮೂರ್ತಿಯವರು ವಿವಿಧ ವಚನಕಾರರು ಬಳಸಿರುವ 'ಅಷ್ಟಾದಶ ಜಾತಿ, ಹದಿನೆಂಟು ವರ್ಣ, ನೂರೊಂದು ಕುಲ, ಹದಿನೆಂಟು ಜಾತಿ, ಆರು ದರುಶನ, ಹದಿನೆಂಟು ಜಾತಿ' ಯ ಉದಾಹರಣೆಗಳನ್ನೂ ನೀಡುತ್ತಾರೆ. ಸೊಡ್ಡಳ ಬಾಚರಸನು (೧) ಬ್ರಾಹ್ಮಣ (ಶಿಖಿ) (೨) ಕ್ಷತ್ರಿಯ (ನಯನ), (೩) ಬಣಜಿಗ (ನಾಸಿಕ), (೪) ಒಕ್ಕಲಿಗ (ಅದರ, ತುಟಿ), (೫) ಗೊಲ್ಲ (ಕರ್ಣ), (೬) ಕುಂಬಾರ (ಕೊರಳು), (೭) ಪಂಚಾಳ (ಬಾಹು), (೮) ಉಪ್ಪಾರ (ಅಂಗೈ), (೯) ನಾಯಿಂದ (ನಖ, ಉಗುರು), (೧೦) ಡೊಂಬ (ಒಡಲು), (೧೧) ಅಗಸ (ಬೆನ್ನು), (೧೨) ಬೇಡ (ಚರ್ಮ), (೧೩) ಕಬ್ಬಿಲ (ಪೃಷ್ಠ, ಕುಂಡೆ), (೧೪) ಹೊಲೆಯ (ಒಳತೊಡೆ), (೧೫) ಈಳಿಗ (ಮಣಿಕಾಲು), (೧೬) ಸಮಗಾರ (ಕಣಗಾಲು), (೧೭) ಮಚ್ಚಿಗ (ಮೇಗಾಲು), (೧೮) ಶುದ್ಧ ಮಾದಿಗ (ಅಂಗಾಲು) ಇಂತೀ ಹದಿನೆಂಟು ಜಾತಿ ತನ್ನಲ್ಲಿ ಉಂಟು ಎಂಬ ವಚನವನ್ನು ದಾಖಲಿಸಿ ಮನುಷ್ಯನ ದೇಹದ ಮೇಲ್ತುದಿಯಲ್ಲಿರುವ ಜುಟ್ಟಿನಿಂದಾರಂಭಿಸಿ ಕೆಳಗಿನ ಅಂಗಾಲುವರೆಗೆ ಇರುವ ಒಂದೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಮನುಷ್ಯ ಸಮಾಜ ಒಬ್ಬ ವ್ಯಕ್ತಿಯಿದ್ದಂತೆ, ಅದು ಒಂದು ಅಖಂಡ ವಸ್ತು, ಅದರ ಭಿನ್ನಭಿನ್ನ ಭಾಗಗಳೇ ಜಾತಿಗಳು ಎಂಬ ಕಲ್ಪನೆ ವಿನೂತನವಾದುದು ಎಂದು ಅಭಿಪ್ರಾಯಪಡುತ್ತಾರೆ.[೬೮] ಬಾಚರಸನಂತೆ ಚೌಡಯ್ಯನೂ ಸಹ ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದ ಹದಿನೇಳು ಜಾತಿಗಳನ್ನು ಉಲ್ಲೇಖಿಸಿ ಎಲ್ಲ ಹದಿನೆಂಟು ಜಾತಿಗಳೂ ಪ್ರತಿವ್ಯಕ್ತಿಯಲ್ಲಿ ಇವೆ ಎನ್ನುತ್ತಾನೆ.[೬೯]

ಈ ಎರಡು ಜಾತಿಗಳ ವಿಂಗಡಣೆಯಲ್ಲಿ ಬ್ರಾಹ್ಮಣರನ್ನು ಹೊರಗಿಟ್ಟರೆ ಉಳಿದ ಹದಿನೇಳು ಜಾತಿಗಳು ಸಹ ಪಣಕಟ್ಟು ಸಮಾಜದಲ್ಲಿ ಕಂಡುಬರುವ ಜಾತಿಗಳನ್ನೇ ಒಳಗೊಂಡಿವೆಯೆಂಬುದು ಗಮನಾರ್ಹ. ಅಲ್ಲದೆ, ಈ ವಿಂಗಡಣೆ ಅರ್ಜುನ್ ಅಪ್ಪಾದೊರೈರವರು ಪಣಕಟ್ಟುಗಳ ವ್ಯಾಖ್ಯಾನದ ಬಗ್ಗೆ ನೀಡುವ ವಿವರಣೆಗೆ ಸಾದೃಶವಾಗಿದೆ. ಅಪ್ಪಾದೊರೈರವರ ಪ್ರಕಾರ "ಭಾರತೀಯ ಸಾಂಸ್ಕೃತಿಕ ವ್ಯವಸ್ಥೆಯ ಸಂದರ್ಭದಲ್ಲಿ ಈ ಇಬ್ಬಗೆಯ ವರ್ಗೀಕರಣ ಒಂದು ಮೂಲ ಮಾದರಿಯಾಗಿದೆ. ಮಾನವ ದೇಹದ ಬಲ ಮತ್ತು ಎಡಗಳನ್ನು ಉಲ್ಲೇಖಿಸುವ ವಲಂಗೈ (ಬಲಗೈ) ಮತ್ತು ಇಡಂಗೈ (ಎಡಗೈ) ಪದಗಳು ದೇಹದ ಬಲ ಮತ್ತು ಎಡ ಭಾಗಗಳನ್ನು ರೂಪಕವಾಗಿ ಉಲ್ಲೇಖಿಸುತ್ತವೆಂದು ಭಾವಿಸುವುದು ಸೂಕ್ತ".[೭೦]

ಸೂರ್ಯನಾಥ ಕಾಮತ್‌ರವರು "ಸಾಹಿತ್ಯ ಹಾಗೂ ಶಾಸನಗಳಲ್ಲಿ ಪದೇ ಪದೇ ಉಲ್ಲೇಖಿತವಾಗುವ ಈ ಹದಿನೆಂಟು ಜಾತಿಗಳೆಂಬ ಪ್ರಾಚೀನ ಕಲ್ಪನೆ ಮೊದಲಿನಿಂದಲೂ ಇದ್ದಿರಬಹುದು. ಕ್ರಿ.ಪೂ. ೬-೭ನೆಯ ಶತಮಾನದಲ್ಲಿ ಆರ್ಯೀಕರಣವಾಗುವ ಪೂರ್ವದ ಇತಿಹಾಸಾರಂಭ (ಪ್ರೋಟೋ ಹಿಸ್ಟಾರಿಕ್) ಕಾಲದ ಸಮಾಜದಲ್ಲಿ ವ್ಯಕ್ತಿಗಳಿಗನುಗುಣವಾಗಿ ಈ ಮುಖ್ಯವಾದ ಹದಿನೆಂಟು ಜಾತಿಗಳು ಕಾಣಿಸಿರಬೇಕು. ಯಾವುದೇ ವೃತ್ತಿಯನ್ನು ಪರಂಪರಾಗತವಾಗಿ ಅನುಸರಿಸದೆ ಕಾಯಕ ವಿಭಜನೆ (ಡಿವಿಜನ್ ಆಫ್ ಲೇಬರ್) ಹಾಗೂ ಒಂದೇ ವೃತ್ತಿಯಲ್ಲಿ ಪಳಗುವಿಕೆ

(ಸ್ಪೆಷಲೈಸೇಷನ್) ಸಾಧ್ಯವಿಲ್ಲ. ಎಲ್ಲ ವೃತ್ತಿಗಳಿಗೆ ಬೇಕಾಗುವ ಎಲ್ಲ ಸಲಕರಣೆಗಳನ್ನು ಒಬ್ಬನೇ ಹೊಂದಲು ಸಾಧ್ಯವಿಲ್ಲ. ಪರಂಪರಾಗತವಾಗಿ ಒಂದು ವೃತ್ತಿಯನ್ನು ಅವಲಂಬಿಸುತ್ತಾ ಬಂದುದು ಭಾರತದ ವೈಶಿಷ್ಟ್ಯ. ಬಹುಶಃ ಆರಂಭದಲ್ಲಿ ಮುಖ್ಯವಾದ ೧೮ ವೃತ್ತಿಪರ ಜಾತಿಗಳು ಇದ್ದಿರಬೇಕು. ಆದರೆ ಲೇಖನ ಕಲೆ ರೂಢಿಗೆ ಬರುವಷ್ಟೊತ್ತಿಗೆ ಆರ್ಯರ ವಲಸೆ ಆಗಿಹೋಗಿದ್ದು ವೈದಿಕ ಸಾಹಿತ್ಯದಲ್ಲಿ ಬರುವ ನಾಲ್ಕು ವರ್ಣಗಳನ್ನು ಸೇರಿಸಿ ಪಾರಂಪರಿತವಾದ ೧೮ ಜಾತಿಗಳನ್ನು ಹೇಳುವ ಯತ್ನ ಆಗಿರಬೇಕು" ಎಂದು ಅಭಿಪ್ರಾಯಪಡುತ್ತಾ,[೭೧] ಈ ಹದಿನೆಂಟು ಜಾತಿಗಳನ್ನು ಅಖಿಲ ಭಾರತದ ವ್ಯಾಪ್ತಿಗೆ ಅನ್ವಯಿಸುತ್ತಾರೆ. ಅಂದರೆ, ಇದನ್ನು ಒಂದು ಹಂತದಲ್ಲಿ ಭಾರತದ ವೈಶಿಷ್ಟ್ಯವೆಂದು ಹೇಳುತ್ತಾರೆ. ಆದರೆ ಈ ಹದಿನೆಂಟು ಜಾತಿಗಳ ಉಲ್ಲೇಖ ದಕ್ಷಿಣ ಭಾರತದ ಸಾಹಿತ್ಯ ಮತ್ತು ಶಾಸನಗಳಲ್ಲಿ ಮಾತ್ರ ಕಂಡುಬರುವುದರಿಂದ, ಇದು ಚಾತುರ್ವರ್ಣ ವ್ಯವಸ್ಥೆಗಿಂತ ಸಂಪೂರ್ಣವಾಗಿ ಭಿನ್ನವಾಗಿದೆ ಮತ್ತು ದಕ್ಷಿಣ ಭಾರತದ ಸಾಮಾಜಿಕ ವ್ಯವಸ್ಥೆಯ ವೈಶಿಷ್ಟ್ಯವೂ ಆಗಿದೆ.

ಬಹುಶಃ ದಕ್ಷಿಣ ಭಾರತಾದ್ಯಂತ ಪ್ರಚಲಿತದಲ್ಲಿದ್ದಿರಬಹುದಾದ ಎಂಟು ಹಿಟ್ಟುಗಳು, ಹದಿನೆಂಟು ಪ್ರಕೃತಿ, ಜಾತಿ, ಕುಲಗಳು ಸುಮಾರು ಒಂಭತ್ತು-ಹತ್ತನೆಯ ಶತಮಾನದ ವೇಳೆಗೆ ಚೋಳರಾಜ್ಯದಲ್ಲಿ ಲೋಹಗಳ ಮೇಲೆ ವಿಧಿಸಿದ ಸುಂಕದ ಸಂಬಂಧ ಉಂಟಾದ ಗಲಭೆಗಳಲ್ಲಿ ಎರಡು ಬಣಗಳಾಗಿ ಇಬ್ಬಾಗೊಂಡು ಪಣಕಟ್ಟು ಸಮಾಜವೊಂದು ರೂಪುಗೊಂಡಿರಬಹುದು. ಕರ್ನಾಟಕದ ಉತ್ತರ ಭಾಗದಲ್ಲಿ ಇವು ಆಯಗಾರ ವ್ಯವಸ್ಥೆಯ ಭಾಗವಾಗಿ ಮುಂದುವರಿದರೆ, ಕರ್ನಾಟಕದ ದಕ್ಷಿಣ ಭಾಗದಲ್ಲಿ ಚೋಳರ ಆಕ್ರಮಣ, ತಮಿಳು ಅಧಿಕಾರಿಗಳ ವರ್ಗಾವಣೆ, ರಾಮಾನುಜರ ಪ್ರವೇಶ, ಶ್ರೀವೈಷ್ಣವ ಧರ್ಮದ ತಿರುಮಲೆ ತಾತಾಚಾರ್ಯ ಪರಂಪರೆಯ ಪ್ರಭಾವ ಮುಂತಾದ ಕಾರಣಗಳಿಂದ ಪಣಕಟ್ಟು ಸಮಾಜ ಕರ್ನಾಟಕಕ್ಕೆ ಪ್ರವೇಶಿಸಿತೆಂದು ಭಾವಿಸಬಹುದಾಗಿದೆ.

### ೪.೨.೧ ಬಲಗೈ ಮತ್ತು ಎಡಗೈ ಸಮುದಾಯಗಳ ವಿಂಗಡಣೆ

ಬಲಗೈ ಮತ್ತು ಎಡಗೈ ಸಮುದಾಯಗಳ ಪಣಕಟ್ಟಿನ ಸಮಾಜದಲ್ಲಿ ಒಟ್ಟು ಇಪ್ಪತ್ತ ಏಳು ಪ್ರಧಾನ ಜಾತಿಗಳಿದ್ದು, ಹದಿನೆಂಟು ಜಾತಿಗಳು ಬಲಗೈ ಗುಂಪಿಗೂ, ಉಳಿದ ಒಂಭತ್ತು ಜಾತಿಗಳು ಎಡಗೈನ ಗುಂಪಿಗೂ ಸೇರುತ್ತವೆ. ಹಾಗಾಗಿಯೇ ಬಲಗೈಯವರು ತಮ್ಮನ್ನು ಹದಿನೆಂಟು ಪಣಕಟ್ಟಿನವರೆಂದು ಮತ್ತು ಎಡಗೈಯವರು ತಮ್ಮನ್ನು ಒಂಭತ್ತು ಪಣಕಟ್ಟಿನವರೆಂದು ಗುರುತಿಸಿಕೊಳ್ಳುತ್ತಾರೆ.[೭೨]

ಆದರೆ ಯಾವ ಸಮುದಾಯಗಳು ಯಾವ ಪಣಕಟ್ಟಿನಲ್ಲಿ ಸೇರಬೇಕು ಎಂಬ ಬಗ್ಗೆ ಒಮ್ಮತವಿಲ್ಲ. ತಮಿಳುನಾಡಿನ ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನದ ದಾಖಲೆಗಳಲ್ಲಿ ಯಾವ ಜಾತಿ ಸಮುದಾಯಗಳು ಯಾವ ಬಣಕ್ಕೆ ಸೇರಬೇಕು ಎಂಬ ವಿಷಯದ ಬಗ್ಗೆ ಗೊಂದಲಗಳು

ಉದ್ಭವಿಸಿ, ವಿಷಯವನ್ನು ಬ್ರಿಟೀಷ್ ನ್ಯಾಯಾಲಯಗಳವರೆಗೆ ಎಳೆದೊಯ್ದ ಸಂಗತಿಗಳು Dairy and Consultations ವರದಿಗಳಲ್ಲಿ, Fort George Recordsಗಳಲ್ಲಿ, Vestiges of Old Madras-1640-1800, The Revenue Registerಗಳು ಮುಂತಾದ ವಸಾಹತುಶಾಹಿ ಕಾಲಘಟ್ಟದ ತಮಿಳುನಾಡು ಹಾಗೂ ದಕ್ಷಿಣ ಕರ್ನಾಟಕದ ಹಲವಾರು ದಾಖಲೆಗಳಲ್ಲಿ ನಿಚ್ಚಳವಾಗಿ ಕಂಡುಬರುತ್ತವೆ. ಮದ್ರಾಸ್ ಅಂತೂ ಅಸಂಖ್ಯ ಪಣಕಟ್ಟು ಕಲಹಗಳಿಗೆ ಸಾಕ್ಷಿಯಾಗಿತ್ತು. ವಸಾಹತುಶಾಹಿ ಆಡಳಿತಗಾರರಿಗೆ ಇಂಥ ವ್ಯಾಜ್ಯಗಳನ್ನು ಬಗೆಹರಿಸುವುದೇ ಸವಾಲಿನ ಕೆಲಸವಾಗಿತ್ತು.

ಟಿಪ್ಪು ಸುಲ್ತಾನನ ಮರಣಾನಂತರ ಟಿಪ್ಪುವಿನ ಆಳ್ವಿಕೆಗೊಳಪಟ್ಟಿದ್ದ ಪ್ರದೇಶಗಳ ಸಮೀಕ್ಷೆ ನಡೆಸಲು ನೇಮಕಗೊಂಡ ಫ್ರಾನ್ಸಿಸ್ ಬುಕಾನನ್ ಹದಿನೆಂಟು ಬಲಗೈ ಹಾಗೂ ಎಂಟು ಎಡಗೈ ಪಣಕಟ್ಟುಗಳನ್ನು ಪಟ್ಟಿಮಾಡುತ್ತಾನೆ[೭೩] ಅವುಗಳಲ್ಲಿ

**ಬಲಗೈ ಪಣಕಟ್ಟು**

೧. ಬಣಜಿಗ
೨. ಒಕ್ಕಲಿಗ
೩. ಜ್ಯೋತಿ ಪಣ (ಗಾಣಿಗರು)
೪. ರುಂಗರು
೫. ಲಾಡರು
೬. ಗುಜರಾತಿ
೭. ಕೋಮಟಿ
೮. ಜೈನ
೯. ಕುರುಬರು
೧೦. ಕುಂಬಾರರು
೧೧. ಅಗಸರು
೧೨. ಬೆಸ್ತರು
೧೩. ಪದ್ಮಶಾಲಿಯವರು
೧೪. ನಾಯಿಂದರು
೧೫. ಉಪರು
೧೬. ಚಿತ್ರಗಾರರು
೧೭. ಗೊಲ್ಲರು
೧೮. ವಲ್ಲಿಯಾರರು

**ಎಡಗೈ ಪಣಕಟ್ಟುಗಳು**

೧. ಪಾಂಚಾಳರು
೨. ಬೇಂ ಶೆಟ್ಟಿ
೩. ದೇವಾಂಗ
೪. ಹೆಗ್ಗಾಣಿಗರು
೫. ಗೊಲ್ಲರು
೬. ಪಾಲವಾನಲ್ಲ
೭. ಬ್ಯಾಡರು
೮. ಮಾದಿಗ

ಹಯವದನರಾವ್‌ರವರು ಕರ್ನಾಟಕದಲ್ಲಿ ಕೃಷಿ, ಕುಶಲಕರ್ಮಿ ಮತ್ತು ವ್ಯಾಪಾರೀ ಸಮುದಾಯಗಳನ್ನು ಪಣಗಳು ಅಥವಾ ವೃತ್ತಿಗಳೆಂದು ಪರಿಗಣಿಸಲಾಗಿದ್ದು, ಇವು ಒಟ್ಟು ಹದಿನೆಂಟು ಇವೆ. ಇವುಗಳನ್ನು ಬಲಗೈ ಮತ್ತು ಎಡಗೈ ಎಂಬುದಾಗಿ ಗುರುತಿಸಲಾಗುತ್ತದೆ ಎಂದು ಹೇಳಿ ಕರ್ನಾಟಕದ ಬಲಗೈ ಮತ್ತು ಎಡಗೈ ಪಣಕಟ್ಟುಗಳ ಪಟ್ಟಿಯನ್ನು ಸಂಗ್ರಹಿಸಿಕೊಡುತ್ತಾರೆ:

| ಬಲಗೈ ಪಣಕಟ್ಟು | ಎಡಗೈ ಪಣಕಟ್ಟು: |
|---|---|
| ೧. ಬಣಜಿಗ | ೧. ಪಾಂಚಾಲರು(i) ಬಡಗಿ (ii) ಕಂಚುಗಾರ (iii) ಕಮ್ಮಾರ (iv) ಕಲ್ಲುಕುಟಿಗ(v) ಅಕ್ಕಸಾಲಿಗ |
| ೨. ಒಕ್ಕಲಿಗ | ೨. ಭೇರಿ |
| ೩. ಗಾಣಿಗ (ಒಂಟೆತ್ತು) | ೩. ದೇವಾಂಗ |
| ೪. ರಂಗಾರೆ (ಬಣ್ಣ ಹಾಕುವವರು) | ೪. ಹೆಗ್ಗಾಣಿಗ |
| ೫. ಲಾಡ (ಮಾರಾಠಿ ವ್ಯಾಪಾರಸ್ಥರು) | ೫. ಗೊಲ್ಲ |
| ೬. ಗುಜರಾತಿ (ವ್ಯಾಪಾರಸ್ಥರು) | ೬. ಬೇಡ |
| ೭. ಕಾಮಾಟಿ (ಕೂಲಿಗಾರರು) | ೭. ಯಾಕುಲ ಅಥವಾ ತೊರೆಯ |
| ೮. ಜೈನ ಅಥವಾ ಕೋಮಟಿ | ೮. ತಿಗಳ |
| ೯. ಕುರುಬ | ೯. ಮಾದಿಗ.[೭೪] |
| ೧೦. ಕುಂಬಾರ | |
| ೧೧. ಅಗಸ | |
| ೧೨. ಬೆಸ್ತ | |
| ೧೩. ಪದ್ಮಸಾಲೆ | |
| ೧೪. ನಾಯಂದ | |
| ೧೫. ಉಪ್ಪಾರ | |
| ೧೬. ಚಿತ್ರಗಾರ | |
| ೧೭. ಗೊಲ್ಲ | |
| ೧೮. ಹೊಲೆಯ | |

ಒಬ್ಬರು ಎಡಗೈ ಪಣದವರೆಂದು ವಿಂಗಡಿಸುವ ಪಣ, ಮತ್ತೊಬ್ಬರ ವಿಂಗಡಣೆಯಲ್ಲಿ ಬಲಗೈಗೆ ಸೇರುವುದರಿಂದ ಸ್ವತಃ ಈ ಪಟ್ಟಿಗಳನ್ನು ತಯಾರಿಸಿದ ಬುಕಾನನ್ ಹಾಗೂ ಹಯವದನರಾವ್‌ರವರೇ ಇವು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗುತ್ತದೆಂದು ಮತ್ತು ಗೊಂದಲದಿಂದ ಕೂಡಿವೆಯೆಂಬುದನ್ನು ಒಪ್ಪಿಕೊಳ್ಳುತ್ತಾರೆ.

ಬಳ್ಳಾರಿ ಮುನ್ಸಿಫ್ ನ್ಯಾಯಾಲಯ ನೀಡಿದ ೧೮೭೫ರ ತೀರ್ಪೊಂದರಲ್ಲಿ ಈ ಪಣಕಟ್ಟುಗಳನ್ನು ಈ ಮುಂದಿನಂತೆ ವಿಂಗಡಿಸಲಾಗಿದೆ.

| ಬಲಗೈ ಪಣಕಟ್ಟು (ದೈವಾಚಾರದವರು) | ಎಡಗೈ ಪಣಕಟ್ಟು (ಪಾಂಚಾಳರು) |
|---|---|
| ೧. ಲಿಂಗಾಯತ | ೧. ಪಾಂಚಾಳ |
| ೨. ನೇಕಾರ | ೨. ಅಕ್ಕಸಾಲಿಗ |
| ೩. ಗಾಣಿಗ | ೩. ಕಮ್ಮಾರ |
| ೪. ಸಿಂಪಿಗ | ೪. ಕಂಚುಗಾರ |
| ೫. ರೆಡ್ಡಿ | ೫. ಬಡಗಿ |
| ೬. ವಕ್ಕಲಿಗ | ೬. ಶಿಲ್ಪಿ |
| ೭. ಬಣಜಿಗ | ೭. ಹಟಗಾರ |
| ೮. ಕುರು | ೮. ದೇವಾಂಗ |
| ೯. ಕುಂಬಾರ | ೯. ಮಾದಿಗ |
| ೧೦. ಬೆಂಡರುಗಳು | |
| ೧೧. ಚಮ್ಮಾರ | |
| ೧೨. ಮೇದರ | |
| ೧೩. ಗೊಲ್ಲ | |
| ೧೪. ಅಗಸ | |
| ೧೫. ನಾಯಿಂದ | |
| ೧೬. ಜೋಗಿ | |
| ೧೭. ಬುಡಬುಡಕೆ | |
| ೧೮. ಹೊಲೆಯ | |

ಈ ಎಲ್ಲ ವಿಂಗಡಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಎರಡು ವಿಭಾಗಗಳು ಪರಿಪೂರ್ಣವಾಗಲೀ, ಸಾಂಸ್ಥಿಕವಾಗಲೀ ಅಥವಾ ನಿರಂತರತೆಯಿಂದ ಕೂಡಿರದೆ ಅನಿಶ್ಚಿತ ಗುಂಪುಗಳಾಗಿದ್ದವು.[೭೫] ಅಲ್ಲದೆ, ದಕ್ಷಿಣ ಭಾರತಕ್ಕೆ ಸಂಬಂಧಪಟ್ಟ ಲಾಡರು, ಗುಜರಾತಿಗಳು, ರಂಗಾರೆಯವರು, ಬೇರೆ ಧರ್ಮವೆಂದು ಗುರುತಿಸಲ್ಪಟ್ಟ ಜೈನರನ್ನೂ ಸಹ ಈ ಪಣವ್ಯವಸ್ಥೆಯೊಳಗೆ ಗುರುತಿಸಿರುವುದನ್ನು ಗಮನಿಸಿದಾಗ ಈ ವಿಂಗಡಣೆ ತಾರ್ಕಿಕವಾಗಿ ಇಲ್ಲದಿರುವುದು ಕಂಡುಬರುತ್ತದೆ.ಈ ಪಣಕಟ್ಟು ವ್ಯವಸ್ಥೆಯಲ್ಲಿ ವರ್ಣಾಶ್ರಮದ ಬ್ರಾಹ್ಮಣ ಮತ್ತು ಕ್ಷತ್ರಿಯ ಹಾಗೂ ಮೇಲ್ವರ್ಗದ ಶೂದ್ರವರ್ಗದ ಜಾತಿಗಳು ತಟಸ್ಥವಾಗಿ ಉಳಿದಿವೆ. ಅಲ್ಲದೆ ಮಧ್ಯಸ್ಥರೆಂದು ಕರೆಯಲಾಗುವ ಬ್ರಾಹ್ಮಣರು, ಪಟ್ಟನೂಲುಕಾರರು, ವೆಲ್ಲಾಳರು, ರೆಡ್ಡಿಗಳು, ತೋಟಿಗಳು, ಮರಾಠಿಗಳು, ತೆಲುಗರು, ಮುಸಲ್ಮಾನರು, ರಜಪೂತರು, ಮುಂತಾದ ೬೯ ಜಾತಿಗಳು ತಟಸ್ಥ ಜಾತಿಗಳಾಗಿವೆ. ಬಹುತೇಕ ವಲಸಿಗ ಸಮುದಾಯಗಳನ್ನು ತಟಸ್ಥ ಜಾತಿಗಳೆಂದು ಪರಿಗಣಿಸಲಾಗಿದೆ.[೭೬] ಎರಡೂ ಪಣಕಟ್ಟುಗಳ ಕ್ರಮಾಂಕದಲ್ಲಿ ವ್ಯಾಪಾರಿ ಮತ್ತು ಕುಶಲಕರ್ಮಿ ಸಮುದಾಯಗಳಾದ ಪಾಂಚಾಳರು ಮತ್ತು ಬಣಜಿಗರು

ಅಗ್ರ ಶ್ರೇಯಾಂಕದಲ್ಲಿದ್ದರೆ, ಹೊಲೆಯ ಮತ್ತು ಮಾದಿಗರಂತಹ ಅಸ್ಪೃಶ್ಯ ಸಮುದಾಯಗಳು ಕಟ್ಟಕಡೆಯ ಶ್ರೇಯಾಂಕದಲ್ಲಿವೆ. ಯಾವ ಮಾನದಂಡವನ್ನು ಅನುಸರಿಸಿ ಈ ವಿಂಗಡಣೆಯನ್ನು ಮಾಡಲಾಗಿದೆ ಎಂಬ ಬಗ್ಗೆ ಸಹ ಖಚಿತವಾದ ಉತ್ತರ ಲಭ್ಯವಿಲ್ಲ.

ಹಿಂದೆಯೇ ಚರ್ಚಿಸಲಾದಂತೆ ಕರ್ನಾಟಕದ ಪ್ರಾಚೀನ ಶಾಸನಗಳಲ್ಲಿ ಹದಿನೆಂಟು ಜಾತಿ/ಪ್ರಕೃತಿಗಳ ಹೊರತಾಗಿ ಸ್ಪಷ್ಟವಾಗಿ ಪಣಕಟ್ಟುಗಳನ್ನು ಉಲ್ಲೇಖಿಸಿಲ್ಲ. ಆದರೆ, ಪಣವ್ಯಾಜ್ಯಗಳ ಸ್ವರೂಪದ ಕಲಹಗಳು ಕೆಲವು ಶಾಸನಗಳಲ್ಲಿ ಕ್ವಚಿತ್ತಾಗಿ ಉಲ್ಲೇಖಗೊಂಡಿವೆ ಮತ್ತು ಕೆಲವು ಶಾಸನಗಳಲ್ಲಿ ದಾನವನ್ನು ನೀಡುವ ಸಂದರ್ಭಗಳಲ್ಲಿ ನ್ಯಾಯನಿರ್ಣಯ ಪ್ರಕ್ರಿಯೆಗಳಲ್ಲಿ ಪಣಕಟ್ಟುಗಳು 'ಸಾಕ್ಷಿಗಳಾಗಿ' ಉಪಸ್ಥಿತರಿದ್ದ ಉಲ್ಲೇಖಗಳು ಕಂಡುಬರುತ್ತವೆ.

ಬರ್ಟನ್ ಸ್ಟೈನ್‌ರವರು "ಕರ್ನಾಟಕದ ದಕ್ಷಿಣ ಭಾಗದಲ್ಲಿ ಬಲಗೈ ಎಡಗೈ ಪಣಕಟ್ಟುಗಳಿವೆ. ಹನ್ನೆರಡು ಮತ್ತು ಹದಿಮೂರನೆಯ ಶತಮಾನಗಳಲ್ಲಿ ಅವು ಆರಾಧಿಸುವ ದೇವರ ಆಧಾರದ ಮೇಲೆ ಈ ಗುಂಪುಗಳ ಬಗ್ಗೆ ತಿಳಿಯಬಹುದಾಗಿತ್ತು. ವಿಷ್ಣು ಆರಾಧಕರು ಬಲಗೈ ಗುಂಪಿನವರಾದರೆ ಶಿವನ ಆರಾಧಕರು ಎಡಗೈ ಗುಂಪಿನವರಾದರು" ಎನ್ನುತ್ತಾರೆ.[೭೭]

ಮೈಸೂರಿನಲ್ಲಿ ಈ ಪಣಕಟ್ಟುಗಳ ವಿಂಗಡಣೆಯನ್ನು ದೇಶ (ಪರದೇಶೀಯರು) (ಪರಸ್ಥಳಸ್ಥರು) ಮತ್ತು ನಾಡು (ದೇಶೀಯರು) (ಸ್ಥಳೀಯರು) ಎಂದು ಹೆಸರಿಸಲಾಗಿದ್ದು, ಇದು ಸ್ಥಳೀಯ ವ್ಯಾಪಾರಿ ಸಮುದಾಯ ಮತ್ತು ಪ್ರಭಾವಶಾಲಿ ವಲಸಿಗ ವ್ಯಾಪಾರಿಗಳ ನಡುವಿನ ವೃತ್ತಿಪರ ಅಸೂಯೆಯಿಂದಾಗಿ ಹುಟ್ಟಿಕೊಂಡಿರಬಹುದು.[೭೮]

ಕರ್ನಾಟಕದ ಕಂಚಿಪತ್ರ ಶಾಸನಗಳಲ್ಲಿ ತಳಸಮುದಾಯದ ಹೊಲೆಯ-ಮಾದಿಗ ಸಮುದಾಯಗಳು ಮಾತ್ರ ಪಣಕಟ್ಟು ಸಮಾಜದಲ್ಲಿ ಸಕ್ರಿಯವಾಗಿರುವುದು ಕಂಡುಬರುತ್ತದೆ. ನನ್ನ ಅಧ್ಯಯನದಲ್ಲಿ ದೊರೆತಿರುವ ಬಹುತೇಕ ಕಂಚಿಪತ್ರಗಳು ಇವರ ನಡುವಿನ ಕಲಹವನ್ನು ಮಾತ್ರ ದಾಖಲಿಸುತ್ತದೆ. ಉಳಿದಂತೆ, ಒಂದೇ ಪಣಕಟ್ಟುಗಳೊಳಗಿನ ಅಂತರ್‌ವ್ಯಾಜ್ಯಗಳನ್ನು ಎಂದರೆ, ಬಲಗೈ ಪಣಕಟ್ಟುಗಳಲ್ಲಿ ಬರುವ ಬಣಜಿಗ ಮತ್ತು ಕುರುಬರ ನಡುವೆ, ಅಗಸ ಮತ್ತು ಕ್ಷೌರಿಕರ ನಡುವೆ ಹೆಚ್ಚು ಕಲಹಗಳು ಉದ್ಭವವಾಗಿರುವುದು ಕಂಡುಬರುತ್ತದೆ. ಆದ್ದರಿಂದ ಇವುಗಳನ್ನು ಪಣವ್ಯಾಜ್ಯಗಳೆಂದು ಕರೆಯಬಹುದೇ ಎಂಬ ಪ್ರಶ್ನೆ ಮೂಡುತ್ತದೆ. ಆದರೆ ಇವುಗಳ ರಾಚನಿಕ ಸ್ವರೂಪ, ಇವುಗಳು ಅಂತಿಮವಾಗಿ ತೀರ್ಮಾನವಾಗುವುದು ಪಣವ್ಯಾಜ್ಯಗಳ ಕೇಂದ್ರವಾದ ಕಂಚಿಯಲ್ಲೇ ಆಗಿರುವುದರಿಂದ ಇವುಗಳನ್ನು ಪಣ ವ್ಯಾಜ್ಯಗಳ ಪರಿಧಿಯಲ್ಲಿಯೇ ಚರ್ಚಿಸುವುದು ಸೂಕ್ತವಾಗಿದೆ.

೪.೨.೨ **ಕಂಚಿ, ಕಂಚಿಪತ್ರಗಳು ಮತ್ತು ಪಣವ್ಯಾಜ್ಯಗಳು**

ಜಯರೇಖೆಗಳ ಮುಂದುವರೆದ ರೂಪರಚನೆಗಳಾದ ಕಂಚಿಪತ್ರಗಳನ್ನು ಕಂಚಿನ ಪತ್ರ, ತಾಮ್ರ ಪತ್ರ, ಕಂಚಿನ ಸನದುಗಳು, ಬ್ರಹ್ಮಕಪಾಲ ಪತ್ರ ಎಂದೂ ಸಹ ಕರೆಯಲಾಗಿದೆ. ಕಂಚಿ ಪತ್ರದ ಪೂರ್ವಪದ 'ಕಂಚಿ'ಯು ಸ್ಥಳವಾಚಿಯಾಗಿದ್ದು, ದಕ್ಷಿಣ ಭಾರತದ ಪ್ರಖ್ಯಾತ ಶಾಕ್ತಪೀಠವಾದ ಕಂಚಿಯನ್ನು ಸೂಚಿಸುತ್ತದೆ.

ಕರ್ನಾಟಕದ ಪಣವ್ಯಾಜ್ಯಗಳ ಕಂಚಿಯ ಸುತ್ತಲೇ ಪರಿಭ್ರಮಿಸುತ್ತವೆನ್ನುವುದು ಗಮನಾರ್ಹ ಸಂಗತಿ. ಕಂಚಿಯನ್ನು ಕೇಂದ್ರವಾಗಿಟ್ಟುಕೊಂಡು ಮತ್ತು ಆತ್ಯಂತಿಕವಾಗಿ ಕಂಚಿಯಲ್ಲೇ ಅಂತಿಮಗೊಳ್ಳುವ ಪಣವ್ಯಾಜ್ಯಗಳು ಕಂಚಿಪತ್ರಗಳಲ್ಲಿ ದಾಖಲುಗೊಂಡಿವೆ. ಈ ಹಿನ್ನಲೆಯಲ್ಲಿ ಕಂಚಿಗೂ, ಕಂಚಿಪತ್ರಗಳಿಗೂ ಮತ್ತು ಪಣವ್ಯಾಜ್ಯಗಳಿಗೂ ಇರುವ ತಾದ್ಯಾತ್ಮಕ ಸಂಬಂಧವನ್ನು ಕಂಡುಕೊಳ್ಳುವುದು ಸೂಕ್ತವೆನಿಸುತ್ತದೆ.

ಕಂಚಿಯು ತೊಂಡೈಮಂಡಲಂನ ಆಡಳಿತ ಘಟಕವಾಗಿದ್ದು, ಕಚ್ಚಿ, ಕಚ್ಚಿಪ್ಪೇಡು, ಕಾಂಚಿ, ಕಾಂಚೀನಗರ, ಕಾಂಚಿಮಾನಗರ ಎಂಬ ಹೆಸರುಗಳಿಂದ ಕರೆಯಲ್ಪಟ್ಟಿದೆ[೭೯] ಕಂಚಿಯ ಮೂಲ ಹೆಸರು 'ಕಚ್ಚಿ'. ಇದು ಸಂಗಂ ಸಾಹಿತ್ಯದಲ್ಲಿ ಆಳ್ವಾರರ ದಿವ್ಯ ಪ್ರಬಂಧಗಳಲ್ಲಿ ಮತ್ತು ತೇವಾರಂಗಳಲ್ಲಿ ಉಲ್ಲೇಖಗೊಂಡಿದೆ. ಮಣಿಮೇಖಲೈ ಕಾವ್ಯದಲ್ಲಿ 'ಕಚ್ಚಿಮಾನಗರ್–ಪುಕ್ಕ ಕಾಡೈ' ಎಂಬ ಹೆಸರಿನ ಒಂದು ಅಧ್ಯಾಯವೇ ಇದ್ದು. ಅಲ್ಲಿ ಕಾಂಚಿ ಎಂಬ ಹೆಸರೂ ಕಂಡುಬರುತ್ತದೆ. ಹದಿನಾಲ್ಕನೆಯ ಶತಮಾನದ ವೇಳೆಗೆ 'ಕಾಂಚಿ' ಹೆಸರು ಚಾಲ್ತಿಗೆ ಬರುತ್ತದೆ. ಅದರೊಂದಿಗೆ ತಮಿಳು ಸಾಹಿತ್ಯ ಕೃತಿಗಳಲ್ಲಿ ಕಚ್ಚಿ ಎಂಬ ಹೆಸರೂ ಮುಂದುವರೆಯುತ್ತದೆ.[೮೦] ಕಚ್ಚಿ ಮರಗಳಿಂದ ಸುತ್ತುವರೆದ ಸ್ಥಳವೇ ಕಾಚ್ಚಿ ಅಥವಾ ಕಚ್ಚಿಯಾಗಿದ್ದು, ಅದರ ಸಂಸ್ಕೃತ ರೂಪವೇ ಕಾಂಚಿಯಾಗಿದೆಯೆಂಬುದು ವಿದ್ವಾಂಸರ ಅಭಿಪ್ರಾಯ.[೮೧]

ಕಂಚಿಯು ಪ್ರಧಾನವಾಗಿ ಶಾಕ್ತ ನೆಲೆಯಾಗಿತ್ತು. ಇಲ್ಲಿಯ ಮೂಲ ಅಧಿದೇವತೆ ಕಾಳಿ. ಕಾಳಿಯ ಆರಾಧನೆ ಪ್ರಚಲಿತವಿರುವ ಸ್ಥಳವನ್ನು ತಮಿಳಿನಲ್ಲಿ ಕಾಮಕೊಟ್ಟಂ ಎಂದು ಕರೆಯುತ್ತಾರೆ. ಕಾಮಂ, ಕಾಮಮರಂನ ಸಂಕ್ಷಿಪ್ತ ರೂಪವಾಗಿದೆ. ಕಾಮಮರಂ ಎಂದರೆ ಮಾವಿನ ಮರ. ಹಾಗಾಗಿ ಮಾವಿನ ತೋಪಿನಲ್ಲಿರುವ ದೇವಾಲಯವೆಂದು ಅರ್ಥವಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ. ವೆಂಕಟರಾಮನ್‌ರವರು "ಕಾಮಕೋಟಂ ಜೈನಯಕ್ಷಿಗೆ ಸಂಬಂಧಿಸಿದ್ದು ಕಂಚಿಯು ಮೂಲತಃ ಜೈನಕ್ಷೇತ್ರವಾಗಿದ್ದು, ತರುವಾಯ ಶಾಕ್ತರು, ಅದನ್ನು ತಮ್ಮದನ್ನಾಗಿ ಮಾಡಿಕೊಂಡಿರಬಹುದೆಂದು" ಅಭಿಪ್ರಾಯಪಡುತ್ತಾರೆ.[೮೨]

ಕಂಚಿ, ಬೌದ್ಧ, ಜೈನ, ಶಾಕ್ತ, ಶೈವ, ವೈಷ್ಣವ ಧರ್ಮಗಳೆಲ್ಲದಕ್ಕೂ ನೆಲೆಯನ್ನು ಒದಗಿಸಿತ್ತು. ಇಲ್ಲಿರುವ ಏಕಾಮ್ರನಾಥ ದೇವಾಲಯದ ಮೂಲ ಹೆಸರು ಏಕಂಬನ್ ಆಗಿದ್ದು ಇದು ಕಂಬದ ಆರಾಧನೆಯನ್ನು ಸಂಕೇತಿಸುತ್ತದೆ. ಬೌದ್ಧರಲ್ಲಿ ಆಯಕ ಸ್ಥಂಭಗಳ ಸ್ಥಾಪನೆಯ ಪರಂಪರೆ

ಇರುವುದರಿಂದ, ಇದು ಮೂಲತಃ ಬೌದ್ಧ ಆರಾಧನಾ ಕೇಂದ್ರವಾಗಿರಬಹುದೆಂಬ ಅಭಿಪ್ರಾಯವೂ ಇದೆ. ಬೌದ್ಧ ಪಂಥದ ವಜ್ರಯಾನ ಶಾಖೆಯ ನಾಗಾರ್ಜುನ ಕಂಚಿಯಲ್ಲಿ ಶಾಕ್ತ ದೇವಿಯನ್ನು ಒಲಿಸಿಕೊಂಡನೆಂಬ ಮಾತೂ ಇದೆ.[೮೩] "ಕಾಮಕೋಟಂನಲ್ಲಿರುವ ಕಾಮಾಕ್ಷಿಯ ವಿಗ್ರಹ ಮೂಲತಃ ಬೌದ್ಧರ ತಾರಾಭಗವತಿಯ ರೂಪವಾಗಿತ್ತು' ಎಂಬ ಅಭಿಪ್ರಾಯವೂ ಇದೆ.[೮೪] ಶಾಸನ ಮತ್ತು ಸಾಹಿತ್ಯ ದಾಖಲೆಗಳಿಂದ ಈ ದೈವಿಕ ಚಿಹ್ನೆಯನ್ನು ಸುಮಾರು ಹನ್ನೆರಡನೆಯ ಶತಮಾನದವರೆಗೂ ಏಕಂಬನ್ ಅಥವಾ ಕಂಬನ್ ಎಂದೇ ಕರೆಯಲಾಗುತ್ತಿತ್ತು.[೮೫] ಹ್ಯೂ-ಯೆನ್-ತ್ಸಾಂಗನು ಕಾಂಚಿಯಲ್ಲಿನ ಹಲವಾರು ಬೌದ್ಧ ಆರಾಧನಾ ಕೇಂದ್ರಗಳಲ್ಲಿ ಜೈನ ದಿಗಂಬರರಿಗೂ ಅವಕಾಶ ನೀಡುತ್ತಿದ್ದರೆಂದು ಉಲ್ಲೇಖಿಸುತ್ತಾನೆ. ಕಂಚಿಯಲ್ಲಿ ಎಂಟನೆಯ ಶತಮಾನದವರೆಗೆ ಜೈನ ಧರ್ಮವೂ ಪ್ರಬಲವಾಗಿತ್ತು. ವೆಂಕಟರಾಮನ್‌ರವರು "ಬಹುಶಃ ಒಂಭತ್ತನೆಯ ಶತಮಾನದ ವೇಳೆಗೆ ಜೈನ ಕಾಮಕೋಟಂಗೆ ತೀರಾ ನಿಕಟವಾಗಿ ಶಾಕ್ತ ದೇವಾಲಯ ಅಸ್ತಿತ್ವಕ್ಕೆ ಬಂತೆಂದು ತೋರುತ್ತದೆ ಮತ್ತು ಜೈನ, ಬೌದ್ಧ ಮತ್ತು ಶಾಕ್ತರಿಗೆ ಸಂಬಂಧಿಸಿದ ಆರಾಧನಾ ಸ್ಥಳಗಳು ಪರಸ್ಪರ ಒಂದಕ್ಕೊಂದು ಹೊಂದಿಕೊಂಡಂತೆ ಇದ್ದಿರಬೇಕು" ಎಂದು ಅಭಿಪ್ರಾಯಪಡುತ್ತಾರೆ.[೮೬]

ತಮಿಳು ಸಾಹಿತ್ಯದಲ್ಲಿ ದೇವಿಯನ್ನು ಕೃಷ್ಣವರ್ಣದವಳಾಗಿದ್ದಳೆಂದು ಮತ್ತು ಮೇಘವರ್ಣೆಯೆಂದು ವರ್ಣಿಸಲಾಗಿದೆ. ಸಂಬಂಧಾರ್‌ರ ತೇವಾರಂಗಳಲ್ಲಿ 'ಕಾಮಕೋಡಿ' ಎಂದು ವರ್ಣಿಸಲಾಗಿದೆ. 'ಕೋಡಿ' ಎಂಬುದು ಕಪ್ಪುದೇವತೆ ದುರ್ಗಾಳ ಹೆಸರುಗಳಲ್ಲಿ ಒಂದಾಗಿದೆ. ಹಾಗಾಗಿ ಕಾಮಕೋಟಿಯ ಮೂಲ ಅರ್ಥ ದುರ್ಗೆ ಅಥವಾ ಕಾಳಿ ಆಗಿದ್ದು, ನಂತರ ಕಾಮಾಕ್ಷಿ ಅಥವಾ ತಮಿಳಿನ ಕಾಮಕನ್ನೆಯಾಗುತ್ತಾಳೆ. ಶಂಕರಾಚಾರ್ಯರು ಕಂಚಿಗೆ ಭೇಟಿ ನೀಡಿದಾಗ ಅಲ್ಲಿ ಶ್ರೀಯಂತ್ರವನ್ನು ಸ್ಥಾಪಿಸಿ ಕಾಳಾಮುಖ ಪೂಜಾ ಆರಾಧನಾ ವಿಧಾನವನ್ನು ಸೌಮ್ಯ ಪೂಜಾ ಆರಾಧನಾ ವಿಧಾನಕ್ಕೆ ಬದಲಾಯಿಸಿದನೆಂದು ಹೇಳಲಾಗುತ್ತದೆ.[೮೭]

ಹನ್ನೆರಡನೆಯ ಶತಮಾನದ ವೇಳೆಗೆ ಹಳೆಯ ಕಾಮಕೋಟಂ ಅಥವಾ ಕಾಳಿ ದೇವಾಲಯದ ಜೊತೆಗೆ ಹೊಸ ದೇವಾಲಯವೂ ನಿರ್ಮಾಣವಾಗುತ್ತದೆ. ಸ್ಥಳ ಪುರಾಣವಾದ "ಕಾಮಾಕ್ಷಿ ಲೀಲಾ ಪ್ರಭಾವಂನಲ್ಲಿ ಹೊಸ ಕಾಮಕೋಟಂಗೆ ಹೊಂದಿಕೊಂಡಂತೆ ಕಾಳಿ ದೇವಾಲಯವಿದೆ. ದೇವಿ ತನ್ನ ಕೈಗಳಿಂದ ಶಿವನ ಕಣ್ಣುಗಳನ್ನು ಮುಚ್ಚಿಕೊಂಡಿದ್ದರಿಂದ ಅವಳು ಕಪ್ಪುವರ್ಣದವಳಾದಳು". ಮತ್ತೆ ಅದೇ ಸ್ಥಳದಲ್ಲಿ ತಪಸ್ಸು ಮಾಡಿ, ತನ್ನ ಕಪ್ಪು ವರ್ಣವನ್ನು ಕಳೆದುಕೊಂಡಳು. ಅವಳನ್ನು ಹೊಸ ಸ್ಥಳದಲ್ಲಿ ಪ್ರತಿಷ್ಠಾಪಿಸಲಾಯಿತು ಎಂದು ಹೇಳಲಾಗಿದೆ.[೮೮]

ಐತಿಹ್ಯಗಳ ಪ್ರಕಾರ ದೇವಿಯು ರಾತ್ರಿ ಸಮಯದಲ್ಲಿ ಕಾಳಿಯ ರೂಪತಾಳಿ ಜನರಲ್ಲಿ ಭಯ ಸೃಷ್ಟಿಸುತ್ತಿದ್ದಳು. ಅವಳನ್ನು ಒಲಿಸಿಕೊಳ್ಳಲು ಶಂಕರಾಚಾರ್ಯರು ತಪಸ್ಸು ಮಾಡುತ್ತಾರೆ. ಅವರ ಭಕ್ತಿಗೆ

ಒಲಿದ ಕಾಳಿ, ಶಂಕರಾಚಾರ್ಯರ ಅನುಮತಿಯಿಲ್ಲದೆ ದೇವಾಲಯದ ಹೊರಗೆ ಬರುವುದಿಲ್ಲವೆಂದು ಹೇಳಿ ಶಂಕರಾಚಾರ್ಯರು ಸ್ಥಾಪಿಸಿದ ಶ್ರೀಚಕ್ರ ಯಂತ್ರದಲ್ಲಿ ನೆಲೆಗೊಳ್ಳುತ್ತಾಳೆ.[೮೯] ಶಂಕರಾಚಾರ್ಯರು ಕಾಮಕೋಟಿಯಂಬಿಕಾ ದೇವಿಯ ಕಟ್ಟಾ ಆರಾಧಕರಾಗಿದ್ದು. ಅವರು ಕಂಚಿಯಲ್ಲಿ ಸ್ಥಾಪಿಸಿದ ಕಾಮಕೋಟಿಯ ಪೀಠವನ್ನು, ರಾಮಾನುಜಾಚಾರ್ಯರ ಅನುಯಾಯಿಗಳು ವಿಷ್ಣು ಕಂಚಿಯಲ್ಲಿ ಪ್ರಭಾವಶಾಲಿಗಳಾದಾಗ ಶಿವಕಂಚಿಗೆ ಸ್ಥಳಾಂತರಿಸಲಾಯಿತು.[೯೦]

ಕಂಚಿ ಪ್ರಮುಖ ವಿದ್ಯಾಕೇಂದ್ರವಾಗಿದ್ದು ಇಲ್ಲಿನ ಘಟಿಕಾ ಸ್ಥಾನದಲ್ಲಿಯೇ ಕದಂಬ ಮಯೂರ ಶರ್ಮ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಆದ ಅವಮಾನಕ್ಕೆ ಪ್ರತೀಕಾರ ತೀರಿಸಿಕೊಳ್ಳಲು ಸೈನ್ಯ ಸಂಘಟನೆ ಮಾಡಿ ಕದಂಬ ಸಾಮ್ರಾಜ್ಯ ಸ್ಥಾಪಿಸಿದನೆಂದು ತಾಳಗುಂದದ ಸ್ತಂಭಶಾಸನ ದಾಖಲಿಸುತ್ತದೆ. ಚೀನಾ ಪ್ರವಾಸಿ ಹ್ಯೂಯೆನ್‌ತ್ಸಾಂಗ್ ಕಂಚಿಯನ್ನು ಪ್ರಮುಖ ವಿದ್ಯಾಕೇಂದ್ರವಾಗಿತ್ತೆಂದು ದಾಖಲಿಸುತ್ತಾನೆ.

ಇತಿಹಾಸದ ಆರಂಭ ಕಾಲದಿಂದಲೂ ಬೌದ್ಧ, ಜೈನ, ಶೈವ, ಶಾಕ್ತ, ವೈಷ್ಣವ ಆರಾಧನಾ ನೆಲೆಗಳಾಗಿ, ಪ್ರಮುಖ ವಿದ್ಯಾಕೇಂದ್ರವಾಗಿ ಬೆಳೆದು ಬಂದ ಕಂಚಿಯು ಹೇಗೆ ಮತ್ತು ಯಾವಾಗ ಪಣಕಟ್ಟುಗಳ ಅಸ್ತಿತ್ವಕ್ಕೆ ಮೂಲ ನೆಲೆಯಾಗಿ ಬದಲಾಯಿತೆಂಬುದು ತಿಳಿದುಬರುತ್ತಿಲ್ಲ. ವಿಪರ್ಯಾಸ ವೆಂದರೆ ಕಂಚಿಯ ಶಾಕ್ತದೇವತೆ ಕಾಳಿಯ ಸಮ್ಮುಖದಲ್ಲಿ ಅಥವಾ ಕಾಳಿಯ ಕಾರಣದಿಂದಾಗಿ ದಕ್ಷಿಣ ಭಾರತದಲ್ಲಿ ಪಣಕಟ್ಟುಗಳ ಸಮಾಜ ಅಸ್ತಿತ್ವಕ್ಕೆ ಬಂದಿದ್ದರೆ, ಅದೇ ಕಂಚಿಯ ಪ್ರಸಿದ್ಧ ವೈಷ್ಣವ ಕೇಂದ್ರ ವರದರಾಜಸ್ವಾಮಿ ದೇವಾಲಯ ಪಣವ್ಯಾಜ್ಯಗಳನ್ನು ಇತ್ಯರ್ಥಗೊಳಿಸುವ ವೇದಿಕೆಯಾಗಿ, ನ್ಯಾಯ ಸ್ಥಾನವಾಗಿ ರೂಪುಗೊಂಡಿತು.

ಹಿಂದಿನ ಉಪ ಅಧ್ಯಾಯಗಳಲ್ಲಿ ಚರ್ಚಿಸಲಾದಂತೆ ಬಲಗೈ ಮತ್ತು ಎಡಗೈ ಪಣಕಟ್ಟುಗಳು ಕಂಚಿಯ ಕಾಳಿಯಿಂದ ಹುಟ್ಟಿಕೊಂಡವೆಂಬ ಐತಿಹ್ಯದ ಬೆಳಕಿನಲ್ಲಿ ವಿಶ್ಲೇಷಿಸುವುದಾದರೆ, ಪಣಕಟ್ಟುಗಳು ಕಂಚಿಯ ಕಾಳಿದೇವಿಯ ಆರಾಧನಾ ವಿಧಾನಕ್ಕೆ ಸಂಬಂಧಪಟ್ಟಂತೆ ಉಂಟಾದ ಕಲಹಗಳಿಂದ ಹುಟ್ಟಿಕೊಂಡವೇ ಎಂದು ಯೋಚಿಸಲು ಅವಕಾಶವಿದೆ. ಬಹುಪಠ್ಯಗಳಲ್ಲಿ ದೊರೆಯುವ ಕಾಳಿಕಾದೇವಿಯ ತೇರು, ಕಂಚಿ ಶಾಸನ, ಮಾದಿಗ ಮಾಸ್ತೀಕರ ವೃತ್ತಿ ಮೂಲ ಕಂಚಿಪತ್ರ, ಪೆದ್ದಿಂಟಿಗೊಲ್ಲರ ಜಯರೇಖೆಗಳ ಕಥನ ವಿನ್ಯಾಸ ಒಂದೇ ರೀತಿ ಇದೆ. ಮೂರು ತಾಮ್ರಪತ್ರಗಳಲ್ಲೂ ಸ್ಪಷ್ಟವಾಗಿ ಕಂಚಿಯ ಕಾಳಿಯ ತೇರು ಕದಲದೇ ಇದ್ದಾಗ, ಪೆದ್ದಿಂಟಿಗೊಲ್ಲರ ಹನುಮಂತ ತನ್ನ ಪವಾಡಗಳಿಂದ, ತೇರು ಕದಲುವಂತೆ ಮಾಡಿದೆ ಎನ್ನುವ ಕಥನವಿದೆ. ಎಂದರೆ ಬಹುಶಃ ಮೊದಲಿನಿಂದಲೂ ಕಂಚಿಯ ಕಾಳಿಕಾದೇವಿಯ ತೇರನ್ನೆಳೆಯುವ ವಿಷಯದಲ್ಲಿ ಅಲ್ಲಿ ಬಲಗೈ ಮತ್ತು ಎಡಗೈ ಗುಂಪುಗಳ ಮಧ್ಯೆ ಸಂಘರ್ಷ ನಡೆಯುತ್ತಿತ್ತೆಂದು ತೋರುತ್ತದೆ. ಆದರೆ ಈ ಕಥನಗಳನ್ನು ಒಳಗೊಂಡ ಕಂಚಿಪತ್ರಗಳು ದೊರೆಯುವುದು ವರದರಾಜಸ್ವಾಮಿ ದೇವಾಲಯದಲ್ಲಿ. ಮತ್ತೊಂದು ಗಮನಿಸಬಹುದಾದ ಅಂಶವೆಂದರೆ ಈ ಕಲಹಗಳಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುವುದು ಮತ್ತು

ಮೇಲುಗೈ ಸಾಧಿಸುವುದು. ಒಂಭತ್ತು ಪಣಕಟ್ಟುಗಳ ಎಡಗೈ ಸಮುದಾಯ. ಈ ಗುಂಪಿನ ಮುಂಚೂಣಿಯಲ್ಲಿರುವವರು ಪಾಂಚಾಳರಾದರೆ, ಕೊನೆಯಲ್ಲಿರುವವರು ಜಾಂಬವ ಸಮುದಾಯದವರು. ಕಾಳಿ ಪಾಂಚಾಲರ ಪ್ರಮುಖ ಆರಾಧನಾ ದೇವತೆಯಾಗಿದ್ದಾಳೆ. "ಇಂದಿಗೂ ಮೂಲ ಕಾಮಾಕ್ಷಿ ದೇವಾಲಯದ ಮುಖ್ಯ ಬೀದಿಯ ಎರಡೂ ಕಡೆಗಳಲ್ಲಿ ಪಂಚಾಲರಲ್ಲಿ ಒಬ್ಬರಾದ ವಿಶ್ವಕರ್ಮ ಅಕ್ಕಸಾಲಿಗರೇ ನೆಲೆಸಿದ್ದಾರೆ. ೬೦ ವರ್ಷಗಳ ಹಿಂದೆ ಈ ಮೂಲ ಕಾಮಾಕ್ಷಿಯ ಅರ್ಚಕರಾಗಿದ್ದದ್ದು ಕೂಡ ಇದೇ ಅಕ್ಕಸಾಲಿಗರು. ಆದರೆ ನ್ಯಾಯಾಲಯದ ಮೂಲಕ ಪುರೋಹಿತವರ್ಗ ಮೂಲ ಕಾಮಾಕ್ಷಿಯ ಪೌರೋಹಿತ್ಯದ ಹಕ್ಕನ್ನು ತನ್ನದಾಗಿಸಿಕೊಂಡಿತಂತೆ . . . ಕಾಲಿಕಾ ದೇವಿಯನ್ನು ವಿಶ್ವಕರ್ಮನ ತಾಯಿಯೆಂದು 'ತಂಗಡಿದ್ಯಾವರ ಕತೆ' ಯಲ್ಲಿ ಗುರುತಿಸಿರುವುದೂ, ಅಂತಹ ಕಾಲಿಯನ್ನು ವಿಶ್ವಕರ್ಮ ಆದಿ ಜಾಂಬವಂತನ ಬಳಿ ಶಾಶ್ವತವಾಗಿ ಅಡವಿಟ್ಟು ಬಿಟ್ಟಿದ್ದು, ಮಾದಿಗರು ಈ ಆದಿ ಜಾಂಬವಂತನ ಸಂತತಿಯಾಗಿರುವಂತೆಯೇ, ಪಾಂಚಾಲ ಕುಲಗಳು ವಿಶ್ವಕರ್ಮನನ್ನು ತಮ್ಮ ಮೂಲ ಪುರುಷನನ್ನಾಗಿ ಹೊಂದಿರುವುದು. ಕಂಚಿಯ ಕಾಳಿಕಾದೇವಿಯ ತೇರನ್ನೆಳೆಯುವ ಕಂಚಿನ ಪತ್ರ ಈ ಎರಡು ಕುಲಗಳ ನಡುವಿನ ಆಂತರಿಕ ಸಂಬಂಧಗಳ ಬಗ್ಗೆ ಮಾಹಿತಿಯನ್ನು ನೀಡುವಂತಿದೆ".[೯೧]

ಕರ್ನಾಟಕದಲ್ಲಿ ಕಂಚಿಪತ್ರಗಳು ಹೆಚ್ಚಾಗಿ ದೊರೆತಿರುವುದು ತೆಲುಗು ಭಾಷಾ ವಲಯದಲ್ಲಿ. ಎಂದರೆ ತುಮಕೂರು, ಚಿತ್ರದುರ್ಗ, ಬೆಂಗಳೂರು ಗ್ರಾಮಾಂತರ, ಕೋಲಾರ ಪ್ರದೇಶಗಳಲ್ಲಿ. ನಿರ್ದಿಷ್ಟವಾಗಿ ಕರ್ನಾಟಕದ ಬಯಲು ಸೀಮೆ ಮತ್ತು ಆಂಧ್ರದ ರಾಯಲಸೀಮೆಯಲ್ಲಿ.

ಕಂಚಿಪತ್ರಗಳಲ್ಲಿ ಹೆಚ್ಚು ಕುತೂಹಲಕಾರಿಯಾಗಿ ಕಾಡಿದ ಅಂಶವೆಂದರೆ, 'ಕಂಚಿ' ನಗರದ ಉಪಸ್ಥಿತಿ. ಕುಲಮುಖೀ ಅಥವಾ ಕುಲಕಥನಗಳ ವಿಷಯಕ್ಕೆ ಬಂದಾಗ ಪ್ರತಿಯೊಂದು ಸಮುದಾಯಗಳೂ ತಮ್ಮ ಕುಲಗಳ ಮೂಲ–ಚೂಲವನ್ನು ಕಂಚಿಯ ಕಡೆಗೆ ಬೆರಳೆತ್ತಿ ತೋರಿಸುತ್ತವೆ. ತಮ್ಮ ಕುಲದ ಮೂಲ/ಚೂಲ, ಅನುಸರಿಸಬೇಕಾದ ಆಚಾರ–ಸಂಪ್ರದಾಯ, ಮುಂತಾದ ವಿವರಗಳು ಕಂಚಿಯ ಶಾಸನದಲ್ಲಿ ಇವೆಯೆಂದು ಹೇಳುತ್ತಾರೆ. ಪ್ರತಿಯೊಂದು ತಳ/ಒಳ ಸಮುದಾಯಕ್ಕೂ ಒಂದೊಂದು ಪ್ರತ್ಯೇಕ ಕಂಚಿಪತ್ರ ಅಥವಾ ಕಂಚಿಶಾಸನ ಇದೆಯೆಂದು ಹೇಳಿ ಕಂಚಿಯಲ್ಲಿರುವ ಪತ್ರದ ನಕಲು ತಮ್ಮ ಸಮುದಾಯಗಳ ಬಳಿ ಇದೆಯೆಂದು ಹೇಳಿಕೊಳ್ಳುತ್ತಾರೆ. ಕಂಚಿ ಶಾಸನಗಳಲೆಲ್ಲಾ ಕಂಚಿಗೆ ಮಹೋನ್ನತ ಸ್ಥಾನ ಲಭ್ಯವಾಗಿದೆ. ಕುಲವ್ಯಾಜ್ಯಗಳಿಗೆ ಅಥವಾ ಪಣ ವ್ಯಾಜ್ಯಗಳಿಗೆ ಸಂಬಂಧಿಸಿದಂತೆ ಉಂಟಾಗುವ ಕಲಹಗಳಿಗೆಲ್ಲಾ ಕಂಚಿಯು ಆಧುನಿಕ ಪರಿಕಲ್ಪನೆಯ ಸರ್ವೋಚ್ಚ ನ್ಯಾಯಾಲಯವು ನಿರ್ವಹಿಸುವ ಪಾತ್ರವನ್ನು ನಿರ್ವಹಿಸಿದೆ.

ತಳಸಮುದಾಯದ ಹಲವಾರು ಕುಲಕಥನಗಳೊಂದಿಗೆ ಕಂಚಿಯ ಹೆಸರು ತಳುಕು ಹಾಕಿಕೊಂಡಿದೆ. ಆ ಸಮುದಾಯಗಳಿಗೆ ಕಂಚಿ ಸಾಂಸ್ಕೃತಿಕ ಕ್ಷೇತ್ರವಾಗಿರುವುದಲ್ಲದೆ, ತಮ್ಮೆಲ್ಲಾ

ಕುಲಸಮುದಾಯಗಳ ಆಚಾರ-ವಿಚಾರ, ಕಟ್ಟಳೆಗಳಿಗೆ ಸಾಕ್ಷಿಪ್ರಜ್ಞೆಯಾಗಿ ಉಲ್ಲೇಖಗೊಂಡಿದೆ. ಕಂಚಿಪತ್ರಗಳಲ್ಲಿ ಕಂಡುಬರುವಂತೆ ಮಾದಿಗ ಮಾಸ್ತೀಕರು ವಾಸಿಸುತ್ತಿದ್ದುದು ಕಂಚಿಯಲ್ಲಿ. ಕಂಚಿಯಲ್ಲಿ ಹಲವಾರು ವರ್ಷಗಳಿಂದ ಹೂತುಹೋಗಿದ್ದ ಕಾಮಾಕ್ಷಿ ಅಮ್ಮನ ತೇರನ್ನು ಎಳೆದ ಹನುಮಂತರಾವು ಕಂಚಿಯವನು. ವಕ್ಕಲಿಗ ಸಮುದಾಯಗಳಾದ ರೆಡ್ಡಿ, ಗೌಡ, ಮುಂತಾದವರ ವಲಸೆಯ ಕತೆಗಳು ತಮ್ಮ ಮೂಲ ನೆಲೆಯನ್ನು ಕಂಡುಕೊಳ್ಳುವುದು ಕೂಡಾ ಕಂಚಿಯಲ್ಲೇ. ಈ ಹಿನ್ನೆಲೆಯಲ್ಲಿ ಹಲವಾರು ಪಣಕಟ್ಟು ಸಮುದಾಯಗಳಿಗೆ ನ್ಯಾಯ ನಿರ್ಣಯದ ಗಡಿಗಳಾಗಿದೆ. ಬಹುಶಃ ಕೆಳಸಮುದಾಯಗಳು ಕಂಚಿಯನ್ನು ತಮ್ಮ ಸಾಂಸ್ಕೃತಿಕ ಕೇಂದ್ರ ಹಾಗೂ ಗಡಿಯನ್ನಾಗಿ ಮಾಡಿಕೊಂಡಿದ್ದರೆಂದು ತೋರುತ್ತದೆ.

ಲಕ್ಷ್ಮೀಪತಿ ಕೋಲಾರರವರು ತಮ್ಮ ಮಾಸ್ತೀಕರ ಸಂಸ್ಕೃತಿ ಕೃತಿಯಲ್ಲಿ ಉಲ್ಲೇಖಿಸಿರುವ ತೆಲುಗು ಪತ್ರದ ಅನುವಾದ ಭಾಗದಲ್ಲಿನ

"ಕಂಚೀಲಿ ಹುಟ್ಟಿತೋ ನಿನ ನಾಮವು।
ಕಂಚಿ ದಡದಲ್ಲಿ ಬಿಟ್ಟಿತೋ ನಿನ ನಾಮವು।
ಚಂಬಲ್ಲಿ ಹುಟ್ಟಿತೋ ನಿನ ನಾಮವು।
ಚೆಂಬು ಚಕ್ರದಲ್ಲಿ ಬಿಟ್ಟಿತೋ ನಿನ ನಾಮವು॥

ಎಂಬ ಸಾಲುಗಳು ಮಾಸ್ತೀಕರ ಸಾಂಸ್ಕೃತಿಕ ಕೇಂದ್ರ ಕಂಚಿ ಎಂಬುದನ್ನು ದೃಢಪಡಿಸುತ್ತದೆ.

ಕೆಳ ಸಮುದಾಯಗಳ ಕುಲಾಚಾರಗಳಿಗೆ, ನ್ಯಾಯ ಪದ್ಧತಿಗೆ ಸಂಬಂಧಿಸಿದ ಶಾಸನಗಳು ಕಂಚಿಯಲ್ಲಿವೆ ಎಂಬ ನಂಬಿಕೆ ಬಲವಾಗಿ ಬೇರೂರಿದೆ. ಸಿಂದ್ ಮಾದಿಗರ ಕಂಚಿಪತ್ರದಲ್ಲಿ ಬಲಗೈ ಮತ್ತು ಎಡಗೈ ಪಣಕಟ್ಟುಗಳ ನಡುವೆ ಸಂಘರ್ಷ ನಡೆದಾಗ ಅದಕ್ಕೆ ಕಂಚಿಯ ಪತ್ರವನ್ನು ಆಧಾರವಾಗಿ ಅವಲಂಬಿಸಲಾಗಿದೆ. ಸಿಂದ್ ಮಾದಿಗರ ಕಥಾಭಾಗ ತೆಲುಗಿನಲ್ಲಿದ್ದು, ಲೇಖಕರಾದ ಕೋಟಗಾನಹಳ್ಳಿ ರಾಮಯ್ಯನವರು ಅದನ್ನು ಕನ್ನಡೀಕರಿಸಿದ್ದಾರೆ.

'ಇಲ್ಲಿ ಸಲ್ಲದೆಂದು ಜಗಳಕ್ಕೆ ಬಂದರೂನು
ಕಂಚೀಲಿ ಐತೆ ಶಾಸನವು
ಕಂಚಿ ಶಾಸನವ ಎಷ್ಟಂತ ಬರೆದಾರು
ಕಾಳಮ್ಮ ಮಗನೆ ನಮ್ಮ ಗುರುವು".[೯೨]

ಗೋಸಂಗಿಗಳ ಕಂಚಿ ಶಾಸನದ ಪ್ರಕಾರ ಚಲವಾದಿ-ಜಾಂಬವ ಸಮುದಾಯಗಳ ನಡುವೆ ಮದುವೆ ಆಚರಣೆಯಲ್ಲಿ ಬಳಸುವ ಕೆಲವು ಕುಲಚಹರೆಗಳಿಗೆ ಸಂಬಂಧಿಸಿದಂತೆ ಸಂಘರ್ಷವಾದಾಗ, ವಿಜಯನಗರದಲ್ಲೂ ವ್ಯಾಜ್ಯ ಇತ್ಯರ್ಥವಾಗದಿದ್ದಾಗ, ಕಂಚಿಯಲ್ಲೂ ಅಹವಾಲು ಸಲ್ಲಿಸಲಾಗುತ್ತದೆ. ಆಗ ಮದುವೆಗೆ ಗೋಸಂಗಿಗಳು ಬಳಸುವ ಐರಾಣೆ ಚಪ್ಪರ, ಕೆಂಪು ಕುದುರೆಯ ಮೇಲಿನ ಮೆರವಣಿಗೆ

ಗೋಸಂಗಿಗಳಿಗೆ ಸಲ್ಲುತ್ತವೆ. ನಿಮಗೆ ಸಲ್ಲುವುದಿಲ್ಲವೆಂದು ಹೇಳಿ ಕೆಲವು ವಿಹಿತಾಚಾರಗಳನ್ನು ವಿಧಿಸಿ ಪಾಲನೆ ಮಾಡುವಂತೆ ಆದೇಶ ಮಾಡುತ್ತಾರೆ.[೯] ಪಣಕಟ್ಟಿನಲ್ಲಿ ಬರುವ ಸಮುದಾಯಗಳ ನಡುವೆ ವ್ಯಾಜ್ಯಗಳು ಉಂಟಾದಾಗ ಅಂತಹ ಕುಲಾಚಾರಗಳಿಗೆ ಸಂಬಂಧಿಸಿದಂತೆ ಕಟ್ಟಳೆಗಳನ್ನು ವಿಧಿಸಿ, ಆಚರಣೆಗಳನ್ನು ಅಧಿಕೃತಗೊಳಿಸುವುದನ್ನು ಮತ್ತು ನಿರ್ದಿಷ್ಟಪಡಿಸುವುದನ್ನು ಕಂಚಿ ಪತ್ರಗಳಲ್ಲಿ ಕಾಣಬಹುದು. ಚಲವಾದಿ, ಜಾಂಬವಂತ, ಮಡಿವಾಳ, ಗೊಲ್ಲ, ಕ್ಷೌರಿಕ, ದಕ್ಕಲಿಗ, ಮಾಸ್ತಿಕರು, ಸಿಂದ್, ಮಾದಿಗರಂತಹ ಬಹುತೇಕ ಅರೆ ಅಲೆಮಾರಿ ಮತ್ತು ತಳಸಮುದಾಯಗಳು ತಮ್ಮ ಬಳಿ ಕಂಚಿಪತ್ರಗಳಿವೆಯೆಂದು ಹೇಳಿಕೊಳ್ಳುತ್ತಾರೆ.

ಗ್ರಾಮ ಪಂಚಾಯತಿ, ರಾಜಪ್ರಭುತ್ವದ ಸಮಕ್ಷಮದಲ್ಲಿ ಪರಿಹಾರವಾಗದ ವ್ಯಾಜ್ಯಗಳೂ ಸಹ ಅಂತಿಮವಾಗಿ ಆಶ್ರಯಿಸುತ್ತಿದ್ದುದು ಕಂಚಿಯನ್ನು. ಕಂಚಿಯಲ್ಲಿ ನೀಡುವ ತೀರ್ಪು ಅಂತಿಮವಾಗಿದ್ದು ಅದನ್ನು ಪ್ರಶ್ನಿಸುವುದಾಗಲೀ, ಅದರ ಬಗ್ಗೆ ಮತ್ತೆ ಮೇಲ್ಮನವಿ ಹೋಗುವುದಕ್ಕಾಗಲೀ ಅವಕಾಶವಿರಲಿಲ್ಲ.ಅಲ್ಲದೆ, ತಮ್ಮ ಕುಲಗಳಿಗೆ ಸಂಬಂಧಿಸಿದ ಮೂಲ ಶಾಸನವನ್ನು ಕಂಚಿಯಲ್ಲಿ ಬರೆದಿಟ್ಟು ಅಲ್ಲಿ ಸುರಕ್ಷಿಸಲಾಗಿದೆ ಎಂಬ ನಂಬಿಕೆಯನ್ನು ಹೊಂದಿರುತ್ತಿದ್ದರು. 'ಕಂಚಿ ಶಾಸನ'ದ ನೆಪದಲ್ಲಿ ಆಯಾ ಕುಲದ ಮುಖಂಡರು ಹಿಂದಿನಿಂದ ರೂಢಿಗತವಾಗಿ ನಂಬಿಕೊಂಡು ಬಂದ ಕುಲಾಚಾರ ಸಂಪ್ರದಾಯಗಳನ್ನಾಧರಿಸಿ ನ್ಯಾಯ ನಿರ್ಣಯಿಸುತ್ತಿದ್ದರು. ಕಂಚಿಪತ್ರಗಳ ಅಸಲಿತನದ ಬಗ್ಗೆ ಸಂಶಯ ವ್ಯಕ್ತಪಡಿಸುವಂತಿರಲಿಲ್ಲ. ಕಂಚಿಪತ್ರಗಳಲ್ಲಿರುವ ವಿಷಯವನ್ನು ಮುಂದೆ ಬರುವ ದೊರೆಗಳೂ ಅನುಸರಿಸಿಕೊಂಡು ಬರಬೇಕೆಂದು ಷರತ್ತು ವಿಧಿಸಲಾಗುತ್ತಿತ್ತು. ಕಂಚಿ ಶಾಸನವನ್ನು ಪೂರ್ವದಲ್ಲಿ ಭೂಮಿ ಹುಟ್ಟುವುದಕ್ಕೆ ಮೊದಲೇ ಹುಟ್ಟಿದ ಆದಿ ತಾತ ಜಾಂಬವಂತರು ಹಾಕಿಸಿದ್ದು, ತಪ್ಪು ಅಂದವರ ಬಾಯಲ್ಲಿ ಹುಳ ಬೀಳುತ್ತದೆ. ಐವತ್ತಾರು ದೇಶಕ್ಕೂ ಇದೇ ಶಾಸನ, ಇದರಂತೆ ನಡೆಯಬೇಕು. ಇದಕ್ಕೆ ತಪ್ಪಿದವನು ಹಂದಿ, ನರಿ, ನಾಯಿ, ಗೂಗೆಯ ಜನ್ಮ ತಾಳುತ್ತಾನೆ. ಮುಂದೆ ಬರುವ ದೊರೆಗಳು ಕಂಚಿ ಶಾಸನದಲ್ಲಿ ಇರುವ ಪ್ರಕಾರ ನಡೆದುಕೊಳ್ಳದಿದ್ದರೆ, ಹಿರಿಯ ಮಗನ ಕೊರಳುಕೊಯ್ದಂತೆ ಎಂಬ ಶಾಪಾಶಯಗಳಿಂದಿಗೆ ಕಂಚಿ ಪತ್ರ ಬರೆದುಕೊಡುತ್ತಿದ್ದರು. ಈ ವಿಷಯಗಳನ್ನೆಲ್ಲ ಮಹಾಕಂಚಿ ಕಾಮಾಕ್ಷಮ್ಮನವರ ವರದರಾಜಸ್ವಾಮಿ ಹಾಲ್ಯ ಮಧ್ಯದಲ್ಲಿರುವ ಕಂಚಿ ಶಾಸನದಲ್ಲಿ ಇದೆ. ಕಂಚಿ ನಗರಕ್ಕೆ ಅಧಿಕ ತರವಾದ ಅಧಿಪತಿಯಾದಂತಹ ನಡುಬೀದಿ ತಿರುಮಲಾಚಾರ್ಯರ ಸಹಸ್ರ ಅಕ್ಷರಗಳಿಂದ ಐದೂವರೆ ತೊಲ ಪ್ರಮಾಣದ ಶಾಸನವನ್ನು ತೆಪ್ಪ ಕೋಣೆಯಲ್ಲಿ ನಿರ್ಮಿಸಿರುತ್ತಾರೆ. ಅಸಲಿಗೆ ಸರಿಯಾದ ನಕಲು ಎತ್ತಿ ಬರೆಯಲಾಗಿದೆ ಎಂದು ಹೇಳಿ ಅಂತಿಮವಾಗಿ 'ಮಹಾಕಂಚಿ ಶಾಸನಕ್ಕೆ ಮಂಗಳಂ ಮಸ್ತು' ಎಂದು ಕಂಚಿ ಶಾಸನಗಳನ್ನು ಮುಕ್ತಾಯಗೊಳಿಸಲಾಗುತ್ತದೆ.[೧೦]

ಹಿಂದೆಯೇ ಚರ್ಚಿಸಲಾಗಿರುವಂತೆ ಬಹುಶಃ ದಕ್ಷಿಣ ಭಾರತದಾದ್ಯಂತ ಪ್ರಚಲಿತದಲ್ಲಿದ್ದ ಎಂಟು ಹಿಟ್ಟುಗಳು, ಹದಿನೆಂಟು ಜಾತಿಗಳು, ಹದಿನೆಂಟು ಪ್ರಕೃತಿಗಳು, ಹದಿನೆಂಟು ಕುಲಗಳು, ಸುಮಾರು

ಒಂಭತ್ತು–ಹತ್ತನೆಯ ಶತಮಾನದ ವೇಳೆಗೆ ಚೋಳರಾಜ್ಯದಲ್ಲಿ ಲೋಹಗಳ ಮೇಲೆ ವಿಧಿಸಿದ ಸುಂಕದ ಸಂಬಂಧದಲ್ಲಿ ವಿಧಿಸಲಾದ ಸಂಘರ್ಷಗಳಲ್ಲಿ ಬಲಗೈ ಮತ್ತು ಎಡಗೈ ಎಂದು ಎರಡು ಗುಂಪುಗಳಾಗಿ ರೂಪುಗೊಂಡು ಪಣಕಟ್ಟು ಸಮಾಜ ಅಸ್ತಿತ್ವಕ್ಕೆ ಬಂದಿರಬಹುದು. ನಂತರ ಚೋಳರು ತಲಕಾಡನ್ನು ಆಕ್ರಮಿಸಿಕೊಂಡು ತಮ್ಮ ಅಧಿಕಾರಿಗಳನ್ನು ಅಲ್ಲಿ ನೆಲೆಗೊಳಿಸಿದ ತರುವಾಯ, ರಾಮಾನುಜರು ಕರ್ನಾಟಕಕ್ಕೆ ಪ್ರವೇಶಿಸಿದ ನಂತರ ಕರ್ನಾಟಕದ ದಕ್ಷಿಣ ಭಾಗದಲ್ಲಿ ಬೀರಿದ ಪ್ರಭಾವದಿಂದ ಕರ್ನಾಟಕಕ್ಕೂ ಪಣಕಟ್ಟು ವ್ಯವಸ್ಥೆ ಪ್ರವೇಶವಾಗಿಯೆಂದು ಊಹಿಸಬಹುದಾಗಿದೆ.

ಕಂಚಿಪತ್ರಗಳನ್ನು ಗಮನಿಸಿದಾಗ ಮತ್ತು ಕುಲಕಟ್ಟಳೆಗಳಿಗೆ ಸಂಬಂಧಿಸಿದ ಕೈಫಿಯತ್ತುಗಳನ್ನು ಅಧ್ಯಯನ ಮಾಡಿದಾಗ, ಇಲ್ಲೆಲ್ಲಾ 'ತಾತಾಚಾರ್ಯರ' ಉಪಸ್ಥಿತಿ ಪ್ರಧಾನವಾಗಿ ಎದ್ದುಕಾಣುತ್ತದೆ. ಕಂಚಿಪತ್ರಗಳಲ್ಲಿ ಕಂಡುಬರುವ ತಳಸಮುದಾಯಗಳ ಗುರುವಾಗಿ ತಾತಾಚಾರ್ಯ ಕಂಡುಬರುತ್ತಾನೆ. ಕಲಬುರ್ಗಿಯವರ 'ಕರ್ನಾಟಕದ ಕೈಫಿಯತ್ತುಗಳು' ಪ್ರವರ್ಗದಲ್ಲಿ ಜಾತಿ–ಕುಲ ಸಂಬಂಧಿ ಕೈಫಿಯತ್ತುಗಳಿದ್ದು, ಅವುಗಳಲ್ಲಿ ಹೆಚ್ಚಿನ ಸಂಖ್ಯೆಯ ಕೈಫಿಯತ್ತುಗಳನ್ನು ತಮ್ಮ ಕುಲಗುರು 'ತಾತಾಚಾರ್ಯ' ಬರೆಸಿಕೊಟ್ಟುದಾಗಿ ಉಲ್ಲೇಖಿಸಲಾಗಿದೆ. ಹಾಗಿದ್ದರೆ, ಈ ತಾತಾಚಾರ್ಯನಿಗೂ, ಕಂಚಿಗೂ, ಕರ್ನಾಟಕದ ಕಂಚಿಪತ್ರಗಳಿಗೂ ಮತ್ತು ತಳಸಮುದಾಯಗಳಿಗೂ ಇರುವ ಸಾವಯವ ಸಂಬಂಧವೇನು? ಯಾವ ಕಾಲಘಟ್ಟದಲ್ಲಿ ತಾತಾಚಾರ್ಯ ಕರ್ನಾಟಕದ ದಕ್ಷಿಣ ಭಾಗದ ಸಮುದಾಯಗಳಿಗೆ ಕುಲಗುರುವಾದ ಎಂಬ ಬಗ್ಗೆ ಚರ್ಚಿಸುವುದು ಸೂಕ್ತವೆಂದು ಭಾವಿಸಲಾಗಿದೆ.

ಕರ್ನಾಟಕದಲ್ಲಿ ರಾಮಾನುಜರ ಪ್ರವೇಶದೊಂದಿಗೆ ಪಣಕಟ್ಟುಗಳ ಸಮಾಜವೂ ಕರ್ನಾಟಕಕ್ಕೆ ಪ್ರವೇಶಿಸಿತು. ಅದರಲ್ಲೂ ನಿರ್ದಿಷ್ಟವಾಗಿ ಕರ್ನಾಟಕದಲ್ಲಿ ಪಣಕಟ್ಟು ವ್ಯವಸ್ಥೆ ರೂಪುಗೊಂಡು ನೆಲೆ ನಿಲ್ಲಲು ರಾಮಾನುಜ ಪರಂಪರೆಯ ತಿರುಮಲೆ ತಾತಾಚಾರ್ಯರ ಮನೆತನದ ಕೊಡುಗೆ ಮಹತ್ವದ ಪಾತ್ರವಹಿಸಿದೆ.

ಕರ್ನಾಟಕದ ಬಲಗೈ ಪಣಕಟ್ಟು ಬಣದಲ್ಲಿ ಬರುವ ಹೆಚ್ಚಿನ ಸಂಖ್ಯೆಯ ಜಾತಿ ಸಮುದಾಯಗಳು ವೈಷ್ಣವರಾಧಕರು. ಬಹುಶಃ ಈ ಸಮುದಾಯ ಮೂಲತಃ ವೈಷ್ಣವರಾಗಿದ್ದರೆ? ಅಥವಾ ರಾಮಾನುಜಾಚಾರ್ಯರ ಪ್ರಭಾವದಿಂದ ತರುವಾಯ ವೈಷ್ಣವ ಧರ್ಮದೆಡೆಗೆ ಆಕರ್ಷಿತರಾದರೆ? ಎಂಬ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವಿದೆ.

ಕರ್ನಾಟಕದ ಜಾತಿ ಸಂಬಂಧಿ ಕೈಫಿಯತ್ತುಗಳ ಬಹುಪಾಲು ಬರಹಗಾರರು ತಾತಾಚಾರ್ಯ ಅಥವಾ ಅವು ತಾತಾಚಾರ್ಯನ ಪ್ರೇರಣೆಯಿಂದ ಅಥವಾ ಅವನ ಆದೇಶದ ಪ್ರಕಾರ ರಚನೆಯಾದುದಾಗಿವೆ. 'ತಾತಾಚಾರ್ಯ' ಪದವನ್ನು ಒಂದು ನಿರ್ದಿಷ್ಟ ಕಾಲಘಟ್ಟದ ಶಾಸನಗಳ ಹಿನ್ನೆಲೆಯಲ್ಲಿ ಒಬ್ಬ ವ್ಯಕ್ತಿನಾಮವಾಗಿ ಅಂಗೀಕರಿಸಬಹುದಾದರೂ, ಸುಮಾರು ಐದು ಶತಮಾನಗಳ ಕಾಲವ್ಯಾಪ್ತಿಯಲ್ಲಿ ತಾತಾಚಾರ್ಯ ಹೆಸರುಗಳು ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು ಶಾಸನಗಳಲ್ಲಿ

ಉಲ್ಲೇಖಗೊಂಡಿರುವ ಹಿನ್ನಲೆಯಲ್ಲಿ ಗಮನಿಸಿದಾಗ, ರಾಮಾನುಜ ಪರಂಪರೆಯ ಶ್ರೀವೈಷ್ಣವಧರ್ಮದ ಪ್ರಚಾರಕ್ಕೆ ಕರ್ನಾಟಕವನ್ನು ಪ್ರವೇಶಿಸಿದ ಒಂದು ಆಚಾರ್ಯ ಪರಂಪರೆಯೆಂದು ಪರಿಗ್ರಹಿಸ ಬೇಕಾಗುತ್ತದೆ. ಏಕೆಂದರೆ ಕ್ರಿ.ಶ. ಹದಿನಾಲ್ಕನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಹಲವಾರು ತಾತಾಚಾರ್ಯರು ಶಾಸನಗಳಲ್ಲಿ ಹಾಗೂ ಕೈಫಿಯತ್ತುಗಳಲ್ಲಿ ಮತ್ತು ಕಂಚಿಪತ್ರಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಕ್ರಿ.ಶ. ೧೩೬೮ರ ಬುಕ್ಕರಾಯನ ಶ್ರವಣಬೆಳಗೊಳ ಶಾಸನದಲ್ಲಿಯೇ ಜೈನ ಮತ್ತು ವೈಷ್ಣವ ಧರ್ಮಗಳ ನಡುವಿನ ಸಂಘರ್ಷಕ್ಕೆ ಸಾಕ್ಷಿಯಾಗಿ ತಾತಾಚಾರ್ಯ ಕಾಣಿಸಿಕೊಳ್ಳುತ್ತಾನೆ. ದಕ್ಷಿಣ ಭಾರತದಾದ್ಯಂತ ಆಳ್ವಿಕೆ ನಡೆಸಿದ ವಿಜಯನಗರ ಸಾಮ್ರಾಜ್ಯದಲ್ಲಿ ಆಂಧ್ರ, ತಮಿಳುನಾಡು, ಕರ್ನಾಟಕದಲ್ಲಿನ ಶಾಸನಗಳಲ್ಲಿ ಶ್ರೀವೈಷ್ಣವ ದೇವಾಲಯ ಮತ್ತು ಪೂಜಾರಾಧನಾ ವಿಧಾನಗಳಲ್ಲಿ ಈ ತಾತಾಚಾರ್ಯ ಪರಂಪರೆಯ ಹೆಸರು ಪುನರಾವರ್ತನೆಯಾಗುತ್ತದೆ.

"ತಾತಾಚಾರ್ಯರ ಶಿಷ್ಯರಾದ ಅನಂತಾಚಾರ್ಯರು ರಚಿಸಿದ 'ಪ್ರಪನ್ನಾಮೃತಂ' ಎಂಬ ಸಂಸ್ಕೃತ ಕೃತಿಯ ಪ್ರಕಾರ, ತಾತಾಚಾರ್ಯರು ರಾಮಾನುಜಾಚಾರ್ಯರ ಗುರುಗಳಾದ ತಿರುಮಲೈ ನಂಬಿ ಅಥವಾ ಶೈಲನಾಥನ ವಂಶಸ್ಥರು. ರಾಮಾಯಣ ಪಠಣದಲ್ಲಿ ಪರಿಣತಿ ಹೊಂದಿದ್ದ ಈ ಕುಟುಂಬದ ಸದಸ್ಯರಿಬ್ಬರೂ ತಿರುಪತಿಯಿಂದ ಏಟೂರಿಗೆ ಬಂದು, ಅಲ್ಲಿಂದ ವಿಜಯನಗರ ಅರಸರ ರಾಜಧಾನಿ ಹಂಪಿಗೆ ಬಂದರೆಂದು ಹೇಳಲಾಗುತ್ತದೆ".[೯೫] ಇವರು ವಿಜಯನಗರ ಅರಸರ ಗೌರವಾದರಗಳಿಗೆ ಪಾತ್ರರಾಗಿದ್ದರು. ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯದ ಪತನಾನಂತರ ವಿವಿಧ ಕಡೆ ಚದುರಿ ಹೋಗುತ್ತಾರೆ. ಒಂದನೆಯ ಶ್ರೀರಂಗನ ಕಾಲದಲ್ಲಿ ತಾತಾಚಾರ್ಯ ಕುಟುಂಬದ ಒಂದು ಶಾಖೆಗೆ ಸೇರಿದ ಏಟೂರು ಕುಮಾರ ತಿರುಮಲೆ ತಾತಾಚಾರ್ಯ ದೇವಾಲಯದ ಶ್ರೀ ಕಾರ್ಯದುರಂಧರನ್ ಆಗಿದ್ದಂತೆ ಶಾಸನ ಉಲ್ಲೇಖಿಸುತ್ತದೆ.[೯೬] ಈತ ಕ್ರಿ.ಶ. ೧೫೮೬ರಲ್ಲಿ ಒಂದನೆಯ ಶ್ರೀರಂಗನ ಉತ್ತರಾಧಿಕಾರಿಯಾಗಿ ಅಧಿಕಾರಕ್ಕೆ ಬಂದ ಇಮ್ಮಡಿ ವೆಂಕಟನ ಅವಧಿಯಲ್ಲೂ ರಾಜಗುರುವಾಗಿ ಮುಂದುವರೆಯುತ್ತಾನೆ."ವರದರಾಜಸ್ವಾಮಿ ಮತ್ತು ಇತರ ಕಡೆಗಳಲ್ಲಿ ದೊರೆತಿರುವ (೧೫೮೭–೧೬೧೪) ಶಾಸನಗಳಲ್ಲಿ ಕುಮಾರ ತಾತಾಚಾರ್ಯ ನೀಡಿರುವ ದಾನದತ್ತಿಗಳು, ಮುಂತಾದ ವಿಷಯಗಳನ್ನು ಉಲ್ಲೇಖಿಸಲಾಗಿದೆ.[೯೭] ಇವನ ನಂತರ ಇವನ ಮಗ ಏಟೂರು ಇಮ್ಮಡಿ ಕುಮಾರ ತಾತಾಚಾರ್ಯನ ಹೆಸರು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತದೆ. ೧೬೧೪ರಲ್ಲಿ ಇಮ್ಮಡಿ ವೆಂಕಟ ಮರಣ ಹೊಂದಿದಾಗ ಉಂಟಾದ ಆಂತರಿಕ ಕಲಹಗಳ ಹಿನ್ನಲೆಯಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರಾಬಲ್ಯ ಕ್ಷೀಣಗೊಂಡಾಗ, ಈ ಕುಟುಂಬ ಶ್ರೀರಂಗಪಟ್ಟಣಕ್ಕೆ ಬರುತ್ತದೆ. ಶಾಸನವೊಂದರ ಪ್ರಕಾರ ಇಮ್ಮಡಿ ತಿರುಮಲ ತಾತಾಚಾರ್ಯನ ಮೊಮ್ಮಗ, ಕೋಟಿ ಕನ್ಯಾದಾನಮ್ ಲಕ್ಷ್ಮೀ ಕುಮಾರ ತಾತಾಚಾರ್ಯನ ಮಗನಾದ ಏಟೂರು ವೆಂಕಟವರದಾಚಾರ್ಯ ಮೈಸೂರಿನ ದೇವರಾಜ ಒಡೆಯರ ಗುರುವಾಗಿದ್ದ.[೯೮] ಕ್ರಿ.ಶ. ೧೭೧೧ರಲ್ಲಿ ಏಟೂರು ಕುಮಾರ ತಿರುಮಲೈ ತಾತಾಚಾರ್ಯನ ವಂಶಜರು ಮೈಸೂರಿನಿಂದ ಕಂಚಿಗೆ ಮರಳಿದಾಗ, ಅವರು ತೆಂಕಲೈ ಸಂಪ್ರದಾಯ ಪಾಲಿಸಬೇಕೆಂಬ ಷರತ್ತಿನೊಂದಿಗೆ ಅವರಿಗೆ

ತೀರ್ಥ ಸ್ವೀಕಾರ, ಸ್ತೋತ್ರಗಳ ಪಠಣದಂತಹ ಷರತ್ತುಗಳೊಂದಿಗೆ ಮುಖ್ಯ ಸ್ಥಾನ ನೀಡಲಾಯಿತು.[೯೯] ಕೋಯಿಲ್ ಒಳಗು ಪ್ರಕಾರ ವರದರಾಜ ಸ್ವಾಮಿ ದೇವಾಲಯಕ್ಕೆ ತಾತಾಚಾರ್ಯರನ್ನು ನೇಮಿಸುವುದನ್ನು ತೆಂಕಲೈ ಪರಂಪರೆಯ ಎಲ್ಲ ಸ್ಥಾನತ್ತಾರರು ವಿರೋಧಿಸುತ್ತಾರೆ. ಆದರೆ ತಾತಾಚಾರ್ಯ ವಿಜಯನಗರ ಅರಸರ ರಾಜಾದೇಶವನ್ನು ತೆಗೆದುಕೊಂಡು ಹೋಗಿ ಒಪ್ಪಿಕೊಳ್ಳುವಂತೆ ಮಾಡುತ್ತಾರೆ. ತಾತಾಚಾರ್ಯ ವಿವಿಧ ದೇವಾಲಯಗಳಲ್ಲಿ ತನ್ನ ಕಾರ್ಯಕರ್ತರನ್ನು ನೇಮಕ ಮಾಡಿ ಅವರ ಮೂಲಕ ದೇವಾಲಯಗಳನ್ನು ನಿಯಂತ್ರಿಸುತ್ತಿದ್ದ ಬ್ರಿಟೀಷ್ ಸರ್ಕಾರ ಮತ್ತೂ ಕ್ರಿ.ಶ. ೧೮೪೨ರಲ್ಲಿ ತಾತಾಚಾರ್ಯನನ್ನು ವರದರಾಜಸ್ವಾಮಿ ದೇವಾಲಯದ ಟ್ರಸ್ಟಿಯನ್ನಾಗಿ ನೇಮಕ ಮಾಡಿತು. ಇವರು ಕ್ರಿ.ಶ. ೧೮೪೨–೧೯೪೧ರವರೆಗೆ ದೇವಾಲಯದ ಟ್ರಸ್ಟಿಗಳಾಗಿ ಸೇವೆ ಸಲ್ಲಿಸಿದರು.[೧೦೦] ಜೆರ್ಲೆ ಮಲ್ಲಮ್ಮ ತನ್ನ ಊರಿನ ನೂರು ಗೌಡು ಮನೆಗಳಿಗೆ ಕುಲಗುರುವಾಗಿ ತಾತಾಚಾರ್ಯನನ್ನು ನೇಮಕ ಮಾಡಿ ಜಯರೇಖೆ ಬರೆಸುತ್ತಾಳೆ.[೧೦೧] ಆನೇಕಲ್ಲಿನಲ್ಲಿ ದೇವರ ಮೆರವಣಿಗೆಗೆ ಸಂಬಂಧಿಸಿದ ವ್ಯಾಜ್ಯ ಉಂಟಾದಾಗಲೂ ತಾತಾಚಾರ್ಯ ಪರಂಪರೆಯ ಗುರುಗಳು ಅದನ್ನು ಬಗೆಹರಿಸುತ್ತಾರೆ. ಇಂದಿಗೂ ತಾತಾಚಾರ್ಯರ ವಂಶಸ್ಥರು ವಿವಿಧ ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ತಾತಾಚಾರ್ಯ ಪರಂಪರೆ ದೀರ್ಘಕಾಲ ಕರ್ನಾಟಕದ ಧಾರ್ಮಿಕ ವ್ಯವಸ್ಥೆಯೊಂದಿಗೆ ಬೆಸೆದುಕೊಂಡಿರುವುದು ಕಂಡುಬರುತ್ತದೆ. ರಾಮಾನುಜಾಚಾರ್ಯ ಪ್ರಣೀತ ಶ್ರೀವೈಷ್ಣವ ಧರ್ಮದ ತತ್ವಪರಿಪಾಲಕರು ಮತ್ತು ಪ್ರಚಾರಕರಾದ ಇವರು ಎಲ್ಲ ತಳ ಸಮುದಾಯಗಳಲ್ಲಿ ಈ ತತ್ವಗಳನ್ನು ಪ್ರಚಾರ ಮಾಡುವ ಕಾರ್ಯಕ್ಕೆಗೊಂಡರು. ಶ್ರೀವೈಷ್ಣವ ಧರ್ಮದ ಮೂಲತತ್ವವಾದ ಭಕ್ತಿಯ ಮೂಲಕ ದೇವರನ್ನು ಕಾಣಬಹುದೆಂಬ ಚಿಂತನೆ ಎಲ್ಲರನ್ನೂ ಆಕರ್ಷಿಸಿತು.ತಮ್ಮ ಜೀವನವಿಧಾನದಲ್ಲಿ, ಆಹಾರ ಕ್ರಮದಲ್ಲಿ ಯಾವುದೇ ವ್ಯತ್ಯಾಸ ಮಾಡಿಕೊಳ್ಳದೆ, ಬದಲಾವಣೆಗಳನ್ನು ಮಾಡಿಕೊಳ್ಳದೆ, ದೇವರನ್ನು ಕಾಣಬಹುದಾದ, ಮೋಕ್ಷ ಪಡೆಯಬಹುದಾದ ಈ ಸರಳ ಮಾರ್ಗ ಪ್ರಧಾನವಾಗಿ ತಳ ಸಮುದಾಯಗಳನ್ನು ಆಕರ್ಷಿಸಿತು. ಅಲ್ಲದೆ, ತಳಸಮುದಾಯಗಳ ಕುಲ ಆಚರಣೆಗಳಿಗಾಗಿ ಪೌರೋಹಿತ್ಯ ನಡೆಸಲು ಕೆಲವು ವ್ಯಕ್ತಿಗಳಿಗೆ 'ದಾಸಯ್ಯ' ದೀಕ್ಷೆಯನ್ನು ನೀಡಿ ಅವರು ಶ್ರೀವೈಷ್ಣವ ಧರ್ಮವನ್ನನುಸರಿಸುವ ಕುಟುಂಬಗಳ ಕುಲಾಚಾರಗಳು ಮತ್ತು ಪೌರೋಹಿತ್ಯಗಳನ್ನು ನೋಡಿಕೊಳ್ಳುವಂತೆ ನೇಮಕ ಮಾಡಲಾಯಿತು. "ದಾಸಯ್ಯನ ಸೃಷ್ಟಿಯೂ ರಾಮಾನುಜನದ್ದೇ. ಒಂದು ಕಾಲಕ್ಕೆ ದಾಸಯ್ಯಗಳು ದಲಿತರೇ. ಈ ದಾಸಯ್ಯ ನಡೆದಾಡುವ ದೇವರು ಮತ್ತು ದೇವಸ್ಥಾನ. ಈತನ ಕೈಗೆ ಗರುಡಗಂಬ ಕೊಟ್ಟಿದ್ದರಿಂದ ಈತ ಬಂದನೆಂದರೆ ದೇವಸ್ಥಾನವೇ ಮನೆಯ ಮುಂದೆ ಬಂದಂತೆ. ಈತನ ಕೈಯಲ್ಲಿ ಶಂಖ, ಚಕ್ರ, ಜಾಗಟೆಗಳಿರುವುದರಿಂದ ಈತ ನಾರಾಯಣ ದೇವರೇ . . . . ರಾಮಾನುಜರು ಹಾಕಿಕೊಳ್ಳುತ್ತಿದ್ದ ಹತ್ತು ನಾಮಗಳನ್ನು ಧರಿಸುವ ಅಧಿಕಾರ ಇರುವುದು ದಾಸಯ್ಯನಿಗೆ ಮಾತ್ರ. ಇಂದಿಗೂ ಈ ದಾಸಯ್ಯಗಳು ಬರದಿದ್ದರೆ ಯಾವ ಶೂದ್ರ ದಲಿತ ಮನೆಗಳ ಶುಭಕಾರ್ಯ ನೆರವೇರುವುದಿಲ್ಲ. ತೀರಿಕೊಂಡಾಗ, ಈತ ಬಂದು ಶಂಖ ಊದಿದರೇನೇ ಸತ್ತವರಿಗೆ ವೈಕುಂಠದ

ಬಾಗಿಲು ತೆರೆಯುವುದು. ಈ ದಾಸಯ್ಯಗಳು ಪ್ರಚಲಿತವಿರುವುದು ರಾಮಾನುಜ ಓಡಾಡಿದ ಬಯಲುಸೀಮೆ ಭಾಗದಲ್ಲೇ ಹೆಚ್ಚು. ಅವರ ಪರಂಪರೆಯೂ ಇರುವುದು ಈ ಭಾಗದಲ್ಲೇ.[೧೦೨] ಈಗಲೂ ಸಹ ಕೆಲವು ಸಮುದಾಯಗಳಲ್ಲಿ ದಾಸಯ್ಯಗಳ ಉಪಸ್ಥಿತಿಯಿಲ್ಲದೆ, ಯಾವುದೇ ಕೆಲಸಗಳನ್ನು ನೆಡೆಸುವುದಿಲ್ಲವೆಂಬುದು ಗಮನಾರ್ಹ.

ಬಹುಶಃ ಈ ಹಿನ್ನಲೆಯಲ್ಲಿಯೇ, ಬ್ರಿಟೀಷರು ಜನಗಣತಿ, ಜಾತಿ ಗಣತಿ, ಮುಂತಾದ ಸಮೀಕ್ಷೆಗಳನ್ನು ಕೈಗೆತ್ತಿಕೊಂಡಾಗ, ಅನಕ್ಷರಸ್ಥರಾಗಿದ್ದ ತಳಸಮುದಾಯಗಳು ತಮ್ಮ ಸ್ಮೃತಿಗಳಲ್ಲಿ ಪ್ರವಹಿಸುತ್ತಿದ್ದ ತಮ್ಮ ಕುಲಮೂಲ ಕಥನಗಳನ್ನು, ಆಚಾರ ವಿಚಾರಗಳನ್ನು ತಮಗೆ ಗುರುಗಳಾಗಿದ್ದ ತಾತಾಚಾರ್ಯರ ಮೂಲಕ ಬರೆಸಿದರೆಂದು ತೋರುತ್ತದೆ. ಕೈಫಿಯತ್ತುಗಳ ಗಮನಿಕೆಯಿಂದ ಜಾತಿ ಸಂಬಂಧಿ ಹಲವಾರು ಕೈಫಿಯತ್ತುಗಳ ಕರ್ತೃಗಳು ತಾತಾಚಾರ್ಯರೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ, ಕುಲಾಚಾರಗಳಿಗೆ ಸಂಬಂಧಿಸಿದಂತೆ ನಡೆವ ಕಲಹಗಳ ನ್ಯಾಯಾಧೀಶರ ಪಾತ್ರವನ್ನು ಪರೋಕ್ಷವಾಗಿ ಇವರೇ ವಹಿಸಿಕೊಂಡಂತೆ ತೋರುತ್ತದೆ. ತಾವು ಬರೆದುಕೊಟ್ಟ ರೀತಿ ರಿವಾಜುಗಳಿಗೆ ಅಧಿಕೃತತೆಯನ್ನು ಲೇಪಿಸಲು ಈ ಎಲ್ಲ ಅಂಶಗಳನ್ನು ವರದರಾಜಸ್ವಾಮಿ ದೇವಾಲಯದ ದೊಡ್ಡ ಹಾಲಿನಲ್ಲಿರುವ ಕೊಳದಲ್ಲಿರುವ ತಾಮ್ರದ ಶಾಸನಗಳಲ್ಲಿ ಬರೆದಿಡಲಾಗಿದೆಯೆಂದು ನಂಬಿಸಲಾಯಿತು. ಆದ್ದರಿಂದಲೇ ಕರ್ನಾಟಕದಲ್ಲಿ ನಡೆದಂತಹ ವ್ಯಾಜ್ಯಗಳಲ್ಲಿ ಎಲ್ಲ ಸಮುದಾಯಗಳು, ಕುಲಚಹರೆಗಳಿಗಾಗಿ, ಕುಲಾಚಾರಗಳಿಗಾಗಿ ಅಂತಿಮವಾಗಿ ನ್ಯಾಯ ನಿರ್ಣಯಕ್ಕಾಗಿ ಎಡತಾಕುತ್ತಿದ್ದುದು ಕಂಚಿಯನ್ನು. ಕಂಚಿಯಲ್ಲಿ ನೀಡಿದ ತೀರ್ಪೇ ಅಂತಿಮವೆಂಬ ವಿಶ್ವಾಸ ಹೊಂದಿರುತ್ತಿದ್ದರು. ಕಂಚಿಯಲ್ಲಿರುವ ಶಾಸನದ ಅಧಿಕೃತತೆಯ ಬಗ್ಗೆ ಯಾರೂ ಪ್ರಶ್ನಿಸುವಂತಿರಲಿಲ್ಲ. ಇದು 'ಕಂಚಿ ಶಾಸನವು ತಪ್ಪು ಎಂದವನ ಬಾಯಲ್ಲಿ ಹುಳ ಬೀಳುತ್ತದೆ' ಎಂಬ ಶಾಪಾಶಯವನ್ನು ಈ ಶಾಸನಗಳಲ್ಲಿ ಬರೆಸಲಾಗಿರುವುದು ವಿಶೇಷ.

ಹೀಗೆ ಕರ್ನಾಟಕದಲ್ಲಿ ರೂಪುಗೊಂಡ ಕಂಚಿಪತ್ರಗಳಿಗೂ, ತಾತಾಚಾರ್ಯ ಪರಂಪರೆಯ ಗುರುಗಳಿಗೂ ಸಂಬಂಧವಿದೆ. ಒಂದು ರೀತಿಯಲ್ಲಿ ಕರ್ನಾಟಕದಲ್ಲಿ ಕಂಚಿಪತ್ರಗಳು ಪರಿಚಯವಾಗಲು ಮತ್ತು ನೆಲೆ ಕಂಡುಕೊಳ್ಳಲು ತಾತಾಚಾರ್ಯ ಗುರುಪರಂಪರೆ ಕಾರಣರಾದರೆನ್ನಬಹುದು.

**೪.೩ ಕಲಹಗಳು– ಸ್ವರೂಪ ಮತ್ತು ಕಾರ್ಯಕಾರಣ ಸಂಬಂಧ**

ಜಯರೇಖೆಗಳ ಸಮಾಜ ಕಲಹಗಳ ಸಮಾಜವೆಂದರೆ ತಪ್ಪಲ್ಲ. ಏಕೆಂದರೆ ಹಲವಾರು ಜಯರೇಖೆಗಳು ಕಲಹ ಅಥವಾ ವ್ಯಾಜ್ಯಗಳ ಫಲಿತಗಳೆಂಬುದು ಅವುಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಕಲಹಗಳ ಕಾರಣಗಳು ತುಂಬಾ ಜಟಿಲ ಹಾಗೂ ಸಂಕೀರ್ಣವಾಗಿವೆ ಹಾಗೂ ವಿಶಿಷ್ಟ ಆಯಾಮಗಳನ್ನು ಹೊಂದಿವೆ. ಅವು ಧರ್ಮಸಂಬಂಧಿ ಇರಬಹುದು; ಅರ್ಥಸಂಬಂಧಿ ಇರಬಹುದು; ಇಲ್ಲವೇ ಸಾಮಾಜಿಕ ಸ್ಥಾನಮಾನಗಳಿಗೆ ಸಂಬಂಧಿಸಿರಬಹುದು. ಆದರೆ ಇವುಗಳಲ್ಲೆಲ್ಲಾ

ಭಾಗಿಯಾಗುವುದು ಸಮಾಜದ ಕೆಳಶ್ರೇಣಿಗಳಲ್ಲಿ ಬರುವ ತಳಸಮುದಾಯಗಳೇ. ಇಂಥ ಕಲಹಗಳ ಸ್ವರೂಪ ಎಷ್ಟು ತೀವ್ರವಾಗಿರುತ್ತಿದ್ದವೆಂದರೆ, ಕೆಲವೊಮ್ಮೆ ರಕ್ತಪಾತಗಳಿಗೂ ಕಾರಣವಾಗಿ ಪ್ರಕ್ಷುಬ್ಧ ಪರಿಸ್ಥಿತಿಯನ್ನು ಉಂಟುಮಾಡಿ ಸಮಾಜದ ಸ್ವಾಸ್ಥ್ಯವನ್ನು ಕದಡುವಂತಿರುತ್ತಿದ್ದವು.

ಕಲಹಗಳು ಹುಟ್ಟಿಕೊಳ್ಳುವುದಕ್ಕೆ ಕಾರಣವಾಗುತ್ತಿದ್ದ ಸಂಗತಿಗಳು ತುಂಬಾ ವಿಕ್ಷಿಪ್ತ ಹಾಗೂ ವಿಶಿಷ್ಟವಾಗಿವೆ. "ವಿಶಿಷ್ಟ ಲಾಂಛನಗಳನ್ನು ಹೊಂದುವುದು, ಪಂಜುಗಳನ್ನು ಮತ್ತು ಧ್ವಜಗಳನ್ನು ಒಯ್ಯುವ ಹಕ್ಕು, ಕೆಲವು ರೀತಿಯ ಮನೆಗಳ ನಿರ್ಮಾಣ, ನಿರ್ದಿಷ್ಟ ರೀತಿಯ ವಸ್ತ್ರಗಳ ಧರಿಸುವಿಕೆ ಮತ್ತು ತಲೆ ಬಾಚುವಿಕೆ, ದೇವಾಲಯಗಳಲ್ಲಿ ಕೆಲವು ಹುದ್ದೆಗಳನ್ನು ಹೊಂದುವುದು ಮುಂತಾದ ಕಾರಣಗಳಿಗಾಗಿ ಕಲಹಗಳು ನಡೆಯುತ್ತಿದ್ದವು".[೧೦೩] ಇವಲ್ಲದೆ ಕುಲಚಹರೆಗಳು, ಸಾಮಾಜಿಕ ಸ್ಥಾನಮಾನ; ನೆಲೆಗೊಳ್ಳಲು ಅಗತ್ಯವಾದ ಸ್ಥಳ, ಪ್ರತಿಷ್ಠೆ ಮತ್ತು ಶ್ರೇಷ್ಠತ್ವದ ಪ್ರತಿಪಾದನೆ, ಚಪ್ಪಲಿ ಧರಿಸುವ, ಕುದುರೆ ಮೇಲೆ ಮತ್ತು ಪಲ್ಲಕ್ಕಿ ಮೇಲೆ ಕೆಲವು ಬೀದಿಗಳಲ್ಲಿ ಮೆರವಣಿಗೆ ಹೋಗುವ ಹಕ್ಕು, ದೇವಾಲಯದ ಆರಾಧನೆಯಲ್ಲಿ ಧ್ವಜಪತಾಕಾದಿಗಳು ಮತ್ತು ಕಳಶಗಳನ್ನು ಒಯ್ಯುವುದು, ಜನಿವಾರ ಧರಿಸುವಿಕೆ, ಯಜ್ಞ-ಯಾಗಾದಿಗಳ ಆಚರಣೆ, ಡೋಳಿನ ಮೇಲೆ ಬಿಳಿ ವಸ್ತ್ರ ಹಾಕಿಕೊಳ್ಳುವುದು, ವಾಲಗಕ್ಕೆ ಮಲ್ಲಿಗೆ ಮುಡಿಸುವುದು, ಮದುವೆಯಲ್ಲಿ ಹನ್ನೆರಡು ಕಂಬ, ಹನ್ನೆರಡು ಪಂಜು ಮುಂತಾದ ವಸ್ತುಗಳನ್ನು ಬಳಸುವುದು, ಧರ್ಮ ಸಂಕರ ಮುಂತಾದ ಸಂಗತಿಗಳೂ ಸಹ ಕಲಹಗಳಿಗೆ ಕಾರಣವಾಗಿವೆ.

ಜಯರೇಖೆ ಶಾಸನಗಳಲ್ಲಿನ ಕಲಹಗಳ ಸ್ವರೂಪ ಜಾತಿ-ಧರ್ಮಗಳನ್ನು ಮೀರಿದ, ಆದರೆ ಅದರ ಪರಿಧಿಯೊಳಗೇ ಸುತ್ತುವಂತಹುದು. ಇಲ್ಲಿಯ ಕಲಹಗಳ ಸ್ವರೂಪವನ್ನು,-

(i) ಧರ್ಮ ಸಂಬಂಧೀ ಕಲಹಗಳು

(ii) ಅಂತರ್ ಪಣಕಟ್ಟು ಕಲಹಗಳು

(iii) ಒಂದೇ ಪಣಗುಂಪಿನ ನಡುವಿನ ಕಲಹಗಳು

(iv) ಸಂಕೀರ್ಣ ಕಲಹಗಳೆಂದು ಗುರುತಿಸಬಹುದಾಗಿದೆ

**೪.೩.೧ ಧರ್ಮ ಸಂಬಂಧೀ ಕಲಹಗಳು**

ಜಯರೇಖೆ ಶಾಸನಗಳಲ್ಲಿ ಕರ್ನಾಟಕದ ಮೊದಲ ಜಯಪತ್ರವೆಂದು ಗುರುತಿಸಲಾದ ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನ ಹುಟ್ಟಿಕೊಂಡಿದ್ದೇ ಧರ್ಮಧರ್ಮಗಳ ನಡುವಿನ ಸಂಘರ್ಷದ ಹಿನ್ನೆಲೆಯಲ್ಲಿ. ಧರ್ಮದ ಶ್ರೇಷ್ಠತ್ವ ಮತ್ತು ಅಧಮತ್ವದ ಪ್ರಶ್ನೆಗಳನ್ನೆತ್ತಿಕೊಂಡು ಶೈವರ ಏಕಾಂತದ ರಾಮಯ್ಯ ಮತ್ತು ಜೈನರ ಸಂಕಮಯ್ಯನನ್ನು ಮುಖಾಮುಖಿಯಾಗಿಸುವ ಈ ಶಾಸನ,

ಏಕಾಂತದ ರಾಮಯ್ಯ ತನ್ನ ತಲೆಯನ್ನು ಪಣವಾಗಿಟ್ಟು, ಪವಾಡ ಮೆರೆಸಿ ಸವಾಲನ್ನು ಗೆದ್ದು ಬಂದ ನಂತರ ಜೈನರು ಪಣ ಒಡ್ಡಿದ ಜಿನಬಿಂಬಗಳನ್ನು ವಿಧ್ವಂಸಗೊಳಿಸುವ ಮೂಲಕ 'ಜಯ' ಸಾಧಿಸುತ್ತಾನೆ. ಆತನ ಜಯಕ್ಕೆ ಬಿಜ್ಜಳ 'ಜಯಪತ್ರ' ನೀಡಿ ಸನ್ಮಾನಿಸುತ್ತಾನೆ.[೧೦೪]

ಇದೇ ಪ್ರಕ್ರಿಯೆ ಶ್ರವಣಬೆಳಗೊಳದ ಬುಕ್ಕರಾಯನ ಶಾಸನ ಹಾಗೂ ಲಕ್ಷ್ಮೇಶ್ವರದ ಎರಡು ಜಯಪತ್ರಗಳಲ್ಲಿ ಮುಂದುವರೆಯುತ್ತದೆ. ಕಲ್ಯ ಹಾಗೂ ಅದರ ನಕಲು ಪ್ರತಿಯಾದ ಶ್ರವಣಬೆಳಗೊಳ ಶಾಸನಗಳು ಹುಟ್ಟಿಕೊಂಡದ್ದೇ 'ಜೈನರಿಗೂ ಭಕ್ತರಿಗೂ ಸಂವಾದವಾದ' ಹಿನ್ನೆಲೆಯಲ್ಲಿ. ಶಾಸನದ ಕೊನೆಯಲ್ಲಿ ಬುಕ್ಕರಾಯ ನೀಡುವ 'ಜೈನದರ್ಶನಕ್ಕೆ ಪೂರ್ವಮರಿಮಾದೆಯಲು ಪಂಚಮಹಾವಾದ್ಯಗಳು ಕಳಶವು ಸಲ್ಲುತ್ತವೆ' ಎಂಬ ತೀರ್ಪು ಎರಡು ಧರ್ಮಗಳ ನಡುವೆ ಅವುಗಳ ಬಳಕೆಗೆ ಸಂಬಂಧಿಸಿದಂತೆ ಉದ್ಭವವಾಗಿರಬಹುದಾದ ವ್ಯಾಜ್ಯವನ್ನು ಸ್ಪಷ್ಟವಾಗಿ ಬಿಂಬಿಸುತ್ತದೆ.[೧೦೫] ಈ ಕಲಹ ರಕ್ತಪಾತಕ್ಕೂ ಕಾರಣವಾಗಿತ್ತೆಂಬ ಸಂಗತಿ ಕಲ್ಯ ಶಾಸನದಿಂದ ತಿಳಿದುಬರುತ್ತದೆ.

ಇಂಥದೇ ಒಂದು ನಿದರ್ಶನ ಲಕ್ಷ್ಮೇಶ್ವರ ಶಾಸನದಲ್ಲಿ ಕಂಡುಬರುತ್ತದೆ. ಶಂಖ ಬಸ್ತಿಯ ಶಾಂತಿನಾಥ ತೀರ್ಥಂಕರನ ಉತ್ಸವದಲ್ಲಿ ಜೈನರು ಅಷ್ಟದಿಕ್ಪಾಲಾದಿಗಳು ಮತ್ತು ಧ್ವಜಪತಾಕಾದಿಗಳನ್ನು ಮೆರೆಸಿದ್ದು ಈ ಜಗಳಕ್ಕೆ ಕಾರಣವಾಯಿತು. (ಈ ವಿಷಯದ ಬಗ್ಗೆ ಮುಂದಿನ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ)

ವಿಭಿನ್ನ ಧರ್ಮಗಳ ನಡುವಿನ ವ್ಯಾಜ್ಯಗಳ ಜೊತೆಗೆ ಒಂದೇ ಸಮಾನಾಂತರ ಸಮುದಾಯಗಳು ದೇವರ ಆರಾಧನಾ ವಿಧಾನಗಳಿಗೆ ಸಂಬಂಧಿಸಿದಂತೆಯೂ ಸಹ ಕಲಹಗಳು ಮಾಡಿಕೊಳ್ಳುತ್ತಿದ್ದವು. ಕುರುಬರಿಗೂ ಮತ್ತು ಬಣಜಿಗರಿಗೂ ತಮ್ಮ ತಮ್ಮ ಕುಲದ ಚಹರೆಗಳನ್ನು ಬಳಸುವುದಕ್ಕೆ ಸಂಬಂಧಪಟ್ಟಂತೆ ದೊಂಬಿಯಾಗಿ ಹೇಮಕೂಟದ ಬಂಡೆಯ ಮೇಲೆ ಭಾರಿ ಜಗಳವಾಗಿ ಸಾವಿರ ಪ್ರಾಣಿಗಳು ಹತವಾಗುತ್ತವೆ. "ಈ ವ್ಯಾಜ್ಯ ಹುಟ್ಟಿಕೊಳ್ಳುವುದಕ್ಕೆ ಬಹುಮುಖ್ಯ ಕಾರಣ ವೀರಭದ್ರನಿಗೂ ಮತ್ತು ಬೀರದೇವರಿಗೂ ಬಿರುದುಗಳು ಒಂದೇ ಆಗಿದೆ. ಆದರೆ ಕುರುಬರು ಬೀರದೇವರ ಉತ್ಸವ ನಡೆಸುವಾಗ ಈ ಬಿರುದುಗಳನ್ನು ಹಾಕಿಕೊಳ್ಳಬಾರದೆಂಬುದು ಬಣಜಿಗರ ವಾದ. ಬೀರದೇವರ ಮುಂದುವರಿದ ರೂಪವೇ ವೀರಭದ್ರ ಎಂಬುದನ್ನು ರಾ.ಚಿ.ಢೇರೆ, ಎಂ.ಎಂ. ಕಲಬುರ್ಗಿ, ಮುಂತಾದ ಸಂಶೋಧಕರು ಆಧಾರಸಹಿತ ಸ್ಪಷ್ಟಪಡಿಸಿದ್ದಾರೆ. ಹೀಗಾಗಿ ಈ ಬಿರುದುಗಳನ್ನು ಪ್ರಾಚೀನ ಕಾಲದಿಂದಲೂ ಕುರುಬರು ಮಾತ್ರ ಹಾಕಿಕೊಳ್ಳುತ್ತಿದ್ದರು. ಬೀರದೇವ ವೀರಭದ್ರನಾಗಿ ರೂಪಾಂತರ ಗೊಂಡಾಗ ಈ ಬಿರುದುಗಳು ಸಹಜವಾಗಿ ವೀರಭದ್ರನ ಆರಾಧನೆಯಲ್ಲಿ ಮುಂದುವರಿದವು".[೧೦೬] ಬಹುಶಃ ದೇವರುಗಳು ಸಂಕರಗೊಳ್ಳುವ ಸ್ಥಿತ್ಯಂತರ ಘಟ್ಟಗಳಲ್ಲಿ ಇಂತಹ ಕಲಹಗಳು ಸರ್ವೇ ಸಾಮಾನ್ಯವಾಗಿ ಉದ್ಭವಿಸುತ್ತವೆನ್ನಬಹುದು. ಜನಸಾಮಾನ್ಯರ ಭಾವಕೋಶಗಳಲ್ಲಿ ಹಾಸುಹೊಕ್ಕಾಗಿದ್ದ 'ಸ್ಥಳೀಯ' ಅಥವಾ 'ತಮ್ಮ ಕುಲದ' ದೇವರುಗಳು ಸಂಸ್ಕೃತೀಕರಣಗೊಂಡು ಬೇರೆ ಬೇರೆ ರೂಪಗಳನ್ನು

ಪಡೆದಾಗ, ಮೂಲ ಆರಾಧಕರು ಮತ್ತು ಆಕ್ರಮಿತ ಆರಾಧಕರ ನಡುವೆ ಇಂಥ ವ್ಯಾಜ್ಯಗಳು ಸಹಜವಾಗಿ ಉದ್ಭವಿಸುತ್ತಿದ್ದವು.

**೪.೩.೨. ಅಂತರ್ ಪಣಕಟ್ಟು ಕಲಹಗಳು**

ಧರ್ಮದ ಹೊರತಾದ ಮತ್ತೊಂದು ಕಲಹದ ಸ್ವರೂಪವೆಂದರೆ, ಪಣಕಟ್ಟುಗಳೊಳಗಿನ ಕಲಹಗಳು, ಈಗಾಗಲೇ ಇದೇ ಅಧ್ಯಾಯದ ಉಪ ಅಧ್ಯಾಯದಲ್ಲಿ ಚರ್ಚಿಸಲಾದಂತೆ ಪಣಕಟ್ಟು ಸಮಾಜ ದಕ್ಷಿಣ ಭಾರತಕ್ಕೆ ಮೀಸಲಾದ ವಿಶಿಷ್ಟ ಸಮುದಾಯವಾಗಿದೆ. ಜಾತಿ ಪದ್ಧತಿಗಿಂತ ಭಿನ್ನವಾದ ಈ ಸಮಾಜದಲ್ಲಿ ಹದಿನೆಂಟು ಸಮುದಾಯಗಳನ್ನೊಳಗೊಂಡ ಬಲಗೈ ಮತ್ತು ಒಂಭತ್ತು ಸಮುದಾಯಗಳನ್ನೊಳಗೊಂಡ ಎಡಗೈ ಎಂಬ ಎರಡು ಪಂಗಡಗಳು ಲಂಬಾಂತರ ವಿಭಜನೆಯನ್ನು ಹೊಂದಿವೆ.

ಪಣಕಟ್ಟು ವ್ಯಾಜ್ಯಗಳು ದಕ್ಷಿಣ ಭಾರತಕ್ಕೆ ಅದರಲ್ಲೂ ತಮಿಳುನಾಡು ಹಾಗೂ ತಮಿಳುನಾಡಿನ ಪ್ರಭಾವಲಯದಲ್ಲಿ ಬರುವ ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೆಲವು ಭಾಗಗಳಿಗೆ ಸೀಮಿತವಾಗಿವೆ. ತಮಿಳುನಾಡಿನ ಇತಿಹಾಸದಲ್ಲಿ ಹನ್ನೊಂದನೆಯ ಶತಮಾನದಿಂದಲೇ ಕಾಣಿಸಿಕೊಳ್ಳುವ ಪಣವ್ಯಾಜ್ಯಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ಪರಾಕಾಷ್ಠೆಯ ಮಟ್ಟ ತಲುಪುತ್ತವೆ. ತಮಿಳುನಾಡಿನಲ್ಲಿ ಯಾವ ಸಮುದಾಯ ಯಾವ ಪಣಕಟ್ಟಿಗೆ ಸೇರಬೇಕು, ಯಾರು ಯಾವ ವಸ್ತು, ಮಾರ್ಗ ಬಳಸಬೇಕು, ಯಾವ ರೀತಿಯ ಆಚರಣಾ ವಿಧಾನಗಳನ್ನು ಅಳವಡಿಸಿಕೊಳ್ಳಬೇಕೆಂಬ ಬಗ್ಗೆ ಜಗಳಗಳು ಉದ್ಭವಿಸುತ್ತಿದ್ದವು. ಅಬ್ಬೆ ದುಬಾಯ್‌ರವರ ಪ್ರಕಾರ "ಕರ್ನಾಟಕದಲ್ಲಿ ಬಹುತೇಕ ಕೃಷಿಕ, ಕುಶಲಕರ್ಮಿ, ವ್ಯಾಪಾರಿ ಜಾತಿಗಳನ್ನೊಳಗೊಂಡ ಪಣಕಟ್ಟಿನ ಸಮಾಜದಲ್ಲಿ ಈ ಮೂರು ವೃತ್ತಿವರ್ಗಗಳ ಭಿನ್ನಪಣಗಳ ನಡುವೆ ವಿವಾಹಗಳ ಸಂದರ್ಭದಲ್ಲಿ ಚಪ್ಪಲಿ ಧರಿಸುವ, ಕುದುರೆ ಮೇಲೆ ಮೆರವಣಿಗೆ ಹೋಗುವ, ವಾದ್ಯ ನುಡಿಸುವ, ಧ್ವಜ ಹಾಗೂ ಚಿಹ್ನೆಗಳನ್ನು ಹೊತ್ತೊಯ್ಯುವ ವಿಷಯದಲ್ಲಿನ ಮನಸ್ತಾಪಗಳೇ ಸಂಘರ್ಷಕ್ಕೆ ಮೂಲಕಾರಣವಾಗುತ್ತಿದ್ದವು".[೧೦೭]

ಎರಡು ಪಣಕಟ್ಟುಗಳ ನಡುವಿನ ವ್ಯಾಜ್ಯಗಳು ಪ್ರಾಚೀನ ಕರ್ನಾಟಕದಲ್ಲಿ ಹೆಚ್ಚು ದಾಖಲಾಗಿಲ್ಲ. ಆದರೆ ವಸಾಹತುಶಾಹಿ ಕಾಲಘಟ್ಟದ ವ್ಯಾಜ್ಯಗಳ ಬಗ್ಗೆ ಅಧ್ಯಯನಗಳು ಪ್ರಾರಂಭವಾಗಿಲ್ಲವೆಂದರೆ ಅತಿಶಯೋಕ್ತಿ ಎನಿಸದು. ನನ್ನ ಅಧ್ಯಯನದ ಆಕರವ್ಯಾಪ್ತಿಯಲ್ಲಿ ಬರುವ ಕೆಲವು ಜಯರೇಖೆ ಶಾಸನಗಳು ಮತ್ತು ಕಂಚಿಪತ್ರಗಳು ಪಣಕಟ್ಟು ವ್ಯಾಜ್ಯಗಳ ನೇರ ಪ್ರತಿಫಲಿತಗಳಾಗಿವೆ.ಪಣಕಟ್ಟು ವ್ಯಾಜ್ಯಗಳ ವಿಶಿಷ್ಟ ಲಕ್ಷಣಗಳು ಹಾಗೂ ಕಾರಣಗಳೆಂದರೆ, ಸಾಮಾಜಿಕ ಮೇಲ್ಮುಖ ಚಲನೆಗಾಗಿ ಮತ್ತು ವಿಶೇಷ ಸವಲತ್ತುಗಳ ಅಧಿಭೋಗಕ್ಕಾಗಿನಡೆಯುವ ಹೊಯ್ದಾಟ ಈ ಎರಡೂ ಪಣಗಳ ನಡುವಿನ

ಕಲಹಗಳಲ್ಲಿ ವರ್ತಕ ಅಥವಾ ವ್ಯಾಪಾರಿಗಳಾದ ಬಣಜಿಗರು ಮತ್ತು ಅವರಿಗೆ ಎದುರಾಗಿ ಪಾಂಚಾಳ ಅಥವಾ ವಿಶ್ವಕರ್ಮ ಸಮುದಾಯದವರು ಮುಖಂಡತ್ವವನ್ನು ಹೊಂದಿರುತ್ತಾರೆ.

ಕರ್ನಾಟಕದಲ್ಲಿ ದೊರೆತ ಪಣಕಟ್ಟು ವ್ಯಾಜ್ಯ ಪ್ರಧಾನವಾಗಿ ಚಲವಾದಿ ಮತ್ತು ಜಾಂಬವ ಸಮುದಾಯಗಳ ನಡುವೆ ನಡೆದಿದೆ. ಗೋಸಂಗಿಗಳ ಕಂಚಿ ಶಾಸನದ ಪ್ರಕಾರ ಗೋಸಂಗಿ ವಂಶಸ್ಥನಾದ ಆದಿ ಜಾಂಬವನ ಮಗನಾದ ಹುಲಿಯಪ್ಪ ತನ್ನ ಮಗ ಮಾರಪ್ಪನಿಗೆ ಲಗ್ನ ಮಾಡುವ ಸಂದರ್ಭದಲ್ಲಿ ಐರಾಣಿ ಚಪ್ಪರ ತರುವುದಕ್ಕೆ ಹೋಗುವ ಕಾಲದಲ್ಲಿ ಚಲವಾದಿಯ ವೀರಬಸಯ್ಯ ಎನ್ನುವವನು ತನ್ನ ಕುಲಸ್ಥರನ್ನು ಸೇರಿಸಿಕೊಂಡು ಜಾಂಬವಂತ ಮತಸ್ಥರಿಗೆ ಮದುವೆಗೆ ಹನ್ನೆರಡು ಕಂಬ, ಹನ್ನೆರಡು ಕುಂಭ, ಜೋಡಿ ಪಂಜು, ಕೆಂಪು ಕುದುರೆ ಮೆರವಣಿಗೆ, ಇತ್ಯಾದಿ ಸಲ್ಲದೆಂದು ಜಗಳ ಮಾಡಿದಾಗ, ಗ್ರಾಮ ಮುಖಂಡರು ಸಲ್ಲುತ್ತವೆಂದು ಹೇಳುತ್ತಾರೆ. ಆಗ ವಿಜಯನಗರದಲ್ಲಿ ಆನಂತರ ಕಂಚಿಯಲ್ಲೂ ಅಹವಾಲು ಸಲ್ಲಿಸುತ್ತಾನೆ. ಕಂಚಿಯಲ್ಲಿ ವಜ್ರಸಿಂಹಾಸನಾಧೀಶನಾದ ಮಹಾರಾಜ ಅಪ್ಪರಾಯರು ಸಿಂಗರಾಯರು, ಕಂಚಿ ವರದಪ್ಪಗೌಡ, ಕರಣಿಕರು ಮಲ್ಲಯ್ಯನವರು ಮಂಚೇಗೌಡರು ....... ಪಂಚಾಂಗದ ಬ್ರಾಹ್ಮಣರು, ಕ್ಷತ್ರಿಯರು, ದೇವಾಂಗದವರು, ಗಾಣಿಗರು, ಮುಂತಾದವರು ಮೂಲೆ ಪಣಕಟ್ಟಿನ ಶಿವಲಿಂಗಶೆಟ್ಟಿ, ನಾಗಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ ಇವರೆಲ್ಲರೂ ಸೇರಿ ಗೋಸಂಗಿಗಳು ಮಾದಿಗರು. ಇವರುಗಳಲ್ಲಿ ಇತಿಹಾಸ, ಭಾರತ, ರಾಮಾಯಣಗಳಲ್ಲಿ ಪಂಕ್ತಿರೂಪದಲ್ಲಿ ಹೇಳಿರುವುದನ್ನು ನಾವು ಕಂಡಿರುವುದರಿಂದ ಇವರಿಗೆ ಮದುವೆಗಳಲ್ಲಿ ಹನ್ನೆರಡು ಕಂಬ, ಹನ್ನೆರಡು ಕುಂಭ, ಜೋಡಿ ಪಂಜು, ಕರಿಕಂಬಳಿ ಗದ್ದಿಗೆ, ನಾಲ್ಕು ಮೂಲೆ ತಾಳಿ, ಮೆರವಣಿಗೆ, ತಾಂಬೂಲ, ಬಾಸಿಂಗ, ಮಲ್ಲಿಗೆ ಹೂರಿನ ಹಾರ, ಕೆಂಪು ಕುದುರೆ ವಾಹನ, ಜೋಡು ಕಳಸ, ಕನ್ನಡಿ, ವೀರ ಕಂಕಣ, ದೇವತಾಮುದ್ರಿಕೆ, ಹನುಮ ನಿಶಾನಿ, ಗರುಡ ನಿಶಾನಿ . . . ಮಲ್ಲಿಗೆ ಹೂವಿನ ತುರಾಯಿ– ಈ ಬಿರುದುಗಳಿಂದ ಗ್ರಾಮದೇವರು ಗುಡಿಯ ಬಳಿಯಿಂದ ಮೆರವಣಿಗೆ ಮಾಡಬಹುದೆಂದು ತೀರ್ಪು ನೀಡುತ್ತಾರೆ. ಇದಲ್ಲದೆ, ಚಲವಾದಿಯವರಿಗೆ ಸಲ್ಲತಕ್ಕ ಒಂಭತ್ತು ಕಂಬ, ಒಂಭತ್ತು ಕುಂಭ, ಮೂರು ಎಲೆ ಕಳಸ, ಮೂರು ಮೂಲೆ ಬಳಿ ತಾಳಿ, ಶಂಖ, ಜಾಗಟೆ ಬಳಸಬಹುದೆಂದು ಮತ್ತು ಎತ್ತಿನ ಮೇಲೆ ಅವರವರ ಕೇರಿಯಲ್ಲಿ ಮಾತ್ರ ಹೋಗಬೇಕು. ವಾದ್ಯದ ಮೇಲೆ ಬಿಳಿಬಟ್ಟೆ ಇಡಬೇಕು. ಕೆಂಪುಬಟ್ಟೆ ಹಾಕಬಾರದು. ಚಲವಾದಿಯವರಾದ ನೀವು ಮಾದಿಗರಾದ ಮಾತಂಗರು, ಗೋಸಂಗಿಯವರ ಜೊತೆ ತಂಟೆ ತಕರಾರು ಮಾಡಬಾರದೆಂಬ ಕಟ್ಟಳೆ ವಿಧಿಸುತ್ತಾರೆ. ನ್ಯಾಯಕ್ಕಾಗಿ ಕಂಚಿಗೆ ಹೋಗಿ ಪರಾಜಿತನಾದ ಚಲವಾದಿಯ ಪೂಸಯ್ಯ ಅಸಹಾಯಕತೆಯಿಂದ 'ಈ ಮಾದಿಗರು ಗ್ರಾಮದೇವತೆ ಮುಂದೆ ಕೋಣವನ್ನು ಕಡಿದು ಬಲಭಾಗಕ್ಕೆ ಕೆಡವುತ್ತಾರೆ. ಬಲಗಾಲು ಕೊಯ್ಯುತ್ತಾರೆ. ಬಲಭಾಗ ನಮ್ಮದಾಗಿದೆ. ಆದ್ದರಿಂದ ಬಲಭಾಗಕ್ಕೆ ಕೆಡವಬಾರದು. ಬಲಗಾಲು ಕೊಯ್ಯುಬಾರದು. ಇದರಿಂದ ನಮಗೆ ಅವಮಾನವಾಗಿದೆ. ಎಡಭಾಗಕ್ಕೆ ಕೆಡುವುದು, ಎಡಗಾಲು ಕುಯ್ಯುವುದು, ನಮಗೆ ಕೋಣವನ್ನು

ಹಿಡಿಯುವುದು, ಕಂಬ, ಕುಂಭ ಇತ್ಯಾದಿ ಕಾರ್ಯಕ್ಕೆ ನಮ್ಮನ್ನು ಸೇರಿಸಿಕೊಳ್ಳುವಂತೆ ಅಪ್ಪಣೆ ಮಾಡಬೇಕು' ಎಂದು ವಿನಂತಿಸಿಕೊಳ್ಳುತ್ತಾನೆ.

ಈ ಮನವಿಯನ್ನು ಅಂಗೀಕರಿಸದೆ, ಒಂಭತ್ತು ಲಕ್ಷ್ಮಿಯವರು ಮತ್ತು ಒಂಭತ್ತು ಚಾರುಲಕ್ಷ್ಮಿಯರು ಎಂದರೆ ಹದಿನೆಂಟು ಮಂದಿ ಲಕ್ಷ್ಮಿಯರು ಮಾದಿಗರಿಗೆ ಮೂಲ ದೇವತೆಗಳಾಗಿದ್ದಾರೆ. ಮಾದಿಗರು ಗ್ರಾಮದೇವತೆ ಪೂಜಾರಿಗಳು. ನೀವು ತಂಟೆ ತಕರಾರು ಮಾಡಬಾರದು. ಕೋಣವನ್ನು ಕಡಿಯಬಾರದು ಮತ್ತು ಹಿಡಿಯಬಾರದೆಂದು ತೀರ್ಪು ನೀಡಿ ಒಂದೂವರೆ ಗಜ ಪ್ರಮಾಣದ ತಾಮ್ರದ ತಗಡಿನಲ್ಲಿ ಕಂಚಿನಗರ ರಾಯ ಸಿಂಹಾಸನಾಧೀಶರು ಶಾಸನವನ್ನು ಹುಟ್ಟಿಸಿ, ಕಂಚಿ ಕಾಮಾಕ್ಷಮ್ಮನವರ ಸನ್ನಿಧಿಯಲ್ಲಿ ಮಾದಿಗ–ಚಲವಾದಿಯವರಿಗೆ ರಾಜಿ ಮಾಡಿಸಿ, ಕಂಚಿಯಲ್ಲಿ ನಿರ್ಣಯಿಸಿದ ಶ್ರೀಕಂಚಿ ಶಾಸನವನ್ನು ಸುಳ್ಳು ಎಂದರೆ ಅವರಿಗೆ ನರಕ ಪ್ರಾಪ್ತಿ ತಪ್ಪದೆಂದು ಹೇಳಿಕಳಿಸುತ್ತಾರೆ.[೧೦೪]

ಮಾದಿಗ ಮತ್ತು ಚಲವಾದಿಗಳ ನಡುವಿನ ಈ ಪಣವ್ಯಾಜ್ಯ ಬಹುಪಠ್ಯೀಯ ನೆಲೆಗಳಲ್ಲಿ ಲಿಖಿತಗೊಂಡಿದೆ. ಮಾದಿಗ ಸಮುದಾಯದ ಒಳಸಮುದಾಯಗಳಾದ ಗೋಸಂಗಿ, ದಕ್ಕಲಿಗ, ಮಾದಿಗ, ಸಿಂದ್ ಮಾದಿಗ, ಮಾಸ್ತೀಕರ ಕುಲಕಥನಗಳಿಗೆ ಸಂಬಂಧಿಸಿದಂತೆಯೇ ಇಡೀ ಕಥನ ಉಲ್ಲೇಖಗೊಂಡಿದೆ. ಎಲ್ಲ ಕಥನಗಳು ಕಂಚಿ ಶಾಸನವನ್ನೇ ಆಧಾರವೆಂದು ಸ್ವೀಕರಿಸುತ್ತವೆ. ಈ ಎಲ್ಲ ಕಥನಗಳ ವ್ಯಾಜ್ಯ ಕಾರಣ, ಮದುವೆ ಮನೆಯಲ್ಲಿ ಮಾದಿಗರು ಹನ್ನೆರಡು ಕಂಬ, ಹನ್ನೆರಡು ಕುಂಭ ಬಳಸಿದ್ದು. ಈ ವ್ಯಾಜ್ಯ ಕಾರಣಗಳನ್ನು ಇಟ್ಟುಕೊಂಡು ಮಾದಿಗ ಸಮುದಾಯ ಅಂಥ ವಸ್ತುಗಳನ್ನು ಬಳಸುವುದಕ್ಕೆ ಏನು ಕಾರಣ ಎಂಬುದಕ್ಕೆ ಒಂದು ಸಮರ್ಥನೆಯನ್ನು ನೀಡಲು ಮಾದಿಗರ ಕುಲಕಥನವನ್ನು ಈ ಕಂಚಿ ಶಾಸನದೊಂದಿಗೆ ತಳುಕು ಹಾಕಲಾಗಿದೆ. ಈ ವಸ್ತುಗಳನ್ನು ಮಾದಿಗರು ಸುಖಾಸುಮ್ಮನೆ ಬಳಸುತ್ತಿಲ್ಲ. ಇದನ್ನು ಭೂಮಂಡಲ ಹುಟ್ಟುವುದಕ್ಕೆ ಮೊದಲೇ ಇದ್ದ ಆದಿ ತಾತ ಜಾಂಬವಮುನಿ ತನ್ನ ಮಗಳು ಅರಂಜ್ಯೋತಿಯ ಮದುವೆಯಲ್ಲಿ ಇವುಗಳನ್ನೆಲ್ಲ ಬಳಸಿದ್ದರು ಎಂದು ಹೇಳುವ ಮೂಲಕ ಕೆಲವು ಆಚರಣೆ ಬಿರುದುಗಳಿಗೆ ತಾತ್ವಿಕ ಚೌಕಟ್ಟನ್ನು ಏರ್ಪಡಿಸಿಕೊಡುವುದಾಗಿದೆ.

ಕರ್ನಾಟಕದಲ್ಲಿ ಎರಡು ಪಣಗಳ ನಡುವೆ ನಡೆಯುವ ಕಲಹಗಳಲ್ಲಿ ಜಾಂಬವ ಮತ್ತು ಚಲವಾದಿ ಸಮುದಾಯಗಳ ನಡುವೆ ನಡೆದಿರುವ ಕಲಹಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಕಂಚಿ ಶಾಸನಗಳು ದೊರೆಯುತ್ತವೆ. ತಾಮ್ರದ ಶಾಸನದಲ್ಲಿದ್ದ ಈ ವಿಷಯವನ್ನು ಸಂಬಂಧಪಟ್ಟ ಸಮುದಾಯಗಳು ಕಾಗದದಲ್ಲೂ ಪ್ರತಿ ಮಾಡಿಕೊಳ್ಳುತ್ತಿದ್ದು, ಇವುಗಳ ಪ್ರತಿಗಳು ಇಂದಿಗೂ ಲಭ್ಯವಾಗುತ್ತಿವೆ.[೧೦೯] ಇವು ಕೇವಲ ಕರ್ನಾಟಕಕ್ಕೆ ಸೀಮಿತವಾಗದೆ ಆಂಧ್ರ ಮತ್ತು ತಮಿಳುನಾಡುಗಳಲ್ಲೂ ದೊರೆಯುತ್ತವೆ. ಬಲಗೈ ಮತ್ತು ಎಡಗೈ ಪಣಕಟ್ಟು ವ್ಯವಸ್ಥೆಯಲ್ಲಿ ಚಲವಾದಿ ಮತ್ತು ಮಾದಿಗ ಸಮುದಾಯಗಳೆರಡೂ ಲಂಬಾತ್ಮಕ ಶ್ರೇಣಿಯಲ್ಲಿ ಕಡೆಯ ಸ್ಥಾನವನ್ನು ಪಡೆದುಕೊಳ್ಳುತ್ತವೆ.

ಪಣಕಟ್ಟು ಸಮಾಜವನ್ನು ಗಮನಿಸಿದಾಗ ಒಂಭತ್ತು ಪಣದ ಎಡಗೈ ಸಮುದಾಯಗಳಿಗಿಂತ ಹದಿನೆಂಟು ಪಣದ ಬಲಗೈ ಸಮುದಾಯಗಳು ಶ್ರೇಷ್ಠವೆಂಬ ಅಭಿಪ್ರಾಯವಿದೆ. ಆದರೆ, ಮಾದಿಗ-ಚಲವಾದಿ ಪಣಕಲಹಗಳುದ್ದಕ್ಕೂ, ಎಡಗೈನ ಜಾಂಬವ ಅಥವಾ ಮಾದಿಗ ಸಮುದಾಯಕ್ಕಿಂತ ಬಲಗೈನ ಚಲವಾದಿ ಸಮುದಾಯ ದುರ್ಬಲವಾಗಿರುವಂತೆ ತೋರುತ್ತದೆ.

ಮಾದಿಗ ಸಮುದಾಯ ಭೂಮಂಡಲದ ಹುಟ್ಟಿಗೆ ಕಾರಣವಾದ ಬಗ್ಗೆ, ತಮ್ಮ ಸಮುದಾಯದ ಕುಡಿಗಳನ್ನು ಬಲಿಗೊಟ್ಟು ವಿವಿಧ ಸಮುದಾಯಗಳು, ಅದರಲ್ಲೂ ಪಾಂಚಾಳ ಸಮುದಾಯಗಳು ತಮ್ಮ ವೃತ್ತಿಯನ್ನು ರೂಪಿಸಿಕೊಳ್ಳಲು ಮತ್ತು ಸ್ಥಿರಪಡಿಸಿಕೊಳ್ಳಲು ಕಾರಣವಾದ ಬಗೆ, ಮಾದಿಗ ಒಳಪಂಗಡಗಳಾದ ದಕ್ಕಲಿಗ, ಮಾಸ್ತೀಕ ಮುಂತಾದವುಗಳಿಗೆ ಅಂಥ ಹೆಸರುಗಳು ಬರುವುದಕ್ಕೆ ಕಾರಣಗಳನ್ನು, ಮಾದಿಗರ ಮನೆಯಿಂದ ವಿಶಿಷ್ಟ ಪಂಚಾಂಗವನ್ನು ಕದಿಯುವ ಮೂಲಕ, ಮಾದಿಗರ ಬೌದ್ಧಿಕ ಸಂಪತ್ತನ್ನು ನಾಶಗೊಳಿಸಿದ್ದನ್ನು ಪ್ರಸ್ತಾವಿಸುತ್ತಾ ಸಾಗಿ, ಕೊನೆಗೆ ಕಲಹದ ವಿಷಯವನ್ನು ಪ್ರಸ್ತಾಪಿಸಲಾಗುತ್ತದೆ. ಕಲಹಕ್ಕೆ ಕಾರಣರಾದ ಬಲಗೈ ಪಣಕಟ್ಟಿನ ಚಲವಾದಿಗಳನ್ನು ಪಾರ್ವತಿಯ ಸೆರಗಿನಲ್ಲಿ ಹುಟ್ಟಿದವರು, ಮುಟ್ಟಿನ ಬಟ್ಟೆಯಲ್ಲಿ ಹುಟ್ಟಿದವರು, ಅವರು ಹುಟ್ಟಿದ ಕಾಲದಲ್ಲಿ ಆಂಕೋಲೆ ಗಿಡಕ್ಕೆ ಕಟ್ಟಿದವರು, ಅವರಿಗೆ ಕುಲಗುರುವು ಇಲ್ಲ ಎಂದು ಹೇಳಲಾಗಿದೆ.

ಕಂಚಿ ಶಾಸನದಲ್ಲಿ ಇದಕ್ಕೆ ಚಲವಾದಿಗಳು ಪ್ರತಿರೋಧ ಒಡ್ಡಿದಂತೆ ತೋರಲಿಲ್ಲ. ಆದರೆ ಹೊಲೆಯ ಮಾಸ್ತೀಕರ ವೃತ್ತಿಮೂಲದ ಪುರಾಣಕತೆಯಲ್ಲಿ ಚಲವಾದಿಗಳು ದೌರ್ಜನ್ಯದಿಂದ ಮೆರೆಯುತ್ತಿದ್ದ ಮಾದಿಗ ಸಮುದಾಯಕ್ಕೆ ಪ್ರಬಲ ಪ್ರತಿರೋಧ ಒಡ್ಡಿದ ಸಂಗತಿಯಿದೆ. ಐವತ್ತಾರು, ದ್ಯಾವರುಗಳ ದೇಶದಲ್ಲಿ ಹೊಲೇರ್ದು ಹನ್ನೆರಡು ಕುಲವಿದ್ದು, ಹನ್ನೆರಡು ಕುಲಗಳದ್ದು ೧೮ ಪಣಕಟ್ಟು, ಹದಿನೆಂಟು ಪಣಕಟ್ಟಿನವರಿಗೆ ಅದರಲ್ಲೂ ಹೊಲೇರ ಕುಲಗಳಿಗೆ ಶಂಖ, ಶಾರದು, ಕಲ್ಕಿ, ತುರಾಯಿ, ಛತ್ರಿ, ಪಾವಡ, ಅಲಗು, ಬವನಾಸಿ, ಹನ್ನೆರಡು ಅರವೇಂಡ್ಲು, ಪಚ್ಚಪೂಲು ಮುಂತಾದ ಕಟ್ಟುವ ಮಾಂಗಲ್ಯದಿಂದ ಹಿಡಿದು ಬಾಸಿಂಗದವರೆಗೂ ನೂರಒಂದು ಬಿರುದುಗಳಿದ್ದವು. ಹೊಲೆಯರ ನೂರಒಂದು ಬಿರುದುಗಳನ್ನು ಕಿತ್ತುಕೊಂಡ ಜಾಂಬವಂತನೆಂಬ ನಿತ್ಯ ಮದುವಣಿಗನು ಹೊಲೆಯ ಕುಲದ ಎಲ್ಲ ಹೆಣ್ಣುಮಕ್ಕಳನ್ನು ಒಂದು ದಿನದ ಮಟ್ಟಿಗೆ ಮದುವೆಯಾಗಿ ಬಿಟ್ಟುಬಿಡುತ್ತಿದ್ದ. ಇವರ ಉಪಟಳ ತಾಳಲಾರದೆ ಹೆಣ್ಣುಮಕ್ಕಳು ಆಗ ರಾಜ್ಯವನ್ನಾಳುತ್ತಿದ್ದ ಚಿಕ್ಕ ಯಾಮಾರೆಡ್ಡಿ, ರಾಯಲೂರ ಅಪ್ಪೋಜಿಯಂತಹ ಮಹನೀಯರ ಬಳಿ ಹೋಗಿ ಕಣ್ಣೀರು ಹಾಕಿಕೊಂಡು ತಮ್ಮನ್ನು ನಿತ್ಯಮದುವಣಿಗ ಜಾಂಬವನಿಂದ ರಕ್ಷಿಸುವಂತೆ ಕೇಳಿಕೊಳ್ಳುತ್ತಾರೆ. ಆದರೆ ಆಳರಸರೂ ವಿಫಲರಾಗುತ್ತಾರೆ. ಕೊನೆಗೆ ಡಂಗೂರ ಸಾರಿ ನಿತ್ಯ ಮದುವಣಿಗನನ್ನು ಕೊಂದು ಹೊಲೆಯ ಹೆಣ್ಣುಮಕ್ಕಳ ಮಾನ ಹಾಗೂ ಕುಲವನ್ನು ಉಳಿಸುವಂತಹವರಿಗೆ ಆದಿಜಾಂಬವನ ಹೊಲ, ಮನೆ, ತೋಪುಗಳನ್ನು ಕೊಡಲಾಗುವುದು ಮತ್ತು ನೂರಒಂದು ಬಿರುದುಗಳನ್ನು ವಾಪಸು ಕೊಡಲಾಗುವುದು. ಅವನನ್ನು ಹೊಲೆ ಕುಲದ ಹಿರೇ ಮಗನೆಂದು ಗೌರವಿಸಲಾಗುವುದು. ಭೂಮಿ, ಆಕಾಶ ಇರುವವರೆಗೂ ಅವರ ವಂಶವನ್ನು ಸಾಕುವ

ಭಾರ ನಮ್ಮದು ಎಂದು ಡಂಗೂರು ಸಾರಿಸುತ್ತಾರೆ. ವಿಷಯ ತಿಳಿದ ಆದಿಜಾಂಬವ ಕೆಂಡಾಮಂಡಲವಾಗಿ ಹೊಲೆಯರ ಬಿರುದುಗಳನ್ನೆಲ್ಲ ತನ್ನ ಎಡಗಾಲಿಗೆ ಕಟ್ಟಿಕೊಂಡು, ಕೆರದ ಕೆಳಗೆ ಹಾಕಿಕೊಂಡು, ಅವರ ಮೇಲೆ ಇನ್ನಷ್ಟು ದಬ್ಬಾಳಿಕೆ ನಡೆಸುತ್ತ ಬಂದು.

ಇದನ್ನು ಕೇಳಿದ ಜಂಗಾ ಪೆದ್ದಕ್ಕ ಎಂಬಾಕೆಯ ಮಗ ಚನ್ನಯ್ಯದಾಸು ಎಂಬ ನೀರಗುಂಟಿ ತನ್ನ ತಾಯಿಗೆ ಬೇಟೆಗೆ ಹೋಗುವುದಾಗಿ ಹೇಳಿ, ಆದಿಜಾಂಬವನಿದ್ದ ಜಾಗಕ್ಕೆ ಬರುತ್ತಾನೆ. ಜಾಂಬವ ಅವನ ಮೇಲೆ ಕುಸ್ತಿಗೆ ಇಳಿಯುತ್ತಾನೆ. ಕುಸ್ತಿಯಲ್ಲಿ ಆದಿ ಜಾಂಬವಂತನನ್ನು ಸಾಯಿಸುತ್ತಾನೆ. ದೊರೆಗಳು ಚನ್ನಯ್ಯನ ಶೌರ್ಯಕ್ಕೆ ಮೆಚ್ಚಿ ಬಿರುದುಗಳನ್ನೆಲ್ಲಾ ಅವನಿಗೆ ನೀಡುತ್ತಾರೆ. ಯಾವ ಬಹುಮಾನ ಬೇಕಾದರೂ ಬೇಡಿಕೋ ಎಂದಾಗ ನನಗೆ ಯಾವ ಕಾಣಿಕೆ ಕೊಟ್ಟರೂ ಉಳಿಯೋಲ್ಲ. ಹಾಗಾಗಿ ಎಲ್ಲ ಹೊಲೆಯ ಕುಲಗಳು ದೇಶದಲ್ಲಿ ಎಲ್ಲೇ ಇದ್ದರೂ ಮನೆ ಮನೆಯವರೂ ನಮಗೆ ಒಂದೊಂದು ರೂಪಾಯಿ ಮತ್ತು ರಾಗಿ ಕೊಡಬೇಕು. ಬಿಸಿಲು ಕಾಯದ ಐನ್ನೂರು ಕೋಟೆಗಳ ಭೂಮಂಡಲದಲ್ಲಿ ನಾನು ಎಲ್ಲೇ ಹೋದರೂ ಇಲ್ಲ ಅನ್ನಬಾರದ ರೀತಿ ಹಕ್ಕು ಮಾಡಿಕೊಡಿ' ಎಂದಾಗ ದೊರೆಗಳು 'ರಾಜಶಾಸನ' ಮಾಡಿಸಿ ಅದರಲ್ಲಿ ಹಕ್ಕುಮುದ್ರೆಗಳನ್ನು ಅಚ್ಚುಮಾಡಿಸಿಕೊಟ್ಟು ಪತ್ರ ಬರೆಸಿಕೊಡುತ್ತಾರೆ.[೧೧೦]

ಈ ಕಥಾನಕಗಳ ಸತ್ಯಾಸತ್ಯತೆ ಏನೇ ಇದ್ದರೂ, ಜಾಂಬವಂತರ ಪರವಾಗಿ ರಚಿತವಾದ ಕಂಚಿ ಶಾಸನಗಳಲ್ಲಿ ಚಲವಾದಿಗಳಿಗಾದ ಅಪಮಾನಕ್ಕೆ ಪ್ರತಿರೋಧಾತ್ಮಕವಾಗಿ ಈ 'ರಾಜಶಾಸನ' ರಚಿತವಾಗಿದೆ ಎಂಬುದಂತೂ ಸತ್ಯ. ಕಂಚಿ ಶಾಸನದ ಹಾಗೂ ನಿತ್ಯ ಮದುವಣಿಗನ ಕತೆಯ ಆಶಯ ಪಣಕಟ್ಟಿನ ಕಲಹದ ಹಿನ್ನಲೆಯಲ್ಲಿ ಜಾಂಬವ ಸಮುದಾಯವನ್ನು ಮೆರೆಸುತ್ತಲೇ ಚಲವಾದಿಗಳನ್ನು ಮಣಿಸುವುದಾಗಿದೆ ಎಂಬುದು ಸ್ಪಷ್ಟವಾಗಿದೆ. ಬಹುಶಃ ಈ ಪ್ರದೇಶಗಳಲ್ಲಿ ವಸಾಹತುಶಾಹಿ ಸಂದರ್ಭದಲ್ಲಿ ಉದ್ಭವಿಸಿದ ಯಾವುದೋ ಸಂಘರ್ಷದಲ್ಲಿ ಇಡೀ ಸಮಾಜ ಬಲಗೈನ ಪರವಾಗಿರುವುದು ವೇದ್ಯವಾಗುತ್ತದೆ. ಹಾಗೆಯೇ ಅದಕ್ಕೆ ಪ್ರತೀಕಾರಾತ್ಮಕವಾಗಿ ಹೊಲೆಯ ಚನ್ನದಾಸರಿ ಜಾಂಬವನನ್ನು ಸೋಲಿಸಿದ ಕತೆಯನ್ನು ಕಟ್ಟಲಾಗಿದೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವಿದೆಯೆಂಬುದು ನಮ್ಮ ಭಾವನೆ.

**೪.೩.೩ ಒಂದೇ ಪಣಕಟ್ಟಿನ ಪಂಗಡದೊಳಗಿನ ಕಲಹಗಳು**

ಕರ್ನಾಟಕದಲ್ಲಿ ದೊರೆತಿರುವ ಕಂಚಿಶಾಸನಗಳಲ್ಲಿ ಜಾಂಬವ ಮತ್ತು ಚಲವಾದಿಗಳಿಗೆ ಸಂಬಂಧಪಟ್ಟ ಮಟ್ಟಿಗೆ ಮಾತ್ರ ಎಡಗೈ ಮತ್ತು ಬಲಗೈ ಪಣಕಟ್ಟುಗಳ ನಡುವೆ ವ್ಯಾಜ್ಯಗಳು ಹುಟ್ಟಿಕೊಂಡಿವೆ. ಆದರೆ ಉಳಿದ ಎಲ್ಲ ಶಾಸನಗಳು ಬಲಗೈ ಪಣಕಟ್ಟಿಗೆ ಸೇರಿದ ಪಂಗಡಗಳಲ್ಲೇಎಂದರೇ ಒಂದೇ ಪಣಸಮಾಜದೊಳಗೆ ಪರಸ್ಪರ ವ್ಯಾಜ್ಯಗಳು ಹುಟ್ಟಿಕೊಂಡಿವೆ. ಉದಾಹರಣೆಗೆ ಬಲಗೈ ಪಣಕಟ್ಟಿಗೆ ಸೇರಿದ ಅಗಸರು ಮತ್ತು ನಾಯಿಂದರು, ಬಣಜಿಗರು ಮತ್ತು ಕುರುಬರು, ಬೆಸ್ತ ಮತ್ತು ಅಗಸರು ಇವರ ನಡುವೆ ಹೆಚ್ಚಿನ ಕಲಹಗಳು ಕಂಡುಬರುತ್ತವೆ. ಬಲಗೈನ ಪಣಕಟ್ಟಿನ ಹದಿನೆಂಟು

ಪಣಗಳಿಗೆ ಕೆಲವು ವಿಶಿಷ್ಟ ವಿಹಿತಾಚಾರಗಳನ್ನು ವಿಧಿಸಲಾಗಿದ್ದರೂ, ಕೆಲವು ಆಚರಣೆಗಳಿಗಾಗಿ, ವಸ್ತುಗಳ ಮೇಲಿನ ಪಾರಮ್ಯತೆಗಾಗಿ ಜಗಳಗಳು ಉದ್ಭವಿಸಿವೆ.

ಕ್ರಿ.ಶ. ೧೭೦೦ರ ಧರ್ಮಸ್ಥಳದ ತಾಮ್ರ ಶಾಸನವು[೧೧೧] ವಾಲಗದವರಿಗೂ ಅಗಸರಿಗೂ ನಡೆದ ಕೆಲವು ಕುಲಾಚಾರಗಳಿಗೆ ಸಂಬಂಧಿಸಿದ ಕಲಹವನ್ನು ಪ್ರಸ್ತುತಪಡಿಸುತ್ತದೆ. ಬೂತಾಲಹಳ್ಳಿಯ ವಾಲಗದವರು ಡೋಲಿನ ಮೇಲೆ ಬಿಳಿವಸ್ತ್ರ ಹಾಕಿಕೊಂಡಿರುವುದನ್ನು ನೋಡಿದ ಅಗಸರು ಇದು ನಿಮಗೆ ಸಲ್ಲದೆಂದು ವಾಲಗದವರಿಗೆ ಹೇಳುತ್ತಾರೆ. 'ಏಕೆ ಸಲ್ಲದೆಂದು' ಪ್ರಶ್ನಿಸಿದಾಗ ವ್ಯವಹಾರಕ್ಕೆ ಬನ್ನಿರೆಂದು ಆಹ್ವಾನವೀಯುತ್ತಾರೆ. ದೇಶದವರು, ಹದಿನೆಂಟು ಪಣದವರು ಸೇರಿಕೊಂಡು ಉಭಯ ಕುಲಸ್ತರ ಬಂಧುಗಳನ್ನು ಕರೆಸಿ, ಅಗಸರ ಕಡೆಯಿಂದ ದೊಡ್ಡಪ್ಯಾಟೆ ಪಾಳ್ಯದ ವೆಂಕಟಪ್ಪ ಮತ್ತು ವಾಲಗದವರ ಕಡೆಯಿಂದ ದಯಾಲಪುರಿ ವೆಂಕಟಪ್ಪನನ್ನು ಕರೆಸಿ 'ಯಾರ ಮಾತು ತಪ್ಪಾದರೂ ದಿವಾನರಿಗೆ ೧೨೦, ಚನ್ನಪಟ್ಟಣದವರಿಗೆ, ಹಗಲುದೇವರ ತಪ್ಪು, ದೇಶದವರ ತಪ್ಪು, ಕುಲದವರ ತಪ್ಪುಕಾಣಿಕೆ ಕೊಡಬೇಕೆಂದು ಹೇಳಿ ದಿವಾನರಿಗೆ ವಿಷಯ ತಿಳಿಸಿ ಅವರಿಂದ ಅಪ್ಪಣೆ ಪಡೆದುಕೊಳ್ಳುತ್ತಾರೆ. ಕಂಚಿಯಲ್ಲಿ ಕೃಷ್ಣರಾಯರು ತನ್ನ ಕಾಲದಲ್ಲಿ ಯಾರ್ಯಾರಿಗೆ ಯಾವ ಕಾಲದಲ್ಲಿ ಯಾವ ರೀತಿ ನಡೆಯಬೇಕು ಎಂಬ ಬಗ್ಗೆ ಪದ್ಧತಿಗಳನ್ನು ವಿಧಿಸಿದ್ದು, ಅವುಗಳನ್ನು ನೋಡದೆ ಇದು ತೀರುವುದಿಲ್ಲವೆಂದು ಉಭಯಕುಲಸ್ತರು ಮತ್ತು ಅವರ ಆಗ್ರಹದ ಮೇರೆಗೆ ಧನಪಾಲಶೆಟ್ಟರು, ಗುಂಡಾರ್ಯೈಯ್ಯನವರು, ಹದಿನೆಂಟು ಪಣದವರು ಕಂಚಿಗೆ ಬಂದು, ಮತ್ತೆ ಕಂಚಿಯಲ್ಲಿ ಸಮಸ್ತ ಗಣ್ಯವ್ಯಕ್ತಿಗಳೂ ಒಂದೆಡೆ ಸೇರುತ್ತಾರೆ. ಈ ವಿವಾದವನ್ನು ಕಂಚಿಯಲ್ಲಿ ಶಾಸನ ಪ್ರಕಾರ ಇದ್ದ ಹಾಗೆ ತೀರಿಸಬೇಕೆಂದು ಬಿನ್ನಯಿಸಿಕೊಂಡಾಗ ಸಭೆಯವರು 'ಆ ಶಾಸನವನ್ನು ನೋಡುವುದಕ್ಕೆ ಶ್ಯಾನೆ ಕರ್ಚು ಮುಟ್ಟಿಸಬೇಕು ಇಕ್ಕರ್ತರೂ ೨೦೦೦ ವರಹ ಕರ್ಚು ಮುಟ್ಟಿಸಿ' (ಬಹುಶಃ ತಲಾ ೨೦೦೦) ಎಂದು ಹೇಳುತ್ತಾರೆ. ಅದರಂತೆ ತಲಾ ೨೦೦೦ ವರಹಗಳನ್ನು ನೀಡಿ ಸಾಲದಿದ್ದಲ್ಲಿ ಯಿಂನು ಸಾಲಾ ತೆಗೆದುಕೊಡಬೇಕೆಂದೂ ಕಟ್ಟಳೆ ವಿಧಿಸುತ್ತಾರೆ. ಶಾಸನದ ಪ್ರಕಾರ ವಾಲಗದವರು ಹಿಡಿಯುವ ಆಯುಧ ಸೂರ್ಯ ನಿರ್ಮಿತವಾದ ಕಲ್ಲು, ಚಂದ್ರ ನಿರ್ಮಿತವಾದ ಆಯುಧವಾದ್ದರಿಂದ ನೃಪಾಲರಿಗೆ ಸರಿಯಾದ ಸಮಗದ್ದುಗೆ ಕ್ಷವುರಿಕನಿಗೂ ಸಲ್ಲಬೇಕು. ಅದರಂತೆ ಆಗ ಕೃಷ್ಣರಾಯಗಳಿಗೆ ಸಲ್ಲತಕ್ಕ ಬಿರುದುಗಳು, ಬಿಳಿ ಆನೆ, ಬಿಳಿಕುದುರೆ, ಆಂದೋಳಿಕ, ಶ್ವೇತಛತ್ರಿ, ಪಂಚತುರಾಯಿ, ಕಲ್ಕಿತುರಾಯಿ, ಬಿಳಿವಸ್ತ್ರ, ಹಸುರು ವಸ್ತ್ರ ವಾಲಗದವರಿಗೂ ಸಲ್ಲುತ್ತದೆಂದು ಹೇಳುತ್ತಾರೆ. ಅಷ್ಟೇ ಅಲ್ಲ, ಚತುರ್ದಿಕ್ಕುಗಳಿಗೆ, ಐವತ್ತಾರು ದೇಶಗಳಿಗೂ ವಾಲಗದವರು ಸರ್ವವಿಧದಲ್ಲೂ ಬೇಕಾಗಿರುವುದರಿಂದ ವಾಲಗದವರಿಗೆ ಕೈದಾರೆ ಅಕ್ಕಿ, ಮಲ್ಲಿಗೆ ಹೂವು ಸಹ ಪ್ರಸ್ತದ ಸಮಯದಲ್ಲಿ ಸಲ್ಲುವುದೆಂದು ಹೇಳುತ್ತಾರೆ.

ನಲವತ್ತನಾಲ್ಕು ಗ್ರಾಮಗಳಲ್ಲಿ ವಾಲಗದವರು ಮತ್ತು ಅಗಸರು ಯಾವ ರೀತಿ ನಡೆದುಕೊಳ್ಳಬೇಕು ಎಂಬ ಬಗ್ಗೆ ಕಟ್ಟಳೆ ಸಹ ವಿಧಿಸುತ್ತಾರೆ. ವಾಲಗದವರ ಮನೆಯಲ್ಲಿ

ಮದುವೆಯಾದರೆ, ಅಗಸರು ಬಟ್ಟೆ ಬರೆ ಮಡಿ ಮಾಡುವುದು, ಪಂತಿಗೆ (ಪಂಕ್ತಿ) ಊಟಕ್ಕೆ ಬಟ್ಟೆ ಹಾಸುವುದು, ದೀವಿಟಿ ಹಿಡಿಯುವುದು, ನೆಲಮುಡಿ ಹಾಸುವುದು, ಚಪ್ಪರಕ್ಕೆ ಮೇಲುಕಟ್ಟು ಕಟ್ಟುವುದು.ಅಗಸರ ಮನೆಯಲ್ಲಿ ಮದುವೆಯಾದರೆ ವಾಲಗದವರು ಕಾಲುಗುರು ತೆಗೆಯುವುದು, ಪಲನೆ ತೆಗೆಯುವುದು, ಮೇಳ ಮಾಡುವುದು ಎಂದು ಹೇಳಿ ಇದು ಎಲ್ಲ ಕಂಚಿಯಲ್ಲಿ ನಡೆಯುವ ಪದ್ಧತಿ– ಇದಕ್ಕೆ ಯಾರಾದರೂ ತಿರುಗಿ ಬಿದ್ದರೆ, ಅವರಿಗೆ ತಕ್ಕ ಶಿಕ್ಷೆ ಮಾಡತಕ್ಕದ್ದೆಂದು ಹೇಳಲಾಗಿದೆ. ಅಗಸರು ಮಾಡಬಾರದ ವ್ಯವಹಾರ ಮಾಡಿದ್ದರಿಂದ, ಅವರು ದಿವಾನರಿಗೂ, ದೇಶಕ್ಕೂ, ಕುಲಕ್ಕೂ, ತಪ್ಪು ದಂಡಿಗೆಯನ್ನು ನೀಡಬೇಕೆಂದು ಹದಿನೆಂಟು ಪಣದವರ ಮುಂದೆಯೂ ತೀರ್ಪು ನೀಡಲಾಗಿದೆ.

ಇದೇ ವ್ಯಾಜ್ಯದ ಸ್ವರೂಪವನ್ನೊಳಗೊಂಡ ಮತ್ತೊಂದು ಶಾಸನ ಲಭ್ಯವಾಗಿದ್ದು[೧೧೨] ಶಾಸನದಲ್ಲಿನ ಪಣಗಳು, ಅವರ ನಡುವಿನ ವ್ಯಾಜ್ಯ, ಕಥನ ಕ್ರಮ, ವಿವರಗಳು, ಶಾಸನದಲ್ಲಿ ಉಕ್ತವಾದ ಗ್ರಾಮ, ವ್ಯಕ್ತಿಗಳು ಸಂಪೂರ್ಣವಾಗಿ ಒಂದೇ ಆಗಿದ್ದರೂ, ಇಡೀ ಶಾಸನದ ನ್ಯಾಯನಿರ್ಣಯದ ಕ್ರಮ ಧರ್ಮಸ್ಥಳದ ಶಾಸನಕ್ಕಿಂತ ತದ್ವಿರುದ್ಧವಾಗಿದೆ. ಧರ್ಮಸ್ಥಳದಲ್ಲಿ ಹಜಾಮರು ಡೋಲಿನ ಮೇಲೆ ಬಿಳಿವಸ್ತ್ರ ಹಾಕಿಕೊಂಡಿದ್ದರೆ, ಕಾನಕಾನಹಳ್ಳಿ ಶಾಸನದಲ್ಲಿ ಅವರು ವಾಲಗಕ್ಕೆ ಮಲ್ಲಿಗೆ ಸುತ್ತಿದ್ದರಿಂದ ವ್ಯಾಜ್ಯ ಹುಟ್ಟಿಕೊಳ್ಳುತ್ತದೆ. ಅಂತಿಮವಾಗಿ ನ್ಯಾಯನಿರ್ಣಯ ಧರ್ಮಸ್ಥಳದ ಶಾಸನದಲ್ಲಿ ಹಜಾಮರ ಕಡೆಗಾದರೆ, ಇಲ್ಲಿ ಮಡಿವಾಳರ ಪರವಾಗುತ್ತದೆ.

ಈ ಎರಡೂ ಶಾಸನಗಳಲ್ಲಿ ವಾಲಗದವರು ಮತ್ತು ಅಗಸರು ಪರಸ್ಪರ ವ್ಯಾಜ್ಯಗಳನ್ನು ಮಾಡಿಕೊಂಡರೆ, ಮತ್ತೊಂದು ಶಾಸನದಲ್ಲಿ ಈ ಎರಡೂ ಸಮುದಾಯಗಳಿಗೂ ಮತ್ತು ಗಂಗಾಪುತ್ರರಿಗೂ (ಅಂಬಿಗರಿಗೂ) ಉಂಟಾದ ಜಗಳ ಬಗೆಹರಿಸಲಾಗಿದೆ.[೧೧೩] ವಾಲಗದವರುಮತ್ತು ಅಗಸರು ಸೇರಿ ಅಂಬಿಗರ ಬಟ್ಟೆಗಳನ್ನು ಅಗಸರು ಒಗೆಯುವುದಿಲ್ಲ ಮತ್ತು ನಾಯಿಂದರು ಕ್ಷೌರ ಮಾಡುವುದಿಲ್ಲವೆಂಬುದಾಗಿ ಕಟ್ಟಳೆಯನ್ನು ಮಾಡಿಕೊಂಡಿರುತ್ತಾರೆ. ಆಗ ಅಂಬಿಗರು ಚಂನಬೈರಾದೇವಿ ಅಮ್ಮನವರ ಬಳಿಗೆ ಬಂದು ಈ ಬಗ್ಗೆ ದೂರು ನೀಡಿದಾಗ, ಇವರು ಗಂಗಾಪುತ್ರರಾದ್ದರಿಂದ ಇವರ ಜಾತಿಗೆ ಯಾವುದೇ ಅಷ್ಟಾರುವೆಏನು ಇಲ್ಲದಿರುವುದರಿಂದ ಇವರ ಬಟ್ಟೆಗಳನ್ನು ಅಗಸರು ಒಗೆಯಬೇಕು ಹಾಗೂ ನಾಯಿಂದರು ಕ್ಷೌರ ಮಾಡಬೇಕೆಂದು ಕಟ್ಟಳೆ ಮಾಡುತ್ತಾಳೆ.

ಕುರುಬರಿಗೆ ಸಂಬಂಧಿಸಿದ ವಿಜಯನಗರದ ಅಪ್ರಕಟಿತ ತಾಮ್ರಶಾಸನದಲ್ಲಿ[೧೧೪] ಕುರುಬರು ಮತ್ತು ಬಣಜಿಗರಿಗೆ ಕಲಹವುಂಟಾಗಿ ಕುರುಬರಿಗೆ/ಕುರುಬರ ದೇವರಿಗೆ ಸಾಲಸತ್ತಿಗೆ ಸುರುಟು, ಹನುಮನದಕ್ಕೆ, ಹಗಲು ದೀವಟಿಗೆ, ಮೇಳ, ಸಿಂಹಲಲಾಟ, ಜೆಲ್ಲಿಸಾಲೆ, ರುಂಡಮಾಲೆ, ಹಸುರು ರಥವು, ಸಂದಿಗೆ ಸಾವಿರ ಬಿರುದುಗಳು ಸಲ್ಲುವುದಿಲ್ಲವೆಂದು– ಬಣಜಿಗರು ಹೇಳಿದರೆ, ಬಣಜಿಗರಿಗೆ ಅಡ್ಡಪಟ್ಟಡಿ ಹಾಕಿ ಎತ್ತಿನ ಮೇಲೆ ಹೇರು ಹಾಕಲಾಗದು ಕುರುಬರ ಧಾರಾಕಂಕಣ ಕಟ್ಟಲಾಗದು,

ಕಂಬಳಿಗದ್ದುಗೆ ಹಾಕಲಾಗದು, ಚಿಕ್ಕ ತಕ್ಕಡಿ, ದೊಡ್ಡ ತಕ್ಕಡಿ ಹಿಡಿಯಲಾಗದು, ಕುರುಬರ ಬದುಕು ಮುಟ್ಟಲಾಗದು ಎಂದು ಕುರುಬರುವಾದ ಮಾಡುತ್ತಾರೆ.

ವುಜ್ಜನಿ, ಕುಂದುರ್ಪಿ, ಕಣೇಕಲ್ಲು, ಗುತ್ತಿ, ಬಳ್ಳಾರಿ, ವಿಜಯನಗರ, ಪೆನುಗೊಂಡ, ತೆಕ್ಕಲಕೋಟೆ, ಚಿತ್ರದುರ್ಗ, ಗದ್ವಾರ್, ಹೊಸಪೇಟೆ, ಸೊಂಡೂರು, ಹಿರಿಯೂರು, ವುರುಂಕೊಂಡೆ, ಮುಂತಾದ ಊರುಗಳ ಜನರ ಸೇರಿ ೩೬ ದೇವರುಗಳು ಸೇರಿ ಹೊಸಪೇಟೆಯಲ್ಲಿ ಬಣ್ಣ ಮಾಡಿಸಿಕೊಂಡು ಹಂಪಿಯೊಳಗೆ ಗಂಗೆ ಪೂಜೆ ಮಾಡಿಸಿಕೊಂಡು, ತೇರಿನ ಬಜಾರಿನಲ್ಲಿ ಶುಭ ಸಂಕೇತಗಳೊಂದಿಗೆ ಸಾವಿರ ಬಿರುದುಗಳನ್ನು ಹಾಕಿಕೊಂಡು ಮೆರವಣಿಗೆ ಮಾಡಿಸಿಕೊಂಡು ಬರುತ್ತಿರುವಾಗ ಆನೆಗೊಂದಿ, ಹೊಸಪೇಟೆ, ಸೊಂಡೂರು, ಕಮಲಾಪುರ, ಬಳ್ಳಾರಿ, ಗದ್ವಾಲ, ಮದ್ರಾಸು, ಬಂಬಾಯಿ, ರಾಯದುರ್ಗ, ರಾಯಚೂರು ಮುಂತಾದ ಪ್ರದೇಶದ ಸ್ವಾಮಿಗಳು, ಶೆಟ್ಟರು ಕುರುಬರ ದೇವರುಗಳ ಬಿರುದು ಬಹುಮಾನಗಳನ್ನು ಕಸಿದುಕೊಂಡು, ಸಾವಿರ ಸಾಲು ಮಂಟಪದೊಳಗೆ ಪರಭಾರೆ ಮಾಡುತ್ತಾರೆ. ಇಬ್ಬರೂ ದೊಂಬಿ ಮಾಡಿಕೊಂಡು ಹೇಮಕೂಟ ಬಂಡೆಯ ಮೇಲೆ ಭಾರಿ ಜಗಳವಾಗಿ ಸಾವಿರ ಪ್ರಾಣಿಗಳು ಹತವಾಗುತ್ತವೆ.ಮಹಾರಾಜ ರಾಜಶ್ರೀ ನರಪತಿ ಶ್ರೀ ಕೃಷ್ಣ ವಡೆಯರ್‌ರವರು ದಿಳ್ಳಿ ಸುಲತಾನ್, ಚಿತ್ರಕಲ್ಲು ದುರ್ಗದ ಭರಮಣ್ಣ ನಾಯಕ, ಗುಡೇಕೋಟೆ ನಾಯಕ ನಿಡಗಲ್ಲು, ಸುರಪುರ ದೊರೆಗಳು, ಮುಂತಾದ ಆಗ ಐವತ್ತಾರು ದೇಶದವರು ಸೇರಿ (ಶಾಸನದಲ್ಲಿ ಅವರನ್ನೆಲ್ಲ ಹೆಸರಿಲಾಗಿದೆ) ಐವತ್ತಾರು ದೇಶದವರು ಸೇರಿ, ಮಹಾನಾಡು ಸಭೆಯವರನ್ನು ಕರೆಯಿಸಿ ಸಕಲವಾದ ಹಿರಿಯವರು ಸಭೆಯನ್ನು ಸೇರಿಸಿಕೊಂಡು ಪಂಚಾಯತಿ ಮಾಡಿ ವಿಚಾರಣೆ ಮಾಡುತ್ತಾರೆ. ಪಂಚಾಯತಿಯಲ್ಲಿ ಇವರು ಹೆಚ್ಚು ಅಲ್ಲ, ಅವರು ಕಡಿಮೆ ಅಲ್ಲ. ಬಣಜಿಗರ ಮೂತಿ ಕುರುಬರದು ಸಾಲು ಪಂಚಾಯತಿಯಲ್ಲಿರುವ ಕುರುಬರು ಮುಟ್ಟದ ಬದುಕು ಇಲ್ಲ. ಶುಭ ಅಂಥ ಕುರುಬರು ಮುಂದೇ ಬೇಕು. ಕುರುಬರ ದಾರ ಕಂಕಣ ಬೇಕು. ಕಂಬಳಿ ಗದ್ದುಗೆ ಬೇಕು. ಈ ಬಗೆ ವಿಚಾರಿಸಿದ್ದಕ್ಕೆ ಕುರುಬರನ್ನು ತೆಗೆದುಹಾಕುವುದಿಲ್ಲ ಎಂದು ಸಭೆಯವರು ಪಂಚಾಯತಿ ಹೇಳಿದರು. ಕುರುಬರಿಗೆ ವಂದು ಸಂದಿಗೆ ಸಾವಿರ ಬಿರುದು ಸಲ್ಲುವುದೆಂದು ಪಂಚಾಯತಿಯಲ್ಲಿ ಸರ್ವರು ತೀರ್ಮಾನ ಮಾಡುತ್ತಾರೆ.ಅಲ್ಲದೆ ಹನುಮನ ಟಕ್ಕೆ, ಹಗಲು ದೀವಟಿಗೆ, ಛತ್ರ, ಛಾಮರ, ಭಜಂತ್ರಿ, ಸಿಂಹ ಲಲಾಟ . . . . ನಾಲ್ಕು ಬರ್ಖಾರುಗಳಲ್ಲಿ ಮೆರವಣಿಗೆ ಮಾಡಿಸಿ ಮಹಾನಾಡು ದೈವದವರು 'ಕುರುಬರಿಗೂ, ಬಣಜಿಗರಿಗೂ ಮುಂದೆ ಏನೇ ವ್ಯಾಜ್ಯಕ್ಕೆ ಕಾರಣ ಇಲ್ಲ. ವೀರಭದ್ರ ದೇವರಿಗೂ, ಬೀರ ದೇವರಿಗೂ ವಂದೆ ಸಮೂಹವೆಂದು ಅವರನ್ನು–ಇವರನ್ನು ಸಮಾಧಾನ ಮಾಡಿ ಕುರುಬರಿಗೆ ಸಂದಿಗೆ ಸಾವಿರ ಬಿರುದು ನಿಮಗೆ ಸಲ್ಲುವುದೆಂದು ಹೇಳಿ ಮೆರವಣಿಗೆ ಮಾಡಿಸಿದರು. ಆಮೇಲೆ ಅವರವರ ದೇವರುಗಳನ್ನು ಅವರು ತೆಗೆದುಕೊಂಡುಹೋಗಿ ಎಂದು ನರಪತಿ ಕೃಷ್ಣರಾಜು ಮಹಾನಾಡು ವಗ್ಗೈರೆಯವರು ಅಪ್ಪಣೆ ನೀಡಿ ಕಳಿಸುತ್ತಾರೆ.

ಪೆದ್ದಧಾಳಿವಟ್ಟಂನ ದೇವಾಲಯದಲ್ಲಿ ಪಟ್ಟಶಾಲೆ ಮತ್ತು ಪದ್ಮಶಾಲೆಯವರ ನಡುವೆ ಧ್ವಜ ಬಳಸುವುದಕ್ಕೆ ಸಂಬಂಧಿಸಿದಂತೆ ವಿವಾದ ಉಂಟಾದಾಗ, ಕದಿರಿ, ತಿರುಪತಿ ಮತ್ತು ಇತರ ತೀರ್ಥಕ್ಷೇತ್ರಗಳಲ್ಲಿ ಪದ್ಮಶಾಲೆಯವರು ಅನುಭವಿಸುತ್ತಿರುವಂತಹ ಹಕ್ಕುಗಳನ್ನು ಅನುಭವಿಸಬಹುದೆಂದು ನರಸಿಂಹ ತಾತಾಚಾರ್ಯ ನೀಡಿದ ತೀರ್ಪಿಗಾಗಿ ರೊದ್ದಂ ನಾಡು, ಪೆನುಗೊಂಡ ಸೀಮೆ, ಪರಿಗಿಸ್ಥಳ, ವೆಂಕಟಾಪುರಂ, ಧಾಳಿವಟ್ಟಂ, ಶಾಸನಕೋಟ, ಚೋಲಮರಿ, ಕಲಕುಂಟ, ಮಿಡಿಗೇಸಿ, ಹಿರಿಯೂರು, ಚಳ್ಳಕೆರೆ, ದೊಡ್ಡೇರಿ, ನಿಡುಗಲ್ಲು, ಪೆನುಗೊಂಡ, ಗುತ್ತಿ ಚಂದ್ರಗಿರಿ, ಮುಂತಾದ ಸ್ಥಳಗಳಲ್ಲಿರುವ (ಶಾಸನದಲ್ಲಿ ಸುಮಾರು ೨೬ ಊರುಗಳ ಉಲ್ಲೇಖವಿದೆ) ಎಲ್ಲ ಪದ್ಮಶಾಲೆ ನೇಕಾರರು ಪ್ರತಿವರ್ಷ ಒಂದು ಮಗ್ಗಕ್ಕೆ ೧ ರೂಕು ಸಂದಾಯ ಮಾಡಬೇಕೆಂದು ವಿಧಿಸುತ್ತಾರೆ.[೧೧೫]

ಮೇಲಿನ ವಿವರಿಸಲಾದ ಶಾಸನಗಳಲ್ಲಿನ ಕಲಹಗಳು ಒಂದೇ ಪಣಕಟ್ಟಿನೊಳಗೆ ಎಂದರೆ ಬಲಗೈ ಪಣಕಟ್ಟಿನ ಗುಂಪಿನೊಳಗೆ ನಡೆದಿರುವ ವ್ಯಾಜ್ಯಗಳಾಗಿವೆ.

**೪.೩.೪ ಸಂಕೀರ್ಣ ಕಲಹಗಳು**

ಸಂಕೀರ್ಣ ಕಲಹಗಳಲ್ಲಿ ಒಂದು ಮಠದ ಆಧಿಪತ್ಯಕ್ಕಾಗಿ, ಗುರುಗಳ ನೇಮಕದ ವಿಚಾರವಾಗಿ, ಕೆಲವು ಬೀದಿಗಳಲ್ಲಿ ದೇವರ ಮೆರವಣಿಗೆ ಮತ್ತು ಕೆಲವು ಸಮುದಾಯಗಳ ಮೆರವಣಿಗೆಗಾಗಿ ನಡೆಯುವ ಕಲಹಗಳಾಗಿವೆ. ಇವಲ್ಲದೆ, ಭೂವಿವಾದ, ಗ್ರಾಮದ ಗೌಡಿಕೆ, ಕಾಣಾಚಿಹಕ್ಕು ಮುಂತಾದವುಗಳನ್ನು ಪಡೆಯಲೂ ಸಹ ವ್ಯಾಜ್ಯಗಳು ನಡೆದಿವೆ. ಇಂತಹ ಸ್ವರೂಪದ ಕಲಹಗಳ ಬಗ್ಗೆ ಇತರ ಶಾಸನಗಳು ಬೆಳಕು ಚೆಲ್ಲಿದ್ದರೂ, ಅಧ್ಯಯನದ ಪರಿಮಿತಿಯಲ್ಲಿ ಹಾಗೂ ಪೂರಕವಾಗುವ ಹಾಗೆ ಕೇವಲ ಜಯರೇಖೆ ಮತ್ತು ತತ್ಸಂಬಂಧಿತ ಶಾಸನಗಳನ್ನು ಮಾತ್ರ ಪರಿಗಣನೆಗೆ ತೆಗೆದುಕೊಳ್ಳಲಾಗಿದೆ.

ಆನೆಗೊಂದಿ ಪೀಠದ ಒಡೆತನಕ್ಕೆ ಸಂಬಂಧಿಸಿದಂತೆ ಆನೆಗೊಂದಿಯ ಸದ್ಯೋಜಾತಸ್ವಾಮಿ ಮತ್ತು ಅಂತರವಳ್ಳಿಯ ನಿರಂಜನಯ್ಯ, ಮೂರು ಜಾವದಯ್ಯ ಎಂಬುವವರ ನಡುವೆ ವಿವಾದ ಉಂಟಾಗುತ್ತದೆ.ಆನೆಗೊಂದಿ ಸಂಸ್ಥಾನದಲ್ಲಿ ರೂಥಾಚಾರ್ಯರ ಮಠವಿತ್ತು. ವಿರೂಪಾಕ್ಷೆ ರಥೋತ್ಸವಕ್ಕೆ ಬಂದ ಅಂತರವಳ್ಳಿಯ ನಿರಂಜನಯ್ಯ, ಮೂರು ಜಾವದಯ್ಯ ಆನೆಗೊಂದಿ ಮಠ ತಮಗೆ ಸೇರಿದ್ದೆಂದು ಈ ಬಗ್ಗೆ ತಾವು ದಾಖಲೆಗಳನ್ನು ಒದಗಿಸುವುದಾಗಿ ವಾದ ಮಾಡುತ್ತಾರೆ ಹಾಗೂ ಈ ಸಂಬಂಧ ಕೆಲವು ಪತ್ರಗಳನ್ನು ತೋರಿಸುತ್ತಾರೆ. ಆದರೆ ಈ ಪತ್ರಗಳನ್ನು ಸಭೆಯಲ್ಲಿದ್ದವರು ಸರಿಯಿಲ್ಲವೆಂದು ಮಾನ್ಯ ಮಾಡದೆ, ವ್ಯಾಜ್ಯ ಮಾಡಿದ್ದರ ಬಗ್ಗೆ ಪ್ರಶ್ನಿಸುತ್ತಾರೆ. ಆಗ ಅಂತರವಳ್ಳಿಯ ನಿರಂಜನಯ್ಯ ಹಾಗೂ ಮೂರು ಜಾವದಯ್ಯನವರು ತಿಳಿಯದೆ ಮಾಡಿದೆವೆಂದು ಹೇಳಿ ತಮ್ಮ ಹಿರಿಯರು ರೂಥಾಚಾರ್ಯರಿಗೆ ಕಾಣಿಗೆ ಕೊಡುತ್ತಿದ್ದುದನ್ನು ಒಪ್ಪಿಕೊಳ್ಳುತ್ತಾರೆ. ಆಗ ವಿಜಯನಗರದ ಅರಸ ಕೃಷ್ಣದೇವರಾಯ, ತ್ರಿಮತಸ್ತ ಬ್ರಾಹ್ಮಣರು, ಮಹಾಮಂಡಲೇಶ್ವರ ಬಂಗಾರು ತಿಮ್ಮರಾಜು, ದಳವಾಯಿಗಳೆಲ್ಲರೂ ಸೇರಿ

ಅಂತರವಳ್ಳಿಯವರಿಂದ ರೂಥಾಚಾರ್ಯ ಮಠದ ಸದ್ಯೋಜ್ಞಾತ ಸ್ವಾಮಿಗಳಿಗೆ 'ಜಯರೇಖೆ' ಬರೆಸಿಕೊಡುತ್ತಾರೆ. ಅಲ್ಲದೆ ಅವರು ಆನೆಗೊಂದಿ ಮಠವನ್ನು ಮೂಲಪೀಠವೆಂದೂ, ರೂಥಾಚಾರ್ಯರು ಮೂಲಪೀಠಸ್ಥರೆಂದೂ ಹಾಗೂ ಅವರ ವಂಶಸ್ಥರೇ ವ್ಯವಹಾರ, ಆಹಾರ, ಪಾಪ ಪ್ರಾಯಶ್ಚಿತ್ತವನ್ನು ಮಾಡುವುದಕ್ಕೆ ಬಾಧ್ಯರು ಎಂದು ಒಪ್ಪಿಸಿ ತಪ್ಪು ಕಾಣಿಕೆಯಾಗಿ ಅಂತರವಳ್ಳಿಯವರು ಮುನ್ನೂರು ಗದ್ಯಾಣಗಳನ್ನು ಕೊಡುತ್ತಾರೆ.[೧೧೬]

ಮತ್ತೊಂದು ಸಂದರ್ಭದಲ್ಲಿ ಹಾಲುಮತದ ಕುರುಬರಿಗೆ ಶಾಂತಮುತ್ತಯ್ಯ ಅಥವಾ ಮಂಕೊಡೆಯರಲ್ಲಿ ಯಾರು ಗುರುಗಳಾಗಬೇಕು ಎಂಬ ವಿಷಯದ ಬಗ್ಗೆ ವಾದ ವಿವಾದಗಳು ಉಂಟಾಗುತ್ತವೆ. ಇವುಗಳ ಸತ್ಯಾಸತ್ಯತೆಯನ್ನು ನಿರ್ಣಯಿಸಿ ಅಂತಿಮವಾಗಿ ರೇವಣಸಿದ್ದೇಶ್ವರ ಪರಂಪರೆಯ ಶಾಂತೊಡೆಯರೆ ಹಾಲುಮತದ ಕುರುಬರಿಗೆ ಗುರುಗಳು ಎಂಬ ತೀರ್ಮಾನಕ್ಕೆ ಬಂದು, ಮಂಕೊಡೆಯನನ್ನು ಸೆರೆಗೆ ಹಾಕಲಾಗುತ್ತದೆ.

ಹೆಚ್ಚಿನ ಕಲಹಗಳು ನಿರ್ದಿಷ್ಟ ಮಾರ್ಗಗಳಲ್ಲಿ ದೇವರ ಹಾಗೂ ಮದುವೆಯ ಮೆರವಣಿಗೆಯನ್ನು ಮಾಡುವ ಹಕ್ಕಿಗಾಗಿ ಕಲಹಗಳು ಉದ್ಭವವಾಗುತ್ತಿದ್ದವು. ಆನೇಕಲ್ಲು ಉಭಯ ಪೇಟೆಯಲ್ಲಿರುವಂತಹ ಶೆಟ್ಟಿ ವರ್ತಕರು ಮುಂತಾದ ಸಮಸ್ತ ಪಣಕಟ್ಟು ಜನರಿಗೆ ದೇಶದ ಪೇಟೆಯಲ್ಲಿ ನಂದಿಕೋಲು ಮೆರವಣಿಗೆ ನಿಮಿತ್ತವಾಗಿ ಹಾಗೂ ನಗರ್ತಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆ ನಿಮಿತ್ತವಾಗಿ ಮುತ್ತದಾಸರಿ ಮೂಲಕ ಕಲಹ ಉಂಟಾದ್ದರಿಂದ, ಉಭಯ ಪೇಟೆಗಳು ಆರೂಪಗೊಂಡಿರುತ್ತವೆ. ಆಗ ಹೊಸಕೋಟೆ ಸ್ಥಳದ ಗುರುಗಳಾದ ವೆಂಕಟಾಚಾರ್ಯರು ಆನೇಕಲ್ಲಿಗೆ ಬಂದು ಉಭಯ ಪೇಟೆ ಶೆಟ್ಟಿ ವರ್ತಕರು ಮುಂತಾದ ಸಮಸ್ತ ಪಣಕಟ್ಟು ಜನರನ್ನು ಕರೆಸಿ ಪೂರ್ವಪ್ರಕಾರಕ್ಕೆ ದೇಶಪೇಟೆಯಲ್ಲಿ ನಂದಿಕೋಲು ಮೆರವಣಿಗೆ, ನಗರ್ತಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆಯನ್ನು ಆಗಮಾಡಿಸಿ ಉಭಯ ಪೇಟೆಗಳಲ್ಲೂ ಶಾಂತಿ ಮೂಡುವಂತೆ ಮಾಡುತ್ತಾರೆ.[೧೧೭]

ಮುಕ್ಕುಂದಿ ಶಾಸನದ ಪ್ರಕಾರ ರವುಡುಕುಂದಿಯ ಗೌಡ, ಸೇವಜೀವ ಮುಂತಾದವರ ಭಿನ್ನಹದ ಮೇರೆಗೆ ಹಠಗಾರರು ಮುಕ್ಕುಂದಿ ಪೀಠವನ್ನು ಹೊಸದಾಗಿ ಮಾಡಿಸಿ ಮಳಿಗೆಗಳನ್ನು ಕಟ್ಟುತ್ತಾರೆ. ಇದಕ್ಕೆ ಹಟಗಾರರಿಗೆ ಸೋಮಬೀದಿಯ ಮೆರವಣಿಗೆ ಹಕ್ಕನ್ನು ಕೊಡುತ್ತಾರೆ. ಶುಭ ಕಾರ್ಯಗಳಲ್ಲಿ, ಮದುವೆಯನ್ನು ಮಾಡುವಾಗ ಮಂಗಳ ಕಳಶಗಳ ಸಮೇತ ಇಲ್ಲಿಗೆ ಬರಬೇಕೆಂದು ಕಟ್ಟಳೆ ವಿಧಿಸಲಾಗಿದೆ.[೧೧೮] ಅದೇ ಜಿಲ್ಲೆಗೆ ಸಂಬಂಧಿಸಿದ ಕರಕ್ಕಲ್ ಶಾಸನವು ಹೆಗಡೆ ಸೂಕ್ಷ್ಮ ಶಿವಭಟಾರ ಅಪ್ರಮುಖ ತಪೋಬಲದ ದಾಸಿಸೆಟ್ಟಿ ಮತ್ತು ನಕರಿಗೆ ಕೆಲವು ಕಟ್ಟಳೆಗಳನ್ನು ಮಾಡಿ ಶಾಸನ ನೀಡುತ್ತಾರೆ. ನಡೆಮುಡಿಗೆ ಸಂಬಂಧಪಟ್ಟಂತೆ ಇರುವ ಈ ಶಾಸನವು ಕೀಳುಕುಲದವರು ತಮ್ಮ ಬಂಡಿಯನ್ನು ಅಂಗಡಿ ಬೀದಿಯೊಳಗೆ ತರಬಾರದೆಂದು ಕಟ್ಟಳೆ ವಿಧಿಸಿದ್ದನ್ನು ದಾಖಲಿಸುತ್ತದೆ.[೧೧೯]

ಬಿಚ್ಚುಗತ್ತಿ ಭರಮಣ್ಣ ನಾಯಕನ ಕಾಲದಲ್ಲಿ ದಾವಣಗೆರೆ ಗೌಡಿಕೆಯನ್ನು ವಹಿಸಿಕೊಂಡಿದ್ದ ಸಾದುವಕ್ಕಲು ಕರುಣಗೌಡನ ಮಗ ಮುದಿಯಣ್ಣ ಗೌಡನಿಗೂ ಮತ್ತು ಕುರುಬರ ಬೀರೇದೇವರ ಪೂಜಾರಿ ಕರಿಯಣ್ಣನ ಮಗ ನಾಗಯ್ಯ ಹಾಗೂ ಗೊಲ್ಲರ ಗಿಡ್ಡಗಿರಿಯಣ್ಣನ ಮೊಮ್ಮಗ ಗಿಡ್ಡಯ್ಯ ಗೌಡರ ನಡುವೆ ಗ್ರಾಮದ ಗೌಡಿಕೆಗೆ ಸಂಬಂಧಿಸಿದಂತೆ ವ್ಯಾಜ್ಯ ಉಂಟಾಗುತ್ತದೆ. ಆಗ ಭರಮಣ್ಣ ನಾಯಕನ ಸನ್ನಿಧಾನದಲ್ಲಿ ನ್ಯಾಯ ನಿರ್ಣಯ ಪ್ರಾರಂಭವಾಗಿ ಉಭಯ ಪಕ್ಷಗಳಿಂದ ಸಾಕ್ಷ್ಯ ಹೇಳಿಸಿದರೂ, ತೀರ್ಪು ನೀಡುವುದು ಕಷ್ಟವಾದಾಗ, ನಾಗಯ್ಯ ದಿವ್ಯವನ್ನು ಗೆಲ್ಲುವ ಮೂಲಕ ದಾವಣಗೆರೆಯ ಗೌಡಿಕೆ ಪಡೆಯುತ್ತಾನೆ.[೧೨೦]

ಭೂಮಿಯ ಅತಿಕ್ರಮಣವೂ ಸಹ ಕಲಹಕ್ಕೆ ಕಾರಣವಾಗಿರುವುದು ಲಕ್ಷ್ಮೇಶ್ವರದ ಜಯಪತ್ರದಿಂದ ತಿಳಿದುಬರುತ್ತದೆ.[೧೨೧] ಶಂಖಬಸ್ತಿಯ ಹೇಮದೇವಾಚಾರ್ಯ, ಸೋಮನಾಥ ದೇವರ ಸ್ಥಾನಾಚಾರ್ಯ ಶಿವರಾಮಯ್ಯ ಶಂಖಬಸ್ತಿಗೆ ಸೇರಿದ ಜಾಗವನ್ನು ಅತಿಕ್ರಮಣವಾಗಿ ಉಳುಮೆ ಮಾಡುತ್ತಿದ್ದಾನೆಂದು ದೂರು ನೀಡಿದಾಗ, ಎರಡೂ ಕಡೆಯ ಸಾಕ್ಷಿಗಳು ಹೇಳುವ ಮಾತುಗಳನ್ನು ಪರಾಂಬರಿಸಿ, ಭೂಮಿ ಹೇಮದೇವಾಚಾರ್ಯರಿಗೆ ಸೇರಿದ್ದೆಂದು ಹೇಳಿ ಜಯಪತ್ರ ನೀಡಲಾಗುತ್ತದೆ.

ವೃತ್ತಿಪರ ವೈಷಮ್ಯ ಅಥವಾ ಕೆಲವು ವೃತ್ತಿಗಳ ಮೇಲೆ ಹಕ್ಕುಸ್ವಾಮ್ಯ ಸಾಧಿಸಲು ಕಲಹ ನಡೆದಿದೆ. ದೊಡ್ಡೇರಿಯ ಮಾದಿಗರ ಹೊಟ್ಟೆ ರಂಗ ಮತ್ತು ಮಾದಿಗರ ಚಿಕ್ಕ, ಮಧುರೆ ಗಿರಿಯ ತಿಮ್ಮ, ಬೆಳಗೆರೆಯ ಚನ್ನ, ಕೊಡಿ ದಾಸ ಇವರ ನಡುವೆ ಮಾದಿಹಳ್ಳಿ ಮಾದಿಗ ವೃತ್ತಿಯ ಮೇಲೆ ಹಕ್ಕು ಸ್ವಾಮ್ಯ ಸಾಧಿಸುವ ಸಂಬಂಧದಲ್ಲಿ ವ್ಯಾಜ್ಯ ಪ್ರಾರಂಭವಾಗುತ್ತದೆ. ಸುತ್ತಮುತ್ತಲಿನ ಹಲವಾರು ಗ್ರಾಮಗಳ ಗೌಡರು ಸೇರಿ ದೊಡ್ಡೇರಿಯ ಗೌಡ ಕೆಂಚಣ್ಣಗೌಡನನ್ನು ಕರೆಯಿಸಿ ಸಾಕ್ಷಿ ಕೇಳಿದಾಗ, ಅವನು ಮಾದಿಹಳ್ಳಿಯ ಮಾದಿಗತನದ ವೃತ್ತಿ ಹೊಟ್ಟೆ ರಂಗನದು. ಮಲ್ಲಪ್ಪನಹಳ್ಳಿ ಚಿಕ್ಕನಿಗೆ ಇದು ಸಂಬಂಧಿಸಿದ್ದಲ್ಲ ಎಂದು ಸಾಕ್ಷಿ ಹೇಳುತ್ತಾರೆ. ಆಗ ಐದು ಜನ ಸೋಲು ಒಪ್ಪಿಕೊಂಡು 'ಇದು ಹೊಟ್ಟೆ ರಂಗನಿಗೆ ಸೇರಿದ್ದು, ಇನ್ನು ಮುಂದೆ ನಮ್ಮ ಪುತ್ರ, ಪೌತ್ರ ಯಾರಿಗೂ ಸಂಬಂಧಿಸಿದ್ದಲ್ಲವೆಂದು 'ಸೋತಪತ್ರ' ಬರೆದುಕೊಡುತ್ತಾರೆ.[೧೨೨]

ಈ ಉಪ-ಅಧ್ಯಾಯದಲ್ಲಿ ವಿವರಿಸಲಾದ ಎಲ್ಲ ವ್ಯಾಜ್ಯಗಳ ಹಿನ್ನಲೆಯಲ್ಲಿ ಮಧ್ಯಕಾಲೀನ ಸಾಮಾಜಿಕ ರಂಗದಲ್ಲಾಗುತ್ತಿದ್ದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳು ಕಾರ್ಯಪ್ರವೃತ್ತ ವಾಗಿವೆ. ಈ ಅವಧಿಯಲ್ಲಿ, ಅದರಲ್ಲೂ ಹದಿನಾರನೆಯ ಶತಮಾನದ ತಾಳಿಕೋಟೆ ಯುದ್ಧಾನಂತರ ಸಮುದಾಯಗಳ ವಲಸೆ ತೀವ್ರಗೊಳ್ಳುತ್ತದೆ. ಬೇರೆ ಬೇರೆ ಪ್ರದೇಶಗಳಲ್ಲಿರುವ ಒಂದೇ ಸಮುದಾಯಗಳ ಜನ ಸ್ಥಳೀಯ ಅಗತ್ಯತೆಗೆ ತಕ್ಕಂತೆ ಆಚಾರ ವಿಚಾರಗಳನ್ನು ಕಟ್ಟಳೆಗಳನ್ನು ರೂಪಿಸಿಕೊಂಡಿರುತ್ತಿದ್ದರು. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಇಂಥ ಸಮುದಾಯಗಳು ವಲಸೆ ಬಂದಾಗ, ಮೂಲ ಸಮುದಾಯ ಮತ್ತು ವಲಸಿಗ ಸಮುದಾಯಗಳಲ್ಲಿನ ಆಚಾರ ಹಾಗೂ ಆಚರಣೆಗಳ ನಡುವಿನ

ಬೇಧಗಳು ಹಲವಾರು ರೀತಿಯ ಕಲಹಗಳಿಗೆ ಕಾರಣವಾಗಿರುತ್ತಿದ್ದವು. ಇದು ದೈವಗಳ ವಲಸೆಗೂ, ಕಾರಣವಾಗಿ ಜೀವನ ವಿಧಾನಗಳನ್ನು ಬದಲಾಯಿಸಿಕೊಳ್ಳುವಂತಹ ಒತ್ತಡಗಳನ್ನು ಏರ್ಪಡಿಸುತ್ತಿದ್ದವು.

### ೪.೪ ಜಯರೇಖೆ ಶಾಸನಗಳ ಮಹಿಳಾಲೋಕ

ಶಾಸನಗಳು ಕಟ್ಟಿಕೊಡುವ ಮಹಿಳಾ ಲೋಕದ ಚಿತ್ರಣ ಅಪೂರ್ಣವಾಗಿರುತ್ತದೆ. ಮಹಿಳೆಯರ ಪರಿಪೂರ್ಣ ಕಾರ್ಯಗಳಾಗಲೀ ಅಥವಾ ಪರಿಪೂರ್ಣ ವ್ಯಕ್ತಿತ್ವದ ಮಹಿಳೆಯರ ಚಿತ್ರಣವಾಗಲಿ ನಮಗೆ ಶಾಸನಗಳಲ್ಲಿ ಪೂರ್ಣಪ್ರಮಾಣದಲ್ಲಿ ಕಂಡುಬರುವುದಿಲ್ಲ. ಸಹಧರ್ಮಿಣಿಯಾಗಿ, ಪ್ರಿಯಮಹಿಷಿಯಾಗಿ, ಪಟ್ಟದ ರಾಣಿಯಾಗಿ, ರಾಜಮನೆತನಕ್ಕೆ ವಾರಸುದಾರನನ್ನು, ಉತ್ತರಾಧಿಕಾರಿಯನ್ನು ಹಡೆದುಕೊಡುವ ತಾಯಿಯಾಗಿ, ಸಮಾಜದ ಪ್ರತಿಷ್ಠಿತ ಮನೆತನಗಳ ಹೆಣ್ಣುಮಕ್ಕಳ ಆಂಶಿಕ ಚಿತ್ರಣ ಮಾತ್ರ ಶಾಸನಗಳಲ್ಲಿ ಕಂಡುಬರುತ್ತದೆ. ಇವುಗಳ ಜೊತೆಗೆ, ಗಂಡ, ಮಗ ಸತ್ತಾಗ ವೀರಗಲ್ಲು ನಡೆಸುವ ತಾಯಿ, ಸೋದರಿ, ಪತ್ನಿಯಾಗಿ ಬಿಂಬಿತಳಾಗಿದ್ದಾಳೆ. ಆದರೆ, ಸಾಮಾನ್ಯ ಮನೆತನದ ಹೆಣ್ಣುಮಕ್ಕಳ ಚಿತ್ರಣ ನಮಗೆ ಶಾಸನಗಳಲ್ಲಿ ವಿರಳಾತಿವಿರಳವೆನ್ನಬಹುದು. ಸಾಮಾನ್ಯವೆನ್ನಬಹುದಾದ ತಳಸಮುದಾಯಗಳ ಮಹಿಳಾ ಲೋಕವಂತೂ ಶಿಷ್ಟ ಶಾಸನಗಳಲ್ಲಿ ಗೈರುಹಾಜರಾಗಿದೆ. ಜಯರೇಖೆ ಶಾಸನಗಳೂ ಇದಕ್ಕೆ ಹೊರತೇನಲ್ಲ. ಮೂರು ಜಯರೇಖೆ ಶಾಸನಗಳು ಮಹಿಳೆಯರಿಗೆ ಸಂಬಂಧಿಸಿದ್ದು, ಅವುಗಳಲ್ಲಿ ಸಿದ್ಧಾಪುರದ ಜಯರೇಖೆಯನ್ನು ಸ್ವತಃ ಜೆರ್ಲೆ ಮಲ್ಲಮ್ಮ ಬರೆಯಿಸಿದ್ದರೆ, ಶೃಂಗೇರಿಯ ಶಾಸನ ಮಹಿಳಾ ಕೇಂದ್ರಿತ ರಚನೆಯಾಗಿದೆ. ಚಿಕ್ಕಮಗಳೂರಿನ ಜಯರೇಖೆ ಮಹಿಳೆಗೆ ನೀಡಿದ ಕೆಲವು ವಸ್ತುಗಳನ್ನು ದಾಖಲಿಸುತ್ತದೆ.

ಈ ಮೂರೂ ಜಯರೇಖೆಗಳ ವಿಷಯ ಪರಸ್ಪರ ತದ್ವಿರುದ್ಧ ನೆಲೆಗಳಲ್ಲಿ ನಿಲ್ಲುತ್ತದೆ. ಜೆರ್ಲೆ ಮಲ್ಲಮ್ಮ ಸ್ವತಃ ಸ್ವಾವಲಂಬಿ ಹೆಣ್ಣುಮಗಳಾಗಿ ಧರ್ಮಪರ, ಸಮಾಜಮುಖಿ ಕಾರ್ಯಗಳಲ್ಲಿ ನಿರತಳಾಗಿದ್ದರೆ, ಶೃಂಗೇರಿ ಜಯರೇಖೆಯ ಕಾವೇರಿ ಎಂಬ ಹೆಣ್ಣು ಮಗಳು ಧರ್ಮಬಾಹಿರಗಳೇ? ಪತಿತಳೇ?ಅಥವಾ ಅಲ್ಲವೇ? ಕುಲಸಮಾಜಕ್ಕೆ ಒಳಗಿನವಳೇ? ಅಥವಾ ಹೊರಗಿನವಳೇ ಎಂಬ ನೈತಿಕ ಪ್ರಶ್ನಾವಳಿಗಳೊಂದಿಗೆ ಮುಖಾಮುಖಿಯಾಗುತ್ತಾಳೆ. 'ತಿಮ್ಮಯ್ಯನ ಮೊಮ್ಮಗಳು ಕೆಲವು ಬಿರುದಾವಳಿಗಳನ್ನು ಪಡೆದು ಜಯರೇಖೆ ಬರೆಸಿಕೊಂಡರೂ, ಅನಾಮಧೇಯಳಾಗಿ ಉಳಿಯುತ್ತಾಳೆ.

ಸಿದ್ಧಾಪುರದ ಕುಡೂತಿ ಗ್ರಾಮದ ನೂರು ಮನೆಯ ಪೈಕಿ ಕರೆಗೌಡ ಮತ್ತು ಕಂಬೇಗೌಡ ೧೪೯೨ ವರಹ ಸಾಲ ಮಾಡಿ ಕೋಟೆ ಕಟ್ಟಿಸುತ್ತಾರೆ. ಜೆರ್ಲೆ ಮಲ್ಲಮ್ಮ ಆ ಸಾಲವನ್ನು ತೀರಿಸಿ, ದೇವಸ್ಥಾನದ ಮುಂದೆ ಮಣ್ಣು ಕಾಮಗಾರಿಗೆ ೨೦ ವರಹಗಳನ್ನು, ಕಲ್ಲು ಕಾಮಗಾರಿಗಳಿಗೆ ೨೦ ವರಹಗಳನ್ನು, ರಾಮನಬೋವಿ, ಯಂಗಟಬೋವಿ, ತಿಮನಭೋವಿ, ತಿರುಜನಬೋವಿಗಳಿಗೆ ಉಡುಗೊರೆಯಾಗಿ ೧೦ ವರಹಗಳನ್ನು, ಸಂತರ್ಪಣೆಗೆ ೯ ವರಹ ದಾನ ಮಾಡುತ್ತಾಳೆ. ಕಂಬದಯ್ಯ, ಗೋಪಾಲಕೃಷ್ಣ ದೇವಾಲಯ ಮಾಡಿಸಿ, ಬಾವಿ ತೆಗೆಸಿ, ಸೋಪಾನದ ಮೇಲೆ ಎರಡು ಕಂಬದ

ಮಂಟಪ ನಿರ್ಮಿಸಿ ಅಲ್ಲಿ ಪೂರ್ವಮುಖವಾಗಿ ತನ್ನ ಶಿಲ್ಪವನ್ನು ಕೆತ್ತಿಸುತ್ತಾಳೆ. ಇಷ್ಟೆಲ್ಲಾ ಕಾರ್ಯಗಳಿಗೆ ಜಿರ್ಲೆ ಮಲ್ಲಮ್ಮ ಸುಮಾರು ೨೦೩೯ ವರಹಗಳನ್ನು ವ್ಯಯಿಸುತ್ತಾಳೆ.

ಈ ದಾನದ ಅಂಶಗಳಿಗಿಂತ ಹೆಚ್ಚಾಗಿ ಶಾಸನದಲ್ಲಿ ಆಕೆ ಇಡುವ ಬೇಡಿಕೆ ತುಂಬಾ ವಿಶಿಷ್ಟವಾಗಿದೆ. ಸಾಮಾನ್ಯವಾಗಿ ಶಾಸನಗಳನ್ನು 'ಆಚಂದ್ರಾರ್ಕಸ್ಥಾಯಿಯಾಗಿ' ಎಂದರೆ, ಸೂರ್ಯಚಂದ್ರರು ಇರುವವರೆಗೆ ಶಾಸನದ ವಿಷಯ ಪ್ರಸ್ತುತತೆಯನ್ನು ಪಡೆದುಕೊಳ್ಳಬೇಕೆಂದು ಹಾಕಿಸುತ್ತಿದ್ದ ಆಶಯಕ್ಕೆ ಭಿನ್ನವಾಗಿ "ಈ ಮಾರ್ಗವಾಗಿ ಬಂದ ಯಾರಾದ್ರೂ ಪುಣ್ಯಾತ್ಮರು ಈ ಸೋಪಾನದ ನೀರನ್ನು ನನ್ನ ತಲೆಮ್ಯಾಲೆ ಒಂದು ಬೊಗಸೆ ನೀರು ಹಾಕಬೇಕು ಮತ್ತು ನನ್ನ ಯಾರಾದರೂ ವಂಶಸ್ಥರ ಮನೆಯಲ್ಲಿ ಹಸು ಎಮ್ಮೆ ಈದರೆ ನನ್ನ ತಲೆಗೂ ಬಾಯಿಗೂ ಬೆಣ್ಣೆ ಇಡಬೇಕೆಂದು" ವಿಶಿಷ್ಟ ಆಶಯವನ್ನು ಮುಂದಿಡುತ್ತಾಳೆ.

ಕೊನೆಯದಾಗಿ ಈ ಗ್ರಾಮದ ನೂರು ಮನೆ ಅಂಣತಮ್ಮಂದಿರು ಶಿದ್ದಾಪುರದ ವಂನೆಗೌಡ ಹಾಗೂ ಮರಿತಿಮ್ಮನಹಳ್ಳಿಯ ದಾಸೇಗೌಡರ ಮಾತಿನ ಪ್ರಕಾರ ನಡೆಯಬೇಕೆಂದು ಹೇಳಿ ದೇವಾಲಯಗಳಿಗೆ ಪೂಜಾರಿಗಳು ಯಾರಾಗಿರಬೇಕೆಂಬುದನ್ನು ಆಜ್ಞೆ ಮಾಡುತ್ತಾಳೆ. ಈ ಎಲ್ಲ ಮನೆತನಗಳಿಗೆ ಪೆನಗೊಂಡೆ ಬಿಜ್ಜಾವರದ ತಿರುಮಲ ತಾತಾಚಾರಿಯೇ ಗುರುಗಳಾಗಿರುತ್ತಾರೆಂದು ಜೈರೇಖೆ ಬರೆಸುತ್ತಾಳೆ.[೧೨೩]

ಪ್ರಸಕ್ತ ಜಯರೇಖೆಯಲ್ಲಿ ಕ್ರಿ.ಶ. ೧೪೬೪ ಹಾಗೂ ಕ್ರಿ.ಶ. ೧೫೫೩ ಎರಡು ಕಾಲಗಳು ಉಕ್ತವಾಗಿದ್ದು, ಇದರ ನೈಜತೆಯ ಬಗ್ಗೆಯೇ ಪ್ರಶ್ನೆಗಳು ಉದ್ಭವವಾಗುತ್ತವೆ. ಬಹುಶಃ ಅಲ್ಲಿ ಜನಮಾನಸದಲ್ಲಿದ್ದ ಐತಿಹ್ಯವನ್ನಾಧರಿಸಿ ತರುವಾಯದ ಕಾಲದಲ್ಲಿ ಈ ಜಯರೇಖೆ ಹುಟ್ಟಿಕೊಂಡಿರುವಂತೆ ತೋರುತ್ತದೆ. ಏಕೆಂದರೆ, ಹೆಚ್ಚಿನ ಎಲ್ಲ ಜಯರೇಖೆಗಳಂತೆ ಈ ಶಾಸನದ ಪ್ರಧಾನ ಆಶಯ ಸಿದ್ಧಾಪುರ ಮತ್ತು ಕುಡುತಿ ಗ್ರಾಮಗಳ ಗೌಡಿಕೆ ನಿಷ್ಕರ್ಷೆ, ದೇವಾಲಯಗಳ ಪೂಜಾರಿಗಳ ನೇಮಕ ಮತ್ತು ನಿರ್ದಿಷ್ಟ ಕುಲಗಳಿಗೆ ಕುಲಗುರು ಯಾರು ಎಂಬುದನ್ನು ಸೂಚಿಸುವುದಾಗಿದೆ. ಇದನ್ನು ನೇರವಾಗಿ ಆ ಗ್ರಾಮದ ಗೌಡ ಕುಲದಲ್ಲಿ ಆಗಿ ಹೋದ ಮತ್ತು ಹಲವಾರು ಸಮಾಜಮುಖಿ ಕಾರ್ಯಗಳಿಗೆ ಪ್ರೇರಿತಳಾದ ಜಿರ್ಲೆ ಮಲ್ಲಮ್ಮನೇ ಬರೆಯಿಸಿದ್ದಾಳೆ ಎಂಬುದರ ಮೂಲಕ ಆ ವಿಷಯವನ್ನು ಅಧಿಕೃತಗೊಳಿಸುವುದಾಗಿದೆ. ಇಲ್ಲಿ ಶಾಸನದ ನೈಜತೆಯ ಬಗ್ಗೆ ಪ್ರಶ್ನೆ ಉದ್ಭವವಾದರೂ, ಶಾಸನದಲ್ಲಿ ಅಡಕವಾದ ವಿಷಯ ಪ್ರಶ್ನಾತೀತವಾಗಿದೆ.

ಈ ಜಯರೇಖೆಯಲ್ಲಿ ಜಿರ್ಲೆ ಮಲ್ಲಮ್ಮ "ವಿಶಿಷ್ಟ ದಾನಿಯಾಗಿ" ಕಂಡುಬರುವುದಕ್ಕಿಂತ ಒಬ್ಬ ಸ್ವಾವಲಂಬಿ, ಸ್ವಾಭಿಮಾನಿ ಹೆಣ್ಣಾಗಿ ಕಂಡುಬರುತ್ತಾಳೆ. ಅಲ್ಲದೆ, ಆ ಗೌಡ ಕುಲದ ಸಾಂಸ್ಕೃತಿಕ ನಾಯಕಿಯಾಗಿಯೂ ತೋರುತ್ತಾಳೆ. ತಾನು ಮಾಡಿದ ಕೆಲಸವನ್ನು ಜನ ಸದುಪಯೋಗಪಡಿಸಿಕೊಂಡು

ತನ್ನ ಶಿಲ್ಪದ ಮೇಲೆ ಬೊಗಸೆ ನೀರು ಹಾಕುವ ಮೂಲಕ ಸ್ಮರಿಸಿಕೊಳ್ಳಲಿ ಎಂಬ ಅವಳ ಅಪೇಕ್ಷೆ ತುಂಬಾ ಸಾಧುವಾಗಿದೆ. ಅಲ್ಲದೆ, ತನ್ನ ವಂಶಸ್ತರ ಮನೆಯಲ್ಲಿ ಎಮ್ಮೆ, ಹಸು ಕರು ಹಾಕಿದಾಗ ಅವುಗಳ ಬೆಣ್ಣೆಯನ್ನು ತನ್ನ ತಲೆ ಮತ್ತು ಬಾಯಿಗೆ ಇಡಲಿ ಎಂಬ ಸದಾಶಯದ ಮೂಲಕ ತನ್ನ ಸಮುದಾಯದಲ್ಲಿ ತನ್ನ ನೆನಕೆಯನ್ನು ಚಿರಸ್ಥಾಯಿಯಾಗಿರಿಸುವ ಮೂಲಕ ಸಮುದಾಯದಲ್ಲಿ ಸಾಂಸ್ಕೃತಿಕ ನಾಯಕಿಯಾಗಿ ನೆಲೆಗೊಳ್ಳುವ ಪರಿಯನ್ನು ಕಾಣಬಹುದು.

ಸ್ವಾಭಿಮಾನಿಯಾದ ಜಿರ್ಲೆ ಮಲ್ಲಮ್ಮನ ಜಯರೇಖೆಗೆ ವ್ಯತಿರಿಕ್ತವಾದ ಕಥನ ಶೃಂಗೇರಿಯ ಕಡತಗಳಲ್ಲಿ ಕಂಡುಬರುವ 'ಕಾವೇರಿ' ಎಂಬ ಹೆಣ್ಣು ಮಗಳ ಪಾತಿತ್ಯಕ್ಕೆ (ಪಾತಿವ್ರತ್ಯ ಅಲ್ಲ) ಸಂಬಂಧಪಟ್ಟ ಜಯರೇಖೆ.[೧೨೪] ಶೃಂಗೇರಿಗೆ ನ್ಯಾಯ ತೀರ್ಮಾನಕ್ಕಾಗಿ ಬರುವ ಈ ಸಂಗತಿ, ಕಾವೇರಿಯ ಅನುಪಸ್ಥಿತಿಯಲ್ಲಿ ಹಲವಾರು ಧರ್ಮಜ್ಞರ, ಧರ್ಮಶಾಸ್ತ್ರಗಳ ಹಿನ್ನೆಲೆಯಲ್ಲಿ ತೀರ್ಮಾನಗೊಳ್ಳುತ್ತದೆ.

ಗುರುವಸೆಟ್ಟಿ ಎಂಬುವವನು ಕೊಯಮತ್ತೂರಿನಲ್ಲಿ ಟಿಪ್ಪು ಸುಲ್ತಾನನ ಕಾಲದಲ್ಲಿ ಬಲವಂತವಾಗಿ ಮತಾಂತರಗೊಂಡಿರುತ್ತಾನೆ. ನಂತರ ಇವನು ಶ್ರೀರಂಗಪಟ್ಟಣಕ್ಕೆ ಬಂದಾಗ ತನ್ನ ಹೆಂಡತಿಯನ್ನು ಶ್ರೀರಂಗಪಟ್ಟಣಕ್ಕೆ ಕರೆಸಿಕೊಳ್ಳುತ್ತಾನೆ. ಶ್ರೀರಂಗಪಟ್ಟಣದಲ್ಲಿ ಅವನು ಮೃತನಾಗುತ್ತಾನೆ. ಕಂಪನಿಯವರು ಶ್ರೀರಂಗಪಟ್ಟಣವನ್ನು ಸ್ವಾಧೀನಪಡಿಸಿಕೊಂಡ ನಂತರ, ಗುರುವಶೆಟ್ಟಿಯ ಹೆಂಡತಿ ತನ್ನ ಎರಡು ಹೆಣ್ಣುಮಕ್ಕಳನ್ನು ಕರೆದುಕೊಂಡು ಕೊಯಮತ್ತೂರಿಗೆ ಹೋಗುತ್ತಾಳೆ. ನಂತರ ತನ್ನ ಗಂಡ ಮತಾಂತರ ಆಗುವುದಕ್ಕೆ ಮೊದಲೇ ತಾನು ಗರ್ಭವತಿಯಾಗಿದ್ದೆನೆಂದು ಹೇಳಿ ತನ್ನ ಮಗಳು 'ಕಾವೇರಿ'ಯನ್ನು ರಂಗಸ್ವಾಮಿ ಎಂಬುವವನಿಗೆ ದೇವಾಲಯದಲ್ಲಿ ವಿವಾಹ ಮಾಡಿಕೊಟ್ಟು ಕೊಯಮತ್ತೂರಿಗೆ ಬರುತ್ತಾಳೆ.

ಸ್ವಜಾತಿ ಜನರೆಲ್ಲಾ ಸೇರಿ ಮತಾಂತರಗೊಂಡಿದ್ದ ಕುಟುಂಬದ ಹೆಣ್ಣುಮಗಳನ್ನು ರಂಗಸ್ವಾಮಿಸೆಟ್ಟಿ ಮದುವೆಯಾಗಿದ್ದಕ್ಕೆ ಅವಳನ್ನು ಜಾತಿಯಲ್ಲಿ ಪರಿಗ್ರಹಿಸಬೇಕೋ ಅಥವಾ ಪರಿಗ್ರಹಿಸಬಾರದೋ ಎಂಬ ಧರ್ಮಪ್ರಶ್ನೆ ಎತ್ತುತ್ತಾರೆ. ಮಠ–ಮುದ್ರೆಯವರನ್ನು, ಅಶೇಷ ಮಹಾಜನಗಳನ್ನು ಕೂಡಿಸಿ ವಿಚಾರಿಸಿದಾಗ, ಅವರು ಧರ್ಮಶಾಸ್ತ್ರಗಳನ್ನೆಲ್ಲಾ ಪರಾಮರ್ಶಿಸಿ, 'ಈ ಹೆಣ್ಣಿಗೆ ಚೆಲಾದವರ (ಮಂತಾಂತರಿಗಳ) ಸಂಸರ್ಗ ದೋಷವೇ ಹೊರತು ಪಾತಿತ್ಯವಲ್ಲ' ಎಂದು ಹೇಳಿ ಶಾಸ್ತ್ರೋಕ್ತವಾಗಿ ಸಂಸರ್ಗ ಪ್ರಾಯಶ್ಚಿತ್ತ ಮಾಡಿಸಿ ವೈಶ್ಯ ಜನರ ಸಮ್ಮತಿ ಪತ್ರ ಬರೆಸಿಕೊಟ್ಟು, ಅಲ್ಲಿನ ವಿದ್ಯಮಾನವೆಲ್ಲವನ್ನು ಶೃಂಗೇರಿ ಮಠಕ್ಕೆ ವಿಜ್ಞಾಪನೆ ಪತ್ರ ಬರೆದುಕೊಡುತ್ತಾರೆ.ಶೃಂಗೇರಿ ಮಠದಲ್ಲಿ ಪರಾಶರ, ಮಾಧವೀಯ, ವಿಜ್ಞಾನೇಶ್ವರೀಯ, ಆಪಸ್ತಂಭ, ಮುಂತಾದ ಧರ್ಮಶಾಸ್ತ್ರಗಳನ್ನು ಅಧ್ಯಯನ ಮಾಡಿ ಹಿಂದೆ ನೀಡಿದ್ದ ತೀರ್ಮಾನವನ್ನು ಎತ್ತಿ ಹಿಡಿಯಲಾಗುತ್ತದೆ.

ಆದರೆ ಮೈಸೂರು, ಶ್ರೀರಂಗಪಟ್ಟಣದಲ್ಲಿರುವ ಕೆಲವು ವೈಶ್ಯರು ಇಬ್ಬಣಗಳಾಗಿ ಕಾವೇರಿಯನ್ನು ಪರಿಗ್ರಹಿಸಬೇಕೇ? ಎಂಬ ಬಗ್ಗೆ ಮತ್ತೆ ಪ್ರಶ್ನೆ ಎತ್ತಿ, ಶ್ರೀಮಠದಲ್ಲಿ ಮೊದಲು ಅಶಾಸ್ತ್ರೀಯವಾಗಿ ಅಸಂಗತವಾಗಿ ತೀರ್ಮಾನ ನೀಡಿದ್ದಾರೆ. ಈ ಹೆಣ್ಣಿಗೆ ಸಂಸರ್ಗದೋಷ, ಪ್ರಾಯಶ್ಚಿತ್ತ ಮಾಡಿಸಿದ್ದಾರೆ. ಈ ಹೆಣ್ಣು ಮಗಳಿಗೆ ಮದ್ಯ, ಮಾಂಸಭಕ್ಷಣೆ ಉಂಟು. ಅವಳು ಪತಿತಳು, ಇಂಥ ಪತಿತಳಿಗೆ ಧರ್ಮಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತ ಇಲ್ಲವೆಂದೂ ವಾದಿಸುತ್ತಾರೆ. ಆದರೆ ಪಾತಿತ್ಯವನ್ನು ಮಾಡಿದ್ದಕ್ಕೆ ಸಾಕ್ಷಿಬಲವಿಲ್ಲದಿದ್ದರಿಂದ ಧರ್ಮಶಾಸ್ತ್ರಗಳಲ್ಲಿ ಪತಿತಾವಸ್ಥೆಯಲ್ಲಿ ಹುಟ್ಟಿದ ಹೆಣ್ಣಿಗೂ ಕೂಡ ಪಾತಿತ್ಯವಿಲ್ಲ. ಸಂಸರ್ಗದೋಷ ಪಾಪ ಮಾತ್ರ ಉಂಟು. ಆ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿದ ಮೇಲೆ ಪರಿಶುದ್ಧಳೇ ಈ ಕಾವೇರಿ ಎಂಬ ಹೆಣ್ಣುಮಗಳು, ಇವಳ ಗಂಡ, ಇವಳ ಮಕ್ಕಳು ಸಹಾ ಪರಿಶುದ್ಧರೇ ಸರಿ ಎಂದು ಹೇಳಿ ಜಯರೇಖೆ ಬರೆಸಿಕೊಡುತ್ತಾರೆ.

ಭಾರತೀಯ ನ್ಯಾಯವ್ಯವಸ್ಥೆಯ ಹಿನ್ನಲೆಯಲ್ಲಿ ಈ ಜಯರೇಖೆ ಹೊರಡಿಸಲಾಗಿದೆ. ಇಂಥ ಇನ್ನೂ ಹಲವಾರು ನ್ಯಾಯನಿರ್ಣಯದ ಜಯಪತ್ರಗಳು ಭಾರತದಲ್ಲಿ ಲಭ್ಯವಿವೆ. (ಈ ಬಗ್ಗೆ ಜಯರೇಖೆ ಶಾಸನಗಳಲ್ಲಿ ನ್ಯಾಯಿಕ ಪ್ರಕ್ರಿಯೆ ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ). ನ್ಯಾಯನಿರ್ಣಯ ಪ್ರಕ್ರಿಯೆಗೆ ಹಲವಾರು ವರ್ಷಗಳು ತಗುಲಿರುವ ಸಾಧ್ಯತೆಯಿದೆ. ಏಕೆಂದರೆ, ಪ್ರಾರಂಭದಲ್ಲಿ ರಂಗಸ್ವಾಮಿಶೆಟ್ಟಿ ಕಾವೇರಿಯನ್ನು ಮದುವೆಯಾದಾಗ, ಅವಳನ್ನು ಜಾತಿಯೊಳಗೆ ಪರಿಗ್ರಹಿಸಬೇಕೇ? ಬೇಡವೇ ಎಂಬ ಬಗ್ಗೆ ಉಂಟಾದ ವಿವಾದ ಜಯರೇಖೆಯ ಕೊನೆಯ ಹಂತದಲ್ಲಿ ಕಾವೇರಿ ಎಂಬ ಹೆಣ್ಣುಮಗಳು, ಅವಳ ಗಂಡ ಮತ್ತು ಇವಳ ಮಕ್ಕಳು ಸಹಾ ಪರಿಶುದ್ಧರೇ ಎಂಬ ನಿರ್ಣಯ ಹೊರಬೀಳುವವರೆಗೆ ನಡೆಯುತ್ತದೆ. ಅಂದರೆ ಈ ವೇಳೆಗೆ ಕಾವೇರಿಗೆ ಮಕ್ಕಳೂ ಸಹ ಆಗಿದ್ದು, ಈ ಪ್ರಕ್ರಿಯೆ ಹಲವಾರು ವರ್ಷಗಳಷ್ಟು ದೀರ್ಘ ಅವಧಿಯಲ್ಲಿ ನಡೆದಿದೆಯೆಂದು ಊಹಿಸ ಬಹುದಾಗಿದೆ.

ಇಡೀ ಜಯರೇಖೆಯ ಚರ್ಚೆ ಹಲವಾರು ವರ್ಷಗಳ ಕಾಲ ಕಾವೇರಿ ಎಂಬ ಹೆಣ್ಣು ಮಗಳ ಸುತ್ತಲೂ ಪರಿಭ್ರಮಿಸುತ್ತದೆ. ಆದರೆ, ಎಲ್ಲಿಯೂ ಅವಳ ಧ್ವನಿಯಾಗಲೀ, ಅವಳ ತಾಯಿಯ ದನಿ ಯಾಗಲೀ ಮಾತಾಗಿ ಹೊರಬೀಳುವುದೇ ಇಲ್ಲ. ಈ ಇಬ್ಬರು ಹೆಣ್ಣುಮಕ್ಕಳ ಮಾತುಗಳಿಗೆ ಬೆಲೆ ಇರಲಿ, ನೆಲೆಯೂ ಸಹ ಇಲ್ಲ. ಬದಲಾಗಿ ಈ ಹೆಣ್ಣುಮಕ್ಕಳ ಪ್ರತಿನಿಧಿಗಳಾಗಿ ಇಡೀ ಪುರುಷ ಸಮಾಜ ಪರ ವಿರೋಧದ ದನಿಗಳನ್ನು ಎತ್ತುತ್ತದೆ. ದೀರ್ಘಾವಧಿಯಲ್ಲಿ ನಡೆಯುವ ಇಡೀ ಘಟನಾವಳಿಗಳುದ್ದಕ್ಕೂ ಕಾವೇರಿಯ ತಾಯಿ, ಕಾವೇರಿಯ ಕುಟುಂಬವು ಸಮಾಜ, ಸಮುದಾಯಗಳಿಗೆ ಮುಖಾಮುಖಿ ಯಾಗುವ ಸಂದರ್ಭದಲ್ಲಿ ಎದುರಿಸಿದ್ದಿರಬಹುದಾದ ಆತಂಕಮಯ ಸನ್ನಿವೇಶಗಳ ಬಗ್ಗೆ ಜಯರೇಖೆ ಮೌನವಾಗಿದೆ. ಪರಿಸ್ಥಿತಿಗಳ ಲಾಭವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವ ಮತ್ತು ಕುಲಪ್ರತಿಷ್ಠೆಯಾಗಿ ಪರಿಗಣಿಸುವ ಪುರುಷ ಸಮಾಜದ ಮನೋಭಾವನೆಯನ್ನು ಪರೋಕ್ಷವಾಗಿ ಸೂಚಿಸುತ್ತದೆ.ಅಂತಿಮವಾಗಿ

ಮಾನವೀಯ ಮೌಲ್ಯಗಳೊಂದಿಗೆ, ಸಮಾಜದಲ್ಲಿ ಬಾಳುವೆ ಮಾಡುವ ಅವಕಾಶ ಕಲ್ಪಿಸಿದ್ದು ಸಹ ಧರ್ಮವೇ ಎಂಬುದೂ ಸಹ ಇಲ್ಲಿ ಮುಖ್ಯವಾಗುತ್ತದೆ.

ಹೀಗೆ ದನಿಯೇ ಇಲ್ಲದ ಮೂಕ ಪಾತ್ರಧಾರಿಗಳಾದ ಹೆಣ್ಣುಮಕ್ಕಳ ಚಿತ್ರಣ ಮತ್ತೊಂದು ಜಯರೇಖೆಯಲ್ಲಿ ಕಂಡುಬರುತ್ತದೆ (ಕಥನ ಅಲ್ಪಸ್ವಲ್ಪ ವ್ಯತ್ಯಾಸದೊಂದಿಗೆ ಬಹುಪಠ್ಯಗಳಲ್ಲಿ ಲಭ್ಯವಿದೆ)[೧೨೫] ಕಂಚಿಯ ಕಾಮಾಕ್ಷಮ್ಮನ ತೇರು ಏಳು ವರ್ಷಗಳಿಂದ ಕದಲದೆ ನೆಲದಲ್ಲಿ ಹೂತು ಹೋಗಿರುತ್ತದೆ. ಈ ತೇರನ್ನು ಮೇಲೆತ್ತಿ ಕದಲಿಸುವವರಿಗೆ ಬಹುಮಾನ ನೀಡುವುದಾಗಿ ಡಂಗೂರ ಸಾರಿಸಿದಾಗ ಹನುಮಂತ ರಾವು ಎಂಬುವವನು ಸವಾಲನ್ನು ಅಂಗೀಕರಿಸಿ ವೀಳ್ಯ ಸ್ವೀಕರಿಸುತ್ತಾನೆ. ತನ್ನ ಗರ್ಭಿಣಿ ಹೆಂಡತಿ ಯೊಂದಿಗೆ ಕಾಮಾಕ್ಷಿ ಗುಡಿಯ ಬಳಿ ಹೋಗಿ ಪೂಜೆ ಮಾಡಿ, ತೇರಿಗೂ ಪೂಜೆ ಸಲ್ಲಿಸುತ್ತಾನೆ. ತನ್ನ ಗರ್ಭಿಣಿ ಹೆಂಡತಿಗೆ ತೇರಿಗೆ ಪ್ರದಕ್ಷಿಣೆ ಹಾಕುವಂತೆ ಹೇಳುತ್ತಾನೆ. ಆಕೆ ಹಾಗೆಯೇ ಮಾಡುತ್ತಾಳೆ. ನಂತರ 'ತೇರು ಕದಲತ್ತೋ ಇಲ್ಲವೋ ಕಾಮಾಕ್ಷಮ್ಮ ತೇರಿನಲ್ಲಿ ಬಂದು ಕೂರುತ್ತಾಳೋ ಇಲ್ಲವೋ ಕೇಳಿ ನೋಡು' ಎಂದು ಕಾಮಾಕ್ಷಮ್ಮನನ್ನೇ ಕೇಳಿ ಬರುವಂತೆ ತನ್ನ ಹೆಂಡತಿಗೆ ಹೇಳುತ್ತಾನೆ. ಹನುಮಂತರಾವ್‌ನ ಹೆಂಡತಿ ಗುಡಿಯ ಒಳಹೋಗಿ 'ಏನಮ್ಮಾ ಕಾಮಾಕ್ಷಮ್ಮ ಏಳು ವರ್ಷಗಳಿಂದಲೂ ನೀನು ನಿದ್ದೆ ಮಾಡುತ್ತಲೇ ಇದ್ದೀಯಲ್ಲಾ ನಿನಗಿದು ಸರಿಯೇನಮ್ಮಾ ಇನ್ನಾದರೂ ಎದ್ದು ಬಂದು ತೇರಿನಲ್ಲಿ ಕೂಡು. ತೇರು ಕದಲಿಸಲು ಅನುಮತಿ ಕೊಡು' ಎಂದು ಕೇಳಿಕೊಳ್ಳುತ್ತಾಳೆ. ಆದರೆ ದೇವಿ ಕಾಮಾಕ್ಷಿ ಮಾತನಾಡುವುದಿಲ್ಲ. ವಾಪಸ್ಸಾದ ಹೆಂಡತಿ ಇದನ್ನೇ ಗಂಡನಿಗೆ ತಿಳಿಸುತ್ತಾಳೆ. ಆಗ ಹನುಮಂತರಾವು 'ಅಮ್ಮನಿಗೆ ನಿನ್ನ ಮೇಲೆ ಕರುಣೆ ಬಂದಂತಿಲ್ಲ, ಸಾಷ್ಟಾಂಗ ನಮಸ್ಕಾರ ಮಾಡಿ ಕೇಳಿಕೋ' ಎಂದು ಹೇಳಿ ಇಬ್ಬರೂ ಗುಡಿಯೊಳಕ್ಕೆ ಹೋಗುತ್ತಾರೆ. ಹೆಂಡತಿ ಸಾಷ್ಟಾಂಗ ನಮಸ್ಕಾರ ಮಾಡುತ್ತಿರುವಾಗ ಗಂಡ ತನ್ನ ಕೈಯಲ್ಲಿದ್ದ ಚಂದ್ರಾಯುಧದಿಂದ ಹೆಂಡತಿಯ ನಡುವನ್ನು ಕತ್ತರಿಸಿ ಆಕೆಯ ಗರ್ಭದಲ್ಲಿದ್ದ ಪಿಂಡವನ್ನು ತೆಗೆದುಕೊಂಡು ಹೋಗಿ ತೇರಿನ ಚಕ್ರಕ್ಕೆ ಕೊಡುತ್ತಾನೆ. ರಕ್ತವನ್ನು ತೇರಿನ ಮೇಲೆ ಚೆಲ್ಲಿದಾಗ ಹೂತುಹೋಗಿದ್ದ ತೇರು ಮೇಲೆದ್ದು ಬಂದು ಭೂಮಿ ಮೇಲೆ ನಿಂತಿತು. ಕಾಮಾಕ್ಷಮ್ಮ ತೇರಿನ ಮೇಲೆ ಬಂದು ಕುಳಿತುಕೊಳ್ಳುತ್ತಾಳೆ. ಹನುಮಂತರಾವು ತೇರನ್ನು ಹಾಗೆ ಎಳೆದರೆ ತನ್ನ ಪರಾಕ್ರಮ ಏನಾದಹಾಗಾಯಿತು ಎಂದುಕೊಂಡು ಮೂಗಿಗೆ ಕಟ್ಟಿಕೊಂಡು ಕಂಚಿ ಪಟ್ಟಣದ ಇಪ್ಪತ್ತು ಬೀದಿಗಳನ್ನು ಸುತ್ತಿ ಬರುತ್ತಾನೆ.[೧೨೬]

ಬಹುಪಠ್ಯಗಳಲ್ಲಿ ದೊರೆಯುವ ಕಂಚಿ ಕಾಳಮ್ಮನ ತೇರಿನ ಈ ಕಥನಗಳಲ್ಲಿ ಬಹುತೇಕ ಎಲ್ಲ ಪಠ್ಯಗಳಲ್ಲೂ ಗರ್ಭಿಣೆಯೇ ರಥದ ಗಾಲಿಗೆ ಹಾರವಾಗುತ್ತಾಳೆ. ಗರ್ಭಿಣಿ ಹೆಂಗಸು ರಥಕ್ಕೆ ಹಾರವಾಗುವುದು, ಕೆರೆಗೆ ಹಾರವಾಗುವುದು, ಕೋಟೆಗೆ ಹಾರವಾಗುವುದು ಭಾರತೀಯ ಮನೋಸ್ಥಿತಿಯ ಸಮಾಜಗಳಲ್ಲಿ ಹುಟ್ಟಿಕೊಂಡ ಕಥನಗಳ ಸಾಮಾನ್ಯ ಆಶಯವಾಗಿದೆ. ಆದರೆ ಕೋಟೆಗೆ, ಕೆರೆಗೆ ಹಾರವಾಗುವ ಹೆಣ್ಣು ಮಕ್ಕಳಿಗೆ ತಮ್ಮ 'ಬಲಿ'ಯ ಅರಿವು ಇದ್ದು ಸ್ವ–ಇಚ್ಛೆಯಿಂದಲೋ,

ಅನಿವಾರ್ಯತೆಯಿಂದಲೋ ತಾವೇ ಬಲಿಯಾಗುತ್ತಾರೆ. ಆದರೆ, ಕಾಳಮ್ಮನ ತೇರಿನ ಕಥನಗಳಲ್ಲಿ ಹೆಣ್ಣಿನ ಮಾತುಗಳಿಗೆ, ಭಾವಕ್ಕೆ ನೆಲೆಯೂ ಇಲ್ಲದೆ, ಬೆಲೆಯೂ ಇಲ್ಲದೆ, ಪುರುಷನ ಪ್ರತಿಷ್ಠೆಯ ಪ್ರದರ್ಶನಕ್ಕೆ ಸಂಬಂಧಪಟ್ಟ ಒಂದು ವಸ್ತು ಮಾತ್ರ ಆಗಿರುವುದು ಸ್ಪಷ್ಟವಾಗಿದೆ.ಅಲ್ಲದೆ ಕಾಳಮ್ಮನಂಥ ಒಬ್ಬ ಸ್ತ್ರೀ ದೇವತೆ ಮತ್ತೊಬ್ಬ ಸ್ತ್ರೀಯ ಜೀವ ಬೇಡುವ ಪರಿ ದೈವಜೀವವಿರೋಧಿ ನೆಲೆಯಲ್ಲಿ ನಿಲ್ಲುವುದಕ್ಕಿಂತ ಹೆಚ್ಚಾಗಿ, ಪುರುಷ ರೂಪಿತ ಸಮಾಜವು ಪ್ರತಿಯೊಂದನ್ನು ತನಗೆ ಬೇಕಾದ ರೀತಿಯಲ್ಲಿ ಪರಿಗ್ರಹಿಸಿಕೊಳ್ಳುವ ಮನೋಭಾವವನ್ನು ಸೂಚಿಸುತ್ತದೆ.

ಚಿಕ್ಕಮಗಳೂರಿನ ಕ್ರಿ.ಶ. ೧೮೬೪ರ ಮತ್ತೊಂದು ಜಯರೇಖೆಯಲ್ಲಿ ತಿರುಮಲ–ತಿರುಪತಿ ಮತ್ತು ಪೆರಿಯ ಕೋವಿಲ್‌ನ ಬ್ರಹ್ಮತಂತ್ರ ಸ್ವತಂತ್ರಸ್ವಾಮಿಯ ಎಲ್ಲ ಶಿಷ್ಯರ ಸಮ್ಮತಿಯೊಂದಿಗೆ ತೆಲುಗು ಬಣಜ ಜಾತಿಗೆ ಸೇರಿದ ಸಕ್ಕರೆ ಪಟ್ಟಣದ ತಿಮ್ಮಯ್ಯನವರ ಮೊಮ್ಮಗಳಿಗೆ ಅರಿಶಿನ, ಮಡಿವಸ್ತ್ರ (ರೇಷ್ಮೆವಸ್ತ್ರ), ಮಂಗಳಸೂತ್ರ ನೀಡಿ, ದವಳ ಶಂಕ, ದಮಣ ಮಲಹರಿ, ಚಂಕಂ, ವೇಟುಪವುಡು ಮೊದಲಾದ ಕೊಂಡಿ–ಕೋಲ ಬಿರುದುಗಳನ್ನು ನೀಡಿದ್ದನ್ನು ದಾಖಲಿಸಲಾಗಿದೆ. ಇದಕ್ಕೆ ಶ್ರೀರಂಗಪಟ್ಟಣ ದಳವಾಯಿ ಪುಟ್ಟನಂಜರಾಜನವರ ಸಮೇತ ಸಕಲದೇಶಗಳ ವಿಷ್ಣುಭಕ್ತರು, ವೈಶ್ಯ, ಶೂದ್ರ, ವೆಕರ, ವೆಲಮ, ಕಂಮು, ಪದ್ಮಶಾಲಿ, ತೆಲುಗು ಬಲುಜುಲು, ದಸಬಲಜುಲು, ದೇವಾಂಗ, ಉಂಪರ, ಬೆಸ್ತ, ವೈಶ್ಯ, ಕಮ್ಮಾರ, ಮೊದಲಾದವರ ಉಲ್ಲೇಖ ಬರುತ್ತದೆ.[೧೨೭]

ಈ ಜಯರೇಖೆಯಲ್ಲಿ ತಿಮ್ಮಯ್ಯನವರ ಮೊಮ್ಮಗಳು ಎಂದು ಹೇಳಲಾಗಿದೆಯೇ ವಿನಾ, ಆಕೆಯ ನೈಜ ಹೆಸರನ್ನು ಎಲ್ಲೂ ದಾಖಲಿಸಲಿಲ್ಲ. ಇದಲ್ಲದೆ ಆಕೆಗೆ ಈ ಎಲ್ಲ ಸಂಕೇತ, ಬಿರುದುಗಳನ್ನು ಏಕೆ ನೀಡಿದರು ಎಂಬುದು ವೇದ್ಯವಾಗುತ್ತಿಲ್ಲ. ಬಹುಶಃ ಆಕೆಯನ್ನು ವೈಷ್ಣವ ಧರ್ಮಕ್ಕೆ ಸ್ವೀಕರಿಸಿದುದರ ಧ್ಯೋತಕವಾಗಿ ಆ ವಸ್ತುಗಳನ್ನು ಕೊಟ್ಟಂತೆ ತೋರುತ್ತದೆ. ಶೃಂಗೇರಿಯ ಜಯರೇಖೆಯ ಹಿನ್ನೆಲೆಯಲ್ಲಿ ಈ ಜಯರೇಖೆಯನ್ನು ಪರಿಶೀಲಿಸಿದರೆ, ಇದಕ್ಕೆ ಹಿನ್ನಲೆಯಾಗಿ ಯಾವುದೋ ಸಂಗತಿ, ಘಟನೆ ಸಂಭವಿಸಿರುವುದು ಸ್ಪಷ್ಟ. ಅಂಥ ನೇಪಥ್ಯದ ವಿವರಗಳು ಲಭ್ಯವಾದರೆ ಜಯರೇಖೆಗಳ ಸಾದ್ಯಂತ ಅಧ್ಯಯನಕ್ಕೆ ಅನುಕೂಲವಾಗುತ್ತದೆ.

ಒಟ್ಟಾರೆಯಾಗಿ ಜರ್ಲೆ ಮಲ್ಲಮ್ಮ ಎಂಬ ಮಹಿಳೆಯಿಂದಲೇ ಬರೆಸಲ್ಪಟ್ಟ, ಕಾವೇರಿ ಎಂಬ ಹೆಣ್ಣಿನ ಸುತ್ತಲೂ ಪರಿಭ್ರಮಿಸುವ, ತನ್ನ ಪ್ರತಿಷ್ಠೆ–ಪರಾಕ್ರಮಗಳನ್ನು ಮರೆಸುವುದಕ್ಕಾಗಿ ಹೆಣ್ಣನ್ನು ವಸ್ತುವಾಗಿ ಪರಿಗ್ರಹಿಸುವ,ತಿಮ್ಮಯ್ಯನ ಮೊಮ್ಮಗಳಾದ 'ಅನಾಮಧೇಯ' ಹೆಣ್ಣುಮಗಳಿಗೆ ಜಯರೇಖೆ ನೀಡಿದ ಕಥನವನ್ನೊಳಗೊಂಡ ಈ ಮೂರು ಜಯರೇಖೆಗಳು ಪರಸ್ಪರ ತದ್ವಿರುದ್ಧ ನೆಲೆಗಳಲ್ಲಿ ನಿಲ್ಲುತ್ತವೆ. ಅಲ್ಲದೆ, ಶಿಷ್ಟ ಶಾಸನಗಳ ಪ್ರತಿಷ್ಠಿತ ಹೆಣ್ಣುಮಕ್ಕಳ ಚಿತ್ರಣಕ್ಕಿಂತ ಭಿನ್ನವಾಗಿ ಸಮಕಾಲೀನ ಸಮಾಜದ ಹೆಣ್ಣುಮಕ್ಕಳ ಚಿತ್ರಣವನ್ನು ವಿಶಿಷ್ಟವಾಗಿ ಕಟ್ಟಿಕೊಟ್ಟಿವೆ.

ಒಟ್ಟಾರೆಯಾಗಿ ಹೇಳುವುದಾದರೆ, ಶಿಷ್ಟ ಶಾಸನಗಳಿಗೆ ಭಿನ್ನವಾಗಿ ಮೌಖಿಕ ಕಥನಗಳನ್ನಾಧರಿಸಿ ಸಾಮಾನ್ಯ ಜನರಿಂದ ರಚಿತವಾದ ಜಯರೇಖೆಗಳು ತಳ ಸಮುದಾಯದ ಸಾಮಾಜಿಕ ಜೀವನದ ಮೇಲೆ ಹೊಸ ಹೊಳಹುಗಳನ್ನು ಬೀರುತ್ತವೆ. ಆ ಮೂಲಕ ಇತಿಹಾಸದ ಶಿಷ್ಟ ಆಕರಗಳು ದಾಖಲಿಸಿರದ ಹಲವಾರು ವಿಷಯಗಳ ಮೇಲೆ ಇವು ಬೆಳಕು ಚೆಲ್ಲುತ್ತವೆ. ಪ್ರಸಕ್ತ ಅಧ್ಯಾಯದಲ್ಲಿ ಸಮುದಾಯ ಜೀವನವನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಜಯರೇಖೆ ಶಾಸನಗಳಲ್ಲಿ ಅವರು ನಿರೂಪಿತರಾಗಿರುವ ಬಗೆಯನ್ನು ತಿಳಿಸುತ್ತಲೇ, ಅದಕ್ಕೆ ಪೂರಕವಾಗಿ ಆಯಾ ಸಮುದಾಯಗಳಲ್ಲಿ ಅಂಥ ಸಮುದಾಯಗಳ ಕುಲಮೂಲ ಮತ್ತು ವೃತ್ತಿಗೆ ಸಂಬಂಧಿಸಿದಂತೆ ಮೌಖಿಕವಾಗಿ ಐತಿಹ್ಯರೂಪ ಪಡೆದುಕೊಂಡ ವಿಷಯಗಳನ್ನು ಅವಲಂಬಿಸಲಾಗಿದೆ. ಎಡ್ಗರ್ ಥರ್ಸ್ಟನ್, ಬುಕಾನನ್, ನಂಜುಂಡಯ್ಯ, ಮೆಕೆಂಜಿ ಮುಂತಾದ ದೇಶೀಯ ಮತ್ತು ವಿದೇಶೀಯ ವಿದ್ವಾಂಸರು ಮೌಖಿಕವಾಗಿ ತಾವು ಕೇಳಿ, ದಾಖಲಿಸಿದ ಸಮುದಾಯಗಳ ಕಥನಗಳ ಮಾಹಿತಿಯನ್ನು ಪೂರಕವಾಗಿ ಬಳಸಿಕೊಳ್ಳಲಾಗಿದೆ.

**ಅಡಿಟಿಪ್ಪಣಿಗಳು:**

೧. ಗುರುಮೂರ್ತಿ ಪೆಂಡಕೂರು: ಕರ್ನಾಟಕದ ಕೋಮಟಿಗ ಜನಾಂಗ, ಇತಿಹಾಸ ದರ್ಶನ–೭, ಪು. ೨೭೩

೨. Rice B L: Mysore gazetteer, compiled for Government of Mysore, 222

೩. ಮೋಹನ್ ರಾಂ ಎನ್.ಕೆ: ದಲಿತರ ದೇವಸ್ಥಾನ ಪ್ರವೇಶದ ಸಾವಿರ ವರ್ಷ, ದಲಿತರು ಮರೆತ ರಾಮಾನುಜ, ಪು. ೫೬

೪. ಸಣ್ಣಯ್ಯ ಬಿ.ಎಸ್: ರಾಜಾವಳಿ ಕಥಾಸಾರ, ಪು. ೩೪೩–೩೪೪

೫. ದೇವರಕೊಂಡಾರೆಡ್ಡಿ: ರೊಳ್ಳದ ಜಯರೇಖೆ ಶಾಸನ, ಶಾಸನ ಅಧ್ಯಯನ, ಸಂಪುಟ–೧, ಸಂಚಿಕೆ–೧, ಪು. ೩೬–೩೯

೬. ದೇವರಕೊಂಡಾರೆಡ್ಡಿ ಮತ್ತು ಗಣೇಶ್ ಕೆ.ಆರ್: ಲಕ್ಷ್ಮೇಶ್ವರದ ಶಾಸನಗಳು, ಸಂ. ೫೨, ಕ್ರಿ.ಶ. ೭೨೫

೭. ಕಲಬುರ್ಗಿ ಎಂ.ಎಂ: ಕರ್ನಾಟಕ ಕೈಫಿಯತ್ತುಗಳು, ಪು. ೯, ೧೩, ೪೭೩

೮. ಕಲಬುರ್ಗಿ ಎಂ.ಎಂ: ಕರ್ನಾಟಕದ ಕೈಫಿಯತ್ತುಗಳು, ಸಂಖ್ಯೆ ೧೨೧

೯. ಅದೇ, ಸಂ.೧೨೨

೧೦. ಅದೇ, ಸಂ. ೧೨೬

೧೧. Nanjudaiah H.V., Ananthakrishna Iyer L.K, Mysore Tribes and Castes-Vol-II, P. 1

೧೨. ಕೆಳದಿ ಗುಂಡಾಜೋಯಿಸ್: ಧರ್ಮಸ್ಥಳದ ತಾಮ್ರಶಾಸನ, ಲೋಚನ ಸಂ. ೧, ಸಂ.೧, ಪು. ೫೫-೬೪.

೧೩. ಎ.ಕ-೯ (ರೈಸ್): ಕಾನಕಾನಹಳ್ಳಿ ೯೦, ಕ್ರಿ.ಶ. ೧೭೦೦

೧೪. ಎ.ಕ-೯ (ರೈಸ್): ಕಾನಕಾನಹಳ್ಳಿ ೮೯

೧೫. Nanjundaiah H.V., Ananthakrishna Iyer L.K: Mysore Tribes and Castes-Vol-IV, P.429

೧೬. Ananthashayanam Ayangar: Criminal Trines Act Enquiry Committee Report, 1949-50, P. 25

೧೭. ಅಪ್ಪಾಜಿ ಎನ್ ಶಿಂಧೆ, ಕೆ. ಚಾವಡೆ ಲೋಕೇಶ್: ಗೋಸಂಗಿ, ಪು.೧೧೭-೧೩೬

೧೮. ಜಾನಕಲ್ ರಾಜಣ್ಣ: ದಕ್ಕಲಿಗ, ಪು. ೧-೩೭

೧೯. ಅದೇ, ಪು. ೩

೨೦. Edgar Thurston, K. Rangachari: Castes and Tribes of Southern India, Vol-II, P.104

೨೧. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕದ ಪಾಳೆಯಗಾರರ ನ್ಯಾಯಾಡಳಿತ, ಪು. ೩೬೦

೨೨. ದೇವರಕೊಂಡಾರೆಡ್ಡಿ: ಪೆದ್ದಿಂಟಿ ಗೊಲ್ಲರ ಜಯರೇಖೆ, ಶಾಸನ ಅಧ್ಯಯನ, ಸಂಪುಟ-೧, ಸಂಚಿಕೆ-೨,

೨೩. ರಾಜಶೇಖರಪ್ಪ ಬಿ: ವಿಜಯನಗರ ದೊರೆಗಳ ಪ್ರಸ್ತಾವ ಬರುವ ಗೊಲ್ಲ ಜನಾಂಗದವರ ಒಂದು ದಾಖಲೆ, ವಿಜಯನಗರ ಅಧ್ಯಯನ-೧೨, ಪು.೧೬೬-೧೮೧

೨೪. ಪಾಪಣ್ಣ ನಂಜಪ್ಪ ಕಾಯಂಗಡಿ: ಶ್ರೀಯಾಗ ಕ್ಷತ್ರಿಯಾ ಸಾಧುಶೆಟ್ಟರ ಚರಿತ್ರೆ, ಪು.೧-೧೨

೨೫. ವೆಂಕಟೇಶ ಇಂದ್ವಾಡಿ: ದೇವ-ದೇವಿ, ಅಲೆವ ಜನರ ಆಚರಣೆಗಳ ಮುಖೇನ, ಪು. ೪೪

೨೬. ಕ.ವಿ.ವಿ.ಶಾ.ಸಂ-೨, ಗಂಗಾವತಿ-೨೬

೨೭. ಅದೇ, ಗಂಗಾವತಿ-೨೭

೨೮. ಕೊಟ್ರೇಶ್ ಎಂ: ವಿಜಯನಗರ ಕಾಲದ ತಾಮ್ರ ಶಾಸನ, ವಿಜಯನಗರ ಅಧ್ಯಯನ - ೧೬, ಪು. ೩೦-೩೧

೨೯. ಗೋಪಾಲರಾವ್ ಎಚ್.ಎಸ್: ರಂಗನಾಥಪುರದ ತಾಮ್ರಶಾಸನ,ಇತಿಹಾಸ ದರ್ಶನ-೧, ಪು. ೪೪

೩೦. ಚನ್ನಬಸಪ್ಪ ಗೊ.ರು (ಸಂ) : ಚಿದಾನಂದಮೂರ್ತಿ-ದೇಶಮುದ್ರೆ (ನ್ಯಾಯಮೂರ್ತಿ ಕೆ.ಎಂ. ಚಂದ್ರಶೇಖರ ಸ್ಮರಣ ಗ್ರಂಥ) ಪು. ೬೮-೬೯

೩೧. ಕ.ವಿ.ವಿ.ಶಾ.ಸಂ-೨: ಆನೆಗೊಂದಿ-೧೦

೩೨. Nanjudaiah H.V., Ananthakrishna Iyer L.K, Mysore Tribes and Castes-Vol-VI, P.7

೩೩. ಕ.ವಿ.ವಿ.ಶಾ.ಸಂ-೨: ಆನೆಗೊಂದಿ-೧೮

೩೪. Nanjudaiah H.V., Ananthakrishna Iyer L.K, Mysore Tribes and Castes-Vol - IV, P. 4-5

೩೫. ಅದೇ, Vol-IV, P. 4

೩೬. ಅದೇ, Vol-IV, P. 29

೩೭. ಅದೇ, Vol-IV, P. 27-29

೩೮. ಅದೇ, Vol II, P. 99

೩೯. Franacis Buchanan: A Journey from Madras through the Countries of Mysore, Canada and Malabar, Vol -1, P. 168

೪೦. ಹಳ್ಳಿಕೇರಿ ಎಫ್.ಟಿ: ಕುರುಬರಿಗೆ ಸಂಬಂಧಿಸಿದ ವಿಜಯನಗರದ ಅಪ್ರಕಟಿತ ಶಾಸನ: ವಿಜಯನಗರ ಅಧ್ಯಯನ-೧೨, ಪು. ೭೬-೮೩

೪೧. ರಾಮಚಂದ್ರನ್ ಸಿ.ಎನ್: ಹೊಸ ಮಡಿಯ ಮೇಲೆ ಚದುರಂಗ, ಪು. ೩೭

೪೨. Burten Stain: Peasant State and Society in Medieval India, P.174

೪೩. Nilakanta ShastriK.A: The Cholas, P. 552

೪೪. Burten Stain: Peasant State and Society in Medieval India, , P-117

೪೫. ಅದೇ, ಪು. ೧೧೭-೧೧೮

೪೬. Edgar Thurston: Castes and Tribes of Southern India, Vol- IV, P. 315-316

೪೭. Shankar Mokashi Punekar:Harijan Contribution to Medieval Indian Thought, P. 54 (ಉದ್ಧೃತ: ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೫೨)

೪೮. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೫೨

೪೯. ಅದೇ, ಪು. ೬೯

೫೦. Srinivasachari C.S: The Origin of the Right and Left-hand Castes divisions, JAHRJ, Vol- IV, P. 80

೫೧. Arjun Appadorai: Right and Left-Hand Castes in South India, ESHR, 1974, P. 223

೫೨. Srinivasa Ayangar: Tamil Studies, P. 99

೫೩. Srinivasachari C.S: The Origin of the Right and Left-hand castes divisions, JAHRJ, Vol- IV, 1929-30, P. 80

೫೪. Brenda E. F. Beck: The Right-Left Division of South Indian Society, JAS, Vol.29/4, 1970, P. 783

೫೫. Habib Irfan (Ed): Cambridge Economic History of India, P. 27

೫೬. Hayavadana Rao. C (Ed): Mysore Gazetter, Vol-1, P. 176

೫೭. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೨೨-೩೨

೫೮. ಜ್ಞಾನಾನಂದ ಜಿ (ಸಂ): ನಿರಂಜನ ಕವಿ ವಿರಚಿತ ಕಂಚಿ ಪುರಾಣ, ಪು. ೧೮–೩೮
೫೯. ಅದೇ, ಪು. ೧–೨
೬೦. ಅದೇ, ಪು. ೯೧–೧೦೫
೬೧. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೩೨೬–೩೩೩
೬೨. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂ. ೧, ಭಾಗ–೧, ಪು. ೨೮೪
೬೩. ಚಿದಾನಂದಮೂರ್ತಿ ಎಂ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೯೨
೬೪. ಮಂಜುನಾಥ್ ಸಿ.ಯು: ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೨೩೪
೬೫. ಘಟಪಣದಿ ಎಸ್.ಜಿ: ಎಂಟು ಹಿಟ್ಟು, ಕರ್ನಾಟಕ ಭಾರತಿ– ೨೦೨, ಪು. ೬೭–೭೭
೬೬. ಸೂರ್ಯನಾಥ ಕಾಮತ್: ಹದಿನೆಂಟು ಜಾತಿಗಳು, ಆಸ್ವಾದ, ಪು. ೪೩೧
೬೭. ದೇವರಕೊಂಡಾರೆಡ್ಡಿ ಮತ್ತು ಗಣೇಶ್ ಕೆ.ಆರ್: ಲಕ್ಷ್ಮೇಶ್ವರದ ಶಾಸನಗಳು, ಸಂ. ೫೨, ಕ್ರಿ.ಶ. ೭೨೫
೬೮. ಚಿದಾನಂದಮೂರ್ತಿ ಎಂ: ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಪು. ೨೪–೨೫
೬೯. ಅದೇ, ಪು. ೨೬–೨೭
೭೦. Arjun Appadurai: Right and Lift hand castes in South India, P. 219
೭೧. ಸೂರ್ಯನಾಥ ಕಾಮತ್: ಹದಿನೆಂಟು ಜಾತಿಗಳು, ಅಸ್ವಾದ, ಪು. ೪೩೩
೭೨. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೫೫
೭೩. Francis Buchanan: A Journey from Madras through the Countries of Mysore, Canara and MalabarVol-1, P. 77-80
೭೪. Hayavadana Rao C: Mysore Gazeteer, Vol-I, P. 178-179
೭೫. Burton Stein: peasant State and Society of South India, P. 205 (The divisions were not absolute, corporate or continuous but potentioal groupings)
೭೬. Srinivasachari C.S: The Origin of the Right and Left-hand Castes division, JAHRS, Vol IV, P. 85
೭೭. Barton Stein: Peasant State and Society in Medieval South India, P. 175
೭೮. Srinivasachari C.S: The Origin of the Right and Left-hand Castes division, JAHRS, Vol IV, P. 83
೭೯. Srinivasan C.R: Kanchipuram through the ages, P. 7
೮೦. Venkataraman K.R: Devi Kamakshi in Kanchi, P. 1
೮೧. ಅದೇ, ಪು. ೫
೮೨. ಅದೇ, ಪು. ೬

೮೩. Gopinath T.A: Buddist remains in Andhra and the history of Andhra between 225 and 610 AD, P. 4 (ಉದ್ಧೃತ: ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೧೦

೮೪. Venkataraman K.R: Devi Kamakshi in Kanchi, P. 25

೮೫. ಅದೇ, ಪು. ೫

೮೬. ಅದೇ, ಪು. ೭

೮೭. ಅದೇ, ಪು. ೧೬

೮೮. ಅದೇ, ಪು. ೭

೮೯. Srinivasan C.R: Kanchipuram through the ages, P. 246

೯೦. ಅದೇ, ಪು. ೨೪೬

೯೧. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೪೧

೯೨. ಕೋಟಗಾನಹಳ್ಳಿ ರಾಮಯ್ಯ: ಸಿಂದ್ ಮಾದಿಗರ ಸಂಸ್ಕೃತಿ, ಪು. ೩೧

೯೩. ಅಪ್ಪಾಜಿ ಎಸ್ ಸಿಂಧೆ, ಚಾವಡೆ ಲೋಕೇಶ್ ಕೆ: ಗೋಸಂಗಿ, ಪು. ೧೧೭–೧೩೬

೯೪. ಅದೇ, ಪು. ೧೧೭–೧೩೬

೯೫. Raman K.V: Sri Varadarajaswamy temple-Kanchi, A study its History, Art and Architecture, P. No. 82

೯೬. ARE-479 of 1917

೯೭. Raman K.V: Sri Varadarajaswamy temple-Kanchi, A study its History, Art and Architecture, P. 83

೯೮. ಎ.ಕ–೩ (೧) (ರೈಸ್): ತಿ. ನರಸೀಪುರ–೨೩

೯೯. Raman K.V: Sri Varadarajaswamy temple-Kanchi, A study its History, Art and Architecture, P. 19

೧೦೦. ಅದೇ, ಪು. ೧೨೩–೧೨೫

೧೦೧. ಎ.ಕ–೧೨ (ರೈಸ್): ಮಧುಗಿರಿ ೨೧, (ಎಂಎಆರ್ ೧೯೧೮: ಪು. ೬೫–೬೬, ಕ್ರಿ.ಶ. ೧೬೦೬)

೧೦೨. ಮೋಹನ್ ರಾಂ ಎನ್.ಕೆ: ದಲಿತರ ದೇವಸ್ಥಾನ ಪ್ರವೇಶದ ಸಾವಿರ ವರ್ಷ, ದಲಿತರು ಮರೆತ ರಾಮಾನುಜ, ಪು. ೧೨

೧೦೩. Mattison Mins: The Warrior Merchants (Textiles, Trade and Territory in South India, P. 33

೧೦೪. ಎ.ಇಂ–೫: ಜೆ.ಎಫ್. ಫ್ಲೀಟ್, ಪು. ೨೪೫–೨೫೨, ಕ್ರಿ.ಶ. ೧೨೦೦

೧೦೫. ಎ.ಕ.–೨ (ಪರಿಷ್ಕೃತ): ಶ್ರವಣ ಬೆಳಗೊಳ ೪೭೫, ಕ್ರಿ.ಶ. ೧೩೬೮

೧೦೬. ಹಳ್ಳಿಕೇರಿ ಎಫ್.ಟಿ: ಕುರುಬರಿಗೆ ಸಂಬಂಧಿಸಿದ ವಿಜಯನಗರದ ಅಪ್ರಕಟಿತ ಶಾಸನ, ವಿಜಯನಗರ ಅಧ್ಯಯನ– ೧೨, ಪು. ೭೬–೮೩

೧೦೭. Hayavadana Rao C: Mysore Gazetter, Vol-1, P. 178-179

೧೦೮. ಜಾನಕಲ್ ರಾಜಣ್ಣ ಎಂ: ದಕ್ಕಲಿಗ, ಪು. ೧–೩೭

೧೦೯. ಇತ್ತೀಚಿಗೆ ಕನ್ನಡ ಉಪನ್ಯಾಸಕರಾದ ಡಾ. ರವಿಕುಮಾರ್ ನವಲಗುಂದ ಇವರು ಇಂಥ ವ್ಯಾಜ್ಯದ ಒಂದು ಪ್ರತಿಯನ್ನು ಕ್ಷೇತ್ರ ಕಾರ್ಯದಲ್ಲಿ ಸಂಪಾದಿಸಿದ್ದು, ನನ್ನ ಅಧ್ಯಯನಕ್ಕೆ ನೀಡಿರುತ್ತಾರೆ

೧೧೦. ಲಕ್ಷ್ಮೀಪತಿ ಕೋಲಾರ: ಮಾಸ್ವೀಕರ ಸಂಸ್ಕೃತಿ, ಪು.೨೨–೩೨

೧೧೧. ಗುಂಡಾ ಜೋಯಿಸ್ ಕೆಳದಿ: ಧರ್ಮಸ್ಥಳದಲ್ಲಿರುವ ತಾಮ್ರಶಾಸನ ಲೋಚನ ಸಂ. ೧, ಸಂ.೧, ಪು.೫೭

೧೧೨. ಎ.ಕ. ೯ (ರೈಸ್): ಕಾನಕಾನಹಳ್ಳಿ ೯೦, ಕ್ರಿ.ಶ. ೧೭೦೦

೧೧೩. ಕೊಟ್ರೇಶ್ ಎಂ: ವಿಜಯನಗರ ಕಾಲದ ತಾಮ್ರ ಶಾಸನ, ವಿಜಯನಗರ ಅಧ್ಯಯನ–೧೬, ಪು ೩೦–೩೧,

೧೧೪. ಹಳ್ಳಿಕೇರಿ ಎಫ್.ಟಿ.: ವಿಜಯನಗರ ಅಧ್ಯಯನ–೧೨, ಪು. ೭೬–೮೩

೧೧೫. ಎಂಎಆರ್ ೧೯೧೮: ಪು. ೬೫–೬೬

೧೧೬. ಕ.ವಿ.ವಿ.ಶಾ.ಸಂ–೩, ಗಿಣಿಗೇರಿ–೧೩೯

೧೧೭. ಎ.ಕ.–೯ (ರೈಸ್): ಹೊಸಕೋಟೆ–೧೦೫

೧೧೮. ಕ.ವಿ.ವಿ.ಶಾ.ಸಂ. ೭, ಮುಕ್ಕುಂದಿ–೧೦, ಕ್ರಿ.ಶ. ೧೫೮೫

೧೧೯. ಕ.ವಿ.ವಿ.ಶಾ.ಸಂ. ೭, ರಾಯಚೂರು–ಕರತ್ಕಲ್ ೬, ಕ್ರಿ.ಶ. ೧೦೭೯

೧೨೦. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ: ಪು. ೧೮೫–೧೮೮

೧೨೧. ದೇವರಕೊಂಡಾರೆಡ್ಡಿ ಮತ್ತು ಗಣೇಶ್ ಕೆ.ಆರ್: ಲಕ್ಷ್ಮೇಶ್ವರದ ಶಾಸನಗಳು, ಸಂ. ೫೮

೧೨೨. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಮದ್ದಿಹಳ್ಳಿ ಮಾದಿಗತನದ ಕಾಣಾಚಿ ವ್ಯಾಜ್ಯ ಕುರಿತ ಜೋಡಿ ತಾಮ್ರಪತ್ರಗಳು, ಪು. ೩೬೦

೧೨೩. ಎ.ಕ–೧೨ (ರೈಸ್): ಮಧುಗಿರಿ ೨೧, (ಎಂಎಆರ್ ೧೯೧೮: ಪು. ೬೫–೬೬, ಕ್ರಿ.ಶ. ೧೬೦೬)

೧೨೪. ಶಾಸ್ತ್ರೀ ಎ.ಕೆ: ಶೃಂಗೇರಿ ಮಠದ ಕಡೆಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು, ಸಂ. ೨೦೩, ಪು. ೩೭೩–೩೮೪

೧೨೫. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೧೮-೨೧; ಮಲ್ಲಿಗವಾಡ ಕೆ.ಸಿ, ಇತಿಹಾಸ ದರ್ಶನ-೨೪, ಪು. ೧೭೧-೧೭೫; ದೇವರಕೊಂಡಾರೆಡ್ಡಿ: ಕಲಗೂರಿನ ಪೆದ್ದಿಂಟಿ ಗೊಲ್ಲರ ಜಯರೇಖೆ, ಶಾಸನ ಅಧ್ಯಯನ-೨, ಪು. ೪೨-೪೭

೧೨೬. ಲಕ್ಷ್ಮೀಪತಿ ಕೋಲಾರ: ಮಾಸ್ತೀಕರ ಸಂಸ್ಕೃತಿ, ಪು. ೧೮-೨೦

೧೨೭. ಎ.ಕ. ೧೨ (ಪರಿಷ್ಕೃತ): ಕೊಪ್ಪ-೧೪, ಕ್ರಿ.ಶ. ೧೮೬೪

* * *

## ಅಧ್ಯಾಯ–೫
## ಜಯರೇಖೆ ಶಾಸನಗಳ ಧಾರ್ಮಿಕ ಲೋಕದೃಷ್ಟಿ

## ಅಧ್ಯಾಯ-೫

## ಜಯರೇಖೆ ಶಾಸನಗಳ ಧಾರ್ಮಿಕ ಲೋಕದೃಷ್ಟಿ

'ಧರ್ಮ'ದ ಪರಿಕಲ್ಪನೆ ವ್ಯಾಪಕ ಹಾಗೂ ವಿಸ್ತೃತ ಸ್ವರೂಪ ಹೊಂದಿದೆ. ದೈನಂದಿನ ವ್ಯವಹಾರಗಳಲ್ಲಿ ಬಳಕೆಯಾಗುವ ವಿಶ್ವ ಧರ್ಮ, ಜೀವನ ಧರ್ಮ, ಮಾನವ ಧರ್ಮ, ಪತಿವ್ರತಾ ಧರ್ಮ, ಜಾತಿಧರ್ಮ, ಮುಂತಾದ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ 'ಧರ್ಮ' ಎಂದರೆ, 'ಕರ್ತವ್ಯ' ಎಂಬ ಲೌಕಿಕಾರ್ಥ ಸ್ಫುರಿಸುತ್ತದೆ. "ಶಬ್ದಕೋಶಗಳು ಧರ್ಮ ಎಂಬುದಕ್ಕೆ ಶಾಸನ, ಪದ್ಧತಿ, ಕರ್ತವ್ಯ, ಹಕ್ಕು, ನ್ಯಾಯ, ಶೀಲ, ಕಲ್ಪ, ಸತ್ಕಾರ್ಯ, ಕ್ರಿಯೆ, ಗುಣ, ಮುಂತಾದ ಹಲವು ಅರ್ಥಗಳನ್ನು ಕೊಡುತ್ತವೆ".[೧] "ಸಮಷ್ಟಿಯ ಪ್ರತಿಯೊಬ್ಬರೂ ಆಚರಿಸಲೇಬೇಕಾದ ವ್ರತ ನಿಯಮಗಳ ಮೂಲಕ, ಪ್ರತಿಯೊಬ್ಬರೂ ನಂಬಬೇಕಾದ ಸಾಮಾಜಿಕ-ನೈತಿಕ ಮೌಲ್ಯಗಳ ಮೂಲಕ ಮತ್ತು ಮುಖ್ಯವಾಗಿ ಒಂದು ಸಮಷ್ಟಿಯ ಅನನ್ಯತೆಯನ್ನು ಉಳಿಸಿಕೊಳ್ಳಲು ಬೇಕಾಗುವ ಸಂಕೇತಗಳ ಮೂಲಕ ಪ್ರಾರಂಭದಲ್ಲಿ ಅಮೂರ್ತ ಚಿಂತನೆಯ ಸ್ವರೂಪದಲ್ಲಿ ಪಾರಮಾರ್ಥಿಕ ಸ್ವರೂಪದ 'ಧರ್ಮ' ಕಾಲಕ್ರಮೇಣ ಮೂರ್ತವಾದ ಲೌಕಿಕ ಸ್ವರೂಪವನ್ನು ಪಡೆದು, ಇವೆರಡೂ ಒಂದನ್ನೊಂದು ಅವಲಂಬಿಸುತ್ತಾ, ಒಂದನ್ನೊಂದು ಪೋಷಿಸುತ್ತಾ, ಒಂದು ಜಟಿಲ ವ್ಯವಸ್ಥೆಯನ್ನು ಸೃಜಿಸುತ್ತದೆ".[೨]

ಅಲೌಕಿಕ ನೆಲೆಯಲ್ಲಿ ವ್ಯವಹರಿಸುತ್ತಿದ್ದ ಧರ್ಮವನ್ನು ಸಂಕೀರ್ಣಗೊಳಿಸಿ, ಲೌಕಿಕ ನೆಲೆಗಿಳಿಸಿ ಒಂದು ನಿರ್ದಿಷ್ಟ ಧರ್ಮ, ಪಂಥ, ಮತ, ಸಮುದಾಯದ ಜನತೆ ಪರಿಪಾಲಿಸಲೇಬೇಕಾದ ಜೀವನ ವಿಧಾನ, ಆಚರಣಾ ಕ್ರಮ, ಆರಾಧನಾ ವಿಧಾನವೆಂಬಂತೆ ವ್ಯಾಖ್ಯಾನ ಮಾಡುತ್ತಾ ಬರಲಾಗಿದೆ. ಕರ್ನಾಟಕದ ಇತಿಹಾಸದಲ್ಲಿ ಧರ್ಮಗಳ ಏಳ್ಗೆ ಮತ್ತು ವಿಕಸನವೂ ಇದೇ ವ್ಯಾಖ್ಯಾನದ ಪರಿಕಲ್ಪನೆಯಲ್ಲೇ ಮುಂದುವರೆದಿದೆ.

ಕರ್ನಾಟಕದಲ್ಲಿ ದೊರೆಯುವ ಮೊಟ್ಟಮೊದಲ ಜಯಪತ್ರ ಅಬ್ಬಲೂರಿನ ಏಕಾಂತದ ರಾಮಯ್ಯನ ಕ್ರಿ.ಶ. ಸುಮಾರು ೧೨೦೦ರ ಜಯಪತ್ರ. ನಂತರದ ಜಯಪತ್ರಗಳಿಗಾಗಿ ನಾವು ಹದಿನಾಲ್ಕು ಮತ್ತು ಹದಿನೈದನೆಯ ಶತಮಾನದವರೆಗೆ ಕಾಯಬೇಕಾಗುತ್ತದೆ. ಈ ಅವಧಿಯ ನಡುವೆ ಕರ್ನಾಟಕದ ಧಾರ್ಮಿಕ ಪರಿಸರ ಹಲವಾರು ಪಲ್ಲಟಗಳಿಗೆ ಸಾಕ್ಷಿಯಾಗುತ್ತದೆ. ಶಾಸನೋಕ್ತ ಏಕಾಂತದ ರಾಮಯ್ಯ ಶೈವ ಪಾರಮ್ಯವನ್ನು ಮೆರೆದ ಪವಾಡ ಪುರುಷನಾಗಿ ಪುರಾಣೀಕೃತ ವ್ಯಕ್ತಿಯಾಗಿ ಹರಿಹರನಿಗೆ 'ಏಕಾಂತದ ರಾಮಿದೇವರ ರಗಳೆಯ' ಕಥಾ ನಾಯಕನಾಗುತ್ತಾನೆ.

ಕ್ರಿ.ಶ. ಸುಮಾರು ೧೨೦೦ರಲ್ಲಿ ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನ, ಪುಲಿಗೆರೆಯಲ್ಲಿನ ಎರಡು ಜಯಪತ್ರ ಶಾಸನಗಳು, ಶ್ರವಣಬೆಳಗೊಳದ ಬುಕ್ಕರಾಯನ ಶಾಸನ- ಇವೆಲ್ಲವೂ ಜೈನ ಮತ್ತು ಶೈವ ಹಾಗೂ ಜೈನ ಮತ್ತು ವೈಷ್ಣವ ಪಂಗಡಗಳ ನಡುವಿನ ಹೊಯ್ದಾಟವನ್ನು

ದಾಖಲಿಸುತ್ತವೆ. ಇದಕ್ಕೆ ಹಿನ್ನೆಲೆಯಾಗಿ ಕರ್ನಾಟಕದಲ್ಲಿ ಅಂದು ಪ್ರಚಲಿತದಲ್ಲಿದ್ದ ಹಲವಾರು ಅಂಶಗಳು ಕಾರಣವಾಗಿವೆಯೆನ್ನಬಹುದು. ಕರ್ನಾಟಕದಲ್ಲಿ ಹತ್ತನೆಯ ಶತಮಾನದ ಅವಧಿಯನ್ನು ಸಾಹಿತ್ಯಕ ಹಿನ್ನೆಲೆಯಲ್ಲಿ ವೀರ-ಕ್ಷಾತ್ರಯುಗವೆಂದು ವ್ಯಾಖ್ಯಾನಿಸಲಾಗುತ್ತದಾದರೂ, ಹತ್ತನೆಯ ಶತಮಾನಾನಂತರ ಕರ್ನಾಟಕದ ಸಮಾಜದಲ್ಲಿ ಮೇಲುಗೈ ಪಡೆಯುತ್ತಾ ಸಾಗಿದ್ದು ಧರ್ಮ. ಹನ್ನೊಂದನೆಯ ಶತಮಾನಾನಂತರ ಕರ್ನಾಟಕದ ದಕ್ಷಿಣ ಭಾಗದಲ್ಲಿ ಶ್ರೀ ವೈಷ್ಣವಧರ್ಮ, ಉತ್ತರ ಭಾಗದಲ್ಲಿ ಶೈವ-ವೀರಶೈವ ಧರ್ಮಗಳು ಪ್ರಬಲವಾಗುತ್ತಾ ಬಂದಂತೆ, ಮೊದಲಿನಿಂದಲೂ ಕರ್ನಾಟಕದಲ್ಲಿ ಪ್ರಬಲವಾಗಿದ್ದ ಜೈನಧರ್ಮದಂತಹ ಕೆಲವು ಧರ್ಮಗಳು ಅಸ್ತಿತ್ವದಲ್ಲಿದ್ದಂತೆ ತೋರ್ಪಡಿಸಿಕೊಂಡರೂ, ವಾಸ್ತವವಾಗಿ ಅವು ಜೀವಭಯದಿಂದ ತತ್ಸಂದರ್ಭದಲ್ಲಿದ್ದ ಪ್ರಭುತ್ವ ಮತ್ತು ಸಮಾಜದ ಅನಾದರಣೆಯಿಂದ ಕುಟುಕು ಜೀವದಿಂದ ಬದುಕುತ್ತಿದ್ದವೆಂದು ಸಮಕಾಲೀನ ಶಾಸನ ಹಾಗೂ ಸಾಹಿತ್ಯ ಆಕರಗಳಿಂದ ವೇದ್ಯವಾಗುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ತಳಸಮುದಾಯದ ಜೀವದನಿಯಾಗಿ ಮೂಡಿಬಂದ ವಚನ ಚಳುವಳಿ ಸಾಮಾಜಿಕ ಚಲನಶೀಲತೆಗೆ ಅವಕಾಶ ಮಾಡಿಕೊಟ್ಟಿತ್ತು ಎಂಬ ವಾಸ್ತವದ ನಡುವೆಯೇ, ಆ ಚಳುವಳಿಯ ಮೂಸೆಯಲ್ಲಿ ಮೂಡಿಬಂದ ವೀರಶೈವ ಧರ್ಮದ 'ಕೆಲವು' ಅನುಯಾಯಿಗಳು ಧರ್ಮದ ಪಾರಮ್ಯತೆಯನ್ನು ಎತ್ತಿಹಿಡಿಯುವ ಮೂಲಕ 'ಶಿವಪಾರಮ್ಯತೆಯ' ಉಗ್ರ ಭಕ್ತಿಗೆ ಇಂಬುಮಾಡಿಕೊಟ್ಟರು. ಇದಕ್ಕೆ ಪ್ರಭುತ್ವದ ಮಾನ್ಯತೆಯೂ ದೊರೆಯಿತು. ಅಬ್ಬಲೂರಿನ ಜಯಪತ್ರ ಇದಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ. ಜೈನರು ಶಿವಸನ್ನಿಧಿಯಲ್ಲಿ ಜಿನನೇ ದೈವವೆಂದು ಸ್ತುತಿಸಿದಾಗ ಅದನ್ನು ಕೇಳಿದ ರಾಮಯ್ಯ ಶಿವಸನ್ನಿಧಿಯಲ್ಲಿ ಅನ್ಯ ದೈವಸ್ತುತಿ ಮಾಡಬಾರದೆಂದು ಹೇಳಿ 'ಸಂಸಾರದಲ್ಲಿ ಬಿದ್ದು ದಂದುಗದೊಳು ಬರ್ದುಂಕಿ ತಪಕೆ ಸಾರ್ದು ಸುಖಮಂ ಪೊರ್ದಿಪ್ಪನುಂ ದೇವನೇ . . .' ಎಂದು ಅವಹೇಳನ ಮಾಡಿ 'ಹರನೇ ನಿಜವಾದ ದೇವನೆಂದು ವಾದಿಸಿದಾಗ, ಜೈನರು ನಿನ್ನ ತಲೆಯನ್ನು ಕಡಿದುಕೊಂಡು ಮತ್ತೆ ಬದುಕಿ ಬಾ ಆಗ ನೀನೇ ಭಕ್ತ, ಶಿವನೇ ದೈವವೆಂದು ಒಪ್ಪುತ್ತೇವೆ' ಎಂದು ಪಣ ಒಡ್ಡುತ್ತಾರೆ. ಪಣ ಸ್ವೀಕರಿಸಿದ ರಾಮಯ್ಯ 'ಪಣ ಗೆದ್ದರೆ ನೀವು ನನಗೇನು ಕೊಡುತ್ತೀರಿ' ಎಂದು ಕೇಳಿದಾಗ, ಜೈನರು 'ಜಿನನ ಕಿತ್ತು ಆ ಸ್ಥಳದಲ್ಲಿ ಶಿವನನ್ನು ಪ್ರತಿಷ್ಠಾಪಿಸುವುದಾಗಿ' ಪಂಥಾಹ್ವಾನ ನೀಡುತ್ತಾರೆ. ಏಕಾಂತದ ರಾಮಯ್ಯ ಅದೇ ರೀತಿ ಮಾಡಿ ಬದುಕಿ ಬರುತ್ತಾನೆ.

ಆಗ ಜೈನರೆಲ್ಲ 'ಜಿನಪ್ರಳಯ ಮಾಡದಿರಿ' ಎಂದು ಬೇಡಿಕೊಂಡರೂ, 'ಜೈನರಮಾರಿ' ಬಂತೆಂಬಂತೆ ಜಿನನ ವಿಗ್ರಹವನ್ನು ನಾಶ ಮಾಡಿ ಸೋಮೇಶ್ವರನನ್ನು ಪ್ರತಿಷ್ಠಾಪಿಸುತ್ತಾನೆ. ಜೈನರು ಬಿಜ್ಜಳನಲ್ಲಿಗೆ ದೂರನ್ನು ಹೊಯ್ದಾಗ, ಬಿಜ್ಜಳ 'ನೀನಿದನನ್ಯಾಯವನೇಕೆ ಮಾಡಿದೆ' ಎಂದು ಜರೆದು ಆಕ್ಷೇಪಿಸಿದರೂ, ಪಣದ ಬಗ್ಗೆ ತಿಳಿದ ನಂತರ ರಾಮಯ್ಯನಿಗೆ 'ಜಯಪತ್ರ'ವನ್ನು ದತ್ತಿ ಸಮೇತ ನೀಡಿ ಮನ್ನಿಸುತ್ತಾನೆ. ಈ ಶಿರಸ್ ಪವಾಡ ಘಟನೆಯ ನಂತರ ಅಬ್ಬಲೂರಿನ ಸೋಮೇಶ್ವರ ದೇವಾಲಯಕ್ಕೆ ಭೂದಾನಗಳ ಪ್ರವಾಹವೇ ಹರಿದುಬರುತ್ತದೆ.

ಅದೇ ರೀತಿ ಶ್ರವಣಬೆಳಗೊಳದಲ್ಲಿ ಜೈನರಿಗೂ–ವೈಷ್ಣವರಿಗೂ ಸಂವಾದ ಏರ್ಪಟ್ಟಾಗ ಜೈನರು ಭಕ್ತರು ಮಾಡುವ 'ಅನ್ಯಾಯಗಳನ್ನು' ಬುಕ್ಕರಾಯನಿಗೆ ನಿವೇದಿಸಿಕೊಳ್ಳುತ್ತಾರೆ. ಬುಕ್ಕರಾಯ ನಾಡಿನ ಸಮಸ್ತ ಮುಖಂಡರ ಸಮ್ಮುಖದಲ್ಲಿ ವೈಷ್ಣವ ಸಮಯಕ್ಕೂ, ಜೈನ ಸಮಯಕ್ಕೂ ಭೇದವಿಲ್ಲವೆಂದು ಹೇಳಿ ವೈಷ್ಣವರ ಕೈಯಲ್ಲಿ ಜೈನರ ಕೈಯನ್ನು ಕೊಟ್ಟು 'ಸಂಧಾನ' ಮಾಡಿಸುತ್ತಾನೆ.

ಪುಲಿಗೆರೆಯ ಶಂಖಬಸ್ತಿಯ ಹೇಮದೇವಾಚಾರ್ಯ ಮತ್ತು ಸೋಮನಾಥ ದೇವರ ಸ್ಥಾನಾಚಾರ್ಯ ಶಿವರಾಮಯ್ಯಗಳ ನಡುವೆ ತಮ್ಮ ತಮ್ಮ ದೇವಾಲಯಗಳ ಭೂಮಿಯ ಬಗ್ಗೆ ಉಂಟಾದ ವಿವಾದವನ್ನು ಲಕ್ಷ್ಮೇಶ್ವರದ ಕ್ರಿ.ಶ. ೧೪೧೨ರ ಜಯಪತ್ರ ಉಲ್ಲೇಖಿಸುತ್ತದೆ. ಸೋಮೇಶ್ವರ ದೇವಾಲಯದ ಆಚಾರ್ಯ ಶಿವರಾಮಯ್ಯ ಶಂಖಬಸ್ತಿಯ ಭೂಮಿಯನ್ನು ಒತ್ತಾಯಪೂರ್ವಕವಾಗಿ ಅತಿಕ್ರಮಿಸಿಕೊಂಡು ವ್ಯವಸಾಯ ಮಾಡುತ್ತಿರುತ್ತಾನೆ. ಊರಿನ ಪ್ರಮುಖರೆಲ್ಲರಿಗೂ, ಈ ವಿಷಯ ಗೊತ್ತಿದ್ದರೂ ಮೌನವಾಗಿರುತ್ತಾರೆ. ಅಂತಿಮವಾಗಿ ಮಹಾಪ್ರಧಾನ ನಾಗಣ್ಣ ದಂಡನಾಯಕ, ಅರಮನೆಯ ಪುರೋಹಿತ ಸಂಗಮದೇವ, ಅರಮನೆಯ ವಿದ್ವಾಂಸರನ್ನೆಲ್ಲ ಸೇರಿಸಿ ವಾದಿ–ಪ್ರತಿವಾದಿಗಳ, ಸಾಕ್ಷಿದಾರರ ಸಾಕ್ಷ್ಯಗಳನ್ನೆಲ್ಲಾ ಪರಿಶೀಲಿಸಿ ಶಂಖಬಸ್ತಿಯ ಹೇಮದೇವಾಚಾರ್ಯನಿಗೆ 'ಜಯಪತ್ರ' ನೀಡುತ್ತಾರೆ.

ಇದಕ್ಕೆ ವ್ಯತಿರಿಕ್ತವಾಗಿ ಕ್ರಿ.ಶ. ೧೫೩೮ರ ಜಯಪತ್ರದಲ್ಲಿ ಮೊದಲು ಆದ ಭೂವಿವಾದಕ್ಕೆ ಸೇಡು ತೀರಿಸಿಕೊಳ್ಳುವ ರೀತಿಯಲ್ಲಿ ಜೈನರು ವೈದಿಕ ಲಾಂಛನಗಳಾದ ಅಷ್ಟದಿಕ್ಪಾಲಕಾದಿಗಳು, ಧ್ವಜ ಪತಾಕಾದಿಗಳನ್ನು ತಮ್ಮ ಜಿನಾರಾಧನೆಯಲ್ಲಿ ಬಳಸಿದ್ದಕ್ಕೆ ವಿಷಾದಿಸಿ, ಕ್ಷಮೆ ಕೋರಿ, ಕಾಳಹಸ್ತಿದೇವರು, ಶಿವರಾಮದೇವರಿಗೆ 'ಜಯಪತ್ರ' ಬರೆದು ಕೊಡುತ್ತಾರೆ.

ಅಬ್ಬಲೂರಿನ ಶಾಸನದಲ್ಲಿ ಏಕಾಂತದ ರಾಮಯ್ಯ ಪವಾಡ ಮೆರೆದು, ಜಿನಬಿಂಬಗಳನ್ನು ನಾಶ ಮಾಡಿ, ಜೈನಬಸದಿಗಳನ್ನು ಶಿವಾಲಯವಾಗಿ ಪರಿವರ್ತಿಸಿದ ತರುವಾಯ, ಆ ದೇವಾಲಯಕ್ಕೆ ದಾನದತ್ತಿಗಳ ಮಹಾಪೂರವೇ ಹರಿದು ಬರುವುದನ್ನು ಗಮನಿಸಿದರೆ, ಅಲ್ಲಿ ರಾಮಯ್ಯನ ಕೃತ್ಯದ ಖಂಡನೆಗಿಂತ, ಆತನ ಪವಾಡ ಮೇಲುಗೈಯಾಗಿ, ಆಳುವ ವರ್ಗದ ಆದರಣೀಯತೆಯನ್ನು ಪಡೆಯುತ್ತದೆ. ಹರಿಹರನ ರಗಳೆಗಳಲ್ಲೂ ಸಹ ವ್ಯಕ್ತವಾಗುವ ಈ ಉಗ್ರಭಕ್ತಿಯ ಪ್ರತಿಪಾದನೆ ಈ ಅಂಶವನ್ನು ಎತ್ತಿ ಹಿಡಿಯುತ್ತದೆ. ಬುಕ್ಕರಾಯನ ಶಾಸನದಲ್ಲೂ ಸಹ ಅಬಲರ ಕೈಯನ್ನು ಪ್ರಬಲರ ಕೈಯಲ್ಲಿರಿಸುವ ಸನ್ನಿವೇಶವೇ ಇಡೀ ಸಂದರ್ಭವನ್ನು ವಿವರಿಸುತ್ತವೆ.

ಜಯಪತ್ರಗಳಲ್ಲಿ ಅಂತರ್ಗತವಾಗಿರುವ ಇಂತಹ ವಿಷಯಗಳ ಹಿನ್ನೆಲೆಯಲ್ಲಿ ಮಧ್ಯಕಾಲೀನ ಕರ್ನಾಟಕದ ಧಾರ್ಮಿಕ ಸ್ವರೂಪ, ಧಾರ್ಮಿಕ ಚಟುವಟಿಕೆಗಳಿಗೆ ವೇದಿಕೆ ಕಲ್ಪಿಸಿದ್ದ ದೇವಾಲಯಗಳು ಸಾಂಸ್ಥೀಕರಣಗೊಂಡ ಬಗೆ, ದೇವಾಲಯಗಳು ಸಾಂಸ್ಥೀಕರಣಗೊಂಡ ನಂತರ ಬೇರೆ ಬೇರೆ ಮತ ಧರ್ಮಗಳ ನಡುವೆ ನಡೆದ ಸಂಘರ್ಷಗಳು, ಅದಕ್ಕೆ ಪ್ರಭುತ್ವ ಸ್ಪಂದಿಸಿದ ರೀತಿ, ಪರಾಜಿತ ಧರ್ಮಗಳು

ತಮ್ಮ ಅಸ್ತಿತ್ವಕ್ಕಾಗಿ ಸ್ವಯಂ ಅಳವಡಿಸಿಕೊಂಡ ಅನುಸಂದಾನದ ನೀತಿ, ಮುಂತಾದ ಅಂಶಗಳ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೫.೧ ಮಧ್ಯಕಾಲೀನ ಕರ್ನಾಟಕದಲ್ಲಿ ಮತ-ಪಂಥಗಳು

ಕರ್ನಾಟಕ ಚರಿತ್ರೆಯುದ್ದಗಲಕ್ಕೂ ಧರ್ಮಗಳೂ ಪ್ರಧಾನಪಾತ್ರ ವಹಿಸಿರುವುದನ್ನು ಅಲ್ಲಗಳೆಯಲಾಗುವುದಿಲ್ಲ. ರಾಜಪ್ರಭುತ್ವಗಳ ಉಗಮವೇ ಧಾರ್ಮಿಕ ಪ್ರಭುತ್ವಗಳ ಅಸ್ತಿತ್ವವನ್ನಾಧರಿಸಿವೆ. ಕರ್ನಾಟಕದ ಲಿಖಿತ ಚರಿತ್ರೆ ಪ್ರಾರಂಭವಾಗುವುದೇ ಅಶೋಕನ 'ಧಮ್ಮಲಿಪಿ'ಗಳಿಂದ. ಕರ್ನಾಟಕದ ಮೊದಲ ರಾಜವಂಶವೆಂಬ ಖ್ಯಾತಿಗೆ ಬಾಜನವಾದ ಕದಂಬ ವಂಶದ ಸ್ಥಾಪನೆಗೆ ಮಾರ್ಗದರ್ಶಕನಾದ ವೀರಶರ್ಮ ಮಯೂರವರ್ಮನ ತಾತ ಮಾತ್ರ ಆಗಿರದೆ, ಗುರುವೂ ಆಗಿದ್ದನೆಂಬುದು ಗಮನಾರ್ಹ. ಗಂಗ ಸಾಮ್ರಾಜ್ಯದ ಸ್ಥಾಪನೆಗೆ ದಿಕ್ಸೂಚಿಯಾದ ಸಿಂಹನಂದಿಮುನಿ, ಹೊಯ್ಸಳ ಸಾಮ್ರಾಜ್ಯ ಸ್ಥಾಪನೆಯ ರೂವಾರಿ ಜಿನಸೇನಾಚಾರ್ಯಮುನಿ ಹಾಗೂ ವಿಜಯನಗರ ಸ್ಥಾಪನೆಯ ಅಧ್ವರ್ಯ ವಿದ್ಯಾರಣ್ಯ ಕ್ರಿಯಾಶಕ್ತಿಯಂತಹ ಯತಿಗಳು ವಹಿಸಿರುವ ಪಾತ್ರ ಮಹತ್ತರವಾದುದು. ಸಾಮ್ರಾಜ್ಯಗಳುದ್ದಕ್ಕೂ ಧರ್ಮಗಳೇ ಮೇಲುಗೈ ಸಾಧಿಸಿವೆಯೆಂಬ ಸಂಗತಿ ಸುಳ್ಳಲ್ಲ. ಧಾರ್ಮಿಕ ಯಾಜಮಾನ್ಯತೆಯು ತನ್ನ ನಿಯಂತ್ರಣಾಧಿಕಾರದ ಮೂಲಕ ರಾಜ್ಯ ವ್ಯವಸ್ಥೆಯನ್ನು ನಿಯಂತ್ರಿಸುತ್ತಿತ್ತು. ಕಾಲಾತೀತವಾಗಿ, ದೇಶಾತೀತವಾಗಿ ಸಮಾಜದ ಎಲ್ಲ ಜನರ ಮನಸ್ಸುಗಳನ್ನಾಳಿದ್ದು ಇಂತಹ ಮತಧರ್ಮಗಳೇ. "ಧಾರ್ಮಿಕ ಪ್ರಭುತ್ವ ಮೇಲ್ನೋಟಕ್ಕೆ ಕೇವಲ ಧಾರ್ಮಿಕ ಆಚರಣೆಗಳಿಗಷ್ಟೇ ಸೀಮಿತಗೊಂಡ ವ್ಯವಸ್ಥೆಯಂತೆ, ಕಂಡುಬರುತ್ತದೆ. ಆದರೆ, ನಿಜಾರ್ಥದಲ್ಲಿ ಅದು ಬದುಕಿನ ಎಲ್ಲ ಕ್ಷೇತ್ರಗಳಿಗೂ ವಿಸ್ತರಿಸಿಕೊಂಡಿರುತ್ತದೆ".[೩]

ಜಯರೇಖೆಗಳ ಸಾಂಸ್ಕೃತಿಕ ಸಂಕಥನದ ಆಕರ ವಿಭಾಗದಲ್ಲಿ ಕರ್ನಾಟಕದಲ್ಲಿ ಮೊದಲು ಕಂಡುಬರುವ ಮೊಟ್ಟಮೊದಲನೆಯ ಜಯಪತ್ರ ಕ್ರಿ.ಶ. ಸುಮಾರು ೧೨೦೦ರ ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನವೆಂದು ಹಿಂದೆಯೇ ಉಲ್ಲೇಖಿಸಲಾಗಿದೆ. ಗುಲ್ಬರ್ಗಾ ಜಿಲ್ಲೆಯ ಅಳಂದದವನಾದ ಏಕಾಂತದ ರಾಮಯ್ಯ ಅಬ್ಬಲೂರಿಗೆ ಬರುತ್ತಾನೆ. ಅಬ್ಬಲೂರಿನ ಜೈನ ಸಂಕಗಾವುಂಡ ಹಾಗೂ ರಾಮಯ್ಯನ ನಡುವೆ ಧರ್ಮಶ್ರೇಷ್ಠತ್ವದ ಬಗ್ಗೆ ವಾಗ್ವಾದಗಳು ನಡೆದಾಗ, ಸಂಕಗಾವುಂಡ ರಾಮಯ್ಯನ ತಲೆಯನ್ನು ಪಣವಾಗಿ ಕೇಳುತ್ತಾನೆ. ರಾಮಯ್ಯ ತನ್ನ ತಲೆಯನ್ನು ಇರಿದುಕೊಂಡು ಏಳು ದಿನಗಳ ನಂತರ ಮತ್ತೆ ಬದುಕಿ ಬರುವುದಾಗಿ ಸವಾಲು ಒಡ್ಡಿ ಅದಕ್ಕೆ ಪಣವಾಗಿ ಜೈನರ ಜಿನಬಿಂಬಗಳನ್ನು ಒಡ್ಡುವಂತೆ ಕೇಳುತ್ತಾನೆ. ಏಳು ದಿನಗಳ ನಂತರ ಶಿರಪವಾಡ ಮೆರೆದು ಗೆದ್ದು ಬರುತ್ತಾನೆ. ಜೈನಧರ್ಮದ ಮೇಲಿನ ಗೆಲುವಿಗಾಗಿ ಬಿಜ್ಜಳ ಅವನನ್ನು ಕರೆದು 'ಜಯಪತ್ರ' ನೀಡಿ ಗೌರವಿಸಿ ಕಳುಹಿಸುತ್ತಾನೆ.

ಜಯಪತ್ರದ ಸ್ವರೂಪದಲ್ಲಿರುವ ಕ್ರಿ.ಶ. ೧೩೬೮ರ ಬುಕ್ಕರಾಯನ ಶ್ರವಣಬೆಳಗೊಳದ ಶಾಸನವೂ ಸಹ ಧರ್ಮ ಸಂಘರ್ಷಾತ್ಮಕ ಭಿತ್ತಿಯನ್ನೇ ಹೊಂದಿದೆ. ಆದರೆ ಇಲ್ಲಿ ಪರಸ್ಪರ ಮುಖಾಮುಖಿಯಾಗುವವರು ಜೈನರು ಮತ್ತು ವೈಷ್ಣವರು. ಬುದ್ಧಿವಂತನಾದ ಬುಕ್ಕರಾಯ ಯಾರಿಗೂ 'ಜಯಪತ್ರ' ದಯಪಾಲಿಸದೆ, ಸಬಲರ ಕೈಯಲ್ಲಿ ದುರ್ಬಲರ ಕೈಯನ್ನು ಇಟ್ಟು ರಾಜಿ ಮಾಡಿಸುತ್ತಾನೆ.

ಲಕ್ಷ್ಮೇಶ್ವರದ ಕ್ರಿ.ಶ. ೧೪೧೨ ಹಾಗೂ ಕ್ರಿ.ಶ. ೧೫೩೮ರ ಶಾಸನಗಳುಹಾಗೂ ಜಯಪತ್ರಗಳು ಸಹ ಧಾರ್ಮಿಕ ಸಂಘರ್ಷದ ಫಲಶೃತಿಗಳೇ ಆಗಿವೆ. ಎರಡೂ ಶಾಸನಗಳು ಶೈವ ಮತ್ತು ಜೈನರ ನಡುವಿನ ಸಂಘರ್ಷವನ್ನು ದಾಖಲಿಸುತ್ತವೆ. ಕ್ರಿ.ಶ. ೧೪೧೨ರ ಶಾಸನದ ವಿಷಯ ಭೂವಿವಾದ. ಶಂಖ ಬಸದಿಯ ಹೇಮದೇವಣಾಚಾರ್ಯನು ಸೋಮನಾಥ ದೇವಾಲಯದ ಸ್ಥಾನಾಚಾರ್ಯ ಶಿವರಾಮಯ್ಯ ಎಂಬುವವನು ಶಂಖಬಸ್ತಿಯ ಭೂಮಿಯಲ್ಲಿ ತಾನು ವಿರೋಧಿಸುತ್ತಿದ್ದರೂ ಬಲಪ್ರಯೋಗದಿಂದ ವ್ಯವಸಾಯ ಮಾಡುತ್ತಿರುತ್ತಾನೆ ಮತ್ತು ಈ ವಿಷಯವನ್ನು ಎಲ್ಲರೂ ಬಲ್ಲರು ಎಂದು ಮಹಾಪ್ರಧಾನ ನಾಗಣ್ಣ ದಂಡನಾಯಕನಲ್ಲಿ ಮನವಿ ಮಾಡುತ್ತಾರೆ. ಅರಮನೆಯ ಪುರೋಹಿತ ಸಂಗಮದೇವ ವಿದ್ವಾಂಸರನ್ನೆಲ್ಲ ಸೇರಿಸಿಕೊಂಡು ಎರಡೂ ತಂಡಗಳ ಶಾಸನಗಳನ್ನು ಓದಿ, ಪುಲಿಗೆರೆಯ ನಾಗಗೌಡ ಮತ್ತಿತ್ತರ ಗೌಡ ಪ್ರಜೆಗಳು ಹೇಳಿದರೆ ಅದಕ್ಕೆ ತಕ್ಕ ಹಾಗೆ ವಿವಾದ ಬಗೆಹರಿಸುತ್ತೇನೆಂದು ಹೇಳಿ, ಶಿವರಾಮಯ್ಯನ ಅಣ್ಣ ಗಂಗಣ್ಣಯ್ಯನನ್ನೂ ಹಾಗೂ ಶಂಖಬಸ್ತಿಯ ಹೇಮದೇವಣಾಚಾರ್ಯರನ್ನು 'ಆಣೆಬಾರದ ಓಲೆ' ಬರೆದುಕೊಡುವಂತೆ ಕೇಳುತ್ತಾರೆ. ಗಂಗಣ್ಣಯ್ಯ ಹಿಂದೆ ಸರಿಯುತ್ತಾನೆ. ರಾಜನ ಕಡೆಯಿಂದ ಹೇಮದೇವಣಾಚಾರ್ಯನಿಗೆ ಜಯಪತ್ರ ಲಭಿಸುತ್ತದೆ. ಇದಾದ ೧೨೫ ವರ್ಷಗಳ ತರುವಾಯ ಮತ್ತೆ ಈ ಎರಡು ಧರ್ಮಗಳ ನಡುವೆ ಧಾರ್ಮಿಕ ವಿವಾದವೊಂದು ಉದ್ಭವವಾಗುತ್ತದೆ.ಶಂಖಬಸ್ತಿಯ ಶಾಂತಿತೀರ್ಥಂಕರರ ಉತ್ಸವದಲ್ಲಿ ವೈದಿಕ ಧರ್ಮ ಲಾಂಛನಗಳಾದ, ಸೋಮೇಶ್ವರ ದೇವಾಲಯಕ್ಕೆ ಸಲ್ಲುವ ಅಷ್ಟದಿಕ್ಪಾಲಾದಿಗಳು, ಧ್ವಜ ಪತಾಕಾದಿಗಳನ್ನು ಬಳಸಿದ್ದಕ್ಕೆ ಸೋಮೇಶ್ವರ ದೇವಾಲಯದ ಕಾಳಹಸ್ತಿ ದೇವರು ಮತ್ತು ಶಿವರಾಮ ದೇವರು ತಗಾದೆ ತೆಗೆಯುತ್ತಾರೆ. ಜೈನರ ಸಂಕಣಾಚಾರ್ಯ, ಹೇಮಣಾಚಾರ್ಯರು ಅವುಗಳನ್ನು ಬಳಸಿದ್ದ ಬಗ್ಗೆ ತಪ್ಪು ಒಪ್ಪಿಕೊಂಡು, ಜಿನ ಸಮಯಕ್ಕೆ ಅಷ್ಟದಿಕ್ಪಾಲಾದಿಗಳು, ಧ್ವಜಪಾತಾಕಾದಿಗಳು ಸಲ್ಲುವುದಿಲ್ಲವೆಂದು, ತಾವು ಪ್ರಜ್ಞಾಹೀನತೆಯಿಂದ ಬಳಸಿದ್ದೇವೆಂದು ಹೇಳಿ ಜಯಪತ್ರ ಬರೆದುಕೊಡುತ್ತಾರೆ.

ಈ ಎಲ್ಲಾ ಜಯಪತ್ರಗಳಿಂದ, ಪ್ರಾರಂಭದ ಅವಧಿಯಲ್ಲಿ ರಚಿತವಾದ ಜಯರೇಖೆಗಳು ಧಾರ್ಮಿಕ ಸಂಘರ್ಷದ ಫಲಿತಗಳಾಗಿ ಮೂಡಿಬಂದಿರುವುದು ಸ್ಪಷ್ಟ. ನಂತರದ ಅವಧಿಯಲ್ಲಿ ಹುಟ್ಟಿಕೊಳ್ಳುವ ಜಯರೇಖೆಗಳು ಧಾರ್ಮಿಕ ಪರಿಧಿಯಲ್ಲಿದ್ದುಕೊಂಡೇ ಲೌಕಿಕ ಸ್ವರೂಪ ಪಡೆದುಕೊಳ್ಳುತ್ತವೆ (ಅವುಗಳ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ). ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ನೋಡಿದಾಗ ಜಯರೇಖೆಗಳಿಗೂ, ಧರ್ಮಗಳಿಗೂ ಇರುವ ಸಂಬಂಧವೇನು? ಜಯರೇಖೆಗಳ ಹುಟ್ಟಿಗೆ ಧರ್ಮಗಳು ಹೇಗೆ ಕಾರಣವಾಗಿವೆ ಮತ್ತು ಯಾವ ರೀತಿ ಪ್ರಚೋದನೆಗಳನ್ನು

ಒದಗಿಸಿವೆ? ಆರಂಭದ ಜಯರೇಖೆಗಳು ಧಾರ್ಮಿಕ ಸಂಘರ್ಷದ ಕೂಸುಗಳೇ? ಇಂತಹ ಸಂಘರ್ಷಗಳ ಹಿಂದೆ ಮನೆ ಮಾಡಿರುವ ಮನೋಧರ್ಮಗಳೇನು? ಚಾರಿತ್ರಿಕ ಸತ್ಯಾಂಶಗಳೇನು? ಮುಂತಾದ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಇದಕ್ಕೆ ಹಿನ್ನೆಲೆಯಾಗಿ ಕರ್ನಾಟಕದಲ್ಲಿನ ಧರ್ಮಗಳ ಏಳುಬೀಳುಗಳ ಬಗ್ಗೆಯೂ ಸ್ಥೂಲವಾಗಿ ಚರ್ಚಿಸುವುದು ಅಗತ್ಯವೆನಿಸುತ್ತದೆ.

**ಧಾರ್ಮಿಕ ಹಿನ್ನೆಲೆ**

ಕರ್ನಾಟಕದ ಚರಿತ್ರೆಯಲ್ಲಿ ಶೈವ ಮತ್ತು ವೈಷ್ಣವ ಧರ್ಮ ಸಂಬಂಧಿ ಕುರುಹುಗಳು ದೊರೆಯುವುದಕ್ಕೆ ಮೊದಲೇ ಕ್ರಿ.ಪೂ. ೩ನೆಯ ಶತಮಾನದ ವೇಳೆಗಾಗಲೇ ಜೈನಧರ್ಮ ಕರ್ನಾಟಕಕ್ಕೆ ಪಾದಾರ್ಪಣೆ ಮಾಡಿತ್ತು. ಆನಂತರ ಇಲ್ಲಿ ದೊರತ ಭದ್ರ ರಾಜಾಶ್ರಯವನ್ನನುಸರಿಸಿ "ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ"[೪] ಎಂಬ ಮಟ್ಟಿಗೆ ಕರ್ನಾಟಕದಲ್ಲಿ ಆಳವಾಗಿ ಬೇರೂರಿತು.

ಮೊದಲ ಸಹಸ್ರಮಾನದ ಅವಧಿಯಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ಜೊತೆಗೆ ಜಿನಧರ್ಮವೂ ಪ್ರಾಧಾನ್ಯತೆಯನ್ನೂ, ರಾಜಮಾನ್ಯತೆಯನ್ನೂ ಪಡೆಯುತ್ತಾ ಬೆಳೆಯಿತು. ಇದು ಪ್ರಾರಂಭದಿಂದಲೂ ಪ್ರಭುತ್ವಗಳ ಅಸ್ತಿತ್ವಕ್ಕೆ ಆರ್ಥಿಕ ಬೆಂಬಲ ನೀಡುತ್ತಲೇ, ಪ್ರಭುತ್ವಗಳ ಆಶ್ರಯದಲ್ಲಿ ಸಾಹಿತ್ಯಕವಾಗಿ ಹಾಗೂ ಸಾಂಸ್ಕೃತಿಕವಾಗಿ ತನ್ನ ಅನನ್ಯ ಛಾಪನ್ನು ಮೂಡಿಸಿ ತಾನು ಬೆಳೆದದ್ದಲ್ಲದೆ, ಆಶ್ರಯ ನೀಡಿದ ರಾಜಮನೆತನಗಳನ್ನು ಸಹ ಇತಿಹಾಸದಲ್ಲಿ ಚಿರಸ್ಥಾಯಿಯಾಗಿಸಿತು. ಕರ್ನಾಟಕದ ಪ್ರಾರಂಭಿಕ ಗ್ರಾಂಥಿಕ ಸಾಹಿತ್ಯ ಸೃಜನೆಯಾದದ್ದೇ ಜೈನರಿಂದ ಎಂಬುದು ಐತಿಹಾಸಿಕ ಸತ್ಯವೂ ಹೌದು. ಗಂಗ ಮತ್ತು ರಾಷ್ಟ್ರಕೂಟರಂತೂ ಜಿನಧರ್ಮಕ್ಕೆ ಅಪಾರ ಮನ್ನಣೆಯನ್ನು ನೀಡಿದ್ದರೆಂಬುದು ಶಾಸನಾಧಾರಗಳಿಂದ ವೇದ್ಯವಾಗುತ್ತದೆ.

ದ್ವಿತೀಯ ಸಹಸ್ರಮಾನದ ವಿಷಯ ಇದಕ್ಕೆ ವ್ಯತಿರಿಕ್ತವಾಗಿದೆ. ಹನ್ನೊಂದನೆಯ ಶತಮಾನಾನಂತರದ ಅವಧಿ ಕರ್ನಾಟಕದ ಎಲ್ಲ ಭೂಮಿಕೆಗಳಲ್ಲಿ ಅತೀವ ಸ್ವರೂಪದ ಸ್ಥಿತ್ಯಂತರಗಳಿಗೆ, ಪಲ್ಲಟಗಳಿಗೆ ಗುರಿಯಾದ ಕಾಲ. ವಿವಿಧ ಮತಪಂಥಗಳ ಉಗಮಕ್ಕೆ ಹಾಗೂ ಈಗಾಗಲೇ ಅಸ್ತಿತ್ವದಲ್ಲಿದ್ದ ಮತಪಂಥಗಳ ತೀವ್ರ ಪರಿವರ್ತನೆಗೆ ಸಾಕ್ಷಿಯಾಗಿ ನಿಂತ ಪರ್ವ ಕಾಲ. ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಹೆಣಗುತ್ತಿದ್ದ ಜೈನಧರ್ಮದ ಸ್ಥಿತಿ ಒಂದು ಕಡೆಯಾದರೆ, ಕರ್ನಾಟಕದಉತ್ತರ ಭಾಗದಲ್ಲಿ ಕಾಪಾಲಿಕ, ಕಾಳಾಮುಖ, ಪಾಶುಪತ, ವೀರಶೈವ ಮುಂತಾದ ಶೈವ ಶಾಖೆಗಳು ಹಾಗೂ ದಕ್ಷಿಣ ಕರ್ನಾಟಕದಲ್ಲಿ ಶ್ರೀವೈಷ್ಣವ ಮತ್ತು ವೈಷ್ಣವಪಂಥಗಳು ಜನಪ್ರಿಯತೆ ಪಡೆದುಕೊಳ್ಳುತ್ತಿದ್ದವು. ಇದರ ಜೊತೆಗೆ ಕರ್ನಾಟಕದಲ್ಲಿ ಬೇರೂರುತ್ತಿದ್ದ ಹಲವಾರು ಸ್ಥಳೀಯ ಮತಪಂಥಗಳು ಪರಸ್ಪರ ಘರ್ಷಣೆ

ವಾಗ್ವಾದಗಳಿಗೆ ಇಂಬುಗೊಡುತ್ತಿದ್ದವು. ಇವೆಲ್ಲದರ ಪರಿಣಾಮವಾಗಿ ಜೈನಧರ್ಮ ತನ್ನ ಜನಪ್ರಿಯತೆಯ ಬೇರುಗಳನ್ನು, ರಾಜಾಶ್ರಯವನ್ನು ಕಳೆದುಕೊಂಡು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಹೆಣಗಾಡತೊಡಗಿತು.

ಅದರ ಆರಂಭದ ಹೆಜ್ಜೆಗಳನ್ನು ನಾವು ಕ್ರಿ.ಶ. ೧೦೦೭ರ ಅತ್ತಿಮಬ್ಬೆಯ ಶಾಸನದಲ್ಲಿಯೇ[೫] ಗುರುತಿಸಬಹುದಾಗಿದೆ. ಅತ್ತಿಮಬ್ಬೆ ತಾನು ಹಿಂದೆ ಮಾಡಿಸಿದ ಸಾವಿರದಯ್ನೂರು ಬಸದಿಗಳಿಗೆ ಕಳಶಪ್ರಾಯವಾಗಿ ಲಕ್ಕುಂಡಿಯಲ್ಲಿ ಬಸದಿಯನ್ನು ನಿರ್ಮಿಸುತ್ತಾಳೆ. ಅದಕ್ಕೆ 'ಶ್ರೀದಾಶರಥಿ ವಿನಿರ್ಮಿತ ಮಹಾಗ್ರಾಮಂ ಶ್ರೀ ಲೊಕ್ಕಗುಣ್ಡಿಯೂರೆಡೆಯ ಪ್ರಮುಖ ಮಹಾಜನ ಸಾಸಿರ್ವ್ವರು' ಈ ಜಿನಾಲಯಕ್ಕೆ 'ಬ್ರಹ್ಮಜಿನಾಲಯ' ಎಂಬ ಹೆಸರನ್ನು ಮುದದಿಂದ ಇಡುತ್ತಾರೆ. ಅತ್ತಿಮಬ್ಬೆಯು ಅವರಿಂದಲೇ ತನ್ನ ಬಸದಿಗೆ ಪೂಜಾನಿಮಿತ್ತವಾಗಿ ಬೇಡಿ ಭೂದಾನ ಪಡೆದುಕೊಳ್ಳುತ್ತಾಳೆ. ಅತ್ತಿಮಬ್ಬೆ ಈಗಾಗಲೇ ಸಾವಿರದಯ್ನೂರು ಬಸದಿಗಳನ್ನು ನಿರ್ಮಿಸಿದ್ದರೂ, ಅವೆಲ್ಲವುಗಳಿಗೆ ಕಳಶಪ್ರಾಯವಾಗಿ ಲಕ್ಕುಂಡಿಯಲ್ಲಿ ನಿರ್ಮಿಸಿದ ಜಿನಾಲಯಕ್ಕೆ ತಾನೇ ಸ್ವತಂತ್ರವಾಗಿ ಹೆಸರಿಡಲು ಆಕೆಗೆ ಸಾಧ್ಯವಾಗಲಿಲ್ಲ. ಇದಕ್ಕಾಗಿ ಅತ್ತಿಮಬ್ಬೆ ಆ ಊರಿನ ಸಾವಿರ ಮಹಾಜನರನ್ನು ಎಂದರೆ ವೈದಿಕ ಬ್ರಾಹ್ಮಣರನ್ನು ಅವಲಂಬಿಸಬೇಕಾದಂತಹ ಸನ್ನಿವೇಶ ಆಕೆಗೆ ಎದುರಾಯಿತು. ಅಲ್ಲದೆ, ಶಾಸನದ ಕೊನೆಯಲ್ಲಿ ಲಕ್ಕುಂಡಿಯಲ್ಲಿ ನಡೆದಿರಬಹುದಾದ ಸಂಘರ್ಷದ ಸೂಕ್ಷ್ಮ ಎಳೆಗಳನ್ನು ಬಿಟ್ಟುಕೊಡಲಾಗಿದೆ 'ನಿರುಪಮಮತ್ತಿಯಬ್ಬೆಯ ಜಿನೇಂದ್ರಗೃಹಂ ಧರಣೀತಳಕ್ಕೆ ಬೀಳರೆ ಪೊಸತಾಗಿ . . . . ಸಿರಿಪಾಳನಿನೇ ಪರಿಪೂರ್ಣಮಾದುದೇ" ಎಂಬ ವಾಕ್ಯವು ಅತ್ತಿಮಬ್ಬೆ ಬಸದಿ ಕಟ್ಟಿಸಿ ಶಾಸನ ಹಾಕಿಸಿದ ಕೆಲವೇ ವರ್ಷಗಳಲ್ಲಿ ಶಾಸನವನ್ನು ಸುಟ್ಟು ಹಾಕಿದ್ದನ್ನು ಸೂಚಿಸುತ್ತದೆ. ಹಾಗಿದ್ದರೆ ಶಾಸನ ಏಕೆ ಹಾಳಾಯಿತು? ಅದಕ್ಕೆ ಯಾರು ಬೆಂಕಿ ಇಟ್ಟಿದ್ದರು? ಎಂಬ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಲೇ ಧರ್ಮಸಂಘರ್ಷದ ಬೀಜರೂಪಿ ಅಂಶಗಳನ್ನು ಈ ಶಾಸನದಲ್ಲಿ ಗುರುತಿಸಬಹುದಾಗಿದೆ (ಈಗಲೂ ಲಕ್ಕುಂಡಿಯ ಬ್ರಹ್ಮ ಜಿನಾಲಯದಲ್ಲಿ ಒಡೆದುಹೋದ ಶಾಸನವನ್ನು ಕಾಣಬಹುದು).ಅಗ್ರಹಾರ ಸಂಸ್ಕೃತಿಯ ಹಿನ್ನೆಲೆಯಲ್ಲಿ ರಚನೆಗೊಂಡ ಇಂಥ ಬ್ರಹ್ಮ ಜಿನಾಲಯಗಳ ರಚನೆ ಮುಂದೆ ಕಾಲಾಮುಖಯತಿ ಪರಂಪರೆಯ 'ಎಕ್ಕೋಟಿಜಿನಾಲಯ'ಗಳ ರಚನೆಗೆ ದಾರಿ ಮಾಡಿಕೊಡುತ್ತವೆ.

ಕ್ರಿ.ಶ. ಹನ್ನೊಂದನೆಯ ಶತಮಾನದಲ್ಲಿ ಪ್ರಬಲ ಧರ್ಮವಾಗಿ ಹೊರಹೊಮ್ಮಿದ ಕಾಳಾಮುಖ ಧರ್ಮ ಪ್ರಭುತ್ವದ ಮಾನ್ಯತೆಯನ್ನು ಪಡೆಯುವುದರೊಂದಿಗೆ ಅಪಾರ ಜನಪ್ರಿಯತೆಯನ್ನು ಪಡೆಯಿತು. ಹತ್ತನೆಯ ಶತಮಾನದ ವೇಳೆಗೆ ಕರ್ನಾಟಕದ ಚರಿತ್ರೆಯಲ್ಲಿ ಕಾಣಿಸಿಕೊಳ್ಳುವ ಈ ಮತ ಕಲ್ಯಾಣ ಚಾಲುಕ್ಯರ ಆಳ್ವಿಕೆಯಲ್ಲಿ ಭದ್ರವಾಗಿ ನೆಲೆಯೂರಿತ್ತು. ನಂತರ ಕಲಚೂರಿಗಳು, ಸೇವುಣರು, ಹೊಯ್ಸಳರಂತಹ ರಾಜವಂಶಗಳು ಮತ್ತು ರಾಜಪ್ರತಿನಿಧಿಗಳು ಕಾಳಾಮುಖ ಯತಿಗಳಿಗಾಗಿ ದೇವಾಲಯಗಳನ್ನು ನಿರ್ಮಿಸಿದರಲ್ಲದೆ, ಅವರ 'ಕಾಲನ್ನು ತೊಳೆದು (ಕಾಲಂಕರ್ಚಿ)' ಅಸಂಖ್ಯ ಪ್ರಮಾಣದಲ್ಲಿ ದಾನ ದತ್ತಿಗಳನ್ನು ನೀಡಿದರು. ಇವು ಕರ್ನಾಟಕದ ಅತ್ಯಂತ ಶ್ರೀಮಂತ ಸಂಸ್ಥೆಗಳಾಗಿ

ಬೆಳೆಯಲು ಕಾರಣವಾಯಿತು. ಕಾಳಾಮುಖ ಯತಿಗಳು ಬ್ರಹ್ಮಚರ್ಯ, ಯೋಗ, ಆಚಾರಗಳನ್ನು ಅನುಸರಿಸಿ ವಿದ್ಯೆ ಹಾಗೂ ಧರ್ಮಪ್ರಸಾರಕ್ಕೆ ಶ್ರಮಿಸಿದರು. 'ಜಾತಿ ಮತ ಬೇಧವೆಣಿಸದೆ ಎಲ್ಲರನ್ನೂ ಸಮಾನ ದೃಷ್ಟಿಯಿಂದ ಕಂಡು ಇವರು ಧರ್ಮೋಪದೇಶ ಮಾಡುತ್ತಿದ್ದರು (ಹೊಂಬುಜದ ಶಾಸನ).

ಎಸ್.ಎಸ್. ಹಿರೇಮಠರವರು "ಲಾಕುಳ, ಕಾಳಾಮುಖ, ಮೊದಲಾದ ಶೈವರು ಮಾಡುತ್ತಿದ್ದ ಕೆಲಸದ ಮಹತ್ವವೆಂದರೆ, ಪ್ರತಿಯೊಂದು ಜಾತಿಗೂ ಒಂದೊಂದು ಶೈವ ದೇಗುಲ, ಮಠ, ಸತ್ರ, ಶಾಲೆ ನಿರ್ಮಿಸಿ ಆ ಮತಗಳ ಸಮುದಾಯ ಏಳ್ಗೆ ಸಾಧಿಸಲು ಯತ್ನಿಸಿದ್ದು. ತೆಲ್ಲಿಗರೆಂಬ ಗಾಣಿಗ ಸಂಘಕ್ಕೆ ತೆಲ್ಲಿಗೇಶ್ವರ, 'ನಖರ'ರೆಂಬ ವ್ಯಾಪಾರಿ ಸಮೂಹಕ್ಕೆ ನಖರೇಶ್ವರ . . . ಹೀಗೆ ಸಾಧ್ಯವಿದ್ದ ಜಾತಿಗಳಿಗೆ, ವ್ಯಕ್ತಿಗಳಿಗೆ ಲಿಂಗ ಸ್ಥಾಪನೆ, ದೇಗುಲ ನಿರ್ಮಾಣ ಮಾಡುವುದರ ಜೊತೆಗೆ ಶಾಲೆಗಳನ್ನು ಸ್ಥಾಪಿಸಿ ಎಲ್ಲ ಜಾತಿ ಜನ ಓದಲು ಅವಕಾಶ ಕಲ್ಪಿಸಿದ್ದು[೬] ಎಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಅದಕ್ಕೂ ಮಿಗಿಲಾಗಿ ಕಾಳಾಮುಖ ಯತಿಗಳು ದೇವಾಲಯಗಳ ನಿರ್ಮಾಣದಲ್ಲಿ ಎಲ್ಲ ವಣಿಕ ಅಥವಾ ವೃತ್ತಿ ನಿರತ ಸಮೂಹಗಳನ್ನು ಒಳಗೊಳ್ಳುವಂತೆ ಮಾಡಿದರು. ದೇವಾಲಯಗಳನ್ನು ನಿರ್ಮಿಸಿ ಲಿಂಗ ಸ್ಥಾಪಿಸಿದ ವ್ಯಕ್ತಿ ದೇವರೇ ಆಗುತ್ತಾನೆಂಬ ಕರ್ಮಸಿದ್ಧಾಂತದ ಹಿನ್ನೆಲೆಯಲ್ಲಿ ಅಸಂಖ್ಯ ವ್ಯಾಪಾರಿಗಳು, ವ್ಯಾಪಾರಿ ಶ್ರೇಣಿಗಳು ಹೆಚ್ಚಿನ ಸಂಖ್ಯೆಯಲ್ಲಿ ದೇವಾಲಯಗಳನ್ನು ನಿರ್ಮಿಸಲು ಮುಂದಾದರು. ಹಿಂದೆ ಪ್ರಮುಖ ನಗರಗಳಿಗೆ ಸೀಮಿತವಾಗಿದ್ದ ದೇವಾಲಯಗಳ ನಿರ್ಮಾಣ ಕಾರ್ಯ ಹಳ್ಳಿಗಳಿಗೂ ವಿಸ್ತರಿಸಿಕ್ರಿ.ಶ. ಹನ್ನೊಂದರಿಂದ ಹದಿಮೂರನೆಯ ಶತಮಾನದ ಅವಧಿಯಲ್ಲಿ ಕರ್ನಾಟಕದಾದ್ಯಂತ ಅಸಂಖ್ಯ ಪ್ರಮಾಣದಲ್ಲಿ ಶೈವ ದೇವಾಲಯಗಳನ್ನು ವೃತ್ತಿ ಸಂಘಗಳು ಅಥವಾ ವ್ಯಾಪಾರಿ ಶ್ರೇಣಿಗಳು ತಮ್ಮ ಸಂಘ ಅಥವಾ ಶ್ರೇಣಿಗಳ ಹೆಸರಿನಲ್ಲಿ ನಿರ್ಮಿಸಿದ್ದವು. ಇದಲ್ಲದೆ ವ್ಯಕ್ತಿಗತ ನೆಲೆಯಲ್ಲಿಯೂ ದೇವಾಲಯಗಳ ನಿರ್ಮಾಣವಾಗಿ, ದೇವಾಲಯಗಳ ನಿರ್ಮಾಣಕ್ಕೆ ಕಾರಣರಾದ ವ್ಯಕ್ತಿಗಳ ಹೆಸರೇ ದೇವಾಲಯದ ಹೆಸರೂ ಆಗಿರುತ್ತಿತ್ತು. ಇಂಥ ದೇವಾಲಯಗಳನ್ನು ನಿರ್ಮಿಸಿ ಅವುಗಳ ನಿರ್ವಹಣೆಯ ಹೊಣೆಗಾರಿಕೆಯನ್ನು ಕಾಳಾಮುಖ ಯತಿಗಳಿಗೆ ವಹಿಸಿ ಅವರ 'ಕಾಲಂಕರ್ಚಿ' ಅವುಗಳ ನಿರ್ವಹಣೆಗೆ ದಾನಗಳನ್ನು ಸಹ ನೀಡಲಾರಂಭಿಸಿದರು.

ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ವೀರಶೈವಧರ್ಮದ 'ಸ್ಥಾವರ ಲಿಂಗ' ಕಲ್ಪನೆ ತತ್ಕಾಲೀನ ಸಮಾಜದ ಮೇಲೆ ಸಮುದಾಯಗಳ ಮೇಲೆ ತಕ್ಷಣದ ಪರಿಣಾಮ ಬೀರಲಿಲ್ಲವೆಂದು ತೋರುತ್ತದೆ. ಏಕೆಂದರೆ ದೇವಾಲಯಗಳ ನಿರ್ಮಾಣ ಕಾರ್ಯ ಪರಾಕಾಷ್ಠೆಗೇರಿದ್ದು ವೀರಶೈವಧರ್ಮ ಅಥವಾ ವಚನ ಚಳುವಳಿ ತನ್ನ ಉತ್ತುಂಗ ಸ್ಥಾಯಿಯಲ್ಲಿದ್ದ ಹನ್ನೆರಡನೆಯ ಶತಮಾನ ಅಥವಾ ಹದಿಮೂರನೆಯ ಶತಮಾನದ ಅವಧಿಯಲ್ಲಿಯೇ ಎಂಬುದು ಗಮನಾರ್ಹ ವಿಷಯ.

ಕರ್ನಾಟಕದ ದಕ್ಷಿಣ ಭಾಗವೂಇದಕ್ಕೆ ಹೊರತಾಗಿರಲಿಲ್ಲ. ಚೋಳ ರಾಜ್ಯದಿಂದ ಹೊಯ್ಸಳ ರಾಜ್ಯಕ್ಕೆ ವಲಸೆ ಬಂದ ರಾಮಾನುಜಾಚಾರ್ಯರು, ಹೊಯ್ಸಳ ಸಾಮ್ರಾಜ್ಯದಲ್ಲಿ ವೈಷ್ಣವ ಧರ್ಮ ಪ್ರಸರಣೆಗೆ ಕಾರಣರಾದರು. ಅದಕ್ಕೆ ಪೂರಕವಾಗಿ ಮೊದಲಿಗೆ ಹೊಯ್ಸಳರ ವಿಷ್ಣುವರ್ಧನ ಆ ಧರ್ಮದ ಪ್ರಭಾವಕ್ಕೆ ಒಳಗಾಗುವಂತೆ ಮಾಡಿದರು. ಇದರಿಂದ ವಿಷ್ಣುವರ್ಧನನ ಆಳ್ವಿಕೆಯಡಿಯಲ್ಲಿನ ಆತನ ಪ್ರಜಾ ಸಮೂಹವೂ ವೈಷ್ಣವ ಧರ್ಮವನ್ನು ಅಂಗೀಕರಿಸಲು ಕಾರಣವಾಯಿತು. ವೈಷ್ಣವ ಧರ್ಮ ತನ್ನ ಪ್ರಚಾರದ ಪ್ರಕ್ರಿಯೆಯಾಗಿ ಕೈಗೊಂಡ ಮಹತ್ವದ ಕಾರ್ಯವೆಂದರೆ, ಸಮಾಜದ ಮುಖ್ಯವಾಹಿನಿಯ ಜನಸಮುದಾಯವನ್ನಲ್ಲದೆ, ಕಟ್ಟಕಡೆಯ ವ್ಯಕ್ತಿಗಳನ್ನೂ ಸಹ ಧಾರ್ಮಿಕ ಪ್ರಕ್ರಿಯೆಯಲ್ಲಿ ಬೇರೆ ಬೇರೆ ರೂಪದಲ್ಲಿ ತೊಡಗುವಂತೆ ಮಾಡಿದುದು. "ಶ್ರೀ ರಾಮಾನುಜಾಚಾರ್ಯರು ಮೇಲುಕೋಟೆಯಲ್ಲಿದ್ದಾಗ ಪಂಚಮ ಅಥವಾ ಪರೈಯರೆಂದು ಕರೆಯಲಾದ ಕೀಳ್ಜಾತಿಯ ಹಿಂದುಗಳಿಗೆ ಪರಿಮಿತವಾಗಿ ದೇವಾಲಯ ಪ್ರವೇಶದ ಹಕ್ಕು ನೀಡಿದರು. ಅಲ್ಲಿನ ದೇವಾಲಯ ಸ್ಥಾಪನೆಯಂತಹ ಗುರುತರ ಕಾರ್ಯದಲ್ಲಿ ಈ ಜನ ಶ್ರೀರಾಮಾನುಜಾಚಾರ್ಯರಿಗೆ ವಿಶೇಷ ನೆರವನ್ನು ನೀಡಿದ್ದರು. ಆಚಾರ್ಯರು ಇವರಿಗೆ 'ತಿರುಕ್ಕುಲತ್ತಾರ್' ಎಂಬ ಹೆಸರನ್ನು ನೀಡಿದರು. ಈ ಮೂಲಕ ಶ್ರೀ ರಾಮಾನುಜಾಚಾರ್ಯರು ಈ ಜನರಿಗೆ ಧಾರ್ಮಿಕ ಉಪದೇಶ ಪಡೆಯುವ ಮತ್ತು ಶ್ರೀವೈಷ್ಣವರಿಗೆ ವಿಶೇಷವಾದ ಪಂಚ ಸಂಸ್ಕಾರದಂತಹ ಕೆಲವು ಕರ್ಮಗಳನ್ನು ಮಾಡುವ ಹಕ್ಕು ಒದಗಿಸಿದರು".[೭] ಜನಸಾಮಾನ್ಯರಿಗೂ ಶ್ರೀವೈಷ್ಣವ ಮಂತ್ರದೀಕ್ಷೆಯನ್ನು ನೀಡಿ ಎಲ್ಲರೂ ಶ್ರೀವೈಷ್ಣವ ಪಂಥವನ್ನು ಅನುಸರಿಸುವಂತೆ ಮಾಡಿದರು. ಅಷ್ಟೇ ಅಲ್ಲ "ಬೀಬಿ ನಾಚಿಯಾರಮ್ಮ ಅಥವಾ ತುಲಕ ನಾಚಿಯಾರಮ್ಮನ ಸೃಷ್ಟಿಯ ಮೂಲಕ ಹಿಂದೂ ದೇವಸ್ಥಾನಗಳಲ್ಲಿ ಮುಸ್ಲಿಂ ದೇವತೆಯಿಟ್ಟಿದ್ದು, ಅದಕ್ಕೆ ಶ್ರೇಷ್ಠ ಸ್ಥಾನ ಕಲ್ಪಿಸಿದ್ದು ವಿಶ್ವಕ್ಕೆ ರಾಮಾನುಜ ಪರಂಪರೆಯ ಅತಿದೊಡ್ಡ ಕೊಡುಗೆಯಾಗಿದೆ".[೮] ಇಲ್ಲಿಯವರೆಗೆ ಜೈನಧರ್ಮ ಪ್ರಬಲ ಧರ್ಮವಾಗಿದ್ದು ಅದಕ್ಕೆ ಬೇರೆ ಪರ್ಯಾಯಗಳೇ ಇಲ್ಲದ್ದರಿಂದ, ಅನಿವಾರ್ಯವಾಗಿ ಜೈನಧರ್ಮವನ್ನು ಆಶ್ರಯಿಸಿದ್ದ ಸಮಾಜದ ತಳಸಮುದಾಯಗಳು ಮತ್ತು ಹದಿನೆಂಟು ಕುಲಗಳಲ್ಲಿ ಬಹಳಷ್ಟು ಕುಲಗಳು ಶ್ರೀವೈಷ್ಣವ ಧರ್ಮದೊಂದಿಗೆ ಗುರುತಿಸಿಕೊಳ್ಳಲಾರಂಭಿಸಿದರು. ರಾಮಾನುಜಾಚಾರ್ಯರು ಆ ಹದಿನೆಂಟು ಕುಲಗಳಿಗೂ, ಅವರು ಮಾಡಬೇಕಾದ ಕಸುಬುಗಳನ್ನು ಹಂಚಿದರೆಂಬ ಐತಿಹ್ಯವಿದೆ. ಈ ಪಂಥ ನಮ್ಯತಾಗುಣ ಹೊಂದಿದ್ದರಿಂದ ರಾಜ ಪರಿವಾರದೊಂದಿಗೆ ಕೆಳವರ್ಗದ ಶೂದ್ರ ಸಮುದಾಯಗಳು ಇದರೆಡೆ ಆಕರ್ಷಿತರಾದರು. ಹೊಯ್ಸಳರ ಅವಧಿಯಲ್ಲಿ ಈ ಪಂಥ ಕರ್ನಾಟಕದ ದಕ್ಷಿಣ ಭಾಗದಲ್ಲಿ ಬಲವಾಗಿಯೇ ಬೇರೂರಿತು.

ಈ ಅವಧಿಯಲ್ಲಿ ಈ ಪ್ರದೇಶದಲ್ಲಿ ನಿರ್ಮಾಣವಾದ ದೇವಾಲಯಗಳೂ ಸಹ ಇದೇ ಅಂಶವನ್ನು ಸಾಬೀತುಪಡಿಸುತ್ತವೆ. "ಕ್ರಿ.ಶ. ೧೧೦೦-೫೦ರ ಅವಧಿಯ ಹೊಯ್ಸಳರ ಉಪಲಬ್ಧ ಶಾಸನಗಳನ್ನೆಲ್ಲ ಈ ದೃಷ್ಟಿಯಿಂದ ಅಭ್ಯಾಸ ಮಾಡಿ ನೋಡಿದಾಗ, ಆಳುವ ಅರಸನ ಅಥವಾ ಅವನ ಅತ್ಯಂತ ನಿಕಟ ಬಂಧುಗಳ ಮತ್ತು ಅಧಿಕಾರಿಗಳ, ವೈಯಕ್ತಿಕ ಆಸಕ್ತಿ ಮತ್ತು ಪ್ರೋತ್ಸಾಹವಿಲ್ಲದೆ

ಶ್ರೀವೈಷ್ಣವ ಧಾರ್ಮಿಕ ಘಟನೆಗಳೇ ಈ ರಾಜ್ಯದಲ್ಲಿ ಸಂಭವಿಸಿಲ್ಲವೆನ್ನುವಂತೆ ನಮಗೆ ಕಂಡು ಬರುವುದು. ಅಂದರೆ ವಲಸೆ ಬಂದ ವೈಷ್ಣವರಿಗೂ, ಹೊಸದಾಗಿ ಈ ಮತ ಸ್ವೀಕರಿಸಿದವರಿಗೂ ಸಾಮಾಜಿಕ, ಆರ್ಥಿಕ ಸೌಲಭ್ಯ ನಿರ್ಮಿಸಲು ಅನೇಕ ಅಗ್ರಹಾರಗಳನ್ನು ಈ ಕಾಲದಲ್ಲಿ ಸ್ಥಾಪಿಸಿ, ಧಾರ್ಮಿಕ ಕಾರ್ಯಕ್ಕಾಗಿ ದತ್ತಿ ದಾನಗಳನ್ನು ಕೊಡಲಾಯಿತು. .. . . ರಾಜ ಭಂಡಾರದಿಂದ ಧನ ವಿನಿಯೋಗಿಸಿ ಭವ್ಯ ವಿಷ್ಣು ಮಂದಿರಗಳನ್ನು ನಿರ್ಮಿಸಲಾಯಿತು.[೯]

ಹೊಯ್ಸಳರ ಕಾಲದಲ್ಲಿ ಅಧಿಕಾರಿ ವರ್ಗ ಮತ್ತು ರಾಜ ಪರಿವಾರವು ಜೈನಧರ್ಮಕ್ಕೆ ಸಾಕಷ್ಟು ಪ್ರೋತ್ಸಾಹವನ್ನು, ಬೆಂಬಲವನ್ನು ಮುಂದುವರೆಸಿಕೊಂಡು ಬಂದಿತು. ಈ ಅವಧಿಯಲ್ಲಿ ಸ್ವತಃ ರಾಜರು ಜಿನಾಲಯಗಳನ್ನು ನಿರ್ಮಿಸಿದ ನಿದರ್ಶನಗಳು ವಿರಳವೆನಿಸಿದರೂ, ರಾಜ ಪರಿವಾರದ ಸದಸ್ಯರು, ಅಧಿಕಾರಿ, ಮಂತ್ರಿವರ್ಗ ನಿರ್ಮಿಸಿದ ಬಸದಿಗಳಿಗೆ ರಾಜರು ಉದಾರವಾಗಿ ದತ್ತಿಗಳನ್ನು ನೀಡುತ್ತಾ ಬಂದರು. ಹೊಯ್ಸಳರ ಅವನತಿಯ ನಂತರ ಜೈನಧರ್ಮ ಅಭದ್ರ ಸ್ಥಿತಿಯನ್ನೆದುರಿಸಬೇಕಾಯಿತು. ಹೊಯ್ಸಳರ ನಂತರ ಅಸ್ತಿತ್ವಕ್ಕೆ ಬಂದ ವಿಜಯನಗರ ಸಾಮ್ರಾಜ್ಯದ ಪ್ರಧಾನ ಉದ್ದೇಶ ಮತ್ತು ಆಶಯವೇ 'ವೈದಿಕ ಧರ್ಮದ ಪುನರುದ್ಧರಣ'ವಾಗಿತ್ತು. ಅಂಥ ಸಂದರ್ಭದಲ್ಲಿ ಜೈನಧರ್ಮ ರಾಜಾಶ್ರಯವನ್ನು ನಿರೀಕ್ಷಿಸುವುದೇ ಅಸಂಭವವಾಗಿತ್ತು. ಪ್ರಬಲವಾದ ಶೈವ, ವೈಷ್ಣವ ಧರ್ಮಗಳು ತಮಗೆದುರಾಗಿದ್ದ ಜೈನಧರ್ಮವನ್ನು ಬಗ್ಗುಬಡಿಯಲು ಪ್ರಯತ್ನಿಸುತ್ತಲೇ ಇದ್ದವು. ಅದರ ಸ್ಪಷ್ಟ ಸುಳಿವು ನಮಗೆ ಕಲ್ಯ, ಶ್ರವಣಬೆಳಗೊಳ ಹಾಗೂ ಲಕ್ಷ್ಮೇಶ್ವರ ಶಾಸನಗಳಲ್ಲಿ ದೊರೆಯುತ್ತದೆ.

ವಿಜಯನಗರ ಸಾಮ್ರಾಜ್ಯವು ಅಸ್ತಿತ್ವಕ್ಕೆ ಬಂದ ಸುಮಾರು ೩೦ ವರ್ಷಗಳಲ್ಲಿಯೇ ಅದು ಗಂಭೀರವಾದ ಧಾರ್ಮಿಕ ಬಿಕ್ಕಟ್ಟೊಂದನ್ನು ಎದುರಿಸುವಂತಾಯಿತು. ಜೈನರು ದಕ್ಷಿಣ ಕರ್ನಾಟಕದಲ್ಲಿ ಪ್ರಬಲ ಶ್ರೀವೈಷ್ಣವರ ನೆರಳಿನಲ್ಲಿ ಬದುಕುತ್ತಾ ತಾವು ಅನುಭವಿಸುತ್ತಿದ್ದ ಅಭದ್ರತಾ ಭಾವನೆಯನ್ನು ಕ್ರಿ.ಶ. ೧೩೬೮ರ ಶ್ರವಣಬೆಳಗೊಳದ ಶಾಸನ ಸ್ಪಷ್ಟವಾಗಿ ತಿಳಿಸುತ್ತದೆ. ಶ್ರವಣಬೆಳಗೊಳದ ಶಾಸನದಲ್ಲಿ 'ಜೈನರಿಗೂ, ಭಕ್ತರಿಗೂ ಸಂವಾಜವಾದಲ್ಲಿ . . . ಆ ಬುಕ್ಕರಾಯನಿಗೆ ಭಕ್ತರು ಮಾಡುವ ಅನ್ಯಾಯಂಗಳನೂ ಬಿಂನಹಂ ಮಾಡಲಾಗಿ' ಬುಕ್ಕರಾಯ ವೈಷ್ಣವದರ್ಶನಕ್ಕೆ ಮತ್ತು ಜೈನದರ್ಶನಕ್ಕೆ ಬೇಧವಿಲ್ಲವೆಂದು ವೈಷ್ಣವರ ಕೈಯಲ್ಲಿ ಜೈನರ ಕೈಯನ್ನು ಇಡುತ್ತಾನೆ[೧೦]. ಆದರೆ ಇದಕ್ಕೆ ಆರು ವಾರಗಳ ಮೊದಲು ಹಾಕಿಸಲ್ಪಟ್ಟ ಶ್ರವಣಬೆಳಗೊಳದ ಶಾಸನದ ಕಲ್ಯ ಆವೃತ್ತಿಯ ಶಾಸನದಲ್ಲಿ ಸ್ಪಷ್ಟವಾಗಿ 'ಭಕ್ತರು ಅನ್ಯಾಯದಲಿ ಕೊಲ್ಲುತ್ತಿರಲು' ಎಂದು ಹೇಳುವ ಮೂಲಕ ಜೈನರ ಮೇಲಾಗುತ್ತಿದ್ದ ಭೌತಿಕ ಆಕ್ರಮಣಗಳನ್ನು, ಹಲ್ಲೆಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ[೧೧]. ಕಲ್ಯದ ಐತಿಹ್ಯಗಳ ಪ್ರಕಾರ 'ಕಲಾವತಿಯು ಬಹುದೊಡ್ಡ ನಗರವಾಗಿತ್ತೆಂದೂ, ಒಬ್ಬ ಕುಂಬಳಕಾಯಜ್ಜಿಯು ಸಂತೆಯಲ್ಲಿ ಮಾರುತ್ತಿದ್ದ ಕುಂಬಳಕಾಯಿಗೆ ಸಂಬಂಧಿಸಿದಂತೆ ಜೈನರಿಗೂ ಇತರರಿಗೂ ಜಗಳವಾಗಿ ನಗರ ಹಾಳಾಗಿ ಹೋಯಿತು. (ಕುಂಬಳಕಾಯಜ್ಜಿ ಬಹುಶಃ ಕೂಷ್ಮಾಂಡಿನಿ ಯಕ್ಷಿ) ವಿಜಯನಗರ ಕಾಲದಲ್ಲಿ ಮತ್ತು ಮುಂದೆ ನಡೆದ

ಜೈನ, ವೈಷ್ಣವ ಸಂಘರ್ಷಗಳು ಮೇಲಿನಂತೆ ಜಾನಪದ ಕತೆಯಾಗಿ ಪರಿವರ್ತನೆ ಹೊಂದಿವೆಯೆಂಬಲ್ಲಿ ಅನುಮಾನವಿಲ್ಲ[೧೨]. ಕಲ್ಯದಲ್ಲಿ ಐದು ಬಸದಿಗಳಿದದು ಅವೆಲ್ಲವೂ ಈಗ ನಾಶವಾಗಿವೆ. ಸ್ಥಳೀಯರು ಆ ಸ್ಥಳವನ್ನು ಬಸ್ತಿ ಗುಂಡಿ ಎಂದು ಈಗಲೂ ಗುರುತಿಸುತ್ತಾರೆ.

ಶ್ರವಣಬೆಳಗೊಳದ ಶಾಸನದಲ್ಲಿ ಬುಕ್ಕರಾಯ ಒಬ್ಬರ ಕೈಯನ್ನು ಮತ್ತೊಬ್ಬರ ಕೈಯಲ್ಲಿರಿಸಿ 'ಜೈನದರ್ಶನಕ್ಕೆ ಪೂರ್ವಮರಿಯಾದೆಯಲು ಪಂಚ ಮಹಾವಾದ್ಯಂಗಳೂ ಕಳಶವೂ ಸಲುವುದೆಂದು' ಹೇಳಿರುವುದನ್ನು ಗಮನಿಸಿದಾಗ, ಇಲ್ಲಿಯೂ ಸಹ ಲಕ್ಷ್ಮೇಶ್ವರದ ಶಂಖಬಸ್ತಿಯಲ್ಲಿ ಉಂಟಾದ ವಿವಾದವೇ ಮರುಕಳಿಸಿದಂತೆ ತೋರುತ್ತದೆ. ಲಕ್ಷ್ಮೇಶ್ವರದಲ್ಲಿ ಜೈನ ಸಂಖಣಾಚಾರ್ಯ ಮತ್ತು ಹೇಮದೇವಣಾಚಾರ್ಯ "ನಾವು ನಿಮ್ಮ ಸೋಮೇಶ್ವರ ದೇವರ ಉತ್ಸವಾದಿಗಳಿಗೆ ಸಲ್ಲುವ ಅಷ್ಟದಿಕ್ಪಾಲಾದಿಗಳನು ಧ್ವಜಪತಾಕಾದಿಗಳನು ನಮ್ಮ ಶಂಖಬಸ್ತಿಯ ಶಾಂತಿ ತೀರ್ಥಂಕರರೋತ್ಸಾಹ ಸಮಯದಲ್ಲಿ ಪ್ರಜ್ಞಾಹೀನತೆಯಿಂದ ಮೆರೆಸಿದ ಸಂಬಂಧ ನೀವು ಮಾಡಿದ ಶಿಕ್ಷೆಗೊಳಗಾಗಿ ಕಾಲತ್ರಯದೊಳುಂ . . . . . . ನಮ್ಮ ಜಿನಸಮಯಕ್ಕೆ ಅಷ್ಟದಿಕ್ಪಾಲಾದಿಗಳು ಧ್ವಜಪತಾಕಾದಿಗಳು ಸಲ್ಲುವುದಿಲ್ಲವೆಂದು" ಜಯಪತ್ರಿಕೆ ಬರೆದುಕೊಡುತ್ತಾರೆ. ಅಂದರೆ ಎರಡೂ ಶಾಸನಗಳೂ ಹುಟ್ಟಿಕೊಂಡ ಸಂದರ್ಭಗಳಿಗೆ ಹಿನ್ನೆಲೆ ಒಂದೇ ಆಗಿದ್ದು, ಅದು ಬದಲಾದ ಸಂದರ್ಭದಲ್ಲಿ ಜೈನಧರ್ಮ ವೈದಿಕ ಧರ್ಮದ ಧಾರ್ಮಿಕ ಸಂಕೇತಗಳನ್ನು ತನ್ನ ಪೂಜಾ ವಿಧಾನದಲ್ಲಿ ಅಳವಡಿಸಿಕೊಂಡುದನ್ನು ಸೂಚಿಸುತ್ತದೆ.

ಹೀಗೆ ಉತ್ತರದಲ್ಲಿ ಕಾಳಾಮುಖ ಧರ್ಮ ಮತ್ತು ದಕ್ಷಿಣದಲ್ಲಿ ವೈಷ್ಣವ ಧರ್ಮಗಳ ಪ್ರಭಾವಲಯ ವಿಸ್ತಾರವಾಗುತ್ತಿದ್ದಂತೆ ಈವರೆಗೆ ಸಾಂಸ್ಥಿಕ ಧರ್ಮವಾಗಿ ಪ್ರಬಲವಾಗಿ ಬೆಳೆದುಬಂದಿದ್ದ ಜೈನಧರ್ಮ ಆಶ್ರಯವನ್ನರಸುತ್ತಾ ಬೇರೆ ಕಡೆ ಸ್ಥಳಾಂತರವಾಗುವುದು ಅನಿವಾರ್ಯವಾಯಿತು. ಶ್ರವಣಬೆಳಗೊಳ, ಕೊಪ್ಪಳ, ಮಾನ್ಯಖೇಟ, ಪುಲಿಗೆರೆ, ಮುಂತಾದ ಕೇಂದ್ರಗಳನ್ನು ತೊರೆದು ಕರಾವಳಿ ತೀರದ ನಗರಗಳತ್ತ ವಲಸೆಹೋಯಿತು. ಇದಕ್ಕೆ ಪ್ರಬಲ ಕಾರಣವೆಂದರೆ ಮೊದಲನೆಯದಾಗಿ ಕರಾವಳಿ ಪ್ರದೇಶದಲ್ಲಿ ವಿಜಯನಗರದ ಅವಧಿಯಲ್ಲಿ ತಲೆಎತ್ತುತ್ತಿದ್ದ ವ್ಯಾಪಾರ ವೃತ್ತಿಯನ್ನಾಧರಿಸಿದ ಸಾಮಂತ ವರ್ಗದ ಬೆಳವಣಿಗೆ. ಎರಡನೆಯದಾಗಿ, ತಮ್ಮ ವೃತ್ತಿಯ ಏಕಸಾಮ್ಯತೆಯನ್ನು ಕಳೆದುಕೊಂಡಿದ್ದ ಜೈನಧರ್ಮ, ಅದರ ಪುನರ್ ಸ್ಥಾಪನೆಗಾಗಿ, ಕಡಲ ತೀರದ ನಾಡುಗಳಲ್ಲಿ ಹದಿನೈದನೆಯ ಶತಮಾನಾನಂತರ ಆಗ ತಾನೆ ಹೆಚ್ಚಾಗುತ್ತಿದ್ದ ವ್ಯಾಪಾರ ವ್ಯವಹಾರದೆಡೆ ಆಕರ್ಷಿತರಾದದ್ದು. ಆದರೂ ಅವರು ತಮ್ಮ ಮೂಲರೂಪದ ಭದ್ರತೆಯನ್ನು ಪಡೆಯಲು ಸಾಧ್ಯವಾಗಲಿಲ್ಲ.

ಮೈಸೂರು ಅರಸರ ಅವಧಿಯಲ್ಲಿ ಶ್ರವಣಬೆಳಗೊಳದಲ್ಲೇ ಜೈನಧರ್ಮವು ಭಯಾತಂಕಗಳಿಂದ ಇದ್ದುದನ್ನು ಕ್ರಿ.ಶ. ೧೬೮೦ರ ಚಿದಾನಂದ ಕವಿಯ 'ಮುನಿವಂಶಾಭ್ಯುದಯ' ಕೃತಿ ವಿವರಿಸುತ್ತದೆ. ತ್ರೈವಿದ್ಯಾ ಚಕ್ರೇಶ್ವರ ಚಾರುಕೀರ್ತಿಪಂಡಿತ ಯೋಗೀಂದ್ರರು ತೆಲುಗುದೇಶದ ಜಗದೇವನೆಂಬ ಅರಸನು

ನೀಡುತ್ತಿದ್ದ ತೊಂದರೆಗಳನ್ನು ಸಹಿಸಲಾಗದೆ ಭಲ್ಲಾತಕೀಪುರಕ್ಕೆ (ಗೇರುಸೊಪ್ಪೆ) ಹೋಗಿ ಅಲ್ಲಿ ಭೈರವರಾಜನ ಆಶ್ರಯದಲ್ಲಿದ್ದನು. ಇವರ ನಂತರದ ವಿಮಲಾಚಾರ್ಯ ಚಾರುಕೀರ್ತಿ ಪಂಡಿತರೂ ಸ್ಥಳೀಯ ಆಂತರಿಕ ಕಲಹದಿಂದ ತಮಗೆ ಮತ್ತು ಕ್ಷೇತ್ರಕ್ಕೆ ಒದಗಿದ ಅಪಾಯದಿಂದ ಪಾರಾಗಲು ಮೈಸೂರಿನ ಚಿಕ್ಕದೇವರಾಯನ ಆಶ್ರಯದಲ್ಲಿ ಸೋಮವಾರಪೇಟೆ ಪಟ್ಟಣದಲ್ಲಿ ನೆಲೆ ನಿಂತಿದ್ದರು. ಅದೇ ರೀತಿ ತನಗೂ ಚಾರುಕೀರ್ತಿಪಟ್ಟ ದೊರಕಿದ ಸಂದರ್ಭದಲ್ಲೂ ಅಹಿತರು ತನ್ನನ್ನು ಕಾಡಿದ ಸಂಗತಿಯನ್ನು ಪ್ರಸ್ತಾಪಿಸಿದ್ದಾನೆ.[೧೩] ಹದಿನೇಳನೆಯ ಶತಮಾನದ ವೇಳೆಗೆ ಶ್ರವಣಬೆಳಗೊಳದ ಮಠವೂ ಸಹ ಆರ್ಥಿಕ ಬೆಂಬಲವಿಲ್ಲದೆ, ತನ್ನ ಮಠದ ಆಸ್ತಿಗಳನ್ನು ಒತ್ತೆ ಇಡುವಂತಹ ಸ್ಥಿತಿಗೆ ತಲುಪಿತ್ತು. ಆಗ ಆರನೆಯ ಚಾಮರಾಜ ಒಡೆಯರು ಅವುಗಳ ಒತ್ತೆಯನ್ನು ಬಿಡಿಸಲು ಸಂಬಂಧಪಟ್ಟ ವ್ಯಕ್ತಿಗಳನ್ನು ಕರೆಯಿಸಿ ಅವರೊಂದಿಗೆ ಮಾತನಾಡಿ ಒತ್ತೆಯನ್ನು ಬಿಡಿಸಿ, ಮಠಕ್ಕೆ ಆರ್ಥಿಕ ಭದ್ರತೆಯನ್ನು ಒದಗಿಸಿದರು.[೧೪]

ಶರಣ ಚಳವಳಿ, ಶ್ರೀವೈಷ್ಣವ ಚಳುವಳಿಗಳು ಮತ್ತು ಆ ಚಳುವಳಿಗಳ ಪ್ರಭಾವ ಪ್ರೇರಣೆಗಳಿಂದಾಗಿ ಕರ್ನಾಟಕದಾದ್ಯಂತ ಅಲ್ಲಲ್ಲಿ ಬುಡಕಟ್ಟುಗಳಲ್ಲಿ ಹುಟ್ಟಿಕೊಳ್ಳುವ ಪ್ರತಿ ಚಳುವಳಿಗಳೂ ಸಹ ಧಾರ್ಮಿಕ ಸಂಘರ್ಷದ ಎಳೆಗಳನ್ನು ಬಿಟ್ಟುಕೊಡುತ್ತವೆ. ಜನಪದ ಮಹಾಕಾವ್ಯಗಳಲ್ಲೊಂದಾದ ಮಹದೇಶ್ವರ ಕಾವ್ಯದ ಪ್ರಕಾರ ಮಾದೇಶ್ವರ ವಚನ ಚಳವಳಿಯ ಸಾಂಸ್ಥೀಕರಣ ಮತ್ತು ವೈದೀಕರಣದಿಂದ ಬೇಸತ್ತು ದಕ್ಷಿಣಕ್ಕೆ ಬಂದು ಪ್ರತಿ ಚಳುವಳಿಯನ್ನು ಹುಟ್ಟು ಹಾಕುತ್ತಾನೆ. ಅವನು ಭೂಲೋಕದಲ್ಲಿ ಅವತರಿಸಿದ್ದೇ ಶ್ರವಣ ದೊರೆಯ ಸಂಹಾರಕ್ಕಾಗಿ, ಎಂದರೆ ಜೈನಧರ್ಮವನ್ನು ಕುಗ್ಗಿಸುವುದಕ್ಕಾಗಿ "ದೇವ-ಮಾನವರಿಗೆ ಪೀಡಕನಾಗಿದ್ದ ಶ್ರವಣಾಸುರನು ಹರಳಯ್ಯನ ಉರಿ ಚಮ್ಮಾಳಿಗೆಯನ್ನು ಮೆಟ್ಟುವಂತೆ ಮಾಡಿ ಆ ಮೂಲಕ ಅವನನ್ನು ಮಾದಪ್ಪ ಸಂಹರಿಸುತ್ತಾನೆ".[೧೫] ಮೌಖಿಕ ಮಹಾಕಾವ್ಯಗಳಲ್ಲಿ ಇಂಥ ಧಾರ್ಮಿಕ ಮೇಲಾಟಗಳ ವಿವರ ಹೆಚ್ಚಾಗಿ ದಾಖಲಾಗಿದೆ. ಜುಂಬಪ್ಪನ ಕಾವ್ಯದಲ್ಲಿ ಶಿವಭಕ್ತರಾಗಿದ್ದ ಕಾಡುಗೊಲ್ಲರು ವೈಷ್ಣವರಾಗುತ್ತಾರೆ. ಮಲೆ ಮಾದೇಶ್ವರ ಕಾವ್ಯದ ಸಂಕಮ್ಮನ ಸಾಲಿನಲ್ಲಿ ಬರುವ ಸಂಕಮ್ಮ ತನ್ನ ಕುಲದೇವತೆಗಳಾದ ವೈಷ್ಣವ ದೇವತೆಗಳನ್ನು ತ್ಯಜಿಸಿ, ತನ್ನ ಸಂಕಷ್ಟದಲ್ಲಿ ಸಹಾಯ ಮಾಡಿದ ಮಾದೇಶ್ವರನ ಒಕ್ಕಲಾಗುತ್ತಾಳೆ. ಇಂಥ ಸನ್ನಿವೇಶಗಳೆಲ್ಲವೂ ಧಾರ್ಮಿಕ ಸಂಘರ್ಷದ ಚಿತ್ರಣವನ್ನು ಕಟ್ಟಿಕೊಡಲು ಪ್ರಯತ್ನಿಸುತ್ತವೆ.

ಮಧ್ಯಕಾಲೀನ ಕರ್ನಾಟಕದಲ್ಲಿ ರಾಜಮಾನ್ಯ ವೈದಿಕ ಧರ್ಮಗಳು ಮತ್ತು ಜೈನಧರ್ಮ ಹಾಗೂ ಜನಮಾನ್ಯತೆ ಪಡೆದಂತಹ ಹಲವಾರು ಪಂಥಗಳು ತಮ್ಮ ಅಸ್ತಿತ್ವ ಸ್ಥಾಪಿಸಿಕೊಳ್ಳುವುದಕ್ಕೋ ಅಥವಾ ಉಳಿಸಿಕೊಳ್ಳುವುದಕ್ಕೋ ಅಥವಾ ಏಕಸ್ವಾಮ್ಯತೆಯನ್ನು ಸಾಧಿಸುವುದಕ್ಕೋ ಪ್ರಜ್ಞಾಪೂರ್ವಕವಾಗಿ ಅನ್ಯಾಕ್ರಮಣಗಳಿಗೆ ಅಥವಾ ಅತಿಕ್ರಮಣಗಳಿಗೆ ಮುಂದಾದುದು ನಮಗೆ ಶಾಸನ, ಸಾಹಿತ್ಯ ಹಾಗೂ ಜನಪದ ಕಾವ್ಯಗಳಿಂದ ಸ್ಪಷ್ಟವಾಗುತ್ತದೆ. ಇಂಥ ಅನ್ಯಾಕ್ರಮಣಗಳಿಗೆ ದೇವಾಲಯಗಳು ಒಂದು

ವೇದಿಕೆಯನ್ನು ನಿರ್ಮಿಸಿಕೊಟ್ಟವು ಎಂಬುದೂ ನಿಜ. ಏಕೆಂದರೆ ಕೇವಲ ಧಾರ್ಮಿಕ ಶ್ರದ್ಧಾಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದ ದೇವಾಲಯಗಳು ಅಥವಾ ಆರಾಧನಾ ಕೇಂದ್ರಗಳು ಸಾಂಸ್ಥೀಕರಣಗೊಂಡದ್ದು ಸಹ ಇಂಥ ಧರ್ಮ ಸಂಘರ್ಷಗಳಿಗೆ ಕಾರಣವಾದವು.

### ೫.೨ ಆರಾಧನಾ ಕೇಂದ್ರಗಳ ಸಾಂಸ್ಥೀಕರಣ

ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳ ರಚನೆ, ಭಕ್ತಿ ಮತ್ತು ಶ್ರದ್ಧೆಯ ಪ್ರತೀಕವಾಗಿತ್ತು. ದೇವಾಲಯಗಳ ವಾಸ್ತುಶಿಲ್ಪದ ವಿಷಯದಲ್ಲಿ ಕೆಲವು ಪ್ರಾಯೋಗಿಕ ಪ್ರಯತ್ನಗಳು ನಡೆದದ್ದನ್ನು ನಾವು ಐಹೊಳೆ, ಬಾದಾಮಿ, ಪಟ್ಟದಕಲ್ಲು, ತಾಳಗುಂದ, ಹಲಸಿ, ಮುಂತಾದ ಕಡೆಗಳಲ್ಲಿ ನೋಡಬಹುದಾದರೂ, ಅವುಗಳ ನಿರ್ಮಾಣದ ಆತ್ಯಂತಿಕ ಉದ್ದೇಶ ಆರಾಧನೆ ಮತ್ತು ಭಕ್ತಿ. ದೇವಾಲಯಗಳಲ್ಲಿ ಪೂಜೆಗಾಗಿ ದಾನದತ್ತಿಗಳನ್ನು ನೀಡಿದ ವಿಪುಲ ನಿದರ್ಶನಗಳು ಶಾಸನಗಳಲ್ಲಿ ದೊರೆಯುತ್ತವೆ.

ಆದರೆ ಹತ್ತನೆಯ ಶತಮಾನಾನಂತರ ದೇವಾಲಯಗಳು ಕೇವಲ ಆರಾಧನೆ ಮತ್ತು ಶ್ರದ್ಧಾಕೇಂದ್ರಗಳಾಗಿ ಉಳಿಯದೆ ಧರ್ಮ ಪೋಷಣೆ ಹಾಗೂ ರಕ್ಷಣಾ ಸ್ಥಳಗಳಾಗಿ ಪರಿವರ್ತನೆ ಹೊಂದಿದವು. ಸಾಮಾಜಿಕ ಸಂಸ್ಥೆಗಳಾಗಿ, ವ್ಯಾವಹಾರಿಕ ಕೇಂದ್ರಗಳಾಗಿ ಬದಲಾದವು. ನಾನಾ ವೃತ್ತಿಗಳ ಪೋಷಣಾ ಕೇಂದ್ರಗಳಾಗಿ ಕಾರ್ಯನಿರ್ವಹಿಸಲಾರಂಭಿಸಿದವು. ಅಲ್ಲದೆ, ಬ್ಯಾಂಕ್‌ಗಳ, ನ್ಯಾಯಾಲಯಗಳ ಪಾತ್ರವನ್ನೂ ಸಹ ನಿರ್ವಹಿಸುತ್ತಿದ್ದವು. ಹನ್ನೊಂದನೆಯ ಶತಮಾನದ ವೇಳೆಗೆ ದೇವಾಲಯಗಳು ನಿರ್ವಹಿಸುತ್ತಿದ್ದ ಪಾತ್ರಗಳು ವಿಸ್ತರಣೆಯಾಗುತ್ತಾ ಬಂದವು. ಈ ಅವಧಿಯಲ್ಲಿ ಜೈನ, ವೈಷ್ಣವ, ಶೈವಧರ್ಮಗಳೆಲ್ಲವೂ ಪ್ರಭುತ್ವದ ಮಾನ್ಯತೆ ಪಡೆಯಲು, ದೇವಾಲಯಗಳನ್ನು ನಿರ್ಮಿಸಲು, ಅವುಗಳಿಗೆ ಉಂಬಳಿಗಳನ್ನು ಪಡೆಯಲು, ಅವುಗಳ ಮೇಲೆ ಹಕ್ಕು ಸ್ವಾಮ್ಯತೆಯನ್ನು ಸಾಧಿಸಲು ಪರಸ್ಪರ ಸ್ಪರ್ಧೆಗಿಳಿದಂತೆ ಕಂಡುಬರುತ್ತದೆ. ಇವುಗಳ ಪರಿಣಾಮದಿಂದಾಗಿ ಕೇವಲ ಆರಾಧನಾ ಕೇಂದ್ರಗಳಾಗಿದ್ದ ದೇವಾಲಯಗಳು ಸಾಮಾಜಿಕ ಸಂಸ್ಥೆಗಳಾಗಿ ಪರಿವರ್ತನೆಯಾದವು. ಇವುಗಳಲ್ಲಿ ತನ್ನ ಭದ್ರತೆಯ ಬೇರುಗಳನ್ನು ಕಳೆದುಕೊಳ್ಳುತ್ತಿದ್ದ ಜೈನಧರ್ಮದ ಹೊರತಾಗಿ, ಶೈವ ಮತ್ತು ವೈಷ್ಣವ ಧರ್ಮಗಳೆರಡೂ ದಕ್ಷಿಣ ಕರ್ನಾಟಕ ಹಾಗೂ ಉತ್ತರ ಕರ್ನಾಟಕದ ಭಾಗದಲ್ಲಿ ತಮ್ಮ ಭಕ್ತಿಕೇಂದ್ರಗಳನ್ನು ಸಾಂಸ್ಥೀಕರಣಗೊಳಿಸಲು ತೀವ್ರ ಸೆಣಸಾಟ ನಡೆಸಿವೆ. ಆದರೆ ಈ ಪ್ರಯತ್ನಗಳಲ್ಲಿ ಇವೆರಡು ಧರ್ಮಗಳೂ ತಮಗೆ ಪ್ರತಿಸ್ಪರ್ಧಿಯಾಗಿ ಪರಿಗಣಿಸಿದ್ದು ಜೈನಧರ್ಮವನ್ನು ಎಂಬುದು ವಿಪರ್ಯಾಸದ ಸಂಗತಿ.

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದ್ದ ವೈಷ್ಣವ ಭಕ್ತಿಧಾರೆಗಳಿಗೆ ರಾಮಾನುಜ ಪ್ರಣೀತ ಶ್ರೀವೈಷ್ಣವ ಮತ, ಮಾಧ್ವ ಪ್ರಣೀತ ದ್ವೈತಮತಗಳು ಒಂದು ತಾತ್ವಿಕ ನೆಲೆಗಟ್ಟನ್ನು ಹಾಕಿಕೊಟ್ಟವು. ಶ್ರೀವೈಷ್ಣವ ಮತ ದೇವಾಲಯಗಳ ಕಾರ್ಯಚಟುವಟಿಕೆಗಳಲ್ಲಿ ಶೂದ್ರರನ್ನೂ

ಒಳಗೊಳ್ಳುವ ಸಲುವಾಗಿ ಅವರಿಗೆ ವಿವಿಧ ಕಾರ್ಯಗಳನ್ನು ಹಂಚಿಕೆ ಮಾಡಿಕೊಟ್ಟಿತು. ಈ ಅವಧಿಯಲ್ಲಿ ಕಂಡುಬಂದ ಮತ್ತೊಂದು ಬೆಳವಣಿಗೆಯೆಂದರೆ, ತಮಿಳುನಾಡಿನಿಂದ ಬಂದ ವೈಷ್ಣವರ ವಲಸೆ. ಕರ್ನಾಟಕದಲ್ಲಿ ತಮಿಳು ಭಾಷಿಕರ ವಲಸೆ ಗಂಗರ ಅವನತಿಯೊಂದಿಗೆ ಕಂಡುಬರುತ್ತದೆ. ರಾಜರಾಜ ಚೋಳ ಗಂಗರನ್ನು ಸೋಲಿಸಿ ತಲಕಾಡನ್ನು ಆಕ್ರಮಿಸಿಕೊಂಡಂತೆ, ಗಂಗವಾಡಿ ಪ್ರದೇಶ ಅವನ ಆಳ್ವಿಕೆಗೆ ಸೇರಿತು. ಆಗ ಈ ಪ್ರದೇಶದ ಹಲವಾರು ಪ್ರಾಂತ್ಯಗಳಿಗೆ ತಮಿಳು ಅಧಿಕಾರಿಗಳನ್ನು ನೇಮಿಸಲಾಯಿತು ಮತ್ತು ದೇವಾಲಯಗಳ ಪೂಜೆಗಾಗಿ ತಮಿಳು ಅರ್ಚಕರನ್ನು ಕರೆತರಲಾಯಿತು. ಅದರ ಪರಿಣಾಮವೇ ಗಂಗರ ದೇವಾಲಯಗಳೆಲ್ಲ 'ಚೋಳಪ್ರತಿಷ್ಠೆ'ಯಾಗಿ ಮಾರ್ಪಟ್ಟವು. (ಈಗಲೂ ಸಹ ಗಂಗವಾಡಿ ಪ್ರದೇಶದಲ್ಲಿರುವ ಗಂಗರ ಕಾಲದ ದೇವಾಲಯಗಳ ಬಗ್ಗೆ ವಿಚಾರಿಸಿದಾಗ ಅವೆಲ್ಲವೂ 'ಚೋಳ ಪ್ರತಿಷ್ಠೆಯೆಂದು' ಅಲ್ಲಿಯ ಸ್ಥಾನೀಕ ಅರ್ಚಕರು ವಿವರಿಸುತ್ತಾರೆ). ಆದರೆ, ಈ ಅವಧಿಯ ವಲಸೆ ಧಾರ್ಮಿಕವಾಗಿ ಹೆಚ್ಚೇನೂ ಸಂಚಲನಗಳನ್ನು ಸೃಷ್ಟಿಸಲಿಲ್ಲ. ದೇವಾಲಯಗಳ ಪೂಜಾ ವಿಧಾನಗಳಲ್ಲೂ, ದಾನ ದತ್ತಿಗಳಲ್ಲೂ ಮಹತ್ವದ ಬದಲಾವಣೆಗಳನ್ನು ಶಾಸನಗಳು ತೋರಿಸುವುದಿಲ್ಲ. ಆದರೆ, ಹೊಯ್ಸಳರ ಅವಧಿಯಲ್ಲಿ ಕಂಡು ಬಂದಂತಹ ವಲಸೆ ಧಾರ್ಮಿಕವಾಗಿಯಲ್ಲದೆ, ಸಾಮಾಜಿಕವಾಗಿಯೂ ಸಮಾಜದಲ್ಲಿ ಹಲವಾರು ಪಲ್ಲಟಗಳುಂಟಾಗಲು ಕಾರಣವಾಯಿತು.

ಕರ್ನಾಟಕದಲ್ಲಿ ಹೊಯ್ಸಳ ಅರಸರ ಆಶ್ರಯದಲ್ಲಿ ವೈಷ್ಣವ ದೇವಾಲಯಗಳು ಪ್ರಾರಂಭವಾದಂತೆ, ಅವುಗಳಲ್ಲಿ ಧಾರ್ಮಿಕ ವಿಧಿವಿಧಾನಗಳನ್ನು ಆಚರಿಸಲು ಅರ್ಚಕರನ್ನು ತಮಿಳುನಾಡಿನಿಂದ ಕರೆಸುವ ಪ್ರಕ್ರಿಯೆ ಪ್ರಾರಂಭವಾಯಿತು. ಕರ್ನಾಟಕದಲ್ಲಿ ಅರ್ಚಕರಿರಲಿಲ್ಲವೆಂದರ್ಥ ವಲ್ಲ. ಆದರೆ ಕರ್ನಾಟಕದಲ್ಲಿನ "ವೈಷ್ಣವ ದೇವಾಲಯದ ಪೂಜಾ ವಿಧಿಗಳು ಶ್ರೀ ವೈಷ್ಣವ ಧರ್ಮದ ಪ್ರಭಾವದಲ್ಲಿ ಮಾರ್ಪಾಟುಗಳಿಗೊಳಪಟ್ಟವು. ತಮಿಳು ಪ್ರಬಂಧಗಳಿಗೆ ತಮಿಳುನಾಡಿನಲ್ಲಿ ವೇದಗಳಿಗೆ ನೀಡುವ ಸ್ಥಾನಮಾನ ನೀಡಲಾಗಿದೆ. ನಾಲಾಯಿರದಿವ್ಯ ಪ್ರಬಂಧಗಳೆಂದು ಕರೆಯಲಾದ ಶ್ರೀ ವೈಷ್ಣವರ ೪೦೦೦ ಪ್ರಬಂಧಗಳನ್ನು ದೇವಾಲಯಗಳಲ್ಲಿ ಪೂಜಾಕಾರ್ಯದಲ್ಲಿ ಪಠಿಸುವ ಪರಿಪಾಠ ಆರಂಭವಾಯಿತು. ಈ ಪದ್ಧತಿಯನ್ನು ಕರ್ನಾಟಕದ ದೇವಾಲಯಗಳಲ್ಲೂ ಆಚರಣೆಗೆ ತರಲಾಯಿತು".[೧೬] ಪೂಜೆಯನ್ನು ನಡೆಸಲು ಆ ಪೂಜಾವಿಧಾನದ ಪರಿಚಯವಿದ್ದ ವೈಷ್ಣವರನ್ನು ಕರೆಸಲಾಯಿತು. "ರಾಮಾನುಜಾಚಾರ್ಯರು ಮೇಲುಕೋಟೆಯಿಂದ ಶ್ರೀರಂಗಂಗೆ ಹಿಂತಿರುಗಲು ಇಚ್ಛಿಸಿದಾಗ, ಮೇಲುಕೋಟೆ ದೇವಾಲಯದ ಕೈಂಕರ್ಯಗಳನ್ನು ನೆರವೇರಿಸಿಕೊಂಡು ಹೋಗುವುದಕ್ಕಾಗಿ ಐವತ್ತೆರಡು (ಶಿಷ್ಯರನ್ನು) ಅಧಿಕಾರಿಗಳನ್ನು ನೇಮಿಸಿದ . . . . . . ದೇವಾಲಯದ ಪೂಜಾ ವಿಧಿವಿಧಾನಗಳಿಗೆ ಸಂಬಂಧಿಸಿದಂತೆ ವಿವರವಾದ ನಿಯಮಾವಳಿಗಳನ್ನು 'ನೇಮನಿಪ್ಪಡಿ' ಹೆಸರಿನಲ್ಲಿ ರೂಪಿಸಿದರು.[೧೭] ಇದು ಸ್ಥಳೀಯ ಮತ್ತು ವಲಸಿಗರ ಸಂಘರ್ಷಕ್ಕೆ ಕಾರಣವಾದರೂ, ಅರಸರು ಸಂಘರ್ಷಗಳೇರ್ಪಡದಂತೆ ಜಾಗರೂಕತೆಯಿಂದ ಅವರಿಗೆ ವಸತಿ ಮತ್ತಿತ್ತರ ವ್ಯವಸ್ಥೆಗಳನ್ನು

ಕಲ್ಪಿಸಲು ಮುಂದಾದರು. ಆ ಉದ್ದೇಶಕ್ಕಾಗಿ ಹಲವಾರು ಗ್ರಾಮಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿದರು.

ವೈಷ್ಣವ ಧರ್ಮ ಪ್ರಬಲವಾಗಿ ಬೇರೂರುತ್ತಿದ್ದ ಹೊಯ್ಸಳ ಸಾಮ್ರಾಜ್ಯದಲ್ಲಿ ಇಂಥ ಅಸಂಖ್ಯ ಅಗ್ರಹಾರಗಳನ್ನು ನಿರ್ಮಿಸಿ ಅಲ್ಲಿಗೆ ಬ್ರಾಹ್ಮಣರನ್ನು ಕರೆತಂದು ನೆಲೆಸುವಂತೆ ಮಾಡಲಾಯಿತು. 'ಅರಸೀಕೆರೆ ತಾಲೂಕು ಪ್ರಾಂತ್ಯದಲ್ಲೇ ನರಸಿಂಹಪುರ, ಕೇಶವ ಪುರ, ಹರಿಹರ ಪುರ, ಬಲ್ಲಾಳ ಚತುರ್ವೇದಿ ಮಂಗಲ, ಜಯಗೊಂಡ ಬಲ್ಲಾಳಪುರ, ಇತ್ಯಾದಿ ಹೆಸರುಗಳಿಂದ ೨೫ಕ್ಕೂ ಹೆಚ್ಚು ಅಗ್ರಹಾರಗಳು ಸ್ಥಾಪನೆಗೊಂಡಿವೆ'.[೧೮] ಪುರಪ್ರಮುಖರು ಅರಸರಿಂದ ಭೂಮಿಯನ್ನು ಪಡೆದು ಅವುಗಳನ್ನು ಅಗ್ರಹಾರಗಳಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ದಾನ ನೀಡಲಾರಂಭಿಸಿದರು. ಸಾಹಿಭಟ್ಟಯ್ಯ ಎಂಬ ಪಂಡಿತ ಒಂದು ಗ್ರಾಮ ನಿರ್ಮಿಸಲು ಸಾಕಾಗುಷ್ಟು ಭೂಮಿಯನ್ನು ದಾನವಾಗಿ ಪಡೆಯುತ್ತಾನೆ.[೧೯]

ದಾವಪ್ಪೆಯ ವಿಷ್ಣುವರ್ಧನನಿಂದ ನಿರ್ಗುಂದ ನಾಡಿನ ತಳಿರೂರನ್ನು ದಾನವಾಗಿ ಪಡೆದು ಅದನ್ನು ಅಗ್ರಹಾರವಾಗಿ ಪರಿವರ್ತಿಸಿ ಅರವತ್ತೆರಡು ಮಹಾಜನಗಳಿಗೆ ನೀಡುತ್ತಾನೆ.[೨೦] ಬಹುಶಃ ವಲಸಿಗರಿಗೆ ನೀಡಿದಂತಹ ದಾನಗಳು ಸ್ಥಳೀಯ ಮಹಾಜನರ ಆಕ್ರೋಶಕ್ಕೆ ಕಾರಣವೂ ಆಗಿರಬಹುದು. ಬಹುಶಃ ಇಂತಹ ಅಸಮಾಧಾನಗಳು ಹೊಗೆಯಾಡದಂತೆ ಮಾಡಲು ಇಮ್ಮಡಿ ಬಲ್ಲಾಳನು ಕಿತ್ತನಕೆರೆಯನ್ನು ಬಲ್ಲಾಳಪುರವೆಂದು ನಾಮಕರಣ ಮಾಡಿ ಅಗ್ರಹಾರವಾಗಿ ಪರಿವರ್ತಿಸಿ ಅದನ್ನು ಕರ್ನಾಟಕ ಕುಲೋತ್ತಮರಾದ ೧೨೦ ಬ್ರಾಹ್ಮಣರಿಗೆ ನೀಡುತ್ತಾನೆ. ಈ ಪ್ರವೃತ್ತಿ ವಿಜಯನಗರ, ಮೈಸೂರು ಅರಸರ ಕಾಲದಲ್ಲೂ ಮುಂದುವರೆಯುತ್ತದೆ. ಮೈಸೂರಿನ ಕಂಠೀರವ ನರಸರಾಜ ಒಡೆಯರು ಯಾದವರಿಗೆ ಉತ್ತರದಲ್ಲಿರುವ ಸುಕದೊರೆ ಮತ್ತು ಅದರ ಉಪ-ಗ್ರಾಮಗಳಾದ ತಟ್ಟೆಕೆರೆ, ಹಂದೆಹಳ್ಳಿ, ಕಾಳೇನಹಳ್ಳಿ, ಬೀರನಹಳ್ಳಿ, ಕಲ್ಲೀಗುಂಡಿ, ಮಲ್ಲನಾಯಕನಹಳ್ಳಿ ಮತ್ತು ಮಾರನಾಯಕನ ಹಳ್ಳಿಗಳನ್ನು ಅಗ್ರಹಾರವಾಗಿ ಪರಿವರ್ತಿಸಿ, ರಾಜಶ್ರೀ ಕಂಠೀರವ ನರಸನೃಪಾಂಬೋಧಿ ಅಗ್ರಹಾರ ಎಂದು ಹೆಸರಿಸಿ, ಅಲ್ಲಿ ಪ್ರಶಸ್ತವಾದ ಗೃಹಗಳನ್ನು ಸೋಪಸ್ಕರವಾಗಿ ನಿರ್ಮಿಸಿ ಒಂದು ವರ್ಷ ಕಾಲಕ್ಕೆ ಬೇಕಾಗುವ ಗ್ರಾಸವನ್ನು ತುಂಬಿಸಿ ವೇದ ಶಾಸ್ತ್ರಾರ್ಥತತ್ವಜ್ಞರೂ, ಶಮಾದಿಗುಣ ಸಂಪನ್ನರು ಶ್ರೋತ್ರೀಯ ವೇದ ಪಾರಂಗತರೂ ಆದ ಶ್ರೀ ವೈಷ್ಣವರನ್ನು ಆಹ್ವಾನಿಸಿ ಅವರನ್ನು ಅಲ್ಲಿ ನೆಲೆಗೊಳಿಸಿ ಅವರಿಗೆ ವೃತ್ತಿಗಳನ್ನು ದಾನ ಮಾಡುತ್ತಾರೆ".[೨೧]

ಹೀಗೆ ಕೇಶವಪುರಗಳೂ, ನರಸಿಂಹಪುರಗಳನ್ನು ನಿರ್ಮಿಸಿ ಅಲ್ಲಿ ಲಕ್ಷ್ಮೀನಾರಸಿಂಹ, ವೇಣುಗೋಪಾಲ ದೇವಾಲಯಗಳನ್ನು ನೆಲೆಗೊಳಿಸಿದರು. ಇವುಗಳಲ್ಲಿ ದೇವರ ಸೇವೆಗಾಗಿ ನಾನಾ ವೃತ್ತಿಗಳ ಜನರನ್ನು ನಿಯೋಜಿಸಿ, ಸಮಾಜದ ಪ್ರತಿಷ್ಠಿತ ವ್ಯಕ್ತಿಗಳೊಂದಿಗೆ ರಾಜರೂ ಸಹ ವಿಫುಲವಾಗಿ, ಉದಾರವಾಗಿ ದತ್ತಿಗಳನ್ನು ನೀಡಿದ್ದಾರೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದಾಗ, ಕರ್ನಾಟಕದ ಎಲ್ಲ ರಂಗಗಳು ಹಲವಾರು ಪಲ್ಲಟಗಳಿಗೆ, ಸ್ಥಿತ್ಯಂತರಗಳಿಗೆ ಗುರಿಯಾಗಿದ್ದವು. ಇಂಥ ಸಂದರ್ಭದಲ್ಲಿ ದೇವಾಲಯಗಳನ್ನು ನಿರ್ಮಿಸುವ ಕಾರ್ಯ ಮೊದಲಿನಷ್ಟು ಪ್ರಬಲವಾಗಿರದಿದ್ದರೂ, ವಿಜಯವಿಠಲ, ಕೃಷ್ಣ ದೇವಾಲಯಗಳನ್ನು ರಾಜಧಾನಿಯಲ್ಲಿ ನಿರ್ಮಿಸಿದರು. ಇವರು ದೇವಾಲಯಗಳ ನಿರ್ಮಾಣಕ್ಕಿಂತ ಬದಲಾದ ಕರ್ನಾಟಕದ ಸ್ಥಿತಿಯಲ್ಲಿ ದುರ್ವ್ಯವಸ್ಥೆಗೆ ಪಕ್ಕಾಗಿದ್ದ, ಪೂಜೆ ಪುನಸ್ಕಾರಗಳು ನಿಂತುಹೋಗಿದ್ದ ಅಸಂಖ್ಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ, ಅವುಗಳಲ್ಲಿ ಮೊದಲಿನಂತೆ ಪೂಜಾ ವಿಧಿಗಳು ನೆಲೆಗೊಳ್ಳುವಂತೆ ಮಾಡಲು ಗಮನಹರಿಸಿದರು. ವಿಜಯನಗರ ಅರಸರ ಆಳ್ವಿಕೆಯಲ್ಲಿ ಕೀರ್ತನಕಾರರ, ದಾಸರ ಪ್ರಭಾವದಿಂದ ಈಗಾಗಲೇ ಅಸ್ತಿತ್ವದಲ್ಲಿದ್ದ ಮಠಗಳಲ್ಲಿ ವ್ಯಾಸಕೂಟ ಹಾಗೂ ದಾಸಕೂಟಗಳನ್ನು ಪರಿಚಯಿಸಲಾಯಿತು. ವೈಷ್ಣವ ಧರ್ಮದ ಪ್ರಚಾರಕ್ಕಾಗಿ ಇವರು ಭಾಗವತ ಸಂಪ್ರದಾಯದ ಶ್ರೀ ಕೃಷ್ಣನ ಬಾಲಲೀಲೆಗಳನ್ನು ಹೆಚ್ಚು ಪ್ರಚುರಪಡಿಸಿ ಜನರನ್ನು ಆಕರ್ಷಿಸಲಾರಂಭಿಸಿದರು.

ರಾಮಾನುಜಾಚಾರ್ಯರ ಪ್ರಭಾವ ದಕ್ಷಿಣ ಕರ್ನಾಟಕದ ತಳ ಸಮುದಾಯಗಳ ಮೇಲೆ ತೀವ್ರವಾಗಿ ಆಯಿತು. ಶ್ರೀವೈಷ್ಣವ ಧರ್ಮ ಶೂದ್ರರ ಮೇಲ್ಚಲನೆಗೆ ಅವಕಾಶ ನೀಡಿತು. "ವೈಷ್ಣವ ಮತದ ಪ್ರಭಾವ ಸಮಾಜದ ಎಲ್ಲ ಹಂತಗಳ ಮೇಲೂ, ಎಲ್ಲ ವರ್ಗಗಳ ಮೇಲೂ ಶೈವ ಮತವು ಬೀರಿದಂತೆ ಆಗಲಿಲ್ಲ"[೨೨] ಎಂಬ ಎಸ್. ಶೆಟ್ಟರ್‌ರವರ ಅಭಿಪ್ರಾಯ ತುಲನಾತ್ಮಕವಾಗಿ ಶೈವಧರ್ಮದೊಂದಿಗೆ ಹೋಲಿಸಿ ನೋಡಿದಾಗ ನಿಜವೆನಿಸಿದರೂ, ಅದು ಸಮಾಜದ ವಾಸ್ತವತೆಗೆ ಹಿಡಿದ ಕನ್ನಡಿಯಲ್ಲ. ರಾಮಾನುಜಾಚಾರ್ಯರ ಸರಳ, ತಾತ್ವಿಕ ದರ್ಶನವಾದ 'ಭಕ್ತಿಯಿಂದ ಮುಕ್ತಿ' ಯ ಘೋಷಣೆ ಸಮಾಜದ ಎಲ್ಲ ವರ್ಗದವರನ್ನು, ಎಲ್ಲ ಸ್ತರದ ಜನರನ್ನು ವೈಷ್ಣವ ದೀಕ್ಷೆ ಪಡೆಯಲು ಪ್ರೇರೇಪಿಸಿತು. ಶ್ರೀವೈಷ್ಣವರೂ ಸಹ ಹದಿನೆಂಟು ಕುಲಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ತನ್ನ ಪ್ರಭಾವವನ್ನು ಬೀರಿತು. ಭಜನೆ, ಭಕ್ತಿಗೆ ಹೆಚ್ಚಿನ ಆದ್ಯತೆ ನೀಡಿತು. ಮಠ ಸಂಸ್ಕೃತಿ ಬ್ರಾಹ್ಮಣರಿಗೆ ಮಾತ್ರ ಸೀಮಿತವಾದರೂ ಶ್ರೀವೈಷ್ಣವ ಪರಂಪರೆಯ ದೇವಾಲಯಗಳು ನಾನಾ ಹಂತಗಳಲ್ಲಿ ಜನರನ್ನು ಅದರಲ್ಲಿ ತೊಡಗುವಂತೆ ಮಾಡಿತು. ಶಂಕರರ ಅದ್ವೈತ ಸಿದ್ಧಾಂತ ಹರಿಹರ ಸಮನ್ವಯ ಸಾರುತ್ತಿದ್ದುದರಿಂದ ಈ ಪಂಥಕ್ಕೆ ಹೆಚ್ಚಿನ ವಿರೋಧ ವ್ಯಕ್ತವಾಗಲಿಲ್ಲ. ಹೀಗಾಗಿ "ವೈಷ್ಣವ ಧರ್ಮ ಸ್ವೀಕರಿಸಿದ ಹೊಸ ದೊಡ್ಡ ಗುಂಪೊಂದು ಸಮಾಜದಲ್ಲಿ ಪ್ರಮುಖ ಸ್ಥಾನ ಪಡೆದುಕೊಳ್ಳತೊಡಗಿತು. ಅವರ ಆಚಾರ ವಿಚಾರಗಳಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಸತಾನಿಗಳು, ವುಪ್ಪುಮರು, ದಾಸ ಬ್ರಾಹ್ಮಣರು, ವಿಶ್ವಕರ್ಮ ಬ್ರಾಹ್ಮಣರು, ದೇವಾಂಗ ಬ್ರಾಹ್ಮಣರು, ನಾಮಧಾರಿಗಳು, ಒಕ್ಕಲಿಗರು, ಮುಂತಾದ ಹೆಸರುಗಳಿಂದ ಕರೆದುಕೊಳ್ಳುವ ಅನೇಕ ಪಂಗಡಗಳು ಈ ವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾದವರೇ".[೨೩] ಶಿಷ್ಟ ಸಮಾಜದ ಮೇಲೆ ಮಾತ್ರವಲ್ಲದೆ, ಜನಪದ ಬುಡಕಟ್ಟುಗಳ ಮೇಲೂ ಶ್ರೀವೈಷ್ಣವ ಧರ್ಮ ದೂರಗಾಮಿ

ಪರಿಣಾಮ ಬೀರಿದೆಯೆಂಬುದಕ್ಕೆ ಸೋಲಿಗರ ಕಾವ್ಯ, ಜುಂಜಪ್ಪನ ಮಹಾಕಾವ್ಯ, ಮಹದೇಶ್ವರ ಕಾವ್ಯಗಳಲ್ಲಿ ಸ್ಪಷ್ಟ ಉದಾಹರಣೆಗಳು ದೊರೆಯುತ್ತವೆ.

ಇದೇ ಅವಧಿಯಲ್ಲಿ ಕರ್ನಾಟಕದ ಉತ್ತರ ಭಾಗದಲ್ಲಿ ಕಾಪಾಲಿಕ, ಕಾಳಾಮುಖ, ಪಾಶುಪತ, ಶೈವ, ಮುಂತಾದ ಶೈವಧಾರೆಗಳು ಜಯಪ್ರಿಯತೆ ಪಡೆದುಕೊಂಡವು. ಜಾತಿ ವ್ಯವಸ್ಥೆ, ವರ್ಣ ವ್ಯವಸ್ಥೆಯನ್ನು ಪುರಸ್ಕರಿಸದ ಕಾಪಾಲಿಕ ಪಂಥ ತನ್ನ ತಾಂತ್ರಿಕ ಆಚರಣೆಗಳಿಂದಾಗಿ ಜನರಿಂದ ದೂರವೇ ಉಳಿಯಿತು. ಆದರೆ ಬದಲಾದ ಕಾಲಮಾನಕ್ಕೆ ತಕ್ಕ ಹಾಗೆ ಅದರ ಅನುಯಾಯಿಗಳು ಕಾಳಾಮುಖ ಮತದೊಳಗೆ ಸೇರಿಹೋದರು. ಕಾಳಾಮುಖ ಧರ್ಮ ಹೆಚ್ಚು ಜನಪ್ರಿಯತೆಯನ್ನು ಮಾನ್ಯತೆಯನ್ನು ಪಡೆದುಕೊಂಡು ಸವಿಸ್ತಾರವಾಗಿ ಬೆಳೆಯಲಾರಂಭಿಸಿತು. ತನ್ನ ಬಹುಮುಖಿ ಮತ್ತು ಜನಮುಖಿ ಕಾರ್ಯಚಟುವಟಿಕೆಗಳಿಂದ ಜನಸಾಮಾನ್ಯರ ಬೆಂಬಲವನ್ನು ಪಡೆದುಕೊಂಡಿತಲ್ಲದೆ, ಪ್ರಭುತ್ವದ ಗಮನವನ್ನು ತನ್ನೆಡೆಗೆ ಸೆಳೆದುಕೊಂಡಿತು. ಕ್ರಿ.ಶ. ಹನ್ನೊಂದನೆಯ ಶತಮಾನದಿಂದಹದಿಮೂರನೆಯ ಶತಮಾನದ ಅವಧಿಯ ಶಾಸನಗಳನ್ನು ಗಮನಿಸಿದಾಗ, ಕರ್ನಾಟಕದಾದ್ಯಂತ ಅಸಂಖ್ಯ ಶೈವ ದೇವಾಲಯಗಳನ್ನು ನಿರ್ಮಿಸಿರುವುದರ ಜೊತೆಗೆ ದೇವಾಲಯಗಳಲ್ಲಿ ದೇವರ ಆರಾಧನೆ, ದೇವಾಲಯದ ಮಠಗಳ, ಶಾಲೆ–ಛತ್ರಗಳ ನಿರ್ವಹಣೆಗಾಗಿ ಯಥೇಚ್ಚವಾಗಿ ದಾನಗಳನ್ನು ನೀಡಿರುವುದು ಕಂಡುಬರುತ್ತದೆ. ಹತ್ತನೇ ಶತಮಾನಕ್ಕೆ ಮೊದಲಿನ ಶಾಸನಗಳಲ್ಲಿ ಹೆಚ್ಚಾಗಿ ಕೇವಲ ದೇವಾಲಯದ ಪೂಜಾ ಮತ್ತು ಆರಾಧನಾ ವಿಧಿ ವಿಧಾನಗಳಿಗೆ ಮಾತ್ರ ದಾನ ದತ್ತಿಗಳನ್ನು ನೀಡಲಾಗುತ್ತಿತ್ತು. ಆದರೆ, ದ್ವಿತೀಯ ಸಹಸ್ರಮಾನದ ಮೊದಲರ್ಧ ಶತಮಾನಗಳ ಶಾಸನಗಳಲ್ಲಿ ದೇವಾಲಯದ ಪೂಜಾ ವಿಧಾನಗಳಿಗೆ ಮಾತ್ರವಲ್ಲದೆ, ದೇವಾಲಯಗಳಲ್ಲಿ ಪೂಜೆ ಮಾಡುವವರು, ಅವರ ಸಹಾಯಕರು, ಅಂಗಭೋಗ–ರಂಗಭೋಗದವರು, ಮತ್ತಿತ್ತರ ಉಪ ಕಸುಬುದಾರರಿಗೂ ದಾನದತ್ತಿಗಳನ್ನು ವಿಫುಲವಾಗಿ ನೀಡಿರುವುದನ್ನು ಕಾಣಬಹುದು.

ಕ್ಷತ್ರಿಯರಿಗೆ ಭೂಪಾಲನೆ ಮತ್ತು ಭೂದಾನಕ್ಕಿಂತ ಮಿಗಿಲಾದ ಧರ್ಮವಿಲ್ಲವೆಂದು ತಿಳಿದು 'ಸುಗಂಧ ಪರಿಮಳಾನೇಕ ಪುಷ್ಪಮಾಲ್ಯಾಂಬರಾಭರಣೋಪಕರಣ ಧೂಪಾರತಿಯ ಖಣ್ಡದೀಪಮಾಳಾವಳೀ ಕಂದಮೂಳ ಫಲಪತ್ರಶಾಖಾನೇನ ಪಕ್ವಾನ್ನ ಶಡುರಸಾಯನಾದ್ಯೋಗರ ನೈವೇದ್ಯ ತಾಂಬೂಳ ಕುಂಕುಮ ಚಂದನಾನುಲೇಪನಕ್ಕೆ ವನದುಯ್ಯಲಪರ್ವಕ್ಕೆ ಮತ್ತೆ ಚೈತ್ರಪವಿತ್ರಾರೋಹಣಕ್ಕೆ ಆಚಾರ್ಮರ್ಗ್ಗೆ ಅಶನಛಾದನಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ . . . ನಿತ್ಯ ನೈಮಿತ್ತಿಕ ಗೀತವಾದ್ಯ ವಿವಿಧ ವಾದ್ಯಕ್ಕೆ, ನೃತ್ಯ ವಿದ್ಯಾಧರಿ ವಿಳಾಸಿನಿಯಿರಿಂದೆಸೆವ ರಂಗಶೋಭೆಯ ಸಮುದಾಯಕ್ಕೆ, ನಿತ್ಯಮಾಂಗಲ್ಯ ಶೋಭೆಯ ಪಂಚಮಹಾವಾದ್ಯಕ್ಕೆ, ದವಳ ಶಂಖಗೀತನಾದಕ್ಕೆ, ಪೂಜಾರಿ ಬ್ರಾಹ್ಮಣಂಗೆ ಭೂಮಿ, ದೇವರ ನಂದಾದೀವಿಗೆಗೆ ಗಾಣಗಳನ್ನು ಬಿಡಲಾಗಿದೆ. ಅರಸ ಮಾತ್ರವಲ್ಲದೆ ಸಮಸ್ತ ಪ್ರಜೆಗಳು, ಬಣಂಜುಗಳು ಮುಂತಾದವರು ತೆರಿಗೆಗಳನ್ನು ಬಿಟ್ಟುಕೊಟ್ಟಿದ್ದಾರೆ. ದೇವಾಲಯದ ನಿರ್ಮಾತೃ ಬಿಂನಾಣಿ ತಿಮ್ಮೋಜನಿಗೆ ಜೀರ್ಣೋದ್ಧಾರಕ್ಕಾಗಿ ಪ್ರತ್ಯೇಕವಾಗಿ ಭೂದಾನ

ನೀಡಲಾಗಿದೆ[೨೪]. ಇಲ್ಲಿ ಒಂದು ದೇವಾಲಯಕ್ಕೆ ಇಷ್ಟೆಲ್ಲ ಕಾರ್ಯಗಳಿಗಾಗಿ ಪ್ರತ್ಯೇಕವಾಗಿ ಕೊಡುಗೆ ನೀಡಬೇಕಾದರೆ, ದೇವಾಲಯಗಳ ಕಾರ್ಯವ್ಯಾಪ್ತಿಯ ಅಗಾಧತೆಯನ್ನು ಊಹಿಸಿಕೊಳ್ಳಬಹುದು. ಇಷ್ಟೆಲ್ಲ ದಾನದತ್ತಿಗಳನ್ನು, ಕೊಡುಗೆಗಳನ್ನು ಸ್ವೀಕರಿಸಿದ ದೇವಾಲಯಗಳು ಸಂಪದ್ಭರಿತವಾಗುವುದು ಹಾಗೂ ಅವು ಹಣಕಾಸು ವ್ಯವಹಾರ ಸಂಸ್ಥೆಗಳಾಗಿ ಪರಿವರ್ತನೆಯಾಗುವುದು ಸಹಜವೇ ಆಗಿದೆ. ದೇವಾಲಯಗಳಿಗೆ ದಾನ ನೀಡುವ ದಾನಿಗಳಲ್ಲಿ ಹೆಚ್ಚಿನವರು ಅಯ್ಯಾಹೊಳೆ ಐನೂರ್ವರು, ಮುಂಮರಿದಂಡಂಗಳು, ನಾನಾದೇಶಿವಡ್ಡ ವ್ಯವಹಾರಿಗಳು, ಬಣಂಜುಗಳು, ಗವರೆಗಾತ್ರಿಗರು, ತಂಬುಲಿಗರು, ತೆಲ್ಲಿಗರು, ಸೆಟ್ಟಿಗುತ್ತರು, ಮುಂತಾದ ಪ್ರಮುಖ ವ್ಯಾಪಾರಿ ಶ್ರೇಣಿಗಳಿಗೆ ಸೇರಿದ ವರ್ತಕರಾಗಿರುತ್ತಿದ್ದರು.

ಮೋಹನಕೃಷ್ಣ ರೈ ರವರು ಅಭಿಪ್ರಾಯಪಡುವಂತೆ ದಾನದ ಕಲ್ಪನೆ ಅಂದಿನ ಸಂದರ್ಭದಲ್ಲಿ ಮಹತ್ವಪೂರ್ಣವೂ, ಸಾಮಾಜಿಕ, ಧಾರ್ಮಿಕ ಶಕ್ತಿಯೂ ಆಗಿತ್ತು. ಧರ್ಮದ ಭದ್ರ ತಳಹದಿಗೆ ದಾನ ಸಹಾಯಕವಾಗಿರುತ್ತಿತ್ತು. ಆಯಾ ಸಂದರ್ಭಗಳಲ್ಲಿ ಪ್ರಚಾರದಲ್ಲಿದ್ದ ಧರ್ಮಗಳಿಗೆ ಸಂಬಂಧಿಸಿದ ದೇವಾಲಯ, ಬಸದಿಗಳನ್ನು ನಿರ್ಮಿಸಿ ಅವುಗಳಿಗೆ ದಾನ–ದತ್ತಿಗಳನ್ನು ನೀಡಿ, ರಾಜಾಶ್ರಯ ನೀಡಿ ಅವು ಪ್ರಚಾರದಲ್ಲಿರುವಂತೆ ನೋಡಿಕೊಳ್ಳುವ ಕೆಲಸವನ್ನು ದಾನ ನೀಡುವ ವ್ಯವಸ್ಥೆ ಮಾಡುತ್ತಿತ್ತು'.[೨೫] ಕಲಬುರ್ಗಿಯವರು "ದಾನ ವ್ಯವಸ್ಥೆಯನ್ನು ಸದೆಬಡಿಯಲು ದಾಸೋಹ ತತ್ವವನ್ನು ಶರಣರು ಅನುಷ್ಠಾನಕ್ಕೆ ತಂದರು" ಎಂದುಅಭಿಪ್ರಾಯಪಡುತ್ತಾರೆ.[೨೬] ಆದರೆ ಹನ್ನೆರಡನೆಯ ಶತಮಾನ ಮತ್ತು ತದನಂತರದ ಕಾಲಮಾನದ ಶಾಸನಗಳನ್ನು ಗಮನಿಸಿದಾಗ ದಾಸೋಹ ತತ್ವ ಪ್ರಾಚುರ್ಯತೆ ಪಡೆದುಕೊಂಡಿರಲಿಲ್ಲವೆನಿಸುತ್ತದೆ. ಏಕೆಂದರೆ ಈ ಅವಧಿಯಲ್ಲಿ ದೇವಾಲಯಗಳ ನಿರ್ಮಾಣ ಚಟುವಟಿಕೆಗಳು ಹೆಚ್ಚಾದುವಲ್ಲದೆ, ಭೂದಾನ ದತ್ತಿಗಳ ಪ್ರಮಾಣ ಮೊದಲಿಗಿಂತಲೂ ಏರಿಕೆಯಾಗಿದೆ.ದಾನದ ನೆಲೆ ಪಾರಮಾರ್ಥಿಕ ಹಿನ್ನೆಲೆ ಹೊಂದಿದ್ದರೂ, ಅದು ಲೌಕಿಕವಾಗಿ ದೇವಾಲಯಗಳಲ್ಲಿ ಆರ್ಥಿಕ ಚಟುವಟಿಕೆಗಳ ಪೋಷಣೆಗೆ ಕಾರಣವಾಯಿತು.

ಕರ್ನಾಟಕದ ಇತರೆ ಎಲ್ಲ ದೇವಾಲಯಗಳಿಗಿಂತ ಕಾಳಾಮುಖ ಶೈವ ದೇವಾಲಯಗಳು ಹೆಚ್ಚು ಕೊಡುಗೆಗಳನ್ನು ಆಕರ್ಷಿಸಿವೆ. ಇದಕ್ಕೆ ಕಾರಣ ಕಾಳಾಮುಖ ಯತಿಗಳು ಈ ದೇವಾಲಯಗಳ ಆವರಣಗಳನ್ನು ಧಾರ್ಮಿಕ ಪರಿಪ್ರೇಕ್ಷ್ಯದಿಂದ ಹೊರ ತಂದು, ಸಾಮಾಜಿಕ ಸೇವಾ ಕೇಂದ್ರಗಳಾಗಿ ಬದಲಾಯಿಸಿದುದು. ಎಂದರೆ ಕಾಳಾಮುಖ ಶೈವಧರ್ಮ ಸಾಂಸ್ಥೀಕರಣಗೊಂಡುದು ಈ ಅವಧಿಯ ಮಹತ್ವದ ಬೆಳವಣಿಗೆ. ಕಾಳಾಮುಖ ಯತಿಗಳು ದೇವಾಲಯಗಳನ್ನು ನಿರ್ಮಾಣ ಮಾಡಿ ಅವುಗಳಿಗೆ ತಾವೇ ಸ್ಥಾನಪತಿಗಳಾಗಿ ಇಡೀ ದೇವಾಲಯದ ಉಸ್ತುವಾರಿ ನೋಡಿಕೊಳ್ಳುತ್ತಿದ್ದರು. ದೇವಾಲಯದ ಆವರಣದಲ್ಲಿ ಸಮಾಜಮುಖಿ ಚಟುವಟಿಕೆಗಳಾದ ಶಿಕ್ಷಣ, ಸೇವೆ, ಮಠಗಳ ಆಡಳಿತ ನಿರ್ವಹಣೆ, ಮುಂತಾದ ಉದ್ದೇಶಗಳಿಗಾಗಿ ವಸತಿ ಸಂಕೀರ್ಣಗಳನ್ನು ಕಟ್ಟಿಕೊಳ್ಳಲಾರಂಭಿಸಿದರು.

ಪೆರಿಯಪುರಾಣದಲ್ಲಿ ಉಕ್ತವಾಗಿರುವಂತೆ ಹಿಂದೆ ತಮಿಳುನಾಡಿನಲ್ಲಿ ಸ್ಥಳೀಯರನ್ನು ಜೈನೀಕರಿಸಲು ಜೈನರು ಅನುಸರಿಸಿದ ಆಹಾರ, ಬೈಷಜ, ಅಭಯ ಮತ್ತು ಶಿಕ್ಷಣ ದಾನದ ಮಾರ್ಗಗಳನ್ನೇ ಕರ್ನಾಟಕದಲ್ಲಿ ಕಾಳಾಮುಖ ಯತಿಗಳು ಅನುಸರಿಸಿದಂತೆ ತೋರುತ್ತದೆ. ಕಾಳಾಮುಖ ದೇವಾಲಯಗಳಲ್ಲಿ ಒಂದೊಂದು ಸರಸ್ವತಿ ಮಂದಿರವಿದ್ದು, ಈ ಕೇಂದ್ರಗಳಲ್ಲಿ ಎಲ್ಲ ವರ್ಗದವರಿಗೂ ಶಿಕ್ಷಣ ವ್ಯವಸ್ಥೆ ಇದ್ದಿರಬಹುದೆಂದು ತೋರುತ್ತದೆ. ಕಾಳಾಮುಖ ದೇವಾಲಯಗಳಲ್ಲಿ ಧಾರ್ಮಿಕ ಚಟುವಟಿಕೆಗಳೊಂದಿಗೆ ಅವುಗಳಿಗೆ ಪೂರಕವಾಗಿ ಅಲ್ಲಿನ ಮಠಗಳಲ್ಲಿ ಇದ್ದಿರಬಹುದಾದ ಸಮಾಜಮುಖಿ ಕಾರ್ಯಚಟುವಟಿಕೆಗಳ ಬಗ್ಗೆ ಕೋಡಿಮಠ ಶಾಸನ ವಿಸ್ತೃತ ವಿವರಣೆಯನ್ನು ಒದಗಿಸುತ್ತದೆ. "ಶಿವಲಿಂಗ ಪೂಜಾ ಪುಳಕಸ್ಯ ಕೇದಾರ ಸ್ಥಾನಮುಂ, ನೈಷ್ಠಿಕ ಬ್ರಹ್ಮಚರ್ಯ ಶಿವಮುನಿಜಪಾನುಷ್ಠಾನ ನೈಷ್ಠಿಕ ಸ್ಥಾನಮುಂ, ಸಾಂಗಋಗ್ಯಜುಸ್ಸಾಮಾಥರ್ವ ಚತುರ್ವೇದ ಸ್ವಾಧ್ಯಾಯ ಸ್ಥಾನಮುಂ, ಕೌಮಾರ ಪಾಣಿನೀಯ ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣ ವ್ಯಾಖ್ಯಾನ ಸ್ಥಾನಮುಂ, ನ್ಯಾಯ ವೈಶೇಷಿಕ ಮೀಮಾಂಸ, ಸಾಂಖ್ಯ ಬೌದ್ಧಾದಿ ಷಡುದರ್ಶನ ವ್ಯಾಖ್ಯಾನಮುಂ, ಲಾಕುಳಸಿದ್ಧಾಂತ ಪಾತಂಜಳಾದಿ ಯೋಗಶಾಸ್ತ್ರ ವ್ಯಾಖ್ಯಾನಮುಂ, ಅಷ್ಟಾದಶ ಪುರಾಣ ಧರ್ಮಶಾಸ್ತ್ರ ಸರಳ ಕಾವ್ಯ ನಾಟಕಾದಿ ವಿವಿಧ ವಿದ್ಯಾಸ್ಥಾನಮುಂ, ದೀನನಾಥ ಪಂಗ್ವಂಧ ಬದಿರ ಕಥಕಗಾಯಕ ವಾದಕ ವಾಂಶಿಕ ನರ್ತಕ ವೈತಾಟಿಕ ನಗ್ನಭಗ್ನ ಕ್ಷಪಣ ಏಕದಂಡಿ ತ್ರಿದಂಡಿ ಹಂಸ ಪರಮಹಂಸಾದಿ ನಾನಾದೇಶ ಭಿಕ್ಷುಕಜನಾನಿವಾರ್ಯಂನದಾನಾಸ್ಥಾನಮುಂ, ನಾನಾನಾಥ ರೋಗಿಜನ ರೋಗ ಭೈಷಜ್ಯಸ್ಥಾನಮುಂ, ಸಕಲ ಭೂತಾಭಯ ಪ್ರಧಾನ ಸ್ಥಾನಮುಂ ಆಗಿ ಕೋಡಿ ಮಠವಿರ್ಪುದು.[೨೭] 'ಇದು ವಿದ್ಯಾದಾನದ ಜೊತೆಗೆ ನಾನಾ ದೇಶದ ಭಿಕ್ಷುಗಳ, ಸನ್ಯಾಸಿಗಳ, ಅನಾಥರ, ಕಿವುಡರ, ಕುಂಟರ, ಮೂಗರ ಆಶ್ರಯ ಸ್ಥಾನವಾಗಿತ್ತು. ಇದಲ್ಲದೆ ನಾನಾ ರೋಗಿ ಜನಗಳಿಗೆ ಔಷಧ ದಾನವೂ ನಡೆಯುತ್ತಿತ್ತು'.[೨೮] ರಾಜರು, ವರ್ತಕರು, ಮಾಂಡಲೀಕರು, ಜನಗಳು, ಆ ಕೇದಾರ ದೇವಾಲಯದ ಬಳಿಗೆ ಬಂದು ಅಲ್ಲಿನ ತಪೋಧನರನ್ನು, ಅವರ ಶಿಷ್ಯ ಸಮೂಹವನ್ನು, ಆ ಮಠದಲ್ಲಿ ನಡೆಯುತ್ತಿದ್ದ ವಿದ್ಯಾದಾನ, ಅನ್ನದಾನ, ಇತ್ಯಾದಿಗಳನ್ನು ಕಂಡು ದಾನ ಮಾಡಬೇಕೆಂದು ಮನಸ್ಸು ಹುಟ್ಟಿ ಹಾಗೆಯೇ ಸುಮ್ಮನಿರದೆ ದಾನ ನೀಡುತ್ತಿದ್ದರು.

ದಾನಗಳ ಸಂಖ್ಯೆವೃದ್ಧಿಯಾಗುತ್ತಿದ್ದಂತೆ, ಕ್ರೋಢೀಕರಣವಾಗುತ್ತಿದ್ದ ಅರ್ಥಸಂಚಯವನ್ನು ನೋಡಿಕೊಳ್ಳಲು ದೇವಾಲಯಗಳಲ್ಲಿ ಪೈಪೋಟಿ ಸಹ ಪ್ರಾರಂಭವಾಯಿತು. ದೇವಾಲಯಗಳಲ್ಲಿ ಪೂಜಾವೃತ್ತಿಯಲ್ಲಿ ನಿರತರಾಗಿದ್ದ ಪುರೋಹಿತ ಅಥವಾ ದೇವಾಲಯದ ಅರ್ಚಕರ ಸ್ಥಾನದ ಜೊತೆಗೆ 'ಸ್ಥಾನಿಕರ' ಹುದ್ದೆಗಳು ಹುಟ್ಟಿಕೊಂಡವು. 'ಸ್ಥಾನಿಕ' ಎಂದರೆ, ಆರ್ಥಿಕ ವ್ಯವಸ್ಥೆಯನ್ನು ನೋಡಿಕೊಳ್ಳುವ ಅಧಿಕಾರಿ.ಶಾಸನಗಳಲ್ಲಿ ಸ್ಥಾನಿಕ, ಸ್ಥಾನಾಧಿಪತಿ, ಸ್ಥಾನಾಚಾರ್ಯ, ಮುಂತಾದ ಉಲ್ಲೇಖಗಳು ಕಂಡುಬರುತ್ತವೆ. ಸ್ಥಾನಾಧಿಪತಿಗಳು ದೇವಾಲಯಗಳ ಪೂಜಾರಿಗಳಿಗಿಂತ ಭಿನ್ನರಾಗಿದ್ದು, ಇಡೀ ದೇವಾಲಯಗಳ ಮತ್ತು ಅವುಗಳಿಗೆ ಹೊಂದಿಕೊಂಡ ಶಾಲೆ, ಸತ್ರ, ಮಠಗಳ ನಿರ್ವಹಣೆಯ

ಸಂಪೂರ್ಣ ಜವಾಬ್ದಾರಿ ಇವರದಾಗಿರುತ್ತಿತ್ತು. 'ಸ್ಥಾನಿಕ' ಒಂದು ಗೌರವಯುತವಾದ 'ಪದವಿ' ಯಾಗಿದ್ದು, ಇದು ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಕಂಡುಬಂದರೂ, ವೈಷ್ಣವ ದೇವಾಲಯ ಮತ್ತು ಜೈನ ಬಸದಿಗಳಿಗೂ 'ಸ್ಥಾನಿಕರು' ಇರುತ್ತಿದ್ದುದ್ದಕ್ಕೆ ಶಾಸನಾಧಾರಗಳ ಉಲ್ಲೇಖಗಳಿವೆ. ಮಧ್ಯಕಾಲೀನ ಕರ್ನಾಟಕದ ಶಾಸನಗಳಲ್ಲಿ ಕಂಡು ಬರುವ 'ಸ್ಥಾನಿಕರ' ಕಾರ್ಯವ್ಯಾಪ್ತಿಯು ದೇವಾಲಯಗಳ ಆರ್ಥಿಕ ವ್ಯವಸ್ಥೆಯ ನಿರ್ವಹಣೆಯೇ ಆಗಿತ್ತು. ಸ್ಥಾನಿಕರು ಪ್ರಬಲ ದೇವಾಲಯ ಅಥವಾ ಮಠಗಳ ಅಧಿಪತಿಗಳಾಗಿದ್ದು, ಅವರ ಅಧೀನದಲ್ಲಿ ಹಲವಾರು ಮಠಗಳು ಅಥವಾ ದೇವಾಲಯಗಳು 'ಪ್ರತಿಬದ್ಧ'ವಾಗಿರುತ್ತಿದ್ದವು. 'ಪ್ರತಿಬದ್ಧ' ಪದಕ್ಕೆ ಬಂಧಿಸಿದುದು, ಕಟ್ಟಲ್ಪಟ್ಟು, ಒಳಗೊಂಡ ಎಂಬಂತಹ ಅರ್ಥಗಳಿವೆ[೨೯]. ಪ್ರತಿಬದ್ಧ ಎಂಬ ಪದವು ನಿರ್ದಿಷ್ಟವಾಗಿ ಕಾಳಾಮುಖ ಯತಿಗಳನ್ನು, ದೇವಾಲಯಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕಾಳಾಮುಖ ಯತಿಗಳ ಅಧಿಕೃತ ಆದೇಶದ ಮೇರೆಗೆ ನಿರ್ಮಾಣವಾದ ದೇವಾಲಯ, ಬಸದಿಗಳೆಂದು ಸಮಕಾಲೀನ ಶಾಸನಗಳಿಂದ ಗ್ರಹಿಸಬಹುದು. ಇವುಗಳ ಸಂಪೂರ್ಣ ನಿಯಂತ್ರಣ ಕಾಳಾಮುಖ ಯತಿಗಳದ್ದಾಗಿರುತ್ತದೆ. ಬಳ್ಳಿಗಾವೆಯ ಕೋಡಿಮಠಕ್ಕೆ ಐದು ದೇವಾಲಯಗಳು ಪ್ರತಿಬದ್ಧವಾಗಿದ್ದವು. ರಾಮಯ್ಯ ಜೈನರನ್ನು ಸೋಲಿಸಿ ಜಯಪತ್ರ ಪಡೆದ ಅಬ್ಬಲೂರಿನ ದೇವಾಲಯವೂ ಸಹ ಕೋಡಿಮಠಕ್ಕೆ ಪ್ರತಿಬದ್ಧವಾಗಿತ್ತು. 'ಸ್ಥಾನಿಕರು' ತಮ್ಮ ಮೂಲ ದೇವಾಲಯಗಳಲ್ಲಿದ್ದುಕೊಂಡೇ ಸುತ್ತಮುತ್ತಲಿನ ಗ್ರಾಮಗಳ ದೇವಾಲಯಗಳನ್ನು ತಮ್ಮ ಸ್ಥಾನಗಳಿಗೆ 'ಪ್ರತಿಬದ್ಧ' ಮಾಡಿಕೊಂಡು ಅವುಗಳ ಮೇಲೆ ನಿಯಂತ್ರಣ ಸಾಧಿಸುತ್ತಿದ್ದರು.

ದೇವಾಲಯಗಳಲ್ಲಿ ಆರ್ಥಿಕ ಸಂಚಯ ಅಧಿಕವಾಗುತ್ತಿದ್ದಂತೆ ದೇವಾಲಯಗಳ ಕಾರ್ಯಭಾರವನ್ನು ಕಡಿಮೆ ಮಾಡಲು ದೇವಾಲಯಗಳ ಆವರಣದಲ್ಲಿಯೇ ಮಠಗಳನ್ನು ಪ್ರಾರಂಭಿಸಲಾಯಿತು. ಒಂದೇ ದೇವಾಲಯಕ್ಕೆ ಹೊಂದಿಕೊಂಡಂತೆ ಹಲವಾರು ಮಠಗಳು ಕಾರ್ಯನಿರ್ವಹಿಸುತ್ತಿದ್ದವು[೩೦]. ಇಂಥ ಮಠಗಳ ನಿರ್ವಹಣೆ 'ಸ್ಥಾನಪತಿ' ಎಂಬ ಏಕೈಕ ವ್ಯಕ್ತಿಯ ಜವಾಬ್ದಾರಿಯಾಗಿರುತ್ತಿತ್ತು.ಇವರ ಅಧೀನದಲ್ಲಿ ಪ್ರತಿಬದ್ಧವಾದ ದೇವಾಲಯಗಳಿಗೆ ಪುರವರ್ಗ ಅಥವಾ ಚಕ್ರವರ್ತಿಗಳು ದಾನ ನೀಡಬೇಕಾದರೆ ಸಂಬಂಧಪಟ್ಟ ಸ್ಥಾನಪತಿಗಳ ಅನುಮತಿಯನ್ನು ಪಡೆದು ಅವರ 'ಕಾಲಂಕರ್ಚಿ' (ಕಾಲು ತೊಳೆದು) ದಾನ ನೀಡಬೇಕಾಗಿತ್ತು.

ಹೀಗೆ ಅಪಾರ ಪ್ರಮಾಣದ ದಾನ ದತ್ತಿ, ಕೊಡುಗೆಗಳನ್ನು ಪಡೆದ ದೇವಾಲಯಗಳು ಸಂಪದ್ಭರಿತವಾಗುವುದು ಹಾಗೂ ವ್ಯವಹಾರ ಸಂಸ್ಥೆಗಳಾಗುವುದು ಸಹಜವೇ. ಕ್ರೋಢೀಕರಣಗೊಳ್ಳುತ್ತಿದ್ದ ಹಣವನ್ನು ಇಡುಗಂಟಾಗಿ ಇತರರಿಗೆ ನೀಡಿ ಅದರ ಬಡ್ಡಿಯನ್ನು ದೇವಾಲಯಗಳ ನಿರ್ವಹಣೆಗೆ ಬಳಸಿಕೊಳ್ಳುತ್ತಿದ್ದರು. ಗಂಗೆಯಜೀಯ ಎಂಬಾತನು ಊರಿನ ಇನ್ನೂರ್ವರು ಮಹಾಜನರನ್ನು ಕರೆಸಿ, ದೇಗುಲ ಮತ್ತು ಸತ್ರಗಳಿಗೆ ನೀವೇ ದಾತಾರರೆಂದು ಹೊನ್ನಿಗೆ ತಿಂಗಳಿಗೆ ಕಿರಿಯಪಾಗ ಬಡ್ಡಿ ಲೆಕ್ಕದಲ್ಲಿ

ಬರುವ ಬಡ್ಡಿಯ ಹಣದಿಂದ ಪ್ರತಿ ದಿನ ಹನ್ನೆರಡು ಜನ ಬ್ರಾಹ್ಮಣರಿಗೆ ಸತ್ರ ನಡೆಸಲು ಎಪ್ಪತ್ತು ಲೊಕ್ಕಿಯ ಪೊಂಗದ್ಯಾಣವನ್ನು, ಪಿರಿಯಪಾಗವಡ್ಡಿಯ ಮೂಲಕ ಬಂದ ಬಡ್ಡಿಯಲ್ಲಿ ಬಬ್ಬಲೇಶ್ವರ ದೇವರ ಅಂಗಭೋಗ, ರಂಗಭೋಗ ಮತ್ತು ಪೂಜಾರಿಯ ಕಪ್ಪಡಿಗೆ ಇಪ್ಪತ್ತೆರಡು ಗದ್ಯಾಣಗಳನ್ನು ನೀಡುತ್ತಾನೆ.[೩೧] ಹೀಗೆ 'ಬೀಜವೊಂನ್ನನ್ನು ಬಡ್ಡಿವೃದ್ಧಿಗಾಗಿ ಬಿಟ್ಟು ದೇವಾಲಯಗಳ ಕಾರ್ಯನಿರ್ವಹಣೆಗಾಗಿ ಸ್ಥಾನಪತಿಗಳ ಕೈಯಲ್ಲಿ ಕೊಡಲಾಗುತ್ತಿತ್ತು.[೩೨] ದೇವಾಲಯಗಳಲ್ಲಿ ಸಂಚಯವಾಗುತ್ತಿದ್ದ ಹಣವನ್ನು ಊರಿನವರಿಗೆ ಬಡ್ಡಿಗೆ ನೀಡಿ ಅದರಿಂದ ಪ್ರಾಪ್ತವಾಗುವ ಬಡ್ಡಿ ಹಣದಿಂದ ಮೂಲಸ್ಥಾನದೇವರ ನೈವೇದ್ಯ, ಅಂಗಭೋಗ, ಚೈತ್ರ ಪವಿತ್ರಾದಿಗಳಿಗಾಗಿ, ಪೂಜಾರಿಗಳು, ಹಾಡುವವರು, ಹರೆಕಾರರು ಮತ್ತು ಮಾಲೆಗಾರರ ಜೀವಿತಕ್ಕಾಗಿ ವ್ಯವಸ್ಥೆ ಮಾಡಲಾಗುತ್ತಿತ್ತು. ದೇವಾಲಯಗಳಲ್ಲಿ ಸಂಪತ್ತು ಸಂಚಯವಾದಂತೆಲ್ಲಾ ಅಲ್ಲಿ ಹಣಕಾಸಿನ ದುರ್ವಿನಿಯೋಗಗಳೂ ಸಹ ಹೆಚ್ಚಾದವು. ದಾನ, ಭೂಮಿಗಳನ್ನು ಒತ್ತೆಯಿಡುವ ನಿದರ್ಶನಗಳನ್ನು ಸಹ ಕಾಣಬಹುದು.[೩೩]

ಆಯಾ ಸಂದರ್ಭದಲ್ಲಿ ದೇವಾಲಯ ಮತ್ತು ಬಸದಿಗಳು ಪಡೆದ ದಾನದ ಸಂಪತ್ತೇ ಮುಂದಿನ ಕಾಲಮಾನದಲ್ಲಿ ಬಲಾಢ್ಯವಾದ ಧರ್ಮಗಳ ಕಣ್ಣು ಕುಕ್ಕಿರಲಿಕ್ಕೂ ಕಾರಣವಾಗಿರಬಹುದು. ಲಕ್ಷ್ಮೇಶ್ವರದ ಜಯಪತ್ರಗಳು ಹುಟ್ಟಿಕೊಳ್ಳುವುದಕ್ಕೆ ಬಸದಿಗಳಲ್ಲಿ ಸಂಚಯವಾಗಿದ್ದ ಇಂತಹ ದಾನದ ಸಂಪತ್ತೇ ಕಾರಣ. ಲಕ್ಷ್ಮೇಶ್ವರದ ಶಂಖ ಬಸದಿಯುಕ್ರಿ.ಶ. ಏಳನೆಯ ಶತಮಾನದಿಂದಲೂ ಬಾದಾಮಿ ಚಾಲುಕ್ಯರಿಂದ ಮೊದಲ್ಗೊಂಡು ವಿವಿಧ ರಾಜಮನೆತನಗಳ ಆಶ್ರಯದಲ್ಲಿ ವಿಫುಲ ದಾನದತ್ತಿಗಳನ್ನು ಪಡೆದುಕೊಂಡು ಅಪಾರ ಭೂಮಿಯ ಒಡೆತನವನ್ನು ಅನುಭವಿಸುತ್ತಿತ್ತು. ಹನ್ನೆರಡನೆಯ ಶತಮಾನದ ವೇಳೆಗೆ ಅಲ್ಲಿ ಶೈವಧರ್ಮ ಪ್ರಬಲವಾಯಿತು. ಅಲ್ಲಿದ್ದ ಶೈವಧರ್ಮೀಯರ ಕಣ್ಣು ಆ ವೇಳೆಗೆ ತನ್ನ ನೆಲೆಯನ್ನು ಕಳೆದುಕೊಳ್ಳುತ್ತಿದ್ದ ಜೈನ ಧರ್ಮೀಯರ ಆಸ್ತಿ ಸಂಪತ್ತಿನ ಮೇಲೆ ಬಿತ್ತು. ಸೋಮೇಶ್ವರ ದೇವಾಲಯದ ಶಿವರಾಮಯ್ಯ 'ಆಣೆ ಮೀರಿ ಬಲುಮೆಯಿಂದ ಶಂಖ ಬಸ್ತಿಗೆ ಸೇರಿದ ಜಮೀನಿನಲ್ಲಿ ವ್ಯವಸಾಯ ಮಾಡುತ್ತಿದ್ದರೂ . . . ಪುಲಿಗೆರೆಯ ನಾಗಗೌಡ ಮುಂತಾದ ಗೌಡು ಪ್ರಜೆಗಳಿಗೆ ಈ ವಿಷಯ ಗೊತ್ತಿದ್ದರೂ, ಆಗುತ್ತಿರುವ ಅನ್ಯಾಯಕ್ಕೆ ಮೂಕ ಸಾಕ್ಷಿಗಳಾಗಿದ್ದಾರೆ.ಆರ್ಥಿಕವಾಗಿ ಬಲಾಢ್ಯವಾಗಿರುವ ಬಹುಸಂಖ್ಯಾತ ಧರ್ಮಗಳು ಅಲ್ಪಸಂಖ್ಯಾತವಾಗುತ್ತಿರುವ ಧರ್ಮಗಳ ಮೇಲೆ ಆಕ್ರಮಣಕಾರಿ ಮನೋಧರ್ಮ ಪ್ರಕಟಿಸುತ್ತಿರುವುದನ್ನು ಈ ಜಯಪತ್ರ ಸೂಚಿಸುತ್ತದೆ.

### ೫.೩ ಧಾರ್ಮಿಕ ಸಂಘರ್ಷದ ಆಯಾಮಗಳು ಮತ್ತು ನೆಲೆ

ಕರ್ನಾಟಕದ ಧಾರ್ಮಿಕ ಸಂಘರ್ಷದ ಬಗ್ಗೆ ವ್ಯಾಖ್ಯಾನಿಸುವಾಗ ಅಬ್ಬಲೂರಿನ ಜಯಪತ್ರವನ್ನು ಚರ್ಚಿಸಿ ಅದನ್ನು 'ಧಾರ್ಮಿಕ ಸಂಘರ್ಷ'ದ ಫಲಿತವೆಂಬಂತೆ ವ್ಯಾಖ್ಯಾನಿಸಲಾಗಿದೆ. ಕರ್ನಾಟಕದಲ್ಲಿ ಲಭ್ಯವಾಗುವ ಆರಂಭಿಕ ಹಂತದ ಜಯಪತ್ರಗಳ ವಿಷಯ, ಕಥಾಹಂದರ ಅಂಥ ವ್ಯಾಖ್ಯಾನಗಳನ್ನು ಪುಷ್ಟೀಕರಿಸುತ್ತವೆ. ಆದರೆ, ಇಂಥ ಧಾರ್ಮಿಕ ಸಂಘರ್ಷಗಳಿಗೆ ಕಾರಣವಾದ ಅಂಶಗಳೇನಾಗಿದ್ದವು?

ಯಾವ ಚಾರಿತ್ರಿಕ ಒತ್ತಡದಲ್ಲಿ ಅವು ರೂಪುಗೊಂಡವು? ಯಾವ ಸನ್ನಿವೇಶಗಳು ಇವುಗಳಿಗೆ ಭೂಮಿಕೆಯನ್ನು ಒದಗಿಸಿದವು? ಎಂಬ ಬಗ್ಗೆ ಚರ್ಚೆಗಳು ನಡೆಯುವ ಅಗತ್ಯವಿದೆ. ಧಾರ್ಮಿಕ ಸಂಘರ್ಷದ ನೆಲೆಗಳನ್ನು ಹಾಗೂ ಧಾರ್ಮಿಕ ಸಂಘರ್ಷಕ್ಕೆ ಕಾರಣವಾಗಿರಬಹುದಾದಂತಹ ಕೆಲವು ಆಯಾಮಗಳನ್ನು ಇಲ್ಲಿ ಚರ್ಚಿಸುವುದು ಸಮುಚಿತವೆನಿಸುತ್ತದೆ.

ಕರ್ನಾಟಕದಲ್ಲಿ ಧರ್ಮಗಳ ನಡುವಿನ ಸಂಘರ್ಷ ಇಂದು-ನಿನ್ನೆ ಪ್ರಾರಂಭವಾದದ್ದಲ್ಲ. ಸನ್ನತಿಯ ಶಾಸನವು "ಬೇರೆ ಬೇರೆ ಧಾರ್ಮಿಕ ಪಂಥಗಳವರು (ಪಾಷಂಡ) ಕೇವಲ ತಮ್ಮ ಧರ್ಮಗಳನ್ನು ಹೊಗಳಿಕೊಂಡು ಬೇರೆಯವರ ಧರ್ಮಗಳನ್ನು ತೆಗಳುವುದರಿಂದ ಅವರ ಧರ್ಮಕ್ಕೆ ಹಾನಿ ಮಾಡುತ್ತಾರೆ. ಮಾತಿನಲ್ಲಿ ಸಂಯಮವಿರಬೇಕು" ಎಂದು ಪ್ರತಿಪಾದಿಸುತ್ತದೆ.[೩೪] ಬಹುಶಃ ಇದು ಅಂದು ಅಸ್ತಿತ್ವದಲ್ಲಿದ್ದ ಬೌದ್ಧ, ಜೈನ ಮತ್ತು ಆಜೀವಕರನ್ನು ಉದ್ದೇಶಿಸಿ ಹೇಳಿರಬಹುದು.

ಶಂಬಾ ಜೋಶಿಯವರ ಪ್ರಕಾರ 'ಧಾರ್ಮಿಕ ಪಂಥಗಳಲ್ಲಿ ಕಾಣಿಸಿಕೊಳ್ಳುವ ದ್ವಂದ್ವ ಅಥವಾ ಸಂಘರ್ಷವು ಇಮ್ಮೈಯುಳ್ಳದ್ದಾಗಿರುತ್ತದೆ.

1. ತಾತ್ವಿಕ ಸ್ವರೂಪದ ಸಾರ್ವಕಾಲಿಕವೆನಿಸುವ ಪ್ರಶ್ನೆಗಳೇ ಕೇವಲ ಈ ಧಾರ್ಮಿಕ ದ್ವಂದ್ವಗಳಲ್ಲಿ ಅಡಗಿರುವುದಿಲ್ಲ.
2. ತತ್ಕಾಲೀನ ವಿಶಿಷ್ಟ ಪ್ರಶ್ನೆಯ ಬಗೆಗಿನ ವಿವಾದವು, ವೈಯಕ್ತಿಕ ಅಥವಾ ಆ ವ್ಯಕ್ತಿಯು ಪ್ರತಿನಿಧಿಸುತ್ತಿರುವ ಪಂಥ ಅಥವಾ ಪಕ್ಷದ ಸ್ವಾರ್ಥ (ಹಿತ) ಸಾಧಿಸುವಲ್ಲಿ ಬರುವ ಅಡೆ-ತಡೆಗಳಿಂದಾಗಿಯೂ ಈ ಸಂಘರ್ಷವು ಹುಟ್ಟಿಕೊಳ್ಳುತ್ತದೆ . . . . . ಆಯಾಕಾಲದ ತಿಕ್ಕಾಟಕ್ಕೆ ಪ್ರೇರೇಪಿಸುವ ಅನೇಕ ಕಾರಣಗಳಲ್ಲಿ ಇದು ಒಂದಾಯ್ತು. ವೈಯಕ್ತಿಕ ರಾಗದ್ವೇಷಗಳೂ ಪಕ್ಷ-ಪಂಥದ ತಾತ್ವಿಕ ಭೂಮಿಕೆಯನ್ನು ಸಿದ್ಧಪಡಿಸಿದ್ದುದುಂಟು. ಧಾರ್ಮಿಕ ಸ್ವರೂಪದ ಸಂಘರ್ಷಗಳು ಗುರುವರ್ಗದಿಂದ ಪ್ರಚೋದಿತವಾಗಿ ಆರಂಭವಾಗಿ ಜನಸಾಮಾನ್ಯರವರೆಗೆ ಹಬ್ಬುತ್ತವೆ.[೩೫]

ಶಂಬಾ ಜೋಶಿಯವರು ಅಭಿಪ್ರಾಯಪಡುವಂತೆ ತಾತ್ವಿಕ ಸ್ವರೂಪದ ಸಾರ್ವಕಾಲಿಕವೆನಿಸುವ ಪ್ರಶ್ನೆಗಳು ಧಾರ್ಮಿಕ ದ್ವಂದ್ವಗಳಲ್ಲಿ ಅಡಗಿರುವುದಿಲ್ಲವೆಂಬುದು ನಿಜವಾದರೂ, ಆರಂಭಿಕ ಜಯಪತ್ರಗಳೆಲ್ಲ ಹುಟ್ಟಿಕೊಂಡಿರುವುದು ತಾತ್ವಿಕ ತಳಹದಿಯ ಮೇಲೆಯೇ. ತಾವು ನಂಬಿಕೊಂಡು ಬಂದ ತತ್ವ ಸಿದ್ಧಾಂತಗಳೇ ಶ್ರೇಷ್ಠವೆಂಬ ಭಾವದಿಂದ ಅವುಗಳನ್ನು ಸಮರ್ಥಿಸಿಕೊಳ್ಳುವ ಭರದಲ್ಲಿ ಹಲವಾರು ಘರ್ಷಣೆಗಳಿಗೂ ನಾಂದಿಯಾಗಿರಬಹುದು. ಇಂಥ ತಾತ್ವಿಕ ಘರ್ಷಣೆಗಳು ಶಾಸನಗಳಲ್ಲಿ ಹೆಚ್ಚು ಉಲ್ಲೇಖಗೊಂಡಿಲ್ಲ. ಸಾಹಿತ್ಯ ಕೃತಿಗಳಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿಂದಾಗಿ ಉಂಟಾದ

ಘರ್ಷಣೆಗಳನ್ನೂ ಹಾಗೂ ಅದರಲ್ಲಿ ವಿಜಯಿಯಾದ ವ್ಯಕ್ತಿಗಳಿಗೆ ಜಯಪತ್ರ ನೀಡಿರುವುದನ್ನು ಕಾಣಬಹುದಾಗಿದೆ.

ಕರ್ನಾಟಕದಲ್ಲಿ ತಾತ್ವಿಕ ಭಿನ್ನಾಭಿಪ್ರಾಯಗಳಿಂದ ಹುಟ್ಟಿಕೊಂಡ ಜಯಪತ್ರಗಳ ಪ್ರಥಮ ನಿದರ್ಶನ ನಮಗೆ ಪಂಪನ ಆದಿಪುರಾಣದಲ್ಲಿ ಲಭ್ಯವಾಗುತ್ತದೆ. ಚಾರ್ವಾಕವಾದಿಯೊಬ್ಬ 'ಕೂದಲನ್ನು ಕಿತ್ತುಕೊಂಡು ಉಟ್ಟುದನ್ನು ಬಿಟ್ಟುಬಿಟ್ಟು, ಸುರಲೋಕ ಸುಖವನ್ನು ಉಣ್ಣುವೆನೆಂಬ ಬತ್ತಲಿಗರ ಮಾತು ಕೇಳಬಾರದು, ಇರುವವರೆಗೆ ಇಂದ್ರಿಯಗಳ ಇಷ್ಟವನ್ನು ಸಡಿರಿಸಿ ವಸಂತದಲ್ಲಿ ಚಿಗುರನ್ನು ಕಚ್ಚಿದ ಕೋಗಿಲೆಯಂತೆ ಸುಖಿಸಬೇಕು ಎಂದಾಗ ಅದಕ್ಕೆ ಸ್ವಯಂಬುದ್ಧಿ ಎಂಬ ಮುನಿ ಸಮರ್ಪಕವಾದ ಉತ್ತರ ನೀಡಿ 'ಜಯಪತ್ರ' ಪಡೆಯುತ್ತಾನೆ.

"ಪರವಾದಿಗಳ ಮೊಗಂಗಳ್
ಕರಿರಿಕುವರಿದಂತೆ ಕಂದಿ ಕುಂದಿರೆ ಖಚರೇ
ಶ್ವರನೀಯೆ ಪಡೆದನತ್ಯಾ
ದರದಿಂ ಜಯಪತ್ರಮಂ ಸ್ವಯಂಬುದ್ಧಂ ಬುಧಂ॥[೩೬]

ದೇವರ ದಾಸಿಮಯ್ಯನಿಗೂ ಜೈನರಿಗೂ ವಾಗ್ವಾದವಾಗಿ ದಾಸಿಮಯ್ಯ ಗೆದ್ದು ಚಾಲುಕ್ಯ ಚಕ್ರವರ್ತಿಯಿಂದ'ಜಯಪತ್ರ' ಪಡೆದನೆಂದು ಮತ್ತು ಜಯಸಿಂಹನ ರಾಣಿ ಸುಗ್ಗಲಾದೇವಿ ಅವನ ಶಿಷ್ಯಳಾದಳೆಂದು ವೀರಶೈವ ಪುರಾಣಗಳು ತಿಳಿಸುತ್ತವೆ. "ರಾಮಾನುಜಾರ್ಯರು ತೊಣ್ಣೂರಿನಲ್ಲಿದ್ದಾಗ ಜೈನರು ಅಲ್ಲಿಗೆ ಹೋಗಿ ಅವರೊಡನೆ ಧರ್ಮಗಳ ತತ್ವಶಾಸ್ತ್ರಗಳಿಗೆ ಸಂಬಂಧಿಸಿದ ಚರ್ಚೆಯಲ್ಲಿ ತೊಡಗಿದರು. ತಿರುಮಲನಂಬಿಯ ಸಲಹೆಯಂತೆ ಆಚಾರ್ಯರು ದೇವಾಲಯದಲ್ಲಿದ್ದ ಕಿರುಕೋಣೆಗೆ ಹೋಗಿ ತಮಗೂ ಅಲ್ಲಿಗೆ ಬಂದಿದ್ದ ಗುಂಪಿಗೂ ನಡುವೆ ಒಂದು ತೆರೆಯನ್ನು ಎಳೆಯುವಂತೆ ಆದೇಶಿಸಿ ಜೈನವಾದಿಗಳೊಡನೆ ಅನೇಕ ವಿಧವಾಗಿ ವಾದ ಮಾಡಿ ಅವರನ್ನು ಸಂಪೂರ್ಣವಾಗಿ ಸೋಲಿಸಿದರು.[೩೭]

ಶಾಸನಗಳಲ್ಲಿ ಇಂತಹ ತಾತ್ವಿಕ ವಿಚಾರಗಳಿಗೆ ಜಯಪತ್ರ ಪಡೆದಂತಹ ನಿದರ್ಶನಗಳು ಕಂಡುಬರುವುದಿಲ್ಲ. ಆದರೆ, ಅಂಥ ಪಂಥಗಳನ್ನು ಗೆದ್ದು ಅದರ ಸಂಕೇತವಾಗಿ ಬಿರುದುಗಳನ್ನು ಪಡೆದಿರುವುದನ್ನು ಅವು ಸೂಚ್ಯವಾಗಿ ಉಲ್ಲೇಖಿಸುತ್ತವೆ.

ಆರಂಭಿಕವಾಗಿ ಜೈನರು ಅನ್ಯಧರ್ಮಗಳ ಮೇಲಿನ ವಿಜಯದ ಸಂಕೇತವಾಗಿ ಬಿರುದಾವಳಿಗಳನ್ನು ಹೊಂದಿದ್ದನ್ನು ಶಾಸನಗಳು ಉಲ್ಲೇಖಿಸುತ್ತವೆ. ಪರಸಮಯಗಳನ್ನು ಹಣಿಸಿದುದರ ಸಂಕೇತವಾಗಿ ಬಿರುದುಗಳನ್ನು ಹೊಂದುವುದು ಪ್ರತಿಷ್ಠೆಯ ವಿಷಯವಾಗಿತ್ತು. ಅಂಥ ಸಂದರ್ಭದಲ್ಲಿ ನೀಡಲಾಗುವ ಜಯಪತ್ರಗಳು ಪ್ರತಿಷ್ಠೆಯ ವಿಷಯ ಮಾತ್ರ ಆಗಿರದೆ, ಇತರ ಧರ್ಮಗಳನ್ನು ಮಣಿಸುವ ಅಸ್ತ್ರಗಳೂ ಸಹ ಆಗಿದ್ದವು. ಕರ್ನಾಟಕದ ಕೆಲವು ಶಾಸನಗಳಲ್ಲಿ ಜೈನ ಮುನಿಗಳ ಪಾಂಡಿತ್ಯವನ್ನು

ಹೊಗಳುವಾಗ ಅವರು ಇತರ ಧರ್ಮಗಳ ವಿದ್ವಾಂಸರನ್ನು ಸೋಲಿಸಿದುದನ್ನು ಪ್ರಸ್ತಾಪಿಸುತ್ತವೆ. ಶ್ರವಣಬೆಳಗೊಳದ ಶಾಸನವು,

'ಮಲೆಯದೆ ಶಾಂಖ್ಯ ಮಟ್ಟವಿರು, ಭೌತಿಕ ಪೊಂಗಿಕಡಂಗಿ
ಬಾಗದಿತೊನ್ತಿಲ ತೊಲ ಬೌದ್ಧ ತಲೆದೋಱದೆ ವೈಷ್ಣವಡಂಗಡಂಗು
ವಾಗ್ಬಲದ ಪೊಡರ್ಪ್ಪು ವೇಡ ಗಡ ಚಾರ್ವಾಕ ಚಾರ್ವಾಕ ನಿಮ್ಮ ದರ್ಪ್ಪಮಂ
ಸಲಿಪನೆ ಗೋಪನನ್ದಿಮುನಿಪುಂಗವನೆಂಬ ಮದಾನ್ಧಸಿನ್ಧುರಂ' ಎಂದು ಗೋಪನಂದಿಮುನಿ ಎಲ್ಲ ಧರ್ಮೀಯರಿಗೂ ಮದಾನ್ಧಸಿನ್ಧುರನಾಗಿದ್ದನೆಂದು ವರ್ಣಿಸುತ್ತದೆ.[೩೮]

ಬಹುತೇಕ ಜೈನ ಸನ್ಯಾಸಿಗಳು 'ಪರವಾದಿ ಶರಭ ಭೇರುಂಡರು'[೩೯] 'ಬೌದ್ಧವಾದಿ ತಿಮಿರ ಪತಂಗರುಂ ಸಾಂಖ್ಯವಾದಿ ಕುಳಾದ್ರಿ ವಜ್ರಧರರು'[೪೦] ವಾದಿ ವಿಷೋಗರ ತಾರ್ಕ್ಷ್ಯಕರು[೪೧] ಬೌದ್ಧ ಮದವೇದಂಡರು[೪೨] ತಾರ್ಕಿಕ ಚಕ್ರವರ್ತಿಗಳು[೪೩] ಆಗಿರುತ್ತಿದ್ದರು. ಜೈನಮುನಿಗಳ ಈ ಎಲ್ಲ ವಿಶೇಷಣಗಳನ್ನು ಗಮನಿಸಿದಾಗ, ಅವರು ಅಪಾರವಾದ ಪಾಂಡಿತ್ಯವನ್ನು, ವಿದ್ವತ್ತನ್ನು ಪಡೆದಿರುತ್ತಿದ್ದರು. ಇವರು ಬೌದ್ಧಿಕವಾಗಿ ಬೇರೆಯವರೊಂದಿಗೆ ವಾಗ್ವಾದಕ್ಕೆ, ಸಂಘರ್ಷಕ್ಕೆ ಇಳಿಯುತ್ತಿದ್ದದು ಸ್ಪಷ್ಟವಾಗುತ್ತದೆ. ಅದರಲ್ಲೂ ಬೌದ್ಧ ಮತ್ತು ಚಾರ್ವಾಕರೊಡನೆ ತಾತ್ವಿಕವಾಗಿ ಪೈಪೋಟಿ ನಡೆಸಿರುವಂತೆ ತೋರುತ್ತದೆ. ಅವರ ಬಿರುದು ಪ್ರಶಸ್ತಿಗಳು, ಅವರು ಪರಧರ್ಮಗಳ ಮೇಲೆ ಭೌತಿಕವಾಗಿ ಆಕ್ರಮಣ ಎಸಗಿದ ಪ್ರಸಂಗಗಳನ್ನು ಧ್ವನಿಸುವುದಿಲ್ಲ. ಮಿಗಿಲಾಗಿ ಸಾತ್ವಿಕವಾಗಿ ಎದುರಾಳಿ ಧರ್ಮಗಳನ್ನು ಮಣಿಸುತ್ತಿದ್ದುದು ಸೂಚಿಸುತ್ತವೆ.

ಜೈನ ಮುನಿಗಳು ಧರಿಸುತ್ತಿದ್ದಂತಹ 'ಪರಸಮಯವಾದೀ ವಿಜಯ' ಬಿರುದುಗಳು ಹನ್ನೆರಡನೆಯ ಶತಮಾನದ ಉತ್ತರಾರ್ಧದ ವೇಳೆಗೆ ಕಣ್ಮರೆಯಾಗುತ್ತಾ ಬರುತ್ತವೆ. ಪ್ರತಿಯಾಗಿ ಜೈನಧರ್ಮವನ್ನು, ಖಂಡಿಸುವ, ಬಗ್ಗುಬಡಿಯುವಂತಹ ಬಿರುದುಗಳನ್ನು ಶೈವ ಯತಿಗಳು ಧರಿಸುತ್ತಿದ್ದುದು ಕಂಡುಬರುತ್ತದೆ. ಶೈವಯತಿಗಳು ತಾತ್ವಿಕ ಪಂಥಗಳಲ್ಲಿ ಗೆದ್ದುದರ ಸಂಕೇತವಾಗಿ ಹೊಂದಿರುವಂತಹ ಬಿರುದುಗಳೂ ಇವೆ. 'ಚಂದ್ರಾಭರಣ ಪಂಡಿತನು ಸಕಲಾಸ್ಥಾನದೊಳು ತನ್ನ ಜಯಲೀಲಾ ದಿಂಡಿಮವನ್ನು ಬಾರಿಸಿ ಜೈನರನ್ನು ಸೋಲಿಸಿದ್ದ'. ಆದರೆ ಇಂತಹ ಸಾತ್ವಿಕವಾದ ಬಿರುದುಗಳು ವಿರಳವಾಗಿ ಕಂಡುಬರುತ್ತದೆ. ಮಿಗಿಲಾಗಿ ಜೈನಧರ್ಮದ ಮೇಲೆ ಭೌತಿಕವಾಗಿ ಆಕ್ರಮಣಗಳನ್ನು ಮಾಡಿ ಅವರನ್ನು ಬಗ್ಗುಬಡಿದ ವಾಚ್ಯಾರ್ಥಗಳನ್ನು ನೀಡುವಂತಹ ಬಿರುದುಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ.

ತಮ್ಮ ಹೆಸರುಗಳೊಂದಿಗೆ ಜೈನಧರ್ಮ ವಿರೋಧಿ ಪ್ರಶಸ್ತಿಗಳನ್ನು ಹಾಕಿಸಿಕೊಳ್ಳುವುದು ಹಾಗೂ 'ಕಾಳಾಮುಖ ಸಮಯಸಮುದ್ಧರಣ'ರೆಂಬ ಸ್ವಧರ್ಮ ರಕ್ಷಣೆಯ ಬಿರುದುಗಳನ್ನು ಧರಿಸುವುದು

ಪ್ರತಿಷ್ಠೆಯ ವಿಷಯವಾಗಿ ಬದಲಾಗಿತ್ತು.[೪೪] ಮನುಷ್ಯ ಮನುಷ್ಯರ ನಡುವೆ ದ್ವೇಷದ ಕಂದಕಗಳನ್ನು ತುಂಬಿ ಮಾನವೀಯ ಸಂಬಂಧಗಳ ಸಂಪರ್ಕ ಸೇತುವೆಯಾಗಬೇಕಾಗಿದ್ದ ಧರ್ಮಗಳು ಆಕ್ರಮಣಕಾರಿ ನೀತಿ ಅನುಸರಿಸಿದುದು, ಹಿಂಸ್ರಕ ಮನೋಧರ್ಮ ಪ್ರಕಟಿಸಿದುದು, ಅದನ್ನು ಪ್ರತಿಷ್ಠೆಯ ವಿಷಯವಾಗಿ ಪರಿಗಣನೆಗೆ ತೆಗೆದುಕೊಂಡುದು ವಿಪರ್ಯಾಸದ ಸಂಗತಿ.

ಗೊಗ್ಗರಸನ ವ್ಯಕ್ತಿತ್ವವನ್ನು ವರ್ಣಿಸುವ ಉದ್ದೇಶಕ್ಕಾಗಿ ಹಾಕಿಸಿರುವ ಅಣ್ಣಿಗೇರಿಯ ಶಾಸನದಲ್ಲಿ ಅವನ ಇಡೀ ವ್ಯಕ್ತಿತ್ವವೇ ಅನ್ಯಧರ್ಮ ವಿರೋಧಿ ಮನೋವೃತ್ತಿಯನ್ನು ಪ್ರತಿಪಾದಿಸುತ್ತದೆ. ಅವನ ಬಿರುದುಗಳೆಲ್ಲಾ ಜೈನವಿರೋಧಿ ಆಶಯವನ್ನು ಹೊಂದಿವೆ. ಗೊಗ್ಗಿದೇವನು ಘಟಾಂತಕಿಯ ಮತ್ತು ಜಿನನ ವಿಗ್ರಹಗಳನ್ನು ಭಂಗ ಮಾಡಿದ ಸಾಹಸವನ್ನು ಪ್ರಶಂಸಿಸುತ್ತಾ, ಅವನನ್ನು

'ಜಯಿನಮ್ರಿಗ ಬೇಂಟೆಕಾಱಂ
ಜಯಿನಾಗಮ ಧೂಮಕೇತು ಜಯಿನಕುಠಾರಂ,
ಜಯಿನ ಪಣಿವಯಿನತೇಯಂ'
ಜಯಿನಾಸ್ತಿಕನೆನಿಸಿ ನೆಗಳ್ದನೀ ಗೊಗ್ಗರಸಂ॥

ಅಗ್ಗದ ಘಟಾಂತಕಿಯಂ ಆದ
ನುರ್ಗ್ಗಾಗಿರೆಯೊಡೆದು ಕಳೆದು ಜಿನನಂ ತಾಗಲೆ
ದುರ್ಗತಿಯೊಳಿಕ್ಕಿ ಮೆಟ್ಟಿದ
ಗೊಗ್ಗರಸಾಗ್ರಣಿ ಕುಮಾರ ಆಹವಧೀವಂ॥

ಎಂದು ಹಲವಾರು ಜೈನ ವಿರೋದಿ ವಿಶೇಷಣಗಳಿಂದ ಸ್ತುತಿಸಲಾಗಿದೆ.[೪೫] ತಾಳಿಕೋಟೆ ಶಾಸನವಂತೂ ರಾಜರು ತಾವು ಆಕ್ರಮಿಸಿಕೊಂಡ/ಸ್ವಾಧೀನಪಡಿಸಿಕೊಂಡ ರಾಜ್ಯಗಳ ಪಟ್ಟಿಯನ್ನು ನೀಡುವಂತೆ ವಿರುಪರಸದೇವನು ಜೈನವಿಗ್ರಹಗಳನ್ನು, ಬಸದಿಗಳನ್ನು ನಾಶಮಾಡಿದ ಹಾಗೂ ಭಗ್ನಗೊಳಿಸಿದ ಸುಮಾರು ಹತ್ತಕ್ಕೂ ಹೆಚ್ಚಿನ ಗ್ರಾಮಗಳ ಪಟ್ಟಿಯನ್ನು ದೊಡ್ಡ ಸಾಧನೆಯೆಂಬಂತೆ ನಿರೂಪಿಸುತ್ತದೆ.

"ದಿಂ ಮುಱಿವರುಂ ಪರಸಮಯಗಿರಿವಜ್ರದಂಡರುಂ ಜಗದಲುದ್ದಂಡರುಂ
ಜಿನಸಮಯವನದಹನ ದಾವಾನಳರುಂ ಮುನಿದರ್ಗೆ ಹಾಳಾಹಳರುಂ ಬೌದ್ಧ
ಸಮಯ ವಿಧ್ವಂಸನ ಪ್ರವೀಣರುಂ ಬಗೆಯಲು ಜಾಣರುಂ ಅನ್ಯಸಮಯಿಗಳ
ಬೆನ್ನ ಬಾರನೆತ್ತುವರುಂ ಸೆಣಸುವರ ನೆತ್ತರಂ ಮರುಳ್ಗಳಿಂ ಕುಡಿಸುವರುಂ".

ಎಂದು ಪರಸಮಯವನ್ನು ನಾಶ ಮಾಡಿದ ಹೆಗ್ಗಳಿಕೆಯ ಬಿರುದುಗಳಿಂದ ಪ್ರಶಂಸಿಸಲಾಗಿದೆ. ಮುಂದುವರೆಸುತ್ತಾ 'ಅನಂತ ದೇಶಾಂತರದಲ್ ಇದಿರಾದ ಪರಸಮಯಗಳಂ ಪಡಲ್ವಡಿಸಿ ಲೋಕನಾಕಂಪಂಗೊಳಿಸಿ ಬಸದಿಗಳಂ ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಮಂ ಕಣ್ಗೊಳಿಸಿ ಚಲಮಂ ಮೆರೆಯುತ್ತಿದ್ದನೆಂದು' ಹೊಗಳುತ್ತದೆ. ಶಾಸನದಲ್ಲಿ ಬಸದಿಗಳನ್ನು ನಾಶ ಮಾಡಿದ ಗ್ರಾಮಗಳ

ಪಟ್ಟಿಯನ್ನು ನೀಡುತ್ತಾ, ಪರಿಯಳಿಗೆ, ಅಣಲವಾಡ, ಉಣಕಲ್ಲು, ಸಂಪಗಾವಿ, ಅಬ್ಬಲೂರು, ಮಾರುಡಿಗೆ, ಅಣಂಪೂರ, ಕರಹಾಡ, ಕೆಂಬಾವಿ, ಬಮ್ಮಕೂರು, ಮುಂತಾದ ಕಡೆ ಬಸದಿಗಳನ್ನು ನಾಶ ಮಾಡಿ ಶಿವಲಿಂಗ ಪ್ರತಿಷ್ಠಾಪನೆ ಮಾಡಿದ್ದನ್ನು ಶಾಸನ ಉಲ್ಲೇಖಿಸುತ್ತದೆ.[೪೬]

ಅಬ್ಬಲೂರಿನಲ್ಲೂ ಇದೇ ಘಟನೆ ಮರುಕಳಿಸಿದೆ. ಅಬ್ಬಲೂರಿನ ಜಯಪತ್ರದ ಪ್ರಕಾರ ರಾಮಯ್ಯ ಒಬ್ಬ ಕಾರಣೀಪುರುಷ. ಭೂಲೋಕದಲ್ಲಿ ಉತ್ಕಟವಾದ ಪರಸಮಯಗಳನ್ನು ನಿಯಾಮಿಸಬೇಕೆಂಬ ಶಿವನ ಆಣತಿಯಂತೆ ವೀರಭದ್ರನ ಅಂಶವಾಗಿ ಹುಟ್ಟಿದವನು. ಅವನು ಪುಲಿಗೆರೆಗೆ ಬಂದಾಗ ಸೋಮನಾಥನ ಆದೇಶದ ಪ್ರಕಾರ ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯಕ್ಕೆ ಬರುತ್ತಾನೆ. ಅಲ್ಲಿ ಸಂಕಗೌಡ 'ಶಿವಸನ್ನಿಧಿಯಲ್ಲಿ ಅನ್ಯದೇವತಾಸ್ತವನ' ಮಾಡಿದ್ದನ್ನು ಕೇಳಲಾರದೆ, ವಾದಕ್ಕೆ ಇಳಿಯುತ್ತಾನೆ. ಪರಸ್ಪರ ಒಬ್ಬರಿಗೊಬ್ಬರು ವಾಗ್ವಾದಕ್ಕಿಳಿದು ಉಭಯ ಧರ್ಮೀಯರ ದೇವರನ್ನು ಹಳಿಯಲಾರಂಭಿಸುತ್ತಾರೆ. ಅಂತಿಮವಾಗಿ ಶಿರಸ್ ಪವಾಡ ಗೆದ್ದು ಬಸದಿಯನ್ನು ನಾಶ ಮಾಡಿ, ಜಿನನ ವಿಗ್ರಹವನ್ನು ಉರುಳಿಸಿ ಅಲ್ಲಿ ಶ್ರೀವೀರಸೋಮನಾಥನನ್ನು ಪ್ರತಿಷ್ಠಾಪಿಸುತ್ತಾನೆ.

ವಿಗ್ರಹಗಳನ್ನು ನಾಶಮಾಡಿ ಸೋಮೇಶ್ವರನನ್ನು ಪ್ರತಿಷ್ಠಾಪಿಸಿದ ವೀರವ್ರತಿ ರಾಮಯ್ಯ ಮುಂದೆ ಪುರಾಣದ ಕಥನವಾಗುತ್ತಾನೆ, ಶಿವಭಕ್ತಿಗೆ ಮಾದರಿಯಾಗುತ್ತಾನೆ. ರಾಮಯ್ಯನಂತೆ ಉಗ್ರ ಭಕ್ತಿ ಮೆರೆದ ಆದಯ್ಯ, ಇರಿಭಕ್ತನ ರಗಳೆ, ವೈಜಕವ್ವಯ ರಗಳೆ, ಹೇರೂರು ಹೆಂಗೂಸಿನ ರಗಳೆಯಂತಹ ಇತರರ ರಗಳೆಗಳು ತತ್ಕಾಲೀನ ಸಮಾಜದ ಧಾರ್ಮಿಕ ಸಂಘರ್ಷಗಳನ್ನು ಸಾಹಿತ್ಯ ಕೃತಿಗಳ ಮೂಲಕ ಕಟ್ಟಿಕೊಟ್ಟಿವೆ. ಇವನ್ನೆಲ್ಲ ಧಾರ್ಮಿಕ ಸಂಘರ್ಷದ ನೆಲೆಯಿಂದ ನೋಡಲು ಸಾಧ್ಯ.

ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದ ಇಂಥ ಜೈನವಿರೋಧಿ ಮನೋಭಾವಗಳು ಸಮಕಾಲೀನ ಸಮುದಾಯಗಳ ತಾತ್ವಿಕತೆಯನ್ನು ರೂಪಿಸಿವೆ. ಜನಪದ ಕಾವ್ಯಗಳನ್ನೂ ಸಹ ಇಂತಹ ಸಂಘರ್ಷಗಳು ಬಿಡಲಿಲ್ಲ. ಜನಪದ ಮಹಾಕಾವ್ಯವಾದ ಮಾದೇಶ್ವರ ಕಥಾನಕದ ಶ್ರವಣ ದೊರೆಗಳ ಸಾಲಿನಲ್ಲಿ, ಮಾದೇಶ್ವರ ಕಾರಣ ಸಂಭೂತನಾಗಿದ್ದು, ಅವನ ಜನನದ ಉದ್ದೇಶವೇ ದುಷ್ಟನಾದ ಜೈನಶ್ರವಣ ದೊರೆಯ ಸಂಹಾರವಾಗಿದೆ.

ಕುಮಾರ ರಾಮನ ಸಾಂಗತ್ಯದ ಪ್ರಕಾರ ಕುಮಾರ ರಾಮ ಬೇಟೆಯಾಡುತ್ತಾ ಕುಮ್ಮಟ ಎಂಬ ಗ್ರಾಮಕ್ಕೆ ಬರುತ್ತಾನೆ. ಅಲ್ಲಿದ್ದ ಜೈನರು ಅವನನ್ನು ಸತ್ಕರಿಸುತ್ತಾರೆ. ಕುಮಾರ ರಾಮ ಊಟ ಮುಗಿಸಿ ಎದ್ದುಹೋದ ನಂತರ ಜೈನರು ಅವನು ಊಟ ಮಾಡಿದ ಸ್ಥಳವನ್ನು ಶುದ್ಧಮಾಡುತ್ತಾರೆ. ವಿಷಯ ತಿಳಿದ ಕುಮಾರರಾಮ, ಕೋಪಗೊಂಡು ಮಾರನೆಯ ದಿನ ಅದೇ ಸ್ಥಳದಲ್ಲಿ ಕುರಿ–ಕೋಣಗಳನ್ನು ಕಡಿದಾಗ, ಜೈನರು ತಮ್ಮ ಅಹಿಂಸಾವ್ರತಕ್ಕೆ ಭಂಗ ಬಂದಿತೆಂದು ಆ ಸ್ಥಳವನ್ನು ಬಿಟ್ಟು ಕೊಪ್ಪಳಕ್ಕೆ ಹೋಗಿ ನೆಲೆಸುತ್ತಾರೆ. ರಾಮ ಅಲ್ಲೇ ಒಂದು ಕೋಟೆ ಕಟ್ಟಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ

ಮಾಡಿಕೊಳ್ಳುತ್ತಾನೆ.[೪೭] ಕುಮಾರ ರಾಮನ ತಾತ ಹೊಸಮಲೆ ದುರ್ಗದ ಮುಮ್ಮಡಿ ಸಿಂಘನಿಂದಲೂ ಸಹ ಜೈನಧರ್ಮ ಹೊಡೆತ ತಿಂದಿದ್ದು ಶಾಸನಗಳಿಂದ ತಿಳಿಯುತ್ತದೆ. ಯಲಬುರ್ಗ ಶಾಸನವು, ರಾಯಾಚಾರ್ಯ ಎಂಬುವವನು ಹಾಳಾದ ಜೈನಧರ್ಮವನ್ನು ಉದ್ಧರಿಸಿದನೆಂದು ಹೇಳುವಾಗ, ಅಲ್ಲಿ 'ಮುಮ್ಮಡಿ ಸಿಂಗನಬಾಧೆಯಿಂದ ಜೈನಧರ್ಮ ಕೆಟ್ಟಿತು' ಎಂದು ಉಲ್ಲೇಖಿಸುತ್ತದೆ.[೪೮]

ರಾಜರ, ಅಧಿಕಾರಿ ವರ್ಗದ ಅಧೀನದಲ್ಲಿ ನಿರ್ಮಾಣವಾಗುತ್ತಿದ್ದ 'ಶುದ್ಧ ಜಿನಾಲಯಗಳು' ನಂತರ ಅಗ್ರಹಾರಗಳ ಮಹಾಜನರ ಮತ್ತು ಕಾಳಾಮುಖ ದೇವಾಲಯಗಳ/ಮಠಗಳ ಕೃಪಾಕಟಾಕ್ಷದಲ್ಲಿ 'ಬ್ರಹ್ಮಜಿನಾಲಯಗಳಾಗಿ' 'ಎಕ್ಕೋಟಿ ಜಿನಾಲಯಗಳಾಗಿ' ಪ್ರತಿನಾಮಗೊಳ್ಳುವುದು ಸಹ ಕರ್ನಾಟಕದ ಧಾರ್ಮಿಕ ಸಂಘರ್ಷಗಳ ಆರಂಭಿಕ ಸೂಚನೆಗಳಾಗಿವೆ. ಇಂಥ ಸಂಘರ್ಷಗಳು ಕೇವಲ ಹನ್ನೆರಡನೆಯ ಶತಮಾನಕ್ಕೆ ಮಾತ್ರ ಸೀಮಿತವಾಗಿಲ್ಲ. ಇತಿಹಾಸದುದ್ದಕ್ಕೂ ಮರುಕಳಿಸುತ್ತಲೇ ಇದ್ದವು. ಅಂಥ ಸಂಘರ್ಷಗಳನ್ನು ಶಾಸನ, ಕಾವ್ಯ ಹಾಗೂ ಐತಿಹ್ಯಗಳು ವಿಭಿನ್ನ ರೀತಿಗಳಲ್ಲಿ ಪರೋಕ್ಷವಾಗಿ ತಿಳಿಸುತ್ತಲೇ ಬಂದಿವೆ.

ವಿಜಯನಗರ ಅರಸರ ಕಾಲದಲ್ಲೂ ಸಹ ಜೈನರು ಇಂಥ ಹಲವಾರು ಸಂಘರ್ಷಗಳಿಗೆ ಮುಖಾಮುಖಿಯಾಗಬೇಕಾಯಿತು. ಅದರ ಫಲಿತಗಳೇ ಕಲ್ಯ ಮತ್ತು ಶ್ರವಣಬೆಳಗೊಳ ಶಾಸನಗಳು. ಜೈನರು ಕೇವಲ ಕಲ್ಯ ಮತ್ತು ಶ್ರವಣಬೆಳಗೊಳದಲ್ಲಿ ಮಾತ್ರ ತೊಂದರೆಗೊಳಗಾಗಿರಲಿಲ್ಲ. ಆನೆಗೊಂದಿ, ಹೊಸಪಟ್ಟಣ, ಪೆನುಗೊಂಡೆಗಳಲ್ಲೂ ಜೈನರ ಮೇಲೆ ಆಕ್ರಮಣಗಳು ನಡೆಯುತ್ತಿದ್ದವು. ಕೃಷ್ಣದೇವರಾಯನಕಾಲದಲ್ಲಿ ಜೈನರ ಮನೆಯನ್ನು ಮತ್ತು ಸಕಲವನ್ನು ಜಪ್ತಿ ಮಾಡಿದಾಗ, ಕಂಗಾಲಾದ ಜೈನರು ಬಸದಿಗಳ ಬಾಗಿಲನ್ನು ಮುಚ್ಚಿಕೊಂಡು ವಲಸೆ ಹೋಗತೊಡಗಿದಾಗ, ಇದರಿಂದ ಪಶ್ಚಾತ್ತಾಪಪಟ್ಟ ಅಂಣಸೇನಬೋವ ಜಪ್ತಿ ವಸ್ತುಗಳನ್ನು ಹಿಂದಕ್ಕೆ ನೀಡಿ, ಬಸದಿಗಳ ಬಾಗಿಲು ತೆಗೆಸಿ, ಮನೆ ಬಾಗಿಲುಗಳಿಗೆ ಕಲ್ಲನ್ನು ಹಾಕುವುದಿಲ್ಲವೆಂದು ಪ್ರಮಾಣ ಮಾಡುತ್ತಾನೆ.[೪೯]

ಮೈಸೂರು ಅರಸರ ಕಾಲದಲ್ಲಿ ಜೈನಧರ್ಮದ ಪರಮೋಚ್ಚ ಕೇಂದ್ರವಾದ ಶ್ರವಣಬೆಳಗೊಳದಲ್ಲೇ ಜೈನರು ತಮ್ಮ ನೆಲೆ ಕಳೆದುಕೊಳ್ಳುವ ಹಂತಕ್ಕೆ ತಲುಪಿದ್ದರು.ಡಿ.ಆರ್. ನಾಗರಾಜ್‌ರವರು ಕನ್ನಡ ಸಾಹಿತ್ಯ ಸಂಸ್ಕೃತಿಯ ಎರಡು ಬಗೆಯ ಬೆಳವಣಿಗೆಗಳನ್ನು ತಿಳಿಸುತ್ತಾ, ಹೇಳಿರುವ ಮಾತುಗಳು ಕರ್ನಾಟಕದ ಧಾರ್ಮಿಕ ಕ್ಷೇತ್ರಕ್ಕೂ ಅನ್ವಯಿಸುತ್ತದೆ. 'ಸಾಮಾಜಿಕ ಮೌಲ್ಯಗಳ ನೆಲೆಯಲ್ಲಿ ವೈದಿಕ ಮೌಲ್ಯಗಳ ಜೊತೆಗೆ ಸಾಮರಸ್ಯವೂ, ಧಾರ್ಮಿಕ ತತ್ವಗಳ ನೆಲೆಯಲ್ಲಿ ವೈದಿಕದ ಜೊತೆಗೆ ಸಂಘರ್ಷವೂ ಜೈನ ಧರ್ಮದ 'ವಿಶ್ವ ದೇಸಿಯ' ಮುಖ್ಯ ಲಕ್ಷಣ ಎನ್ನುತ್ತಾರೆ.[೫೦]

ಧರ್ಮ ಸಂಘರ್ಷಕ್ಕೆ ಹತ್ತಾರು ಆಯಾಮಗಳಿವೆ. ಅವುಗಳನ್ನೆಲ್ಲ ವಿಭಿನ್ನ ತಾತ್ವಿಕ ಹಿನ್ನೆಲೆಯಲ್ಲಿ ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಬಹುದಾಗಿದೆ. ಜಯಪತ್ರಗಳ ಹಿನ್ನೆಲೆಯಲ್ಲಿ ಮಧ್ಯಕಾಲೀನ

ಕರ್ನಾಟಕದಲ್ಲಿ ನಡೆದ ಧರ್ಮಸಂಘರ್ಷಕ್ಕೆ ಪ್ರಧಾನವಾಗಿ ಈ ಮುಂದಿನ ಕಾರಣಗಳನ್ನು ಗುರುತಿಸಲಾಗಿದೆ.

i. ರಾಜಾಶ್ರಯ ಮತ್ತು ಅಧಿಕಾರ
ii. ಧರ್ಮಗಳ ಸಾಂಘೀಕರಣ ಪ್ರಕ್ರಿಯೆ
iii. ಧರ್ಮನಿಷ್ಠತೆ

**೫.೩.೧ ರಾಜಾಶ್ರಯ ಮತ್ತು ಅಧಿಕಾರ**

ಧರ್ಮಗಳ ನಡುವೆ ತಿಕ್ಕಾಟಗಳು ಪ್ರಾರಂಭವಾಗುವುದಕ್ಕೆ ಹಾಗೂ ಮುಂದುವರೆಯುವುದಕ್ಕೆ ಧರ್ಮಗಳ ನಡುವಿನ ಅಸಹನೆ ಮಾತ್ರ ಕಾರಣವಲ್ಲ, ಧರ್ಮವನ್ನು ರಾಜನ ಆಸ್ಥಾನಕ್ಕೆ ಎಳೆದೊಯ್ಯಲು ಮಾಡಿದ ತಂತ್ರವೂ ಕಾರಣವಾಗಿದೆ.ರಾಜ್ಯ ರಾಜಕಾರಣದಲ್ಲಿ ಪ್ರತಿಷ್ಠಿತ ಸ್ಥಾನಮಾನ ಪಡೆಯಲು ನಡೆದ ಹವಣಿಕೆಯೂ ಸಹ ಧಾರ್ಮಿಕ ಸಂಘರ್ಷಕ್ಕೆ ಕಾರಣವಾಗಿದೆ. ಒಂದು ಧರ್ಮಕ್ಕೆ ರಾಜನ ಮತ್ತು ರಾಜ ಪರಿವಾರದ ಬೆಂಬಲ ದೊರೆತರೆ, ಆ ಧರ್ಮ ಜನರ ಮೇಲೆ ಅಧಿಕಾರ ಸ್ಥಾಪಿಸಿ, ವರ್ಚಸ್ಸು ಬೀರಿ, ಇತರರನ್ನೂ ಆ ಧರ್ಮದ ಪರಿಧಿಯೊಳಗೆ ತೆಗೆದುಕೊಳ್ಳುವುದು ಸುಲಭ. ದೇವಾಲಯಗಳಲ್ಲಿ ಬಹುಮುಖಿ ಕಾರ್ಯಚಟುವಟಿಕೆಯನ್ನು ಕೈಗೊಳ್ಳಲು ಅಧಿಕಾರ ಮತ್ತು ಸಂಪತ್ತು ಎರಡೂ ಮುಖ್ಯ. ಪ್ರಭುತ್ವದ ಬೆಂಬಲವಿದ್ದರೆ, ಇಂತಹ ಕೆಲಸಗಳು ಸುಗಮವಾಗುತ್ತವೆ. ಅಲ್ಲದೆ, ರಾಜಾಶ್ರಯವಿದ್ದಾಗ ಸಾಮಾನ್ಯ ಜನರ ವಿಶ್ವಾಸವನ್ನು ಗಳಿಸುವುದೂ ಸಹ ಸುಲಭ. ಇಂತಹ ಸನ್ನಿವೇಶಗಳಲ್ಲಿ ಸಹಜವಾಗಿಯೇ ಧರ್ಮಗಳ ನಡುವೆ ದ್ವೇಷಾಸೂಯೆಗಳು, ಪೈಪೋಟಿ ಏರ್ಪಡುತ್ತವೆ. ವಿಧ್ವಂಸಕ ಧೋರಣೆಗಳು, ಪ್ರತಿರೋಧಗಳು ಉಂಟಾಗುತ್ತವೆ.

ಕರ್ನಾಟಕದಲ್ಲಿ ಕ್ರಿ.ಶ. ೪ನೇ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಕದಂಬರ ಕಾಲದಿಂದಲೂ ಜೈನಧರ್ಮ ರಾಜಾಶ್ರಯದ ಛಾಯೆಯಲ್ಲಿ ಪ್ರಬಲ ವೈರಾಳಿಗಳಿಲ್ಲದೆ ಭದ್ರವಾಗಿ ನೆಲೆಗೊಂಡು ರಾಜಧರ್ಮವಾಗಿ, ಪ್ರಜಾಧರ್ಮವಾಗಿ ಮಾನ್ಯತೆಯನ್ನು ಪಡೆದಿತ್ತು. ಹನ್ನೊಂದನೆಯ ಶತಮಾನಾನಂತರ ಜೈನಧರ್ಮದ ಸ್ಥಾನವನ್ನು ಇತರ ಧರ್ಮಗಳು ಆಕ್ರಮಿಸಿಕೊಂಡವು. ಅವು ರಾಜಾಶ್ರಯಕ್ಕಾಗಿಯೋ, ಪ್ರಭುತ್ವದ ಗಮನವನ್ನು ಸೆಳೆಯುವುದಕ್ಕಾಗಿಯೇ ಉಗ್ರ ಸ್ವರೂಪದ ಪ್ರತಿರೋಧವನ್ನು ತೋರಿದವು.

ಇದು ಕರ್ನಾಟಕಕ್ಕೆ ಮಾತ್ರ ಸೀಮಿತವಾಗಲಿಲ್ಲ. ನೆರೆಯ ತಮಿಳುನಾಡಿನಲ್ಲೂ ಸಹ ಇಂಥದೇ ಪರಿಸ್ಥಿತಿಯಿತ್ತು. ನಾಯನ್ಮಾರರು ಭಕ್ತಿ ಆಂದೋಲನದ ಮೂಲಕ ಜೈನರಾಗಿದ್ದ ಹಲವಾರು ಪಾಂಡ್ಯ, ಪಲ್ಲವ ಅರಸರನ್ನು ಶೈವ ಧರ್ಮಕ್ಕೆ ಮತಾಂತರ ಮಾಡಿದ ಸ್ಪಷ್ಟ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ.[೫೧] ಭಕ್ತಿ ಆಂದೋಲನದ ಮುಖಾಂತರ ರಾಜಾಶ್ರಯವನ್ನು ಪಡೆದ ಶೈವರು

ತಮಿಳುನಾಡಿನಿಂದ ಬೌದ್ಧ ಹಾಗೂ ಜೈನರನ್ನು ಸೋಲಿಸುವ ಏಕೈಕ ಉದ್ದೇಶ ಹೊಂದಿದ್ದರು. ಅದಕ್ಕಾಗಿ ವಾಗ್ವಾದಗಳನ್ನು ಏರ್ಪಡಿಸಿ, ಅವರನ್ನು ಸೋಲಿಸಿ ಸಾವಿರಾರು ಜನರನ್ನು ಶೂಲಕ್ಕೇರಿಸಲಾಯಿತು. ಇದರಿಂದ ಭಯಭೀತರಾದ ಅಳಿದುಳಿದ ಜೈನರಲ್ಲಿ ಕೆಲವರು ಶೈವಧರ್ಮಕ್ಕೆ ಮತಾಂತರವಾದರೆ, ಇನ್ನೂ ಕೆಲವರು ಬಹುಶಃ ಕರ್ನಾಟಕಕ್ಕೆ ಬಂದರೆಂದು ತೋರುತ್ತದೆ. ಹರಿಹರನ ಕೆಲವು ರಗಳೆಗಳಲ್ಲೂ ಸಹ ಈ ಸನ್ನಿವೇಶ ಚಿತ್ರಿತವಾಗಿದೆ. ರಾಜಾಶ್ರಯದ ಅಡಿಯಲ್ಲಿ ಆರ್ಥಿಕ ಬೆಂಬಲದೊಂದಿಗೆ ಧರ್ಮಗಳು ಹೇಗೆ ಬೆಳೆಯುತ್ತವೆ. ರಾಜಾಶ್ರಯದ ಗೈರುಹಾಜರಿಯಲ್ಲಿ ಹೇಗೆ ತತ್ತರಿಸುತ್ತವೆ ಎಂಬುದಕ್ಕೆ ಕರ್ನಾಟಕದಲ್ಲಿ ಜೈನ, ವೈಷ್ಣವ ಹಾಗೂ ಶೈವ ಧರ್ಮಗಳು ದೃಷ್ಟಾಂತ ರೂಪಕಗಳಾಗಿವೆ.

**೫.೩.೨ ಧರ್ಮಗಳ ಸಾಂಘೀಕರಣ ಪ್ರಕ್ರಿಯೆ**

ಜೈನಧರ್ಮ ಕರ್ನಾಟಕಕ್ಕೆ ಪ್ರವೇಶ ಮಾಡುವ ವೇಳೆಗಾಗಲೇ ಅದು ಸಾಂಸ್ಥಿಕ ರೂಪವನ್ನು ಪಡೆದಿತ್ತು. ಜೈನರಿಗೆ ಧಾರ್ಮಿಕ ಹಾಗೂ ಲೌಕಿಕ ಮಾರ್ಗದರ್ಶನಕ್ಕಾಗಿ ಗುರುಗಳು ಇದ್ದರು. ಹಾಗೆಯೇ ಮಠಗಳೂ ಸಹ ಹುಟ್ಟಿಕೊಂಡಿದ್ದವು. ಅದರಲ್ಲಿ ಭಿನ್ನವಾದ ಗಣ, ಗಚ್ಚ, ಬಳಿ, ಸಂಘಗಳಿದ್ದರೂ, ಅದು ದೇಶದ ಬೇರೆ ಬೇರೆ ಕಡೆ ಚದುರಿಹೋಗಿದ್ದರೂ, ಅವುಗಳ ಚಟುವಟಿಕೆಗಳು ಸಾಂಘಿಕವಾಗೇ ನಡೆಯುತ್ತಿದ್ದವು. ಅವುಬದಲಾದ ಕಾಲಮಾನಕ್ಕೆ ತಕ್ಕ ಹಾಗೆ ಭಿನ್ನವಾದ ತತ್ವಾಚರಣೆಗಳಿಂದ ದಿಗಂಬರ, ಶ್ವೇತಾಂಬರ, ಯಾಪನೀಯ ಸಂಘಗಳಾಗಿ ವಿಭಜನೆ ಹೊಂದಿದರೂ ಸಹ, ಅವುಗಳ ನಡುವೆ ಪರಸ್ಪರ ವೈರತ್ವವನ್ನು ಪೋಷಿಸುವ ಮನೋಭಾವವಾಗಲೀ, ಹಿಂಸ್ರಕ ಗುಣವನ್ನು ಪ್ರಕಟಿಸಿರುವ ನಿದರ್ಶನಗಳಾಗಲೀ ಕಂಡುಬರುವುದಿಲ್ಲ. "There was not a single instance of religious persecution in the annals of Jaina history" ಎಂಬ ವಿನ್ಸೆಂಟ್ ಸ್ಮಿತ್‌ರವರ ಅಭಿಮತವನ್ನು "ಅನ್ಯಮತಗಳ ವಿಷಯದಲ್ಲಿ ಉದಾರಿಗಳೆಂದು ಹೆಸರಾದ ಹಿಂದುಗಳೂ ಆ ಯುಗದಲ್ಲಿ, ದಕ್ಷಿಣ ಭಾರತದಲ್ಲಿ ಜೈನಧರ್ಮದ ವಿಷಯದಲ್ಲಿ ಅಸಹನೆಯಿಂದ ನಡೆದುಕೊಂಡಿದ್ದಕ್ಕಿಂತ ದುಃಖಪೂರ್ಣವಾದ ಘಟನೆ ಬೇರೊಂದಿಲ್ಲ" ಎಂದು ಸಾಲ್ತೊರೆಯವರು ಅಭಿಪ್ರಾಯಪಟ್ಟಿದ್ದಾರೆ.[೫೨]

ವೈದಿಕ ಧರ್ಮದ ಅಡಿಯಲ್ಲಿ ಇದ್ದಂತಹ ಹತ್ತಾರು ಜಾತಿ–ಕುಲಗಳು ಹಲವಾರು ವಿವಿಧ ಆಚರಣೆಗಳಲ್ಲಿ ತೊಡಗಿದ್ದರು. ಅವರಿಗೆ 'ಕಲ್ಲೂ ದೈವವಾಗಿತ್ತು, ಮೊರವೂ ದೈವವಾಗಿತ್ತು, ಮಾರಿ ಮಸಣಿಗಳೂ ದೈವ'ಗಳಾಗಿದ್ದವು. ಒಬ್ಬೊಬ್ಬರಲ್ಲಿ ಅಥವಾ ಒಂದೊಂದು ಸಮುದಾಯಗಳಲ್ಲಿ ಒಂದೊಂದು ತೆರನಾದ ಆಚರಣೆಗಳು ಪ್ರಚಲಿತದಲ್ಲಿದ್ದರಿಂದ, ಇವುಗಳ ನಡುವೆ ಏಕಸೂತ್ರತೆಯೆಂಬುದು ಇರಲಿಲ್ಲ. ಹಾಗಾಗಿ ಇವು ಸಾಂಘಿಕ ಸ್ವರೂಪ ಪಡೆಯದೆ ವ್ಯಕ್ತಿಗತ ನೆಲೆಯಲ್ಲಿ ಆಚರಿಸಲ್ಪಡುತ್ತಿದ್ದವು.

ರಾಮಾನುಜಾಚಾರ್ಯ ಹಾಗೂ ಬಸವೇಶ್ವರರ ಮಾರ್ಗದರ್ಶನದಲ್ಲಿ ಶ್ರೀವೈಷ್ಣವ ಮತ್ತು ಶೈವಧರ್ಮಗಳು ತಮ್ಮ ಸರಳ ತತ್ವಗಳಿಂದ ಸಾಮಾನ್ಯ ಜನತೆಯನ್ನು ಆಕರ್ಷಿಸಲಾರಂಭಿಸಿದವು.

ಹತ್ತನೆಯ ಶತಮಾನದವರೆಗೆ ಬಿಡಿ ಘಟಕಗಳಂತಿದ್ದ ಸಮುದಾಯಗಳು ಶ್ರೀವೈಷ್ಣವ ಮತ್ತು ವೀರಶೈವ ಧರ್ಮಗಳ ಅಡಿಯಲ್ಲಿ ಸಾಂಘಿಕ ರೂಪ ಪಡೆಯಲಾರಂಭಿಸಿದವು. ಧರ್ಮಗಳು ಸಾಂಘಿಕ ರೂಪ ಪಡೆಯುತ್ತಿದ್ದಂತೆ ಅವು ಸಮಾಜದಲ್ಲಿ ಪ್ರಬಲ ಧರ್ಮಗಳಾಗಿ ಹೊರಹೊಮ್ಮಲಾರಂಭಿಸಿದವು. ಅಂಥ ಧರ್ಮಗಳು ಬೇಗ ಜನಾದರಣೆಯನ್ನೂ, ಆ ಮೂಲಕ ರಾಜತ್ವದ ಮಾನ್ಯತೆಯನ್ನು ಪಡೆದವು. ಈ ನಿಟ್ಟಿನಲ್ಲಿ ಜೈನಧರ್ಮ ಬಹುಬೇಗ ಸಾಂಘಿಕ ಧರ್ಮವಾಗಿ ಮಾರ್ಪಟ್ಟಿದ್ದರಿಂದ ಅದು ಕ್ರಿಸ್ತ ಶಕದ ಆದಿ ಭಾಗದಿಂದಲೇ ಪ್ರಭುತ್ವದ ಮಾನ್ಯತೆಯನ್ನು ಪಡೆಯುತ್ತಾ ಬಂತು. ಪ್ರಭುತ್ವದ ಆಶ್ರಯದಲ್ಲಿ ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುವ ಮೂಲಕ ಕರ್ನಾಟಕದ ಸಾಹಿತ್ಯ – ಸಂಸ್ಕೃತಿಯನ್ನು ಶ್ರೀಮಂತಗೊಳಿಸಿತು.

ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ವೈದಿಕ ಧರ್ಮಗಳಾದ ಶ್ರೀವೈಷ್ಣವ ಮತ್ತು ಶೈವಧರ್ಮಗಳು ಸಾಂಘಿಕ ಧರ್ಮಗಳಾಗಿ ಹೊರಹೊಮ್ಮುತ್ತಿದ್ದಂತೆಯೇ, ಅವು ಜೈನಧರ್ಮಕ್ಕೆ ಪ್ರಬಲ ಪೈಪೋಟಿಯನ್ನು ಒಡ್ಡಿದವು. ಪ್ರಭುತ್ವಗಳು ಜೈನಧರ್ಮಕ್ಕೆ ನೀಡುತ್ತಿದ್ದ ಮಾನ್ಯತೆಯು ವೈದಿಕ ಧರ್ಮಗಳೆಡೆ ಮಾರ್ಗಪಲ್ಲಟವಾಯಿತು. ಉತ್ತರ ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣ ಚಟುವಟಿಕೆಗಳು ತೀವ್ರಗೊಂಡವು. ಒಂದೊಂದು ದೇವಾಲಯಗಳಲ್ಲೂ ಒಂದೊಂದು ಮಠಗಳು ಅಸ್ತಿತ್ವಕ್ಕೆ ಬಂದವು. ಮಠಗಳು ಕೇವಲ ದೇವಾಲಯಗಳ ಆರಾಧನಾ ಚಟುವಟಿಕೆಗಳಲ್ಲಿ ಮಾತ್ರ ತೊಡಗಿಕೊಳ್ಳದೆ, ವಿದ್ಯಾದಾನ, ಔಷಧ ದಾನ ಹಾಗೂ ಪುನರ್ವಸತಿ ಕೇಂದ್ರಗಳಾಗಿಯೂ ಪರಿವರ್ತನೆಗೊಂಡವು. ಇವುಗಳ ಬಹುಮುಖಿ ಕಾರ್ಯಚಟುವಟಿಕೆಗಳನ್ನು ನೋಡಿದ, ಕೇಳಿದ ಪ್ರಭುತ್ವ ಇವುಗಳಿಗೆ ಅಸಂಖ್ಯ ಹಳ್ಳಿಗಳ ಸಮೇತ ಭೂದತ್ತಿಗಳನ್ನು ನೀಡಲಾರಂಭಿಸಿತು. ಈ ಕ್ರಿಯೆ ದೇವಾಲಯಗಳಲ್ಲಿ ಸಂಪತ್ತು ಶೇಖರಣೆಯಾಗಿ ದೇವಾಲಯಗಳು ಪ್ರಬಲವಾಗಲು ಕಾರಣವಾಯಿತು.

ಈವರೆಗೆ 'ಏಕಮೇವಾದ್ವಿತೀಯ'ವಾಗಿ ಬರೋಬ್ಬರಿ ಒಂದು ಸಹಸ್ರಮಾನವನ್ನು ಆಳಿದ್ದ ಜೈನಧರ್ಮ ತನ್ನ ಬೇರುಗಳನ್ನು ಭದ್ರಪಡಿಸಿಕೊಳ್ಳಲು ಹೆಣಗಾಡಬೇಕಾಯಿತು. ಪ್ರಬಲ ಧರ್ಮವಾಗಿಯಲ್ಲದೆ, ಶ್ರೀಮಂತ ಧರ್ಮವಾಗಿಯೂ ಪರಿಣಮಿಸಿತ್ತು. ಕ್ರಿ.ಶ. ಆರಂಭದ ಶಾಸನಗಳಿಂದ ಹನ್ನೊಂದನೆಯ ಶತಮಾನದವರೆಗಿನ ಅವಧಿಯ ಜೈನಧರ್ಮದ ಶಾಸನಗಳು ಈ ಅಂಶವನ್ನು ಪುಷ್ಟೀಕರಿಸುತ್ತವೆ. ರಾಜರ ಆಶ್ರಯದಡಿಯಲ್ಲೇ ಬೆಳೆದ ಈ ಧರ್ಮಗಳಲ್ಲಿ ಕಾಣುವ ಬಹುಸಂಖ್ಯಾತ ಪಂಗಡಗಳು ಜೈನ ಬ್ರಾಹ್ಮಣರು ಮತ್ತು ವರ್ತಕರು. ಇವರು ತಾವೂ ಪ್ರಬಲವಾಗಿ ಬೆಳೆದದ್ದದಲ್ಲದೆ, ತಮ್ಮ ಬಸದಿಗಳನ್ನು, ಅವುಗಳ ಸಂಪತ್ತನ್ನು ಬೆಳೆಸಿದರು. ಮಿಗಿಲಾಗಿ ರಾಜ್ಯದ ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದರು. ಇವರ ಆರ್ಥಿಕ ಸಬಲತೆ ಮತ್ತು ಬಸದಿಗಳಲ್ಲಿ ಸಂಚಯವಾದ ಸಂಪತ್ತು ಇತರ ಧರ್ಮಗಳ ಕಣ್ಣು ಕುಕ್ಕಿರಲಿಕ್ಕೂ ಸಾಕು. ಲಕ್ಷ್ಮೇಶ್ವರದ ಕ್ರಿ.ಶ. ೧೪೧೨ರ ಜಯಪತ್ರದ ಭೂವಿವಾದ ಇಂಥ ಸಂದರ್ಭದಲ್ಲೇ ಹುಟ್ಟಿಕೊಂಡಿದೆ. ಪುಲಿಗೆರೆಯ ಸೋಮನಾಥ ದೇವರ ಸ್ಥಾನಾಚಾರ್ಯ ಶಂಖಬಸ್ತಿಯ ಭೂಮಿಯನ್ನು ಬಲಪ್ರಯೋಗದಿಂದ ಒತ್ತುವರಿ ಮಾಡಿಕೊಂಡು

ವ್ಯವಸಾಯ ಮಾಡುತ್ತಿರುತ್ತಾನೆ. ಇದು ಊರಿನ ಸಮಸ್ತ ಜನಗಳಿಗೆ ಗೊತ್ತಿದ್ದರೂ, ಎಲ್ಲರೂ ಅಸಹಾಯಕರಾಗಿದ್ದಾರೆ. ಸ್ವತಃ ಶಿವರಾಮಯ್ಯನ ಅಣ್ಣ ಗಂಗಣ್ಣಯ್ಯನೂ ಸಹ ಈ ಅಧರ್ಮದ ಬಗ್ಗೆ ಮೌನವಾಗಿದ್ದಾನೆ. ಈ ವಿವಾದ ಮಹಾಪ್ರಧಾನ ನಾಗಣ್ಣ ದಂಡನಾಯಕರ ಬಳಿ ಹೋದಾಗ ಅವರು ಅರಮನೆಯ ಪುರೋಹಿತ ಸಂಗಮದೇವ ಮತ್ತಿತರ ವಿದ್ವಾಂಸರನ್ನು ಕೂಡಿಕೊಂಡು ಇಬ್ಬರ ಶಾಸನಗಳನ್ನು ಓದಿಸಿ ಶಿವರಾಮಯ್ಯನಿಗೆ ವಿವಾದ ಮಾಡಬಾರದೆಂಬ ಎಚ್ಚರಿಕೆಯೊಂದಿಗೆ ಶಂಖಬಸ್ತಿಯ ಹೇಮದೇವಣಾಚಾರ್ಯರಿಗೆ ಜಯಪತ್ರ ಬರೆದುಕೊಡುತ್ತಾರೆ.

ಜಯಪತ್ರಗಳು ಹುಟ್ಟಿಕೊಳ್ಳುವುದಕ್ಕೆ ಭೂವಿವಾದವೊಂದೇ ಕಾರಣವಲ್ಲ. ಇದಕ್ಕೆ ಬೇರೆ ರೀತಿಯ ಚಾರಿತ್ರಿಕ ಆಯಾಮಗಳಿವೆ. ಲಕ್ಷ್ಮೇಶ್ವರದಲ್ಲಿ ದೊರೆಯುವ ಮೊದಲನೆಯ ಶಾಸನ ಇಮ್ಮಡಿ ಪುಲಿಕೇಶಿಯ ಕಾಲದ್ದು. ಇಮ್ಮಡಿ ಪುಲಿಕೇಶಿ ಕಾಲದಲ್ಲಿ ಸೇಂದ್ರಕ ದುಗ್ಗಶಕ್ತಿ ಎಂಬುವವನು ಶಂಖಬಸ್ತಿಗೆ ದಾನ ನೀಡಿದ್ದನ್ನು ಈ ಶಾಸನ ಉಲ್ಲೇಖಿಸುತ್ತದೆ.[೫೩] ಎಂದರೆ ಇದು ಈ ವೇಳೆಗಾಗಲೇ ಶಂಖಬಸ್ತಿ ನಿರ್ಮಾಣವಾಗಿತ್ತೆಂದರ್ಥ. ಪ್ರಮುಖ ಜೈನ ನೆಲೆಗಳಾದ ಲಕ್ಕುಂಡಿ, ಮುಳಗುಂದ, ಕೊಪ್ಪಳ, ಕೋಗಳಿ, ಶ್ರವಣಬೆಳಗೊಳಗಳು ಪಡೆದಿದ್ದಂತಹ ಸ್ಥಾನವನ್ನು ಲಕ್ಷ್ಮೇಶ್ವರವೂ ಪಡೆದಿತ್ತು. ಐತಿಹ್ಯಗಳ ಪ್ರಕಾರ ಲಕ್ಷ್ಮೇಶ್ವರದಲ್ಲಿ ೭೦೦ಕ್ಕೂ ಅಧಿಕ ಬಸದಿಗಳಿದ್ದವು. ಇದು ಆಶಯವಿರಬಹುದು ಅಥವಾ ಇಡೀ ಪುಲಿಗೆರೆ-೩೦೦ರ ಪ್ರಾಂತ್ಯದಲ್ಲಿ ಅಷ್ಟು ಸಂಖ್ಯೆಯ ಬಸದಿಗಳಿದ್ದಿರಬಹುದು. ಆದರೆ, ಉತ್ಪ್ರೇಕ್ಷೆಯಂತೂ ಆಗಿರಲಾರದು. ಪುಲಿಗೆರೆಯ ಶಾಸನಗಳಲ್ಲೇ ಶಂಖಬಸದಿ, ಮುಕ್ಕರಬಸದಿ, ರಾಚಮಲ್ಲ ಬಸದಿ, ಗಂಗ ಕಂದರ್ಪ ಬಸದಿ, ಗಂಗ ಪೆರ್ಮಾನಡಿ ಚೈತ್ಯಾಲಯ, ಗೊಗ್ಗಿಯ ಬಸದಿ, ಆನೆಸಜ್ಜೆ ಬಸದಿ, ಇತ್ಯಾದಿ ಹಲವಾರು ಬಸದಿಗಳಿದ್ದ ಉಲ್ಲೇಖ ಶಾಸನಗಳಲ್ಲಿವೆ.

ಲಕ್ಷ್ಮೇಶ್ವರದಲ್ಲಿ ಹನ್ನೆರಡನೆಯ ಶತಮಾನದಿಂದಲೂ ಜೈನರ ಮೇಲೆ ಆಕ್ರಮಣಗಳು ಪ್ರಾರಂಭವಾಗಿದ್ದವು. ಹರಿಹರನ ಆದಯ್ಯನ ರಗಳೆಯ ಪ್ರಕಾರ ಆದಯ್ಯ ಸುರಹೊನ್ನೆ ಬಸದಿಯನ್ನು ಸೋಮನಾಥದೇವಾಲಯವನ್ನಾಗಿ ಪರಿವರ್ತಿಸಿದ. ಏಕಾಂತದ ರಾಮಯ್ಯ ಶಿವನ ಅಣತಿಯಂತೆ ಅಬ್ಬಲೂರಿಗೆ ಹೋಗುವ ಮೊದಲು ಪುಲಿಗೆರೆಯ ಸೋಮನಾಥ ದೇವಾಲಯಕ್ಕೆ ಬಂದು ಸೋಮನಾಥ ಕನಸಿನಲ್ಲಿ ಮಾರ್ಗದರ್ಶನ ನೀಡಿದಂತೆ ಅಬ್ಬಲೂರಿಗೆ ಹೋದ ಕತೆಯಿದೆ. ಹನ್ನೆರಡನೆಯ ಶತಮಾನದಲ್ಲಿದ್ದ ಬ್ರಹ್ಮಶಿವ ಸಹ 'ಪುಲಿಗೆರೆಯಲ್ಲಿ ಹಿಂದೆ ನೆಲದಲ್ಲಿ ಹೂಳಿದ ನಂದಿವಾಹನನೇ ಸ್ವಯಂಭೂ ಲಿಂಗವಾಗಿ ಉದ್ಭವಿಸಿದನೆಂದು ಹೇಳುವರು ಗಾವಿಲರು. ಅದು ಜೈನ ವೃಷಭ ವಾಹನದ ಚಿಹ್ನೆ' ಎನ್ನುತ್ತಾನೆ. ಎಂದರೆ ಬಸದಿ ದೇವಾಲಯವಾಗಿ ಪರಿವರ್ತನೆಯಾಗಿದ್ದರ ಆಕ್ರೋಶ ಅವನ ಮಾತುಗಳಲ್ಲಿ ಎದ್ದು ಕಾಣುತ್ತದೆ. ಪುಲಿಗೆರೆಯಲ್ಲಿ ಹನ್ನೆರಡನೆಯ ಶತಮಾನದ ವೇಳೆಗಾಗಲೇ ಜೈನಧರ್ಮ ತನ್ನ ಸ್ಥಾನವನ್ನು ಕಳೆದುಕೊಂಡಿತ್ತು. ಅಲ್ಲಿದ್ದ ಬಹುಸಂಖ್ಯಾತ ಜೈನರು ತಮ್ಮ ಆಸ್ತಿ ಪಾಸ್ತಿಗಳಿರಲಿ, ಬಸದಿಗಳ ಸ್ವತ್ತನ್ನು ಕಾಪಾಡಿಕೊಳ್ಳಲೂ ಸಹ ಅಧೀರರಾಗಿದ್ದಂತಹ ಸನ್ನಿವೇಶವನ್ನು

ಲಕ್ಷ್ಮೇಶ್ವರದ ಜಯಪತ್ರ ಉಲ್ಲೇಖಿಸುತ್ತದೆ. ಈ ವೇಳೆಗಾಗಲೇ ಬ್ರಹ್ಮಶಿವನ ಮಾತಿನಲ್ಲಿ ಹೇಳುವುದಾದರೆ 'ಜನ ಜೈನ ಧರ್ಮೀಯರನ್ನು ಕಂಡರೆ ಕರ್ಚಿ ಕೊಲ್ಲುತ್ತಾರೆ, ಜೈನಧರ್ಮವನ್ನು ಒಳ್ಳಿತು ಎಂದರೆ ಸಿಟ್ಟಿಗೇಳುತ್ತಿದ್ದರು'.

ಮೇಲಿನ ವಿವಾದಕ್ಕಾಗಿ ಶಂಖಬಸ್ತಿಯ ಜೈನ ಆಚಾರ್ಯನಾದ ಹೇಮದೇವಣಾಚಾರ್ಯ ಜಯಪತ್ರ ಪಡೆದರೂ, ವಾಸ್ತವವಾಗಿ ಅದು ಅವರ ಪರಾಧೀನತೆಗೂ ಕಾರಣವಾಯಿತು. ಇದಾದ ಕೆಲವೇ ವರ್ಷಗಳಲ್ಲಿ ಕ್ರಿ.ಶ. ೧೫೩೮ರ ಶಾಸನದಲ್ಲಿ (ಈ ಶಾಸನದ ವಿವರಗಳಿಂದ ಇದು ಶಕ ೧೪೦೦ ವಿಳಂಬಿ, ಪ್ರಥಮ, ಜೇಷ್ಠ ಶುಲ್ಕ ಸೋಮವಾರವೆಂದಿದೆ. ವಿಳಂಬಿ ಸಂವತ್ಸರ ಶಕ ೧೪೦೦ ಮತ್ತು ೧೪೬೦ರಲ್ಲಿ ಬರುತ್ತದೆ. ಸ್ವಾಮಿ ಕಣ್ಣಾಪಿಳ್ಳೈಯವರ ಪಂಚಾಂಗದ ಪ್ರಕಾರ ಇದು ಕ್ರಿ.ಶ. ೧೫೩೮ ಏಪ್ರಿಲ್ ೨೯ಕ್ಕೆ ಸೇರುತ್ತದೆ. ಆದರೆ ಕಾಲಗಣನೆಯ ಪ್ರಕಾರ ಎರಡೂ ಶಾಸನಗಳಿಗಿರುವ ಅಂತರ ೧೨೬ ವರ್ಷಗಳು. ಆದರೆ, ಕ್ರಿ.ಶ. ೧೪೧೨ರ ಜಯಪತ್ರದ ಹೇಮದೇವಣಾಚಾರ್ಯ ಮತ್ತು ಶಿವರಾಮಯ್ಯರ ಉಲ್ಲೇಖ ಕ್ರಿ.ಶ. ೧೫೩೮ರ ಜಯಪತ್ರದಲ್ಲೂ ಕಂಡುಬರುತ್ತದೆ. ೧೨೬ ವರ್ಷಗಳ ಅಂತರದಲ್ಲಿ ಈ ಇಬ್ಬರು ವ್ಯಕ್ತಿಗಳು ಇರುವುದು ಅಸಂಭವವಾದ್ದರಿಂದ ಈ ಶಾಸನವನ್ನು ಕ್ರಿ.ಶ. ೧೪೭೮ರಲ್ಲಿ ಹಾಕಿಸಿರಬಹುದು ಅಥವಾ ಹಿಂದೆ ನಡೆದಿರುವ ಘಟನೆಯನ್ನು ಎರಡನೆಯ ಜಯಪತ್ರದಲ್ಲಿ ದಾಖಲಿಸಿರುವ ಸಾಧ್ಯತೆ ಇದೆ). ಸೋಮೇಶ್ವರ ದೇವಾಲಯಕ್ಕೆ ಸಲ್ಲುವ ಅಷ್ಟ ದಿಕ್ಪಾಲಾದಿಗಳು ಮತ್ತು ಧ್ವಜಪತಾಕಾದಿಗಳನ್ನು ಬಳಸಿದ್ದ ಬಗ್ಗೆ ತಪ್ಪು ಒಪ್ಪಿಕೊಂಡು ತಾವು ಪ್ರಜ್ಞಾಹೀನತೆಯಿಂದ ಬಳಸಿದುದಾಗಿ ಹೇಳಿ ಜಯಪತ್ರ ಬರೆದುಕೊಡುತ್ತಾರೆ. ಹುಲಿಗೆರೆಯ ಪುರ ನಿವಾಸಿಗಳಪ್ಪ ಮರ್ತ್ಯಮಹಾಗಣಂಗಳು ಇದನ್ನು ಪಡೆದುಕೊಳ್ಳುತ್ತಾರೆ. ಇಲ್ಲಿ ಜಯಪತ್ರ ಬರೆದುಕೊಟ್ಟರು ಎಂಬುದಕ್ಕಿಂತ ಹಿಂದೆ ಆದ ಅಪಜಯದ ಅವಮಾನವನ್ನು ಈ ಸಂದರ್ಭದಲ್ಲಿ ತೀರಿಸಿಕೊಂಡರೆಂದು ಹೇಳುವುದು ಸೂಕ್ತ. ಏಕೆಂದರೆ, ಜೈನ ಬಸದಿಗಳಲ್ಲಿ ವೈದಿಕ ಸಂಕೇತಗಳಾದ ಅಷ್ಟದಿಕ್ಪಾಲಾದಿಗಳನ್ನು, ಧ್ವಜಪತಾಕಾದಿಗಳನ್ನು, ಪಂಚಮಹಾಶಬ್ದಗಳನ್ನು ಬಳಸುವುದು ಈ ವೇಳೆಗೆ ಪ್ರಚಲಿತದಲ್ಲಿತ್ತು. ಇದೇ ಕಾಲಾವಧಿಯಲ್ಲಿ ಸುಮಾರು ೩೫ ವರ್ಷಗಳ ಮೊದಲು (ಕ್ರಿ.ಶ. ೧೩೬೮) ಶ್ರವಣಬೆಳಗೊಳ, ಕಲ್ಯಗಳಲ್ಲೂ ಈ ವಸ್ತುಗಳನ್ನು ಬಳಸುವ ಬಗ್ಗೆ ದೊಡ್ಡ ವಿವಾದವೇ ಸೃಷ್ಟಿಯಾಗಿತ್ತು. ಆ ವಿವಾದವನ್ನು ಸ್ವತಃ ಬುಕ್ಕರಾಯನೇ ಮುಂದೆ ನಿಂತು ಪೂರ್ವಮರಿಯಾದೆಯಂತೆ ಜೈನರಿಗೂ ಅವು ಸಲ್ಲುತ್ತವೆಂದು ವಿವಾದವನ್ನು ತುಂಬಾ ಜಾಣ್ಮೆಯಿಂದ ಬಗೆಹರಿಸುತ್ತಾನೆ. 'ಪೂರ್ವಮರಿಯಾದೆಯಂತೆ ಸಲ್ಲುತ್ತವೆ' ಎನ್ನುವುದಾದರೆ, ಅವುಗಳನ್ನು ಈ ಮೊದಲೂ ಬಸದಿಗಳಲ್ಲಿ ಬಳಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.[೫೪] ಈ ಶಾಸನಗಳು ಭೂಮಿಗಾಗಿ, ಧಾರ್ಮಿಕ ಚಹರೆಗಳ ಅಳವಡಿಕೆಗಾಗಿ ನಡೆದಂತಹ ಘರ್ಷಣೆಗಳಾಗಿ ಕಂಡರೂ, ಅಬಲರ ಮೇಲೆ ಪ್ರಬಲರ ದಬ್ಬಾಳಿಕೆ ಅಥವಾ ಅತಿಕ್ರಮಣತೆ ನಡೆದಿರುವುದನ್ನು ಕಾಣಬಹುದು. ಊರ ಸಮಸ್ತ ನಾಡಗವುಂಡಗಳಿಗೆ ಈ ವಿಷಯ ಗೊತ್ತಿದ್ದರೂ, ಧ್ವನಿ ಉಡುಗಿಸಿಕೊಂಡು ಮೌನವಾಗಿರುವಂತಹ ಸ್ಥಿತಿ ಉದ್ಭವವಾಗಿದೆ. ಈ ಜಯಪತ್ರಗಳಿಂದ ಜೈನರ

ಮೇಲಿನ ಆಕ್ರಮಣ ಕೇವಲ ೧೨ನೆಯ ಶತಮಾನಕ್ಕೆ ಸೀಮಿತವಾಗದೆ ೧೬ನೆಯ ಶತಮಾನದಲ್ಲೂ ಮುಂದುವರಿಯುತ್ತಿರುವುದು ಕಂಡುಬರುತ್ತದೆ.

**೫.೩.೩ ಧರ್ಮನಿಷ್ಠತೆ**

ಧರ್ಮಗಳ ನಡುವಿನ ಪ್ರತ್ಯೇಕತಾ ಮತ್ತು ನಿರುಪಾಧಿಕ ಮನೋಧರ್ಮ, ಧರ್ಮ ಸಂಘರ್ಷಗಳಿಗೆ ಅವಕಾಶ ಮಾಡಿಕೊಡುತ್ತದೆ. ಒಂದು ನಿರ್ದಿಷ್ಟ ಧರ್ಮ ಶ್ರೇಷ್ಠತ್ವದ ಭಾವದಲ್ಲಿದ್ದಾಗ ಅದು ಉಳಿದ ಧರ್ಮಗಳನ್ನು ಅಧಮವೆಂದು ಭಾವಿಸುತ್ತದೆ. ಧರ್ಮಗಳ ನಡುವೆ ನಂಬಿಕೆ–ವಿಶ್ವಾಸಗಳು ನಶಿಸಿ ಪರಸ್ಪರ ಅಗೌರವದಿಂದ ಕಾಣಲಾಗುತ್ತದೆ. ತನ್ನ ಪೂಜಾವಿಧಿಗಳು, ಆಚರಣೆಗಳು, ಆಹಾರ ಪದ್ಧತಿ ಶ್ರೇಷ್ಠವಾದಾಗ ಉಳಿದ 'ಅನ್ಯ' ಧರ್ಮಗಳ ಪದ್ಧತಿಗಳೆಲ್ಲಾ ಕನಿಷ್ಠವೆನಿಸುತ್ತದೆ. ಧರ್ಮಾಭಿಮಾನದ ಜೊತೆಗೆ ದುರಭಿಮಾನವನ್ನು ಬೆಳೆಸಿಕೊಳ್ಳುತ್ತವೆ. ಇಂಥ ಸಂದರ್ಭದಲ್ಲಿ ಧಾರ್ಮಿಕ ಸಂಕಥನಗಳನ್ನು ತಮಗೆ ಬೇಕಾದಂತೆ ಕಲ್ಪಿಸಿಕೊಳ್ಳಲಾಗುತ್ತದೆ. "ಸಂಕಥನಗಳು ಒಂದು ವರ್ಗದ/ಸಮುದಾಯದ /ವ್ಯವಸ್ಥೆಯ ಅಧಿಕಾರ–ಸ್ಥಾನ–ಮಾನಗಳನ್ನು ರಕ್ಷಿಸುವುದಕ್ಕಾಗಿಯೇ ರೂಪುಗೊಳ್ಳುವುದರಿಂದ ಅವುಗಳಿಗೆ ಈ ಘಟ್ಟದಲ್ಲಿ 'ಅನ್ಯ'ದ ಸೃಷ್ಟಿ ಮತ್ತು ಆ 'ಅನ್ಯ'ದ ವಿರುದ್ಧ ನಡೆಸಬೇಕಾದ ಹೋರಾಟವನ್ನು ಸದಾ ಜಾಗೃತವಾಗಿಡಲು ಧಾರ್ಮಿಕ ಸಂಕಥನಗಳು ಹಿಂಸೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ, ಸಮರ್ಥಿಸಬೇಕಾಗುತ್ತದೆ".[೫೫] ಆಕ್ರಮಣಗಳ ಮೂಲಕ ಮತ್ತೊಬ್ಬರ ಮೇಲೆ ಅಧಿಕಾರವನ್ನು ಸ್ಥಾಪಿಸಲು ಹೊರಟಾಗ ಅದು ದ್ವೇಷ ಮತ್ತು ಸಂಘರ್ಷಗಳಿಗೆ ಅವಕಾಶವಾಗುತ್ತದೆ.

ರಾಜಾರಾಂ ಹೆಗಡೆಯವರು ಮಧ್ಯಕಾಲೀನ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಮೂರು ರೀತಿಯ ಶೈವಧಾರೆಗಳ ಶಿವಪಾರಮ್ಯದ ಸ್ವರೂಪ ಮತ್ತು ಅವುಗಳ ಭಿನ್ನ ಭಿನ್ನ ತಾತ್ವಿಕ ಪ್ರಣಾಳಿಗಳನ್ನು ಗುರುತಿಸುತ್ತಾರೆ. ಅವುಗಳಲ್ಲಿ, 'ಗಣಾಚಾರದವರು' ಶಿವನಿಂದೆಯನ್ನು ಸಹಿಸದೆ, ಉಗ್ರ ಶಿವಭಕ್ತಿ ಮರೆಯುತ್ತಾ ಜೈನರನ್ನು ತಮ್ಮ ವೈರಿಗಳೆಂದೇ ಭಾವಿಸಿದ್ದರು. ಜೈನ ಬಸದಿಗಳನ್ನು ಶೈವ ದೇವಾಲಯಗಳನ್ನಾಗಿ ಪರಿವರ್ತಿಸಿದ್ದು ಶೈವಭಕ್ತಿಯ ದ್ಯೋತಕವಾಗಿತ್ತು. ಮತ್ತೊಂದು ಗುಂಪು ಜೈನ ಸಂಸ್ಕೃತಿಯ ಕಡೆ ದಿವ್ಯ ನಿರ್ಲಕ್ಷ್ಯ ತೋರಿ, ಶಿವಾಲಯ ಸಂಸ್ಕೃತಿ ಮತ್ತು ಸ್ಥಾವರ ಲಿಂಗಗಳ ಪೂಜೆಯೇ ಶಿವಭಕ್ತಿಗೆ ಪ್ರಮಾಣ ಎಂಬ ತತ್ವವನ್ನು ನಿರಾಕರಿಸಿ ಶಿವಾನುಭವಕ್ಕೆ ಆದ್ಯತೆ ನೀಡುವ ಮೂಲಕ ಸಾಂಸಾರಿಕವಾಗಿ ಎಲ್ಲ ಕಟ್ಟುಕಟ್ಟಳೆಗಳನ್ನು, ವರ್ಣವ್ಯವಸ್ಥೆ, ವೇದಶಾಸ್ತ್ರಗಳನ್ನು ತಿರಸ್ಕರಿಸಿದರು. ಮತ್ತೊಂದು ಗುಂಪಾದ ಕಾಳಾಮುಖರು ಶುದ್ಧ ಆಗಮ ಹಾಗೂ ಶಿವಾಲಯ ಸಂಸ್ಕೃತಿಯವರಾಗಿದ್ದು, ರಾಜಾಶ್ರಯವನ್ನು ಪಡೆದು, ಆಸ್ತಿ ಪಾಸ್ತಿಯನ್ನು ಗಳಿಸಿ ಅನ್ಯ ಮತಗಳ ದೇವಾಲಯ ಸಂಸ್ಕೃತಿಯ ಜೊತೆ ಹೊಂದಾಣಿಕೆ ಮಾಡಿಕೊಂಡು ತಮ್ಮ ಜಗತ್ತನ್ನು ರೂಪಿಸಿಕೊಂಡಿದ್ದರು. ಹೀಗೆ ಹನ್ನೆರಡನೆಯ ಶತಮಾನದ ಶೈವ ಸಂಪ್ರದಾಯದಲ್ಲಿ ಬೆಳೆದ ಈ ಮೂರು ರೀತಿಯ ಶೈವರು ಜೈನರ ಜೊತೆ ತಮ್ಮ

ತಮ್ಮ ತಾತ್ವಿಕ ದೃಷ್ಟಿ ಹಾಗೂ ವ್ಯವಹಾರಿಕ ಅಗತ್ಯತೆಗಳಿಗನುಗುಣವಾಗಿ ಸಂಘರ್ಷ, ನಿರಾಸಕ್ತಿ ಹೊಂದಾಣಿಕೆಯ ದಾರಿಯನ್ನು ರೂಪಿಸಿಕೊಂಡಿದ್ದು ಕಂಡುಬರುತ್ತದೆ.[೫೬]

ಮಧ್ಯಕಾಲೀನ ಕರ್ನಾಟಕದ ಧಾರ್ಮಿಕ ಸಂಘರ್ಷದ ನೆಲೆಯಾಗಿ 'ಶಿವಪಾರಮ್ಯ'ವನ್ನು ಗುರುತಿಸಬಹುದು. 'ಶಿರಪಾರಮ್ಯ' ಎಂಬುದು ಮಧ್ಯಕಾಲೀನ ಕರ್ನಾಟಕದ ತಾತ್ವಿಕತೆಯಾಗಿತ್ತು. ಇದು ಹರಿಹರನ ರಗಳೆಗಳಲ್ಲಿ, ರಾಘವಾಂಕನ ಸೋಮನಾಥ ಚಾರಿತ್ರ್ಯ, ಮುಂತಾದ ಕೃತಿಗಳಲ್ಲಿ ಪ್ರತಿಧ್ವನಿತವಾಗಿದೆ. ಇವುಗಳಲ್ಲಿ ಶಿವನ ಶ್ರೇಷ್ಠತ್ವವನ್ನು ಎತ್ತಿ ಹಿಡಿಯುತ್ತಲೇ ಅದಕ್ಕೆ ಅನ್ಯವೆಂದು ಬಗೆಯಲ್ಪಟ್ಟ ಧರ್ಮಗಳನ್ನು ಅಧಮಸ್ಥಾನದಲ್ಲಿರಿಸಿ, ಅದರ ಅನುಯಾಯಿಗಳನ್ನು ಖಳರನ್ನಾಗಿ ಚಿತ್ರಿಸಲಾಗಿದೆ. ಹರಿಹರನ ಪಾಲಿಗೆ ಶಿವ ನಿಂದೆ ಮಾಡಿದರೆ ಅದು ವೈದಿಕರಾದ ವೈಷ್ಣವರಾದರೂ ಸರಿ ಅವರೂ ಶತೃಗಳೇ. ಅವನ ಇರಿಭಕ್ತ ರಗಳೆ, ಸಾಮವೇದಿ ರಗಳೆ, ಹಾವಿನ ಹಾಳ ಕಲ್ಲಯ್ಯನ ರಗಳೆ, ಕೆಂಬಾವಿ ಬೋಗಣ್ಣನ ರಗಳೆಗಳಲ್ಲಿ ಶೈವ ಮತ್ತು ವೈಷ್ಣವ ಧರ್ಮಗಳ ಸಂಘರ್ಷವನ್ನು ಚಿತ್ರಿಸಿದರೆ, ಏಕಾಂತದ ರಾಮಿದೇವರ ರಗಳೆ, ಆದಯ್ಯನ ರಗಳೆ, ಮುಂತಾದ ರಗಳೆಗಳಲ್ಲಿ ಶೈವ ಮತ್ತು ಜೈನ ಧರ್ಮಗಳ ಸಂಘರ್ಷದ ತೀವ್ರತೆಯನ್ನು ಚಿತ್ರಿಸುತ್ತಾನೆ. ಇರಿಭಕ್ತನ ರಗಳೆಯಲ್ಲಿ ಹಣೆಗೆ ನಾಮ ಧರಿಸಿದ ವೈಷ್ಣವನನ್ನು ಇರಿಭಕ್ತ ನಾಮ ಅಳಿಸಿ ವಿಭೂತಿ ಧರಿಸಲು ಆಜ್ಞೆ ಮಾಡುತ್ತಾನೆ. ವೈಷ್ಣವ ಭಕ್ತ ನಿರಾಕರಿಸಿದ್ದಕ್ಕೆ ಆತನ ತಲೆಯನ್ನು ಕೊಡಲಿಯಿಂದ ಕತ್ತರಿಸುತ್ತಾನೆ.

ತತ್ಕಾಲೀನ ಕಾಲಘಟ್ಟಕ್ಕೆ ಹರಿಹರ ತೋರುವ ಪ್ರತಿಕ್ರಿಯೆಯ ಭಾಗವಾಗಿ ರಗಳೆಗಳನ್ನು ಅಭ್ಯಸಿಸಬಹುದು. ಹರಿಹರನ ರಗಳೆಗಳ ತಾತ್ವಿಕತೆಯೇ 'ಉಗ್ರ ಶಿವಭಕ್ತಿ'. ಅವನ ರಗಳೆಗಳಲ್ಲಿ ಕಂಡುಬರುವುದು ಎರಡೇ ಜಾತಿ, ಒಂದು ಭಕ್ತ, ಮತ್ತೊಂದು ಭವಿ. ಶಿವನನ್ನು ಒಪ್ಪಿಕೊಳ್ಳದವರೆಲ್ಲರೂ ಅವನ ಪಾಲಿಗೆ ಭವಿಗಳು. ವಚನ ಚಳವಳಿಯ ಭೂಮಿಕೆಯಲ್ಲಿ ಪ್ರಧಾನ ಪಾತ್ರ ವಹಿಸಿದ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಮುಂತಾದ ಶರಣರು ಹರಿಹರನ ಕಾಲಕ್ಕಾಗಲೇ ಭೂಲೋಕದಲ್ಲಿ ಅವನತಮುಖಿಯಾದ ಶೈವಧರ್ಮದ ಸಂಸ್ಥಾಪನಾರ್ಥವಾಗಿ ಭೂಲೋಕಕ್ಕೆ ಅವತರಿಸಿದ 'ಅವತಾರಪುರುಷ'ರಾಗಿ ಜನಮಾನಸದಲ್ಲಿ ಮನ್ನಣೆ ಪಡೆದಿದ್ದರು. ಕಾರಣಸಂಭೂತರಾದ ಇವರೆಲ್ಲರೂ ಶಿವಪಾರಮ್ಯವನ್ನು ಮೆರೆಯುವುದಕ್ಕಾಗಿಯೇ ಭೂಲೋಕದಲ್ಲಿ ಅವತರಿಸಿದ್ದರು. ಅದಕ್ಕೆ ಅಕ್ಷರ ರೂಪಕೊಟ್ಟ ಹರಿಹರ ಅವರಿಗೆಲ್ಲ ಪವಾಡಗಳನ್ನು ಆರೋಪಿಸಿ ದೈವೀಪುರುಷರನ್ನಾಗಿ ಮಾಡಿದ. ಆದರೆ, ಈ ದೈವೀಕರಣ ಪ್ರಕ್ರಿಯೆ ನಮಗೆ ಹರಿಹರನಿಗಿಂತಲೂ ಮೊದಲು ಮೊಟ್ಟಮೊದಲ ಬಾರಿಗೆ ಅಬ್ಬಲೂರಿನ ಏಕಾಂತದ ರಾಮಯ್ಯನ ಶಾಸನದಲ್ಲೇ ಕಂಡುಬರುತ್ತದೆ. ರಾಮಯ್ಯನ ಜಯಪತ್ರದ ಹಿನ್ನೆಲೆಯಲ್ಲಿ ನೋಡಿದಾಗ, ಯಾವ ಶೈವಧಾರೆ ಜೈನಮಾರ್ಗಕ್ಕೆ ವಿರೋಧವಾಗಿತ್ತು ಎಂದು ಗುರುತಿಸುವುದಕ್ಕಿಂತ, ಅವುಗಳ ಆತ್ಯಂತಿಕ ಉದ್ದೇಶ ಶಿವಭಕ್ತಿಯನ್ನು ಮೆರೆಯುವುದೇ ಆಗಿತ್ತು ಮತ್ತು ಅದಕ್ಕಾಗಿ ಅವರು ಏನನ್ನೂ ಮಾಡಲೂ ಸಿದ್ಧರಾಗಿರುತ್ತಿದ್ದರು. ಜೈನರು ಬಿಜ್ಜಳನಲ್ಲಿಗೆ ಹೋಗಿ

ರಾಮಯ್ಯನ ವಿರುದ್ಧ ದೂರನ್ನು ನೀಡಿದಾಗ, ಪ್ರತಿಯಾಗಿ ರಾಮಯ್ಯ 'ಈ ಸಾರಿ ಜೈನರು ಆನೆಸಜ್ಜೆ ಬಸದಿ ಸಹಿತವಾಗಿ ಏಳು ನೂರು ಬಸದಿಗಳನ್ನು ಪಣವಾಗಿ ಒಡ್ಡಿದರೆ ನಾನು ತನ್ನ ತಲೆಯನ್ನು ಸುಟ್ಟುಕೊಂಡು ನಂತರ ಪಡೆಯುತ್ತೇನೆಂಬ' ಸವಾಲನ್ನು ಒಡ್ಡುವ ಮೂಲಕ ಶಿವನಿಗಾಗಿ, ಶಿವಭಕ್ತಿಗಾಗಿ ತನ್ನ ಪ್ರಾಣತ್ಯಾಗಕ್ಕೂ ಸಿದ್ಧ ಎಂಬ ಸಂದೇಶವನ್ನು ಹಾಗೂ ಸವಾಲನ್ನು ಪ್ರಭುತ್ವದ ಮುಂದೆಯೇ ಒಡ್ಡುತ್ತಾನೆ.

ಧಾರ್ಮಿಕ ನೈತಿಕತೆಯ ದೃಷ್ಟಿಯಿಂದ ಏಕಾಂತದ ರಾಮಯ್ಯ ಹೀಗೆ ಉಗ್ರಭಕ್ತಿಯ ಪ್ರತಿಪಾದನೆಯ ರೂಪದಲ್ಲಿ ಹಿಂಸಾ ಪ್ರವೃತ್ತಿಗೆ ಇಳಿದು ಅನ್ಯಧರ್ಮದ ಮೇಲೆ ಆಕ್ರಮಣ ಮಾಡಿದ್ದು ಸರಿಯೇ? ಎನಿಸುತ್ತದೆ. ಇದಕ್ಕೆ ರಾಮಲಿಂಗಪ್ಪ ಟಿ. ಬೇಗೂರುರವರು ಹೇಳುವಂತೆ "ಚಾರಿತ್ರಿಕ ಕಥನ ಚರಿತ್ರೆಯ ಸಂಕಥನಕ್ಕೆ ಒಳಗಾದಾಗ ಅದು ಹೇಗೆ ಯುಗಧರ್ಮವನ್ನು ಮೀರಲಾಗದು ಮತ್ತು ಅಂಥ ಚಾರಿತ್ರಿಕ ಯುಗಧರ್ಮದ ಕಥನವನ್ನು ಕಾಲ ದೇಶಗಳಾಚೆ ಓದುವಾಗ ಅವುಗಳನ್ನು ಸಾಂದರ್ಭಿಕ ನೈತಿಕತೆಯಿಂದಲೇ ಅರ್ಥಮಾಡಿಕೊಳ್ಳಬೇಕು"[೫೭] ಎಂಬ ಅಭಿಪ್ರಾಯ ಉತ್ತರವಾದೀತು. ಸಮಕಾಲೀನ ಸಮಾಜದಲ್ಲಿ ಧರ್ಮಗಳು ಉಳಿವಿಗಾಗಿ, ಪ್ರತಿಷ್ಠೆಗಾಗಿ, ಮೇಲಾಟಕ್ಕಾಗಿ ಹೀಗೆ ಮುಖಾಮುಖಿಯಾಗುವುದು, ಹಿಂಸ್ರಕವಾಗಿ ಪ್ರತಿಕ್ರಿಯಿಸುವುದು ಮಧ್ಯಕಾಲೀನ ಕರ್ನಾಟಕದ ಚರಿತ್ರೆಯ ವೈಲಕ್ಷಣವೂ ಆಗಿದೆ.

### ೫.೪ ಧರ್ಮ ಸಂಘರ್ಷ ಮತ್ತು ಪ್ರಭುತ್ವ

ವಿಭಿನ್ನ ಮತ ಪಂಥಗಳ ನಡುವೆ ನಡೆಯುತ್ತಿದ್ದ ದ್ವೇಷ, ಅಸಹನೆ, ಪ್ರತಿರೋಧ, ಆಕ್ರಮಣಗಳಿಗೆ ಪ್ರಭುತ್ವ ಯಾವ ರೀತಿ ಸಾಕ್ಷಿಯಾಗಿರುತ್ತಿತ್ತು? ಈ ಘಟನೆಗಳಿಗೆ ಪ್ರಭುತ್ವದ ಪ್ರತಿಸ್ಪಂದನೆಯ ರೀತಿ ಯಾವ ತೆರನಾಗಿರುತ್ತಿತ್ತು? ಎಂಬ ಪ್ರಶ್ನೆಗಳನ್ನು ಹಾಕಿಕೊಂಡಾಗ, ಉತ್ತರ ಹುಡುಕುವುದು ಕಷ್ಟ. ಏಕೆಂದರೆ ರಾಜರು ಅಂತಹ ಘರ್ಷಣೆಗಳಿಗೆ ಇಂಬುಕೊಡುತ್ತಿದ್ದರೆಂದು ಹೇಳಲಾಗುವುದಿಲ್ಲ. ಕರ್ನಾಟಕದ ಹಲವಾರು ಅರಸರಿಗೆ 'ಚತುಸ್ಸಮಯ ಸಮುದ್ಧರಣ'ರೆಂಬ ಬಿರುದಿತ್ತು. ಎಲ್ಲ ಧರ್ಮಗಳನ್ನು ಸಮಾನವಾಗಿ ನೋಡಿಕೊಂಡು ಬರುತ್ತಿದ್ದರು. ಯಾವ ಧರ್ಮದ ಬಗ್ಗೆಯೂ ಪೂರ್ವಾಗ್ರಹ ದೃಷ್ಟಿಕೋನಗಳನ್ನಿಟ್ಟುಕೊಳ್ಳದೆ ಸಮಾಧಾನ ಚಿತ್ತರಾಗಿ ವರ್ತಿಸುತ್ತಿದ್ದರು.

ಹೊಯ್ಸಳ ವಿಷ್ಣುವರ್ಧನ ಶ್ರೀವೈಷ್ಣವ ಮತದೆಡೆ ಆಕರ್ಷಿತನಾಗಿದ್ದರೂ, ಬಲ್ಲಾಳ ಶೈವಧರ್ಮದಲ್ಲಿ ಒಲವನ್ನು ಉಳ್ಳವನಾಗಿದ್ದರೂ, ಸಂಘರ್ಷಗಳಿಗೆ ಎಡೆಯಿಲ್ಲದಂತೆ ಸಾಮ್ರಾಜ್ಯದಲ್ಲಿದ್ದ ಜೈನ, ವೈಷ್ಣವ, ಶೈವರನ್ನು ಸಮಾನವಾಗಿಯೇ ಪರಿಗಣನೆಗೆ ತೆಗೆದುಕೊಳ್ಳುತ್ತಾರೆ. ಧರ್ಮಮುಖಿ ತಿಕ್ಕಾಟಗಳು ತೀಕ್ಷ್ಣ ಹಾಗೂ ಸೂಕ್ಷ್ಮ ಸ್ವರೂಪದವುಗಳಾಗಿರುವುದರಿಂದ ಅವುಗಳನ್ನು ನಿಭಾಯಿಸುವಲ್ಲಿ ತುಂಬಾ ತಾಳ್ಮೆ ಹಾಗೂ ಜಾಣ್ಮೆ ಇರಬೇಕಾಗುತ್ತದೆ. ಶ್ರವಣಬೆಳಗೊಳದ ಶಾಸನ ಹಾಗೂ ಅಬ್ಬಲೂರಿನ

ಜಯಪತ್ರಗಳೆರಡರಲ್ಲಿಯೂ ರಾಜನು ತೋರಿದ ವ್ಯವಹಾರಿಕತೆ ಮುಂದಿನ ಅವರ ಅಭಿವೃದ್ಧಿ ಹಾಗೂ ಅದಃಪತನಕ್ಕೆ ಹೇಗೆ ಕಾರಣವಾದವು ಎಂಬುದಕ್ಕೆ ಸ್ಪಷ್ಟ ನಿದರ್ಶನಗಳಾಗಿವೆ.

ಶ್ರವಣಬೆಳಗೊಳದ ಬುಕ್ಕರಾಯನ ಶಾಸನ ಮೂಲತಃ ಜಯಪತ್ರವೇ. ಆದರೆ, ಅರಸ ಬುಕ್ಕರಾಯನ ವ್ಯವಹಾರಿಕ ಜಾಣ್ಮೆಯಿಂದ ಅದೊಂದು 'ಸಮನ್ವಯ' ಶಾಸನವಾಗಿ ಇತಿಹಾಸದಲ್ಲಿ ದಾಖಲಾಯಿತು. ಬುಕ್ಕರಾಯ ಒಂದು ವೇಳೆ ಜಯಪತ್ರ ನೀಡಿದ್ದರೆ ಯಾರಿಗೆ ನೀಡಬೇಕಾಗಿತ್ತು ಜೈನರಿಗೆ? ಅಥವಾ ಶ್ರೀ ವೈಷ್ಣವರಿಗೆ?

ಜೈನರು ಈಗಾಗಲೇ ಆ ಭಾಗದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಕ್ರಮಣಗಳಿಗೆ, ಅನ್ಯಾಯಗಳಿಗೆ ತುತ್ತಾಗಿದ್ದರು. ಜೈನರ ಮತ್ತು ಶ್ರೀವೈಷ್ಣವರ ನಡುವಿನ ವ್ಯಾಜ್ಯಕ್ಕೆ ಕಾರಣ ಬಸದಿಗಳಲ್ಲಿ ಅಷ್ಟದಿಕ್ಪಾಲಕಾದಿಗಳನ್ನು ಮತ್ತು ಕಳಶವನ್ನು ಬಳಸುತ್ತಿದ್ದುದು. ಈಗಾಗಲೇ ಅವುಗಳ ಬಳಕೆ ಬಸದಿಗಳಲ್ಲಿದ್ದುದರಿಂದ ಬುಕ್ಕರಾಯ 'ಪೂರ್ವಮರಿಯಾದೆಯಂತೆ' ಅವುಗಳನ್ನು ಬಳಸಲು ಅನುಮತಿ ನೀಡಿದ. ಒಂದು ವೇಳೆ ಬುಕ್ಕರಾಯ ಜೈನರಿಗೆ ಬಳಸುವುದಕ್ಕೆ ಅನುಮತಿ ನೀಡಿ ಜಯಪತ್ರ ನೀಡಿದ್ದರೆ, ಅದು ಬಹುಸಂಖ್ಯಾತ ಶ್ರೀವೈಷ್ಣವರನ್ನು ಎದುರುಹಾಕಿಕೊಳ್ಳಬೇಕಾಗಿತ್ತು. ಶ್ರೀವೈಷ್ಣವರಿಗೆ ಜಯಪತ್ರ ನೀಡಿದ್ದರೆ, ಜೈನರ ಮೇಲಿನ ಆಕ್ರಮಣಗಳಿಗೆ ಅಧಿಕೃತ ಮುದ್ರೆಯನ್ನು ಒತ್ತಿದ ಹಾಗಾಗುತ್ತಿತ್ತು ಮತ್ತು ಶ್ರೀವೈಷ್ಣವರ ಕೃತ್ಯಗಳಿಗೆ ಉತ್ತೇಜನ ನೀಡಿದಂತಾಗುತ್ತಿತ್ತು.

ಇದೆಲ್ಲವನ್ನೂ ಮನಗಂಡಿದ್ದ ಬುಕ್ಕರಾಯ ಕೋವಿಲ್ ತಿರುಮಲೆ, ಪೆರುಮಾಳ್ ಕೋವಿಲ್, ತಿರುನಾರಾಯಣಪುರ ಮುಖ್ಯವಾದ ಸಕಳಾಚಾರ್ಯರೂ, ಸಕಳ ಸಮಯಿಗಳೂ, ಸಕಳ ಸಾತ್ವಿಕರೂ, ಮೋಷ್ಠಿಕರೂ, ತಿರುಪಣಿ, ತಿರುವಿಡಿ, ತಂಣ್ನೀರವರು, ನಲವತ್ತೆಂಟು ಜನಗಳೂ, ಸಾಮಂತ ಬೋವಕ್ಕಳು, ತಿರುಕುಲ ಜಾಂಬುವ ಕುಲವೊಳಗಾದ ಹದಿನೆಂಟು ನಾಡ ಶ್ರೀವೈಷ್ಣವರ ಕೈಯಲ್ಲಿ 'ವೈಷ್ಣವದರ್ಶನಕ್ಕೆ ಜೈನದರ್ಶನಕ್ಕೆ ಬೇಧವಿಲ್ಲವೆಂದು' ಜೈನರ ಕೈವಿಡಿದು ಕೊಡುತ್ತಾನೆ. ಆ ಮೂಲಕ ಎಲ್ಲ ಜನರೂ ಜೈನರಿಗೆ ಅನ್ಯಾಯ ಮಾಡಬಾರದು, ಅವರನ್ನು ರಕ್ಷಿಸಬೇಕು ಎಂಬ ಸಂದೇಶ ನೀಡುತ್ತಾನೆ. ಅಷ್ಟೇ ಅಲ್ಲ ಜೈನ ಬಸ್ತಿಗಳ ರಕ್ಷಣೆಯ ಹೊಣೆಗಾರಿಕೆಯನ್ನು ಶ್ರೀವೈಷ್ಣವರಿಗೆ ವಹಿಸುವ ಮೂಲಕ ಜೈನರನ್ನು ರಕ್ಷಿಸುವ ಕಾರ್ಯದಲ್ಲಿ ಶ್ರೀವೈಷ್ಣವರು ಒಳಗೊಳ್ಳುವಂತೆ ಮಾಡುತ್ತಾನೆ. ಇವನ ಈ ತೆರನಾದ ನ್ಯಾಯಿಕ ವ್ಯವಹಾರ ನಿರ್ಣಯ ವಿಜಯನಗರ ಸಾಮ್ರಾಜ್ಯದ ಇತರ ಅರಸರಿಗೂ ಸ್ಫೂರ್ತಿಯಾಗಿ ಅವರು ದೀರ್ಘಕಾಲದವರೆಗೆ ರಾಜ್ಯ ನಡೆಸಲು ಸಾಧ್ಯವಾಯಿತು.

ಬಿಜ್ಜಳನದು ಇದಕ್ಕೆ ತದ್ವಿರುದ್ಧವಾದ ನಡೆ. ರಾಮಯ್ಯನಿಂದ ಅಪಜಯವನ್ನು ಹೊಂದಿ ತಮ್ಮ ಬಸದಿಗಳಿಗೆ ತಾವೇ ಸಂಚಕಾರ ತಂದುಕೊಂಡ ಜೈನರು ಬಿಜ್ಜಳನಲ್ಲಿಗೆ ಹೋಗಿ ಆತಂಕದಿಂದ ದೂರುತ್ತಾರೆ. ಮೊದಲು ಕೋಪಮಾಡಿಕೊಂಡ ಬಿಜ್ಜಳ 'ನೀನಿದನನ್ಯಾಯಮನೇಕೆ ಮಾಡಿದೆ' ಎಂದು ರಾಮಯ್ಯನನ್ನು ದಬಾಯಿಸಿದರೂ, ರಾಮಯ್ಯ ಜೈನರು ಬರೆದುಕೊಟ್ಟ ಓಲೆಯನ್ನು ತೋರಿಸಿ, ಜೈನರು

ತಮ್ಮ ಆನೆಸಜ್ಜೆ ಬಸದಿ ಸಹಿತವಾಗಿ ಎಂಟುನೂರು ಬಸದಿಗಳನ್ನು ಪಣವಾಗಿ ಒಡ್ಡಿದರೆ ತನ್ನ ತಲೆಯನ್ನು ಪುನಃ ಪಣವಾಗಿ ಒಡ್ಡಿಕೊಂಡು ಅದನ್ನು ಸುಟ್ಟುಕೊಂಡು ಮರಳಿ ಬರುತ್ತೇನೆ ಎಂದು ಸವಾಲು ಒಡ್ಡುತ್ತಾನೆ. ಈ ಸಮಯದಲ್ಲಿ ರಾಜ್ಯದ ಸಮಸ್ತ ಧರ್ಮಗಳ ಪ್ರಜೆಗಳ ಹಿತರಕ್ಷಣೆ ಮಾಡಬೇಕಾಗಿದ್ದ ಬಿಜ್ಜಳ, ಅದನ್ನು ಮರೆತು ಆ ಘಟನೆಯನ್ನು ಒಂದು ಮನೋರಂಜನಾ ಪ್ರಸಂಗವನ್ನಾಗಿ ಪರಿಗಣಿಸುತ್ತಾನೆ. ಕೌತುಕವನ್ನು ನೋಡಬೇಕೆಂದು ಬಯಸಿ ಜೈನರನ್ನು ಕರೆದು 'ನೀವು ಬಸದಿಗಳನ್ನು ಪಣವಿಟ್ಟು ಓಲೆ ಬರೆದುಕೊಡಿ' ಎಂದು ಕೇಳುತ್ತಾನೆ. ಅವರು ನಿರಾಕರಿಸಿದಾಗ, ದೂರಿ ಬಂದವರನ್ನೇ "ನೀವಿನ್ನು ಉಸಿರದೆ ಹೋಗಿ ಸುಖದಿಂದಿರಿ" ಎಂದು ಕಳುಹಿಸುತ್ತಾನೆ. ರಾಮಯ್ಯನಿಗೆ ಗೋಗಾವೆ ಗ್ರಾಮದ ಜೊತೆಗೆ ಜಯಪತ್ರ ನೀಡಿ ಗೌರವಿಸಿ ಕಳುಹಿಸುತ್ತಾನೆ. ರಕ್ಷಿಸಬೇಕಾದ ಅರಸನೇ ಕೈಬಿಟ್ಟರೆ ಅವರು ಸುಖದಿಂದ ಹೇಗೆ ಇರಲು ಸಾಧ್ಯ? ರಾಮಯ್ಯನು ಜಿನಾಲಯವನ್ನು ಸೋಮೇಶ್ವರ ದೇವಾಲಯವನ್ನಾಗಿ ಪರಿವರ್ತಿಸಿದ ನಂತರ ಆ ದೇವಾಲಯದ ವಿವಿಧ ಕಾರ್ಯಗಳ ನಿರ್ವಹಣೆಗೆ ಕಲ್ಯಾಣ ಚಾಲುಕ್ಯ ದೊರೆ ಸೋಮೇಶ್ವರ, ಕದಂಬ ಕಾಮದೇವರಸನೂ ಪುರಸ್ಕಾರದ ರೀತಿಯಲ್ಲಿ ಅಬ್ಬಲೂರು ಮತ್ತು ಮಲ್ಲವಳ್ಳಿಗಳನ್ನು ದಾನದ ರೂಪದಲ್ಲಿನೀಡುತ್ತಾರೆ. ಇಂಥದೇ ಒಂದು ಸನ್ನಿವೇಶವನ್ನು ನಾವು ಕುಮಾರರಾಮನ ಸಾಂಗತ್ಯದಲ್ಲೂ ಕಾಣುತ್ತೇವೆ. ತಾನು ಊಟ ಮಾಡಿದ ಸ್ಥಳವನ್ನು ಜೈನರು ಶುಚಿಗೊಳಿಸಿದರೆಂಬ ಕಾರಣಕ್ಕೆ ಕುಮಾರರಾಮ ಕಮ್ಮಟದಲ್ಲಿ ಕುರಿ ಕೋಣಗಳನ್ನು ವಧಿಸಿ ಅವರು ಅಲ್ಲಿಂದ ದೇಶಾಂತರ ಹೋಗುವಂತೆ ಮಾಡುತ್ತಾನೆ.

ಸ್ಥಳೀಯ ಧರ್ಮಗಳನ್ನು ಸಮಾನವಾಗಿ ಕಾಣದೆ ಎದುರುಹಾಕಿಕೊಂಡರೆ ಏನಾಗಬಹುದೆಂಬ ಪ್ರಶ್ನೆಗೆ ಇತಿಹಾಸ ಉತ್ತರವನ್ನು ಸಹ ನೀಡಿದೆ. ಒಬ್ಬರ ಕೈಯಲ್ಲಿ ಮತ್ತೊಬ್ಬರ ಕೈಯನ್ನಿಟ್ಟು ನಿಷ್ಪಕ್ಷಪಾತವಾಗಿ ನ್ಯಾಯ ನೀಡಿದ ವಿಜಯನಗರ ಸಾಮ್ರಾಜ್ಯ ದೀರ್ಘಕಾಲ ಅಸ್ತಿತ್ವದಲ್ಲಿದ್ದರೆ, ಬಿಜ್ಜಳನ ಕಲಚೂರ್ಯ ಮತ್ತು ಕುಮ್ಮಟ ರಾಜ್ಯಗಳು ಕೆಲವೇ ವರ್ಷಗಳಲ್ಲಿ ಇತಿಹಾಸದ ಪುಟವನ್ನು ಸೇರಿದವು.

### ೫.೫ ಧಾರ್ಮಿಕ ಅನುಸಂಧಾನದ ಪರಿಕಲ್ಪನೆಗಳು

ಮಧ್ಯಕಾಲೀನ ಕರ್ನಾಟಕ ಹಲವಾರು ಧಾರ್ಮಿಕ ಸಂಘರ್ಷಗಳಿಗೆ ಸಾಕ್ಷಿಯಾಗಿತ್ತು. ಆದರೆ ಅಂಥ ಸಂಘರ್ಷಗಳು ತತ್ಕಾಲೀನ ಸಂದರ್ಭಗಳ ಹಿನ್ನೆಲೆಯಲ್ಲಿ ಉದ್ಭವಿಸಿದ್ದರೂ, ಅವುಗಳ ದೀರ್ಘಕಾಲೀನ ಪರಿಣಾಮಗಳನ್ನು ಚರಿತ್ರೆಯಲ್ಲಿ ಉಳಿಸಿ ಹೋಗಿವೆ. ಕರ್ನಾಟಕದಲ್ಲಿ ಧರ್ಮ-ಧರ್ಮಗಳ ನಡುವೆ ಸಂಘರ್ಷಗಳು ಉದ್ಭವವಾದಾಗಲೆಲ್ಲ, ಸಂಘರ್ಷಗಳಿಗೆ ಮುಖಾಮುಖಿಯಾಗುತ್ತಲೇ ಅವುಗಳೊಂದಿಗೆ ಅನುಸಂಧಾನ ಮಾಡಿಕೊಂಡಿರುವುದನ್ನು, ಅನುಸಂಧಾನ ಏರ್ಪಟ್ಟಿರುವುದನ್ನು ಕಾಣಬಹುದಾಗಿದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಪರಸ್ಪರ ಮತ ದರ್ಶನಗಳ ನಡುವೆ ಆಗಿರುವ ಹೊಂದಾಣಿಕೆ, ಅನುಸಂಧಾನದ ಪ್ರಕ್ರಿಯೆಗಳನ್ನು ಜಯಪತ್ರಗಳ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ.

ಜೀವದಯಾಪರತೆಯ ತತ್ವದೊಂದಿಗೆ ಕ್ರಿಸ್ತಶಕದ ಆರಂಭದ ವೇಳೆಗಾಗಲೀ ಜೈನಧರ್ಮ ಕರ್ನಾಟಕದಲ್ಲಿ ಭದ್ರವಾಗಿ ನೆಲೆಯೂರಿತ್ತು. ಕರ್ನಾಟಕದ ಆರಂಭಿಕ ಅರಸು ಮನೆತನಗಳಾದ ಕದಂಬ, ಗಂಗರಾದಿಯಾಗಿ ಚಾಲುಕ್ಯ, ರಾಷ್ಟ್ರಕೂಟರ ನಿರಂತರ ರಾಜಾಶ್ರಯದಡಿಯಲ್ಲಿ ಧಾರ್ಮಿಕವಾಗಿ ಮಾತ್ರವಲ್ಲದೆ, ಕರ್ನಾಟಕದ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ರಂಗಗಳಲ್ಲೂ ಸಹ ತನ್ನ ಯಾಜಮಾನ್ಯತೆಯನ್ನು ಸ್ಥಾಪಿಸಿತ್ತು.

ಇದೇ ಅವಧಿಯಲ್ಲಿ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ವೈಷ್ಣವ, ಶೈವ ಮತಗಳು ವರ್ಣಾಶ್ರಮದ ಹಿನ್ನೆಲೆಯಲ್ಲಿ ಒಟ್ಟಿಗೆ ಒಂದೇ ಅಗ್ರಹಾರದಲ್ಲಿ ಅರಸರಿಂದ ಒಟ್ಟಿಗೆ ಭೂದಾನ-ದತ್ತಿಗಳನ್ನು ಸ್ವೀಕರಿಸುತ್ತಾ ಸಹಬಾಳ್ವೆಯಿಂದ ಜೀವನ ನಡೆಸುತ್ತಿದ್ದವು. ರಾಜರೂ ಸಹ ಎಲ್ಲ ಧರ್ಮಗಳನ್ನು ಒಟ್ಟಿಗೆ ತನ್ನೊಂದಿಗೆ ಕರೆದುಕೊಂಡು ಹೋಗಬೇಕಾದ ಅನಿವಾರ್ಯತೆಯಿಂದ ಎಲ್ಲಾ ಧರ್ಮಗಳನ್ನು ಸಮಾನವಾಗೇ ಪರಿಗಣಿಸುತ್ತಿದ್ದರು ಮತ್ತು ಅವುಗಳಿಗೆ ಸಮಾನವಾಗೇ ಸ್ಪಂದಿಸುತ್ತಿದ್ದರು. ವಾಸ್ತುಶಿಲ್ಪದಲ್ಲೂ ಇಂಥ ಒಂದು ಅನುನಯದ ಸ್ಥಿತಿ ಕಾಣಬಹುದು. ಬಾದಾಮಿ ಚಾಲುಕ್ಯರು ಸಮಕಾಲೀನ ಸಂದರ್ಭದಲ್ಲಿ ಪ್ರಬಲ ಧರ್ಮಗಳಾಗಿದ್ದ ಜೈನ, ಶೈವ ಮತ್ತು ವೈಷ್ಣವ ಧರ್ಮಗಳಿಗಾಗಿ ಬಾದಾಮಿಯಲ್ಲಿ ಒಂದೇ ಕಡೆ ಗುಹಾಲಯಗಳನ್ನು ಕೊರೆಸಿದ್ದರು.

ಜೈನಧರ್ಮಕ್ಕೆ ಪರ್ಯಾಯವಾದ ಪ್ರಬಲ ಧರ್ಮಗಳು ಇಲ್ಲದಿದ್ದಾಗ, ಅದು ರಾಜಾಶ್ರಯದ ಸಂಪೂರ್ಣ ಲಾಭ ಪಡೆದು ಪ್ರಬಲ ಧರ್ಮವಾಗಿದ್ದುದಲ್ಲದೆ, ವ್ಯಾಪಾರ ಕ್ಷೇತ್ರದ ಮೇಲೂ ಸ್ವಾಮ್ಯತೆ ಹೊಂದಿತ್ತು. ಇಂಥ ಸಂದರ್ಭದಲ್ಲಿ ತನ್ನ ಧರ್ಮದ ಮೂಲ ಸಿದ್ಧಾಂತಗಳಿಗೆ, ತತ್ವಗಳಿಗೆ ಬದ್ಧವಾಗಿತ್ತು. ಆದರೆ, ಹತ್ತನೆಯ ಶತಮಾನಾನಂತರ ಕರ್ನಾಟಕದ ಸಾಮಾಜಿಕ ಮತ್ತು ಧಾರ್ಮಿಕ ರಂಗದಲ್ಲಾದ ಸ್ಥಿತ್ಯಂತರಗಳು ಧರ್ಮಗಳು ಪರಸ್ಪರ ಹೊಂದಾಣಿಕೆಯಿಂದ, ಇಲ್ಲವೇ ಒಂದು ಧರ್ಮದ ಅನುನಯದಲ್ಲಿ ಮತ್ತೊಂದು ಧರ್ಮ ಬದುಕಬೇಕಾದಂತಹ ಸಂದಿಗ್ಧ ಸನ್ನಿವೇಶವನ್ನು ಸೃಷ್ಟಿಸಿದವು. ಗಂಗರನ್ನು ಸೋಲಿಸಿ ತಲಕಾಡಿನ ಕಡೆಯಿಂದ ಕರ್ನಾಟಕವನ್ನು ಪ್ರವೇಶಿಸಿದ ಚೋಳರು ಆ ಭಾಗದಲ್ಲಿ ಆಡಳಿತ ನಿರ್ವಹಣೆಗಾಗಿ ಚೋಳ ಅಧಿಕಾರಿಗಳನ್ನು ನೇಮಕ ಮಾಡಲಾರಂಭಿಸಿದರು. ಚೋಳ ಅಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಬರುತ್ತಿದ್ದ ಗಂಗ ಅರಸರು ನಿರ್ಮಿಸಿದ್ದ ದೇವಾಲಯಗಳಲ್ಲಿ ತಮಿಳುನಾಡಿನ ಪುರೋಹಿತರನ್ನು ನೇಮಕ ಮಾಡಲಾರಂಭಿಸಿದರು. ಅಲ್ಲದೆ, ತಾವೂ ಕೆಲವು ದೇವಾಲಯಗಳನ್ನು ನಿರ್ಮಿಸಿ ಅಲ್ಲಿಯೂ ತಮಿಳುನಾಡಿನ ಪುರೋಹಿತರನ್ನು ನೇಮಕ ಮಾಡಲಾರಂಭಿಸಿದರು.

ದಕ್ಷಿಣದ ಭಾಗದಲ್ಲಿ ಶ್ರೀವೈಷ್ಣವ ಧರ್ಮದ ವ್ಯಾಪಕತೆ ಸಾಮಾನ್ಯ ಜನರನ್ನು ಆವರಿಸಿತು. ಹೊಯ್ಸಳ ಅರಸ ವಿಷ್ಣುವರ್ಧನ ಶ್ರೀವೈಷ್ಣವ ಧರ್ಮದ ಕಡೆ ಆಕರ್ಷಿತನಾಗುತ್ತಿದ್ದಂತೆ ಪ್ರಭುತ್ವವನ್ನನುಸರಿಸಿ ಆತನ ಸಾಮ್ರಾಜ್ಯದ ಜನರೂ ಸಹ ಆ ಧರ್ಮದೆಡೆಗೆ ಆಕರ್ಷಿತರಾದರು. ವೈಷ್ಣವ

ಧರ್ಮದ 'ಭಕ್ತಿ' ಸಿದ್ಧಾಂತ, ತಳ ಸಮುದಾಯಗಳನ್ನು ಆಕರ್ಷಿಸಿತು. ಈ ಸಂಪ್ರದಾಯ ತಳಸಮುದಾಯಗಳೂ ಸಹ ದೇವಾಲಯದ ಕಾರ್ಯಚಟುವಟಿಕೆಯಲ್ಲಿ ಭಾಗವಹಿಸುವಂತೆ ಮಾಡಿದ್ದರಿಂದ, ಹೆಚ್ಚು ಜನಪ್ರಿಯವಾಯಿತು.

ಶ್ರೀವೈಷ್ಣವ ಧರ್ಮ ಅಗ್ರಹಾರಗಳಿಗೆ ಪ್ರವೇಶಿದ ತರುವಾಯ ಅಗ್ರಹಾರಗಳಲ್ಲಿ ಸ್ವಲ್ಪಮಟ್ಟಿನ ಸಂಘರ್ಷಗಳಾದಂತೆ ತೋರುತ್ತದೆ. ಅದನ್ನು ಉಪಶಮನ ಮಾಡಲು ಕಂಡುಕೊಂಡ ಮಾರ್ಗಗಳೇ ಹರಿ ಮತ್ತು ಹರನ ಅಬೇಧ ಕಲ್ಪನೆಯನ್ನು ಸಾರುವುದಕ್ಕೆ ನಿರ್ಮಾಣವಾದ 'ಹರಿಹರಪುರಗಳು' ಹೊಯ್ಸಳ ಸಾಮ್ರಾಜ್ಯದಲ್ಲಿ ಇಂತಹ ಹರಿಹರಪುರಗಳ ಸ್ಥಾಪನೆ ಹೆಚ್ಚಿನ ಪ್ರಮಾಣದಲ್ಲಿ ಆಗುತ್ತದೆ. ಹೊಯ್ಸಳ ನರಸಿಂಹ ಕಲ್ಲೆಂಗೆರೆಯನ್ನು ಹರಿಹರಪುರವಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ನೀಡುತ್ತಾನೆ.[೫೮] ಶಿವಾರದಲ್ಲಿ ನಾರಾಯಣೇಶ್ವರ ದೇವಾಲಯಗಳನ್ನು ನಿರ್ಮಿಸಿ ಅಲ್ಲಿ ಮಹದೇವ ಹಾಗೂ ಚೆನ್ನಕೇಶವ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡಲಾಯಿತು.[೫೯]

ಹೊಯ್ಸಳ ವೀರನರಸಿಂಹನ ಪ್ರಧಾನಿಯಾದ ಪೋಲಾಳ್ವ ದಂಡನಾಥ ಕೂಡಲೂರಿನಲ್ಲಿ ಕ್ರಿ.ಶ. ೧೨೨೪ರಲ್ಲಿ ೧೧೫ ಹೊನ್ನ ಕಳಶಗಳಿಂದ ಶೋಭಿಸುವ ಹರಿಹರ ದೇವಾಲಯವನ್ನು ನಿರ್ಮಿಸಿದ. ಅವನ ಶಾಸನದಲ್ಲಿ 'ಹರಿಯಿಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್, ಹರನಿಂದ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್ ಕೆಲಂಬರ್, ನರರಾ ಸಂದೇಹಮಂ ಪಿಂಗಿಸಲತಿಶಯದಿಂ ಕೊಡಲೂರಲ್ಲಿ ಶೋಭಾ ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ' ಎಂದು ಹರಿಹರನ ಅಭೇದತೆಯನ್ನು ಸಾರಲಾಗಿದೆ.[೬೦] ಬಾಚಲೇಶ್ವರ ಚಂದಿಸೆಟ್ಟಿ ಎಂಬುವವನು ಹರಿಹರ ದೇವಾಲಯವನ್ನು ನಿರ್ಮಿಸಿದಾಗ ಅದಕ್ಕೆ ತೆಲ್ಲಿಗರು, ಕುರುಬರು ದಾನ ನೀಡುತ್ತಾರೆ.[೬೧] ತಂಗಡ ಎಂಬ ಊರನ್ನು ಅಗ್ರಹಾರವನ್ನಾಗಿ ಮಾಡಿ 'ಸಂಕರ ನಾರಾಯಣಪುರ'ವೆಂಬ ಹೆಸರಿಟ್ಟು ದಾನ ನೀಡಿದ್ದನ್ನು ಶಾಸನ ದಾಖಲಿಸುತ್ತದೆ.[೬೨]

ಅದೇ ರೀತಿ ಉತ್ತರಭಾಗದಲ್ಲಿ ಕಾಳಾಮುಖ ಅಥವಾ ಪಾಶುಪತ ಧರ್ಮ ದೇವಾಲಯ ಸಂಸ್ಕೃತಿಗೆ ಹೆಚ್ಚಿನ ಆದ್ಯತೆ ನೀಡಿ ಅಸಂಖ್ಯ ಶೈವ ದೇವಾಲಯಗಳ ನಿರ್ಮಾಣಕ್ಕೆ ಕಾರಣವಾಯಿತು. ದೇವಾಲಯಗಳ ಆವರಣದಲ್ಲಿ ಮಠಗಳನ್ನು ಸ್ಥಾಪಿಸಿ ಅಲ್ಲಿ ವಿದ್ಯಾದಾನದ ಜೊತೆಗೆ ಆಹಾರ, ಭೈಷಜ, ಮುಂತಾದ ಚಟುವಟಿಕೆಗಳೊಂದಿಗೆ, ಕಲೆಯ ಬೆಳವಣಿಗೆಗೂ ಕಾರಣರಾದರು. ಇವರ ಇಂತಹ ಸಮಾಜಪರ ಚಟುವಟಿಕೆಗಳು ರಾಜರನ್ನು ಆಕರ್ಷಿಸಿ ಈ ದೇವಾಲಯಗಳು ಹೆಚ್ಚು ದಾನದತ್ತಿಗಳನ್ನು ಪಡೆಯಲು ಕಾರಣವಾಯಿತು. ಭೂದಾನ-ದತ್ತಿಗಳು ಹೆಚ್ಚಾಗುತ್ತಿದ್ದಂತೆ ಈ ದೇವಾಲಯಗಳು ಬಲಾಢ್ಯ 'ಸಂಸ್ಥೆ'ಗಳಾಗಿ ಮಾರ್ಪಟ್ಟವು.

ಇಂತಹ ಸಂದರ್ಭದಲ್ಲಿ ಅದು ತನ್ನ ಆರಾಧನಾ ಸಂಸ್ಕೃತಿಯಲ್ಲಿ ವೈಷ್ಣವರನ್ನು ಒಳಗೊಳ್ಳುವಂತೆ ಮಾಡಲು ಬಹುಕೂಟ ದೇವಾಲಯ ಪರಂಪರೆಯನ್ನು ಹುಟ್ಟುಹಾಕಿತು. ಇದರಿಂದ ಎರಡು ವಿಭಿನ್ನ ದೇವತಾರಾಧನೆಯ ಧರ್ಮಗಳ ನಡುವೆ ಸಾಮರಸ್ಯದೊಂದಿಗೆ ಒಡಂಬಡಿಕೆಯೂ ಸಾಧ್ಯವಾಯಿತು. ತ್ರಿಕೂಟ ದೇವಾಲಯ ಸಂಕೀರ್ಣಗಳಲ್ಲಿ ಶೈವಧರ್ಮ ಸಂಕೇತವಾದ ಒಂದು ಲಿಂಗದ ಜೊತೆಗೆ ಎಡಭಾಗದಲ್ಲಿ ಒಂದು ವಿಷ್ಣುಮೂರ್ತಿಯೂ ಇರುತ್ತಿತ್ತು. ಇಂತಹ ದೇವಾಲಯಳಿಗೆ ಆಳರಸರು/ ಅಧಿಕಾರ ವರ್ಗದವರು ದಾನ ದತ್ತಿಗಳನ್ನು ನೀಡುವಾಗ ಪ್ರತ್ಯೇಕವಾಗಿಯೇ ದಾನಗಳನ್ನು ನೀಡುತ್ತಿದ್ದರು. ಇಂತಹ ದಾನಗಳನ್ನು ಕಾಳಾಮುಖ ಯತಿಗಳು ಒಟ್ಟಿಗೆ ಪರಿಗ್ರಹಿಸುತ್ತಿದ್ದರು.

ಪರಸ್ಪರ ಉಭಯ ಧರ್ಮಗಳನ್ನು ಪೂಜಾವಿಧಿಯಲ್ಲಿ ಅನುಸಂಧಾನಗೊಳಿಸಲು ಏನೇ ಪ್ರಯತ್ನಗಳು ನಡೆದರೂ ಇವುಗಳ ನಡುವೆಯೂ ಘರ್ಷಣೆಗಳು ನಡೆಯುತ್ತಿದ್ದವು. ಆದರೆ ಅವು ಪೂಜಾವಿಧಾನ, ದಾನ-ದತ್ತಿಗಳ ಹಂಚಿಕೆಗೆ ಸಂಬಂಧಪಟ್ಟಂತೆ ಉಂಟಾದ ಸಾಮಾನ್ಯ ವಿವಾದ ಮತ್ತು ಘರ್ಷಣೆಗಳನ್ನು ಒಳಗೊಂಡಿದ್ದವು. ಅಲ್ಲದೆ ಇವು ತಾತ್ಕಾಲಿಕವಾಗಿದ್ದವು ಹಾಗೂ ಸ್ಥಳೀಯ ವ್ಯಾಪ್ತಿ ಹೊಂದಿದ್ದವು ಮತ್ತು ಇವುಗಳು ದೂರಗಾಮಿ ಪರಿಣಾಮಗಳನ್ನೇನೂ ಬೀರಲಿಲ್ಲ. ಅಲ್ಲದೆ ಪರಸ್ಪರ ದ್ವೇಷಾಸೂಯೆಗಳನ್ನು ಬೆಳೆಸಿಕೊಂಡು ಜೀವ ವಿರೋಧಿ ಮನೋವೃತ್ತಿಯನ್ನು ಅನುಸರಿಸಲಿಲ್ಲ. ಆದರೆ ಇವೆರಡಕ್ಕೂ ಪರಕೀಯ ಧರ್ಮವಾಗಿ ಎದುರಾದದ್ದು ಜೈನಧರ್ಮ. ಶೈವಧರ್ಮವು ವೈಷ್ಣವ ಧರ್ಮವನ್ನು ಮತ್ತು ವೈಷ್ಣವ ಧರ್ಮ ಶೈವ ಧರ್ಮವನ್ನು ಒಳಗೊಂಡಂತೆ ಈ ಉಭಯ ಧರ್ಮಗಳೆರಡಕ್ಕೂ ಜೈನಧರ್ಮವನ್ನು ಒಳಗೊಳ್ಳಲು ಸಾಧ್ಯವಾಗಲಿಲ್ಲ. ಉಭಯ ಧರ್ಮೀಯರೂ ಜೈನಧರ್ಮಕ್ಕೆ, ಜೈನ ಬಸದಿಗಳ ನಿರ್ಮಾಣಕ್ಕೆ ಆಶ್ರಯ, ಪ್ರೋತ್ಸಾಹ, ದಾನ ನೀಡಿದರೂ, ಅವರನ್ನು ತಮ್ಮ ವ್ಯಾಪ್ತಿಗೆ ತರದೆ ಅನ್ಯರನ್ನಾಗಿಯೇ ಪರಿಭಾವಿಸಿದರು. ಎಂದರೆ ಜೈನಧರ್ಮ ಉಭಯ ಧರ್ಮಗಳಿಗೂ ಅನ್ಯ ಸಮಯವಾಗಿ, ವಿರೋಧಿ ಧರ್ಮವಾಗಿ, ಅನಾಥವಾಗುವ ಸ್ಥಿತಿ ತಲುಪಿತು. ಈ ಸ್ಥಿತಿಯನ್ನು ಕಂಡೇ ನಯಸೇನ, ಬ್ರಹ್ಮಶಿವರಂತಹ ಕವಿಗಳೂ, ಕೊನೆಗೆ ದೇವಚಂದ್ರನಂತಹ ಸಂಕಲನಕಾರರೂ ಸಹ ಜೈನಧರ್ಮದ ಮೇಲ್ಮೈಯನ್ನು ಸಾರಲು ಕರ್ನಾಟಕದ ಸಂಸ್ಕೃತಿಯೆಲ್ಲವೂ ಮೂಲತಃ ಜೈನೀಯವೇ ಎಂದು ಪ್ರತಿಪಾದಿಸುವ ನೆಲೆಗೆ ಬಂದು ನಿಲ್ಲುತ್ತಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮುಸಲ್ಮಾನ ಧರ್ಮವನ್ನು ಹುಟ್ಟುಹಾಕಿದ್ದು, ಕ್ರಿಶ್ಚಿಯನ್ ಧರ್ಮವನ್ನು ಪ್ರತಿಪಾದಿಸಿದ್ದು ಸಹ ಜೈನರೇ ಎಂದು ಹೇಳುತ್ತಾನೆ. ದೇವಚಂದ್ರನ ಪ್ರಕಾರ ಸೌರಾಷ್ಟ್ರದ ಪಾರ್ಶ್ವಭಟಾರನು 'ಮುಸಲಮಾನ' ಮತವನ್ನು ಮಾಡುತ್ತಾನೆ. ಪಾರ್ಶ್ವಭಟಾರನ ಶಿಷ್ಯ ಮಲ್ಲಭಟ್ಟ ಮುಲ್ಲಾಶಾಸ್ತ್ರವನ್ನು (ಕುರಾನ್) ಮಾಡುತ್ತಾನೆ.[೬೩] ಹಾಗೆಯೇ ದ್ವೀಪಾಂತರದಲ್ಲಿದ್ದ ವಿದ್ಯಾಧರರು ಕಾಲದೋಷದಿಂದ ತನ್ನ ಮಹಿಮೆ ಕುಂದುತ್ತಾ ಬರಲು 'ಸರ್ವೇಶ್ವರ ಮತವನ್ನು' (ಕ್ರೈಸ್ತಮತ) ಪ್ರಕಟಿಸಿದ, ಸರ್ವೇಶ್ವರನ ಅವತಾರವಾಗಿ ಜೇಸುನಾಥ (ಏಸು) ಹುಟ್ಟುತ್ತಾನೆ.[೬೪]

ಹನ್ನೊಂದನೆಯ ಶತಮಾನಾನಂತರ ಜೈನಧರ್ಮ ತನ್ನ ಮೇಲಿನ 'ಅನ್ಯಾಕ್ರಮಣ'ಗಳನ್ನು ತಪ್ಪಿಸಿಕೊಳ್ಳಲು ಅನುಸರಿಸಿದ ಮಾರ್ಗವೆ ಬಲಾಢ್ಯ ಧರ್ಮಗಳೊಂದಿಗಿನ 'ಅನುಸಂಧಾನ'. ಜೈನರು ತಮ್ಮ ಬಸದಿಗಳನ್ನು ಉಳಿಸಿಕೊಳ್ಳಲು, ನಿರ್ಮಿಸಿಕೊಳ್ಳಲು, ಸ್ಥಾಪಿಸಿಕೊಳ್ಳಲು ಇತರ ಧರ್ಮೀಯರನ್ನು ಅನುನಯಿಸುವ ಅನಿವಾರ್ಯತೆ ಉಂಟಾಗುತ್ತದೆ. ಈ ವೇಳೆಗೆ ರಾಜರು ಬಸದಿಗಳ ನಿರ್ಮಾಣದಿಂದ ದೂರ ಸರಿದು ಕೇವಲ ದಾನಕರ್ತೃಗಳಾಗಿ ಮಾತ್ರ ಉಳಿಯುತ್ತಾರೆ. ಈ ಅವಧಿಯಲ್ಲಿ ಬಸದಿಗಳನ್ನೆಲ್ಲ ನಿರ್ಮಿಸುವವರು ಪ್ರಧಾನಿಗಳು, ದಂಡನಾಯಕರು, ವರ್ತಕರು. ಇಂತಹ ಸಂದರ್ಭದಲ್ಲಿ ಜೈನರು ಅನುನಯಿಸಿದ್ದು ಸಾಮಾನ್ಯ ಜನತೆಯನ್ನು ಹಾಗೂ ಧಾರ್ಮಿಕ ಪ್ರಭುತ್ವವನ್ನು.

ಜೈನಧರ್ಮ ಅನುಸರಿಸಿದ ಅನುಸಂಧಾನ ಪ್ರಕ್ರಿಯೆಯನ್ನು ಈ ಮುಂದಿನ ಕ್ರಿಯೆಗಳಲ್ಲಿ ಗುರುತಿಸಬಹುದು:

i. ಭೂದಾನ ಸ್ವೀಕಾರ
ii. ಬಸದಿಗಳ ನಿರ್ಮಾಣ
iii. ಪೂಜಾ ವಿಧಾನದಲ್ಲಿ ಬದಲಾವಣೆ
iv. ಮತಾಂತರ

**೫.೫.೧ ಭೂದಾನ ಸ್ವೀಕಾರ**

ಹತ್ತನೆಯ ಶತಮಾನದವರೆಗೆ ಜೈನ ಧರ್ಮಕ್ಕೆ ಪರ್ಯಾಯಗಳಿಲ್ಲದೆ ಅದು ಸಂಪೂರ್ಣವಾಗಿ ರಾಜಾಶ್ರಯವನ್ನವಲಂಭಿಸಿ, ವಿಜೃಂಭಣೆಯಿಂದ ನಿರ್ಭಯವಾಗಿತ್ತು. ಆದರೆ, ಕರ್ನಾಟಕದ ಬದಲಾದ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತ್ಯಂತರಗಳಲ್ಲಿ ಜೈನ ಧರ್ಮ ಅಸ್ತಿತ್ವದ ಉಳಿವಿಗಾಗಿ ಹೆಣಗಾಡಬೇಕಾಯಿತು. ಪ್ರಭುತ್ವವೇ ನೇರವಾಗಿ ದಾನ ನೀಡಿದರೂ, ಅದನ್ನು ನೇರವಾಗಿ ಸ್ವೀಕರಿಸುವ ಸ್ಥೈರ್ಯವನ್ನು ಜೈನಧರ್ಮ ಕಳೆದುಕೊಂಡಿತ್ತು. ಬದಲಾಗಿ ಅದನ್ನು ಕಾಳಾಮುಖ ಗುರುಗಳ ಮೂಲಕ ಸ್ವೀಕರಿಸುವ ಮೂಲಕ ಅವರನ್ನು ಓಲೈಸುವ ಕೆಲಸ ಮಾಡುತ್ತಿತ್ತು.

ಕಲ್ಯಾಣ ಚಾಲುಕ್ಯ ಅಧಿಕಾರಿ ರಾಜರಸನು ಗೆಜ್ಜೆ ಏಳ್ನೂರನ್ನು ಯುದ್ಧದಲ್ಲಿ ಗೆದ್ದು ತಂದಿದ್ದಕ್ಕಾಗಿ ಅರಸ ಅವನಿಗೆ ರಾಜ ಚಿನ್ಹಾಂಗಗಳೆಲ್ಲವನ್ನು ಪಡೆ ಎಂದರೂ, ಆತ ಮೊರಂಬದ ತೀರ್ಥ ಜಿನಾಲಯಕ್ಕೆ ಮಹಾ ಘಟಿಕಾಸ್ಥಾನಂಗಳಪ್ಪ ಶಿವಾಲಯಗಳ ಪರಮ ತಪೋಧನರಾದ ಗಂಗಾವಾಳ್ಯ ಸಮರುದ್ರರೆನಿಪ ವೀರಗಣೇಶ್ವರರ 'ಸನ್ಮತದಿಂದ ದಯೆಗೆಯ್ವುದೆಂದು' ಕೇಳಿಕೊಳ್ಳುತ್ತಾನೆ. ಅದರಂತೆ ಜಯಸಿಂಹ ಮೆಚ್ಚಿ ಅವರನ್ನೆಲ್ಲ ಕರೆಸಿ ಆ ತಪೋಧನರು, ಗಣೇಶ್ವರರೆಲ್ಲರೂ ಸೇರಿ ತೀರ್ಥ ಜಿನಾಲಯದಾಚಾರ್ಯರಾದ ಮಂತ್ರವಾದಿ ಚೂಡಾಮಣಿ ಗುಣಸೇನ ತ್ರೈವಿದ್ಯದೇವರ್ಗೆ ಜೋಗವಡ್ಡಿಗೆಯನ್ನಿಕ್ಕಿ ಶಂಖ, ಕಹಳೆ, ಭೇರಿ,

ಜೇಘಂಟಾ, ಘೋಷಂ, ಮೊದಲಾದ ಪಂಚಮಹಾಶಬ್ದಮುಂ, ಛತ್ರ ಛಾಮರಾಧಿ ರಾಜಚಿನ್ಹಮುಮಂ, ಸಮಸ್ತ ತೇಜಮುಮಂ ಕೊಡುತ್ತಾರೆ.[೬೫] ಇಲ್ಲಿ ರಾಜರಸು ತನ್ನ ಸ್ವಪರಾಕ್ರಮದ ಪಾರಿತೋಷಕವಾಗಿ ಪಡೆಯಬಹುದಾಗಿದ್ದಂತಹ ರಾಜ ಚಿನ್ಹಾಂಗಗಳನ್ನು ಪಡೆಯಲು ವೀರಗಣೇಶ್ವರನ ಅನುಮೋದನೆಯನ್ನು ಬಯಸುತ್ತಾನೆ. ಅದಕ್ಕೆ ಪ್ರತಿಯಾಗಿ ಅವರು ಜಿನಾಲಯಕ್ಕೆ ತಮ್ಮ ನಿಯಂತ್ರಣಾ ಧಿಕಾರದ ಸಂಕೇತವಾದ 'ಜೋಗವಟ್ಟಿಗೆಯನ್ನು' ನೀಡಿ, ವೈದಿಕ ಧರ್ಮದ ಪಂಚಮಹಾಶಬ್ದಗಳನ್ನು ಜಿನಾಲಯಕ್ಕೆ ನೀಡುತ್ತಾರೆ.

**೫.೫.೨ ಬಸದಿಗಳ ನಿರ್ಮಾಣ**

ಕರ್ನಾಟಕದ ಅರಸರ, ಸಾಮಂತರು, ಅಧಿಕಾರಿ ವರ್ಗ, ಧರ್ಮಾತೀತವಾಗಿ ಇತಿಹಾಸ ಆರಂಭದ ಕಾಲದಿಂದಲೂ ಬಸದಿಗಳನ್ನು ನಿರ್ಮಿಸುತ್ತಾ, ದಾನ-ದತ್ತಿಗಳ ಮೂಲಕ ಪೋಷಿಸುತ್ತಾ ಬಂದಿದ್ದಾರೆ. ಕ್ರಿ.ಶ. ಹತ್ತನೆಯ ಶತಮಾನದವರೆಗೆ ಜೈನಧರ್ಮ ಸಂಪೂರ್ಣವಾಗಿ ರಾಜಾಶ್ರಯದಡಿಯಲ್ಲಿ ಭದ್ರವಾಗಿ ನೆಲೆಯೂರಿತ್ತು. ಆದರೂ, ಕ್ರಿ.ಶ. ಎಂಟನೆಯ ಶತಮಾನದ ವೇಳೆಗಾಗಲೇ ಅದು ಅಭದ್ರತೆಯ ಭಾವದಿಂದ ನರಳುತ್ತಿರುವಂತೆ ತೋರುತ್ತದೆ. ಕ್ರಿ.ಶ. ಸುಮಾರು ೭೫೦ರ ಗೋಪಿನಾಥ ಗುಡ್ಡದ ಶಾಸನ.[೬೬] ಈ ಜಿನ ಬಸದಿಯು ರಾಮನಿಂದ ಪ್ರತಿಷ್ಠಾಪಿತವಾಗಿ, ಪಾಂಡವ ಜನನಿ ಕುಂತಿಯಿಂದ ಪುನರ್ನವೀಕೃತವಾಗಿವೆ' ಎಂದು ಸ್ವಯಂ ಘೋಷಣೆ ಮಾಡಿಕೊಳ್ಳುವ ಮೂಲಕ ರಾಮಾಯಣ ಮತ್ತು ಮಹಾಭಾರತಗಳಿಗೆ ಸಂಪರ್ಕ ಕಲ್ಪಿಸುವ ಮುಖೇನಜೈನೇತರರು ಇದನ್ನು ರಕ್ಷಿಸಬೇಕೆಂದು ಪರೋಕ್ಷವಾಗಿ ಆಶಯ ಹೊಂದಿರುವಂತಿದೆ. ಆ ಮೂಲಕ ಮೂಲ ನೆಲದಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವ ಅಭದ್ರತಾ ಭಾವವನ್ನು ಧ್ವನಿಸುತ್ತದೆ. ಹನ್ನೊಂದನೆಯ ಶತಮಾನಾನಂತರ ಬಸದಿಗಳ ನಿರ್ಮಾಣ ಕಾರ್ಯ ಮುಂದುವರೆದರೂ, ಅದಕ್ಕೊಂದು ವಿಶಿಷ್ಟ ಆಯಾಮವಿದೆ. ಅದೆಂದರೆ, ಈವರೆಗೆ ಜಿನನ ಹೆಸರಿನಲ್ಲಿ ಕಟ್ಟಿಸಿದ ಅಥವಾ ವ್ಯಕ್ತಿಗಳ ಹೆಸರಿನಲ್ಲಿದ್ದ ಜಿನಾಲಯಗಳು ಮೊಟ್ಟಮೊದಲ ಬಾರಿಗೆ 'ಬ್ರಹ್ಮ ಜಿನಾಲಯ' ಮತ್ತು 'ಎಕ್ಕೋಟಿ ಜಿನಾಲಯ' ಎಂಬ ವಿಶೇಷ ಅಭಿದಾನಗಳನ್ನು ಪಡೆದುಕೊಳ್ಳುತ್ತದೆ. ಈ ಅಭಿದಾನಗಳು ಜೈನ ಧರ್ಮವು, ವೈದಿಕ ಧರ್ಮಗಳೊಂದಿಗೆ ಮಾಡಿಕೊಂಡ ಅನುಸಂಧಾನವನ್ನು ಸೂಚಿಸುತ್ತದೆ.

ವೈಷ್ಣವ ಪ್ರಭಾವಲಯವಿದ್ದಂತಹ ಸ್ಥಳಗಳಲ್ಲಿ ನಿರ್ಮಿತವಾದ ಜಿನಾಲಯಗಳಿಗೆ 'ಬ್ರಹ್ಮಜಿನಾಲಯ'ವೆಂದು ಹೆಸರಿಡಲಾಗುತ್ತಿತ್ತು. ಇಂತಹ ಕಡೆ ಜಿನಾಲಯಗಳನ್ನು ನಿರ್ಮಿಸಲು ಮಹಾಜನರು ತಮ್ಮ ಅಗ್ರಹಾರಗಳಲ್ಲಿ ಭೂಮಿ ನೀಡಿ ಅನುಮತಿ ನೀಡಬೇಕಿತ್ತು. ಅತ್ತಿಮಬ್ಬೆ ಅಂತಹ ಅಗ್ರಹಾರದಲ್ಲಿ ನಿರ್ಮಿಸಿದ ಜಿನಾಲಯಕ್ಕೆ ಸಾಸಿರ್ವರು ಮಹಾಜನರು ಸೇರಿ ಅತ್ತಿಮಬ್ಬೆ ನಿರ್ಮಿಸಿದ ಬಸದಿಗೆ ಮುದದಿಂದ 'ಬ್ರಹ್ಮ ಜಿನಾಲಯ'ವೆಂದು ಹೆಸರಿಡುತ್ತಾರೆ.[೬೭] ಅದೇ ರೀತಿ ಸವದತ್ತಿ ರಟ್ಟರ ಅಂಕರಸನ ಪಟ್ಟದರಸಿಯಾದ ಲಚ್ಚಿಯಬ್ಬರಸಿ ಹೂಲಿಯ ಊರೊಡೆಯರಾದ ಸಾವಿರ ಮಹಾಜನರ

ಪಾದಗಳನ್ನು ಹಿರಣ್ಯಪೂರ್ವಕವಾಗಿ ಪೂಜಿಸಿ ಅವರಿಂದ ಭೂಮಿ ಪಡೆದು ಬಸದಿಯನ್ನು ನಿರ್ಮಿಸುತ್ತಾಳೆ.[೬೮]

'ಇಂತಹ ಬ್ರಹ್ಮ ಜಿನಾಲಯಗಳು ನಮಗೆ ಗದಗ ಜಿಲ್ಲೆಯ ಚಿಕ್ಕ ಹಂದಿಗೋಳ, ಬಳ್ಳಾರಿ ಜಿಲ್ಲೆಯ ಬಾಗಳಿ, ಬೀದರ ಜಿಲ್ಲೆಯ ಬಾಲ್ಕಿ, ಶಿವಮೊಗ್ಗ ಜಿಲ್ಲೆಯ ಈಸೂರು, ಕಳಸವಳ್ಳಿ, ಕುಪ್ಪಟೂರು, ನಿಡುಗಲ್ಲು, ಸಾಲಿಯೂರು, ತುಮಕೂರು ಜಿಲ್ಲೆಯ ಶಿರಾ, ಬೆಳಗಾವಿ ಜಿಲ್ಲೆಯ ಬಡ್ಲಿ, ಹಾವೇರಿ ಜಿಲ್ಲೆಯ ತಿಳವಳ್ಳಿ, ಬೆಳವತ್ತಿ, ಕಲಬುರ್ಗಿ ಜಿಲ್ಲೆಯ ಸೇಡಂ, ರಾಯಚೂರು ಜಿಲ್ಲೆಯ ಹಿರಿಯಗಬ್ಬೂರು, ಆಂಧ್ರಪ್ರದೇಶದ ಅಮರಾಪುರ ಮೊದಲಾದೆಡೆಗಳಲ್ಲಿನ ಶಾಸನಗಳಲ್ಲಿ ಕಂಡುಬರುತ್ತವೆ'.[೬೯] 'ಬ್ರಹ್ಮ ಜಿನಾಲಯಗಳ ಪ್ರಸ್ತಾಪವಿರುವ ಶಾಸನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಈ ಜಿನಾಲಯಗಳು ನಿರ್ಮಾಣವಾಗಿರುವ ಗ್ರಾಮಗಳೆಲ್ಲವೂ ಪ್ರಸಿದ್ಧ ಅಗ್ರಹಾರಗಳಾಗಿದ್ದವು. ಬಸದಿಗಳಿಗೆ 'ಬ್ರಹ್ಮ ಜಿನಾಲಯ' ಎಂದು ನಾಮಕರಣ ಮಾಡಿರುವುದು ಅತ್ತಿಮಬ್ಬೆಯ ಕಾಲದಿಂದ ಅಂದರೆ ಕ್ರಿ.ಶ. ೧೦೦೭ರಿಂದ ೧೨೭೮ರವರೆಗೆ ಮಾತ್ರ ಗೋಚರಿಸುತ್ತದೆ.[೭೦]

ಅಗ್ರಹಾರಗಳ ಮಹಾಜನರ ಅನುನಯದಲ್ಲಿ ನಡೆಯುತ್ತಿದ್ದ 'ಬ್ರಹ್ಮ ಜಿನಾಲಯ'ಗಳಿಗೆ ಹೋಲಿಸಿದರೆ, ಕರ್ನಾಟಕದಲ್ಲಿ 'ಏಕ್ಕೋಟಿ ಜಿನಾಲಯಗಳ' ಸಂಖ್ಯೆ ಹೆಚ್ಚಾಗಿದೆ. ಏಕ್ಕೋಟಿ ಜಿನಾಲಯಗಳು ಶೈವ ದೇವಾಲಯಗಳ ನಿಯಂತ್ರಣದಲ್ಲಿದ್ದವು. ಬಸದಿಗಳನ್ನು ನಿರ್ಮಿಸಿದ ನಂತರ ಅವುಗಳನ್ನು ದೇವಾಲಯಗಳಿಗೆ 'ಪ್ರತಿಬದ್ಧ' ಮಾಡಬೇಕಾಗಿತ್ತು.

ಬಸದಿಗಳನ್ನು ಮತ್ತು ದೇವಾಲಯಗಳನ್ನು ಪ್ರತಿಬದ್ಧ ಮಾಡುವ ಪ್ರಕ್ರಿಯೆ ಮೊದಲಿನಿಂದಲೂ ಚಾಲ್ತಿಯಲ್ಲಿತ್ತು. ಸಣ್ಣಪುಟ್ಟ ಬಸದಿಗಳ ನಿರ್ವಹಣೆಗೆ, ದಾನ-ದತ್ತಿಗಳನ್ನು ಬಿಡುವುದು ಕಡಿಮೆ. ಹಾಗಾಗಿ ಅವುಗಳ ನಿರ್ವಹಣೆಯ ಜವಾಬ್ದಾರಿಯನ್ನು ದೊಡ್ಡ ಬಸದಿಗಳ ನಿಯಂತ್ರಣಕ್ಕೆ ಒಪ್ಪಿಸಲಾಗುತ್ತಿತ್ತು. ಮಲ್ಲಸಮುದ್ರದ ಬಸದಿಯನ್ನು ಪುಲಿಗೆರೆಯ ಶಂಖಬಸದಿಗೆ ಪ್ರತಿಬದ್ಧ ಮಾಡಲಾಗಿತ್ತು.[೭೧] ಹಾಗೆಯೇ ತ್ರಿಪುರಾಂತಕ ದೇವಾಲಯಕ್ಕೆ ಎಡವಟ್ಟೆ ೭೦ರ ಹಳ್ಳಿಗಳ ೧೦ ದೇವಾಲಯಗಳು ಪ್ರತಿಬದ್ಧವಾಗಿದ್ದರೆ, ಬಳ್ಳಿಗಾವೆಯ ಕೋಡಿಮಠಕ್ಕೆ ಬಳ್ಳಿಗಾವೆಯ ಕುಸುಮೇಶ್ವರ ದೇವಾಲಯವನ್ನು ಪ್ರತಿಬದ್ಧ ಮಾಡಲಾಗಿತ್ತು. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯವೂ ಸಹ ಕೋಡಿಮಠಕ್ಕೆ ಪ್ರತಿಬದ್ಧವಾಗಿತ್ತು.

ರಾಜಾರಾಂ ಹೆಗಡೆಯವರ ಪ್ರಕಾರ ಹೀಗೆ ಪ್ರತಿಬದ್ಧ ಮಾಡುವುದಕ್ಕೆ ಮುಖ್ಯಕಾರಣಗಳೆಂದರೆ, (೧) ಮಠಗಳೇ ಹೊಸ ದೇವಾಲಯಗಳನ್ನು ಆಯ್ದ ವಸತಿಗಳಲ್ಲಿ ಪ್ರಾರಂಭಿಸುವುದು, (೨) ಅನ್ಯರು ಕಟ್ಟಿದ ದೇವಾಲಯಗಳಿಗೆ ಆಗಮಿಕ ಮತ್ತು ಸಾಂಸ್ಥಿಕ ಮಾನ್ಯತೆಯನ್ನು ನೀಡುವುದರ ಮೂಲಕ ತಮ್ಮ ಸಂತತಿಯನ್ನು ನೆಲೆ ನಿಲ್ಲಿಸುವುದು.[೭೨] ಇದು ವೈದಿಕ ದೇವಾಲಯಗಳನ್ನು, ವೈದಿಕ ದೇವಾಲಯಗಳಿಗೆ ಪ್ರತಿಬದ್ಧ ಮಾಡುವ ಕ್ರಿಯೆಯಲ್ಲಿ ಸರಿ ಎನಿಸಿದರೂ, ಜೈನ ಬಸದಿಗಳನ್ನು ಶೈವ ದೇವಾಲಯಗಳಿಗೆ

ಒಪ್ಪಿಸುವ ಕ್ರಿಯೆಯ ಸಂಬಂಧದಲ್ಲಿ ಒಪ್ಪಲು ಸಾಧ್ಯವಿಲ್ಲ. ಇದು ಕೇವಲ ಜೈನರ ಆರಾಧನಾ ನೆಲೆಗಳ ಅಳಿವು-ಉಳಿವಿನ ಪ್ರಶ್ನೆಯಾಗಿ ಮಾತ್ರ ಉಳಿದಿರಲಿಲ್ಲ. ಪ್ರತಿಯಾಗಿ ಜೈನರ ಅಳಿವು-ಉಳಿವಿನ ಪ್ರಶ್ನೆಯೂ ಆಗಿತ್ತು. ಜೈನರು ಅನಿವಾರ್ಯವಾಗಿ ಒತ್ತಾಯಪೂರ್ವಕವಾಗಿಯೇ ದೇವಾಲಯಗಳಿಗೆ ಅಥವಾ ಮಠಗಳಿಗೆ ಹಾಗೆ ಪ್ರತಿಬದ್ಧ ಮಾಡಿದ ನಿದರ್ಶನಗಳು ಶಾಸನಗಳಲ್ಲಿವೆ. ಸವದತ್ತಿ ರಟ್ಟರ ಕಾರ್ತವೀರ್ಯನ ಅಧಿಕಾರಿ ಗೊಂಕರಸನು ತೇರದಾಳದಲ್ಲಿ ಕ್ರಿ.ಶ. ೧೧೨೩ರಲ್ಲಿ ಗೊಂಕ ಜಿನಾಲಯವನ್ನು ನಿರ್ಮಿಸಿ, ಅದನ್ನು ಕೊಲ್ಲಾಪುರದ ನಿಂಬದೇವ ಸಾಮಂತ ನಿರ್ಮಿಸಿದ ರೂಪ ನಾರಾಯಣ ಬಸದಿಗೆ ಪ್ರತಿಬದ್ಧ ಮಾಡಿರುತ್ತಾರೆ.[೭೩] ಇದಾದ ೫೮ ವರ್ಷಗಳ ತರುವಾಯ ಕ್ರಿ.ಶ. ೧೧೮೧ ರಲ್ಲಿ ಕೊಲ್ಲಾಪುರದ ಅಗಸ್ತ್ಯೇಶ್ವರ, ಕಣಗಿಲೇಶ್ವರ, ಮಹಾಲಕ್ಷ್ಮೀದೇವಿ, ಗೋಕಾಗೆಯ ಮಹಾಲಿಂಗದೇವ, ಮೊದಲಾದ ಘಟಿಕಾಸ್ಥಾನದ ಆಚಾರ್ಯರೂ ಸೇರಿದಂತೆ ಏಳು ಕೋಟಿ ಅಸಂಖ್ಯಾತಗಣಗಳು 'ಮಹಾಮಂಡಳಿಯಾಗಿ' ತೇರದಾಳಕ್ಕೆ ಬಂದು ಗೊಂಕಜಿನಾಲಯವನ್ನು ಸ್ಥಳೀಯ ಮೂಲಸ್ಥಾನದ ಕಲಿದೇವ ಸ್ವಾಮಿಗೆ ಪ್ರತಿಬದ್ಧ ಮಾಡಿದ್ದಲ್ಲದೆ, ಆಚಾರ್ಯ ಪ್ರಭಾಚಂದ್ರ ದೇವನಿಗೆ ಜೋಗವಟ್ಟಿಗೆ ಕೊಟ್ಟು ಜಿನಾಲಯದ ಮೇಲೆ ಶೂದ್ರಕ, ಸಿಂಹ, ತ್ರಿಶೂಲ, ಘಂಟೆಯನ್ನು ನಿಲ್ಲಿಸಲಾಯಿತು.[೭೪]

ಗೊಂಕ ಜಿನಾಲಯವನ್ನು ಕಾಳಾಮುಖ ದೇವಾಲಯದ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಇವರೆಲ್ಲಾ ಸೇರಿ ಒಂದು ಒಕ್ಕೂಟವನ್ನೇ ರಚಿಸಿಕೊಂಡಿದ್ದಾರೆ. ಇಂತಹ ಬಲಾಢ್ಯ ಒಕ್ಕೂಟಗಳನ್ನು ಜೈನ ಧರ್ಮಿಯರು ಎದುರು ಹಾಕಿಕೊಳ್ಳಲು ಸಾಧ್ಯವಾಗುತ್ತದೆಯೇ? ಒಂದು ವೇಳೆ ಎದುರು ಹಾಕಿಕೊಂಡರೆ ಏನಾಗುತ್ತದೆ ಎಂಬುದಕ್ಕೆ ಈಗಾಗಲೇ ಏಕಾಂತದ ರಾಮಯ್ಯ ಅಬ್ಬಲೂರಿನಲ್ಲಿ ಉತ್ತರವನ್ನು ನೀಡಿದ್ದಾನೆ. ಅಬ್ಬಲೂರಿನಲ್ಲಿ ಜೈನರು ತಮ್ಮ ಸೋಲು ಒಪ್ಪಿಕೊಂಡಿದ್ದರಿಂದ ಕನಿಷ್ಠ ಪಕ್ಷ ಅಲ್ಲಿ ಉಳಿದ ಜಿನಾಲಯಗಳಾದರೂ ಉಳಿಯುವಂತಾದರೂ ಆಯಿತು. ಒಂದು ವೇಳೆ ಅವರು ಆನೆಸಜ್ಜೆ ಬಸದಿಯನ್ನು ಪಣವಾಗಿ ಒಡ್ಡಿದ್ದರೆ, ಅವರ ಕತೆ ಏನಾಗುತ್ತಿತ್ತೆಂಬುದನ್ನು ಊಹಿಸಲೂ ಅಸಾಧ್ಯ.

ಶೈವ ಯತಿಗಳ ಪ್ರಾಬಲ್ಯವಿದ್ದಂತಹ ಪ್ರದೇಶಗಳಲ್ಲಿ ನಿರ್ಮಿಸಿದ ಜಿನಾಲಯಗಳೆಲ್ಲವೂ ಶೈವರ ಆಶ್ರಯದಲ್ಲೇ ನಿರ್ಮಾಣವಾಗುತ್ತವೆ. ಅವುಗಳಲ್ಲಿ ಶೈವಯತಿಗಳ ಯೋಗಪಟ್ಟಿಗೆ, ನಂದಿಕೋಲುಗಳನ್ನು ಕಡ್ಡಾಯವಾಗಿ ಇಟ್ಟು ಪೂಜೆ ಮಾಡಬೇಕಾಗಿತ್ತು. ಈ ವ್ಯವಸ್ಥೆ ಜೈನರಿಗೆ 'ವಜ್ರಪಂಜರವೊಲು' ಇದ್ದರೂ, ಜೈನರು ಅದಕ್ಕೆ ಹೊಂದಿಕೊಂಡುಬಿಟ್ಟಿದ್ದರು. ಚಿಕ್ಕಮಾಗಡಿಯಲ್ಲಿ ಸಾವಂತ ಶಂಕರ ಕಟ್ಟಿಸಿದ ಪಾರ್ಶ್ವನಾಥ ಬಸದಿಗೆ ಬಳ್ಳಿಗಾವೆಯ ತ್ರಿಪುರಾಂತಿಕ ದೇವಾಲಯದ ಸೂರ್ಯಾಭರಣ ಪಂಡಿತರು ದಾನ ನೀಡುತ್ತಾರೆ.[೭೫] ಇದೆಲ್ಲದಕ್ಕೂ ಮಿಗಿಲಾಗಿ, ತೀರ್ಥಂಕರನಾದ ಪಾರ್ಶ್ವನಾಥ ಶಿವನ ಶ್ರೇಷ್ಠ ಭಕ್ತರಲ್ಲಿ ಒಬ್ಬನೆಂದು ಶಾಸನದಲ್ಲಿ ಹೇಳಿರುವುದು ಆಶ್ಚರ್ಯಕಾರಿಯಾಗಿರುವುದರ ಜೊತೆಗೆ 'ಜಿನಾಚಾರನಿರತರು

ಶ್ರೇಷ್ಠರೆಂದಿದ್ದ' ಅಖಿಲ ಭಾರತ ಧರ್ಮವೊಂದು ಸ್ಥಳೀಯವಾಗಿ ಮಾಡಿಕೊಳ್ಳಲೇಬೇಕಾಗಿದ್ದ ಹೊಂದಾಣಿಕೆಯ ಸ್ವರೂಪವನ್ನು ಶಾಸನ ವಿಷದೀಕರಿಸುತ್ತದೆ.

**೫.೫.೩ ಪೂಜಾ ವಿಧಾನಗಳಲ್ಲಿ ಬದಲಾವಣೆ**

ಸಾಮಾನ್ಯ ಜನರಿಗೆ ಸತ್ತ ನಂತರ ಅಲೌಕಿಕ ಜಗತ್ತಿನಲ್ಲಿ ಮೋಕ್ಷ, ಸುಖ ಭೋಗ-ಭಾಗ್ಯಗಳನ್ನು ನೀಡುವ ದೇವರಿಗಿಂತ, ಇಹಲೋಕದಲ್ಲಿ ಬದುಕಿರುವಾಗ ಬೇಡಿದ್ದನ್ನು ದಯಪಾಲಿಸುವ, ಅಭಯ ನೀಡುವ, ಕೃಪೆ ತೋರುವ ದೇವರುಗಳು ಹೆಚ್ಚು ಆಪ್ಯಾಯಮಾನರಾಗುತ್ತಾರೆ, ಆಪ್ತರಾಗುತ್ತಾರೆ. ಜೈನಧರ್ಮದ ಕಠಿಣ ವ್ರತಾಚರಣೆಗಳು ಜನಸಾಮಾನ್ಯರನ್ನು ದೂರವೇ ಇಟ್ಟಿದ್ದವು. ಇವುಗಳನ್ನು ಸಾರ್ವತ್ರಿಕವಾಗಿ ಅನುಸರಿಸುವಂತಿರಲಿಲ್ಲ. ಇತರ ಧರ್ಮಗಳ ಜನಪ್ರಿಯತೆಯ ಎದುರು ಜೈನಧರ್ಮ ಮೂಲೆಗುಂಪಾಗುತ್ತಿತ್ತು. ಇತರ ಧರ್ಮೀಯರನ್ನು ಆಕರ್ಷಿಸುವುದಿರಲಿ, ಸ್ವತಃ ಜೈನಧರ್ಮೀಯರು ಜೈನಧರ್ಮವನ್ನು ಬಿಟ್ಟುಹೋಗದಂತೆ ನೋಡಿಕೊಳ್ಳುವುದು ಆ ಕ್ಷಣದ ಜರೂರಾಗಿತ್ತು. ಅದಕ್ಕಾಗಿ ಅವರು ತಮ್ಮ ಬಸದಿಗಳಲ್ಲಿ, ಯಕ್ಷ-ಯಕ್ಷಿಯರ ಆರಾಧನೆಯ ಜೊತೆಗೆ ವೈದಿಕ ಧರ್ಮದ ಪೂಜಾ ವಿಧಾನಗಳನ್ನು ಸಹ ಅಳವಡಿಸಿಕೊಳ್ಳಲಾರಂಭಿಸಿದರು. ಅಲ್ಲದೆ, ಪೂಜಾ ವಿಧಾನಗಳ ಅಂಗವಾಗಿ ವೈದಿಕ ದೇವಾಲಯಗಳಲ್ಲಿ ನಡೆಯುತ್ತಿದ್ದ ಉತ್ಸವಗಳನ್ನೂ ಜಿನಾಲಯಗಳಲ್ಲಿ ಸೇರ್ಪಡೆ ಮಾಡಿಕೊಂಡರು. ಅದಕ್ಕಾಗಿ ಅವರು "ದೇವಾಲಯ ಸಂಸ್ಕೃತಿಯ ಕೆಲ ಸಾಮಾನ್ಯ ಲಕ್ಷಣಗಳಾದ ಆಗಮೋಕ್ತ ಪೂಜಾವಿಧಿ, ಸಾಂಸ್ಥಿಕ ವ್ಯವಸ್ಥೆ, ಆಶ್ರಯ, ದಾನ ಪಾಲನೆಗಳ ಸಂಬಂಧ, ಪ್ರಾದೇಶಕ ಭಕ್ತರ ಪೂಜಕರ ಸಮೂಹ ಇವೆಲ್ಲವುಗಳ ಜೊತೆಗೆ ಬ್ರಾಹ್ಮಣ ವರ್ಣದ ಬೆಳವಣಿಗೆ ಮುಂತಾದವುಗಳು ಜೈನರಲ್ಲೂ ಬೆಳೆದವು".[೨೬]

ಹುಂಚದ ಬಸದಿಯಲ್ಲಿ 'ಸ್ನಾನಂ, ಪಂಚಾಮೃತಾಖ್ಯಂ, ಪಟಹರಣಂ, ಝುಲ್ಲರೀ, ಶಬ್ದರಮ್ಯಂ, ಪೂಜಾಪುಷ್ಪಾಭಿರಾಮಂ, ಮಳಯಜಪಶಾಲೇಪನಂ, ದಿವ್ಯಧೂಪಂ, ನಿತ್ಯಂ ಕೃತ್ವಾಜಿನಾನಾಂ ಸಕಳ ಜಿನದಯಾಜೀವರಕ್ಷಾನ್ನದಾನಂ' ಮುಂತಾದ ವಿಧಾನಗಳನ್ನು ಅನುಸರಿಸಲಾಗುತ್ತಿತ್ತು.[೨೭] ಹೊಳಲಕೆರೆಯ ಶಾಸನವು ಬಸದಿಯೊಂದರಲ್ಲಿ ನಡೆಸಲಾಗುತ್ತಿದ್ದ ವಿವಿಧ ರೀತಿಯ ಪೂಜಾವಿಧಾನಗಳ ಪಟ್ಟಿಯನ್ನು ನೀಡುತ್ತದೆ. ಅದರಲ್ಲಿ ವಿಮಾನ ಶುದ್ಧಿ, ವಾಸ್ತು ವಿಧಿ, ನಾಂದೀಮಂಗಲ, ಧ್ವಜಾರೋಹಣ, ಭೇರಿತಾಡನ, ಅಂಕುರಾರ್ಪಣ, ಕೇವಲ ಜ್ಞಾನದ ಮಹಾಹೋಮ, ಮಹಾ ಸ್ವಪನಾಭಿಷೇಕ, ಅಷ್ಟಾಹ್ನಿಕ ಪರ್ವ, ಅನಂತನ ನೋಹಿ ಕಲಶ ಪ್ರಜಾವನೆ, ಜಿನ ಜಾತ್ರೆಗಳು ನಡೆಯುತ್ತಿದ್ದು, ಇವುಗಳಿಗಾಗಿ ದಾನ ನೀಡಲಾಗಿದೆ.[೨೮] "ಜೈನರು ಬಹುಶಃ ಹಿಂದುಗಳ ಪ್ರಭಾವಕ್ಕೆ ಒಳಗಾಗಿ ಬಸದಿಗಳಲ್ಲಿ ಅಷ್ಟವಿದಾರ್ಚನೆಗಳನ್ನು ನಡೆಸುತ್ತಿದ್ದರು. ಹಿಂದೂಗಳಂತೆಯೇ ಅಲ್ಲಿಯೂ ವಿಸ್ತಾರವಾದ ಪೂಜಾ ವಿಧಿಗಳು ಬೆಳೆದವು. ಬಸದಿಯಲ್ಲಿ ದೇವದಾಸಿಯರ ನೃತ್ಯಗಳನ್ನು ನಡೆಸುತ್ತಿದ್ದುದುಂಟು. ಬಸದಿಗಳಲ್ಲಿ ಹೋಮಾದಿಗಳು ನಡೆಯುತ್ತಿದ್ದವು".[೨೯] ಹಿಂದೂಗಳ ಪ್ರಭಾವಕ್ಕಿಂತ ಸಾಮಾನ್ಯ ಜನರನ್ನು ಒಳಗೊಳ್ಳುವ

ಪ್ರಯತ್ನವಾಗಿ ಇಂತಹ ತಮ್ಮ ಧರ್ಮದ ತತ್ವಗಳಿಗೆ ವ್ಯತಿರಿಕ್ತವಾದಂತಹ ಇಂತಹ ಪದ್ಧತಿಗಳನ್ನು ಅನುಸರಿಸಿದಂತೆ ತೋರುತ್ತದೆ. ಕ್ರಿ.ಶ. ಒಂಭತ್ತನೆಯ ಶತಮಾನದಲ್ಲಿಯೇ ಜಿನಾಲಯಗಳಲ್ಲಿ 'ವಾರವಿಲಾಸಿನೀ ವಿರಚಿತ ನೃತ್ಯ ವಾದ್ಯಾ ಬಲಿ ವಿಲೇಪನ ದೇವಾಪೂಜಾ ನವಕರ್ಮ ಪ್ರವರ್ತನಾರ್ಥ' ದಾನ ಬಿಟ್ಟಿರುವ ನಿದರ್ಶನಗಳಿವೆ.[೮೦] ಸಾಮಾನ್ಯ ಜನರೂ ಸಹ ಈ ವೇಳೆಗೆ ಧರ್ಮದ ವಿಷಯದಲ್ಲಿ ಸಂದಿಗ್ಧಮಯವಾದ ಮನಸ್ಥಿತಿ ಹೊಂದಿದ್ದರೆಂದು ತೋರುತ್ತದೆ.

ಬ್ರಹ್ಮಶಿವ ಇಂತಹ ಇಬ್ಬಗೆಯ ವ್ಯವಸ್ಥೆಯನ್ನು ಟೀಕಿಸುತ್ತಾನೆ. 'ಒಂದೆಸೆಯೊಳ್ ಜಿನಬಿಂಬಮನೊಂದೆಸೆಯೊಳ್ ಲಿಂಗ ವಿಷ್ಣು ಬಿಂಬಮನವನಂತೊಂದೆಡೆಯೊಳ್ ಪೂಜಿಸುವಾ ಸಂದೇಹಿಗೆ ಜೈನನೆಂಬ ಪೆಸರೆಂತೆಸೆಗುಂ' ಎಂದು ಪ್ರಶ್ನಿಸುತ್ತಾನೆ.[೮೧] ಜೈನರು ಜಿನಬಿಂಬಗಳ ಜೊತೆಗೆ ವೈಷ್ಣವ, ಶೈವ ಮೂರ್ತಿಗಳ ಆರಾಧನೆಯನ್ನು ತಮ್ಮ ಪೂಜಾಪದ್ಧತಿಯಲ್ಲಿ ಅಳವಡಿಸಿಕೊಂಡಿರುವುದನ್ನು ಸ್ಪಷ್ಟಪಡಿಸುತ್ತದೆ. ಜೈನರು ಈ ಪದ್ಧತಿಗೆ ತಾತ್ವಿಕ ಅಂಗೀಕಾರ ನೀಡಿದ್ದಂತೆ ಕಾಣುತ್ತದೆ. ಸೋಮದೇವನು ಜೈನಗೃಹಸ್ಥ ವೈದಿಕವಾದ ಪಂಚಯಜ್ಞಗಳನ್ನು ಮಾಡಬಹುದೆಂದು ಒಪ್ಪಿಗೆ ಸೂಚಿಸುತ್ತಾನೆ. ಜೈನರ ಇಂಥ ವೈದಿಕ ಧರ್ಮ ಅನುಸರಣೆಗಳು ಮುಂದೆ ಸಂಘರ್ಷಕ್ಕೂ ಎಡೆಮಾಡಿಕೊಟ್ಟಿತು. ಶ್ರವಣಬೆಳಗೊಳದ ಬುಕ್ಕರಾಯನ ಶಾಸನ, ಲಕ್ಷ್ಮೇಶ್ವರದ ಜಯಪತ್ರಗಳು ಇಂಥ ಆಚರಣೆಗಳನ್ನು ವಿರೋಧಿಸಿದ ಫಲಿತಗಳಾಗಿ ಕಂಡುಬರುತ್ತವೆ.

ಹೊಯ್ಸಳ ಹಾಗೂ ಕಲ್ಯಾಣ ಚಾಲುಕ್ಯರ ಪತನಾನಂತರ ಕರ್ನಾಟಕದಲ್ಲಿ ರಾಜಕೀಯ ಅರಾಜಕತೆ ಉಂಟಾಯಿತು. ಈ ಪ್ರದೇಶಗಳು ಹೊರಗಿನ ಆಕ್ರಮಣಗಳ ಜೊತೆ ಜೊತೆಗೇ ಆಂತರಿಕವಾದ ಆಕ್ರಮಣಗಳನ್ನು ಎದುರಿಸಬೇಕಾಯಿತು. ಹೊಯ್ಸಳರ ಅವನತಿಯ ನಂತರ ಜೈನರ ಸ್ಥಿತಿ ತುಂಬಾ ದಯಾನೀಯವಾಗಿ ಮಾರ್ಪಟ್ಟಂತೆ ತೋರುತ್ತದೆ. ಅಂಥ ಸಂದರ್ಭದಲ್ಲಿ ಜೈನಧರ್ಮ ಸಮಾಜಕ್ಕೆ ಸೂಕ್ಷ್ಮವಾಗಿ ಸ್ಪಂದಿಸಬೇಕಾಗಿತ್ತು. ಆದರೂ ಅವರ ನಡೆನುಡಿಗಳಲ್ಲಿ ತಪ್ಪುಗಳನ್ನು ಹುಡುಕಲು ಹಾತೊರೆಯುತ್ತಿದ್ದಂತೆ ತೋರುತ್ತದೆ. ಅಂಥ ಸಂದರ್ಭದಲ್ಲಿ ಬುಕ್ಕರಾಯನ ಶಾಸನ ಹುಟ್ಟಿಕೊಳ್ಳುತ್ತದೆ. ಜೈನರು ಅನುಸರಿಸುತ್ತಿದ್ದ ವೈದಿಕ ಸಂಕೇತಗಳಾದ ಪಂಚಮಹಾವಾದ್ಯಗಳು ಹಾಗೂ ಕಳಸವನ್ನು ತಮ್ಮ ಪೂಜಾ ಆರಾಧನೆಯಲ್ಲಿ ಬಳಸಿದ್ದಕ್ಕಾಗಿ ಇಬ್ಬರಿಗೂ 'ಸಂವಾಜ' ಏರ್ಪಟ್ಟು ವ್ಯಾಜ್ಯ ಬುಕ್ಕರಾಯನ ಬಳಿ ಬರುತ್ತದೆ. ಬುಕ್ಕರಾಯ ಜೈನದರ್ಶನಕ್ಕೆ 'ಪೂರ್ವಮರಿಯಾದೆಯಲು ಪಂಚಾಮಹಾವಾದ್ಯಗಳೂ ಕಳಶವೂ ಸಲುಉದು' ಎಂದು ಹೇಳಿ ಸಂಧಾನ ಮಾಡುತ್ತಾನೆ.

ಇದೇ ಪ್ರಶ್ನೆ ಲಕ್ಷ್ಮೇಶ್ವರದಲ್ಲೂ ಉದ್ಭವವಾಗುತ್ತದೆ. ಲಕ್ಷ್ಮೇಶ್ವರದ ಸೋಮನಾಥ ದೇವರ ಉತ್ಸವಗಳಿಗೆ ಸಲುವ 'ಅಷ್ಟದಿಕ್ಪಾಲಕಾದಿ ಧ್ವಜಪತಾಕಾದಿಗಳನು' ಶಂಖಬಸ್ತಿಯ ಶಾಂತಿತೀರ್ಥಂಕರೋತ್ಸಹದಲ್ಲಿ ಬಳಸುತ್ತಾರೆ. ಇದು ಜೈನ ಮತ್ತು ಶೈವರ ಕಲಹಗಳಿಗೆ ನಾಂದಿಯಾಗಿ ಕೊನೆಗೆ ಶಂಖಬಸದಿಯ ಸಂಖಣಾಚಾರ್ಯ, ಹೇಮಣಾಚಾರ್ಯರು ತಾವು ಪ್ರಜ್ಞಾಹೀನತೆಯಿಂದ

ಮರೆಸಿದೆವೆಂದು ಹೇಳಿ 'ಕಾಲತ್ರಯದೊಳುಂ ವೇದಶಾಸ್ತ್ರಪುರಾಣಾಗಮಾದಿಗಳೊಳುಂ . . . ಜಿನಸಮಯಕ್ಕೆ ಅಷ್ಟದಿಕ್ಪಾಲಾದಿಗಳು ಧ್ವಜಪತಾಕಾದಿಗಳು ಸಲ್ಲುವುದಿಲ್ಲವೆಂದು, ನೀವು ಮಾಡಿದ ಶಿಕ್ಷೆಗೆ ನಾವು ಸಿದ್ಧರೆಂದು' ಜಯಪತ್ರ ಬರೆದುಕೊಡುತ್ತಾರೆ.

ವೈದಿಕ ಧರ್ಮದ ಲಾಂಛನಗಳನ್ನು ಬಸದಿಗಳಲ್ಲಿ ಈಗಾಗಲೇ ಬಳಸುತ್ತಿದ್ದು, ಅವುಗಳ ಬಳಸುವಿಕೆ ಸಂಬಂಧ ಸಂಘರ್ಷಗಳು ಏರ್ಪಡುತ್ತಿದ್ದುವೆಂಬುದಕ್ಕೆ ಈ ಎರಡು ಜಯಪತ್ರಗಳು ಸ್ಪಷ್ಟ ಉದಾಹರಣೆಗಳಾಗಿವೆ. ಒಂದು ಪ್ರಸಂಗದಲ್ಲಿ ಮೊದಲಿನಂತೆ ನೀವು ಬಳಸಬಹುದೆಂದು ತೀರ್ಪಿತ್ತರೆ, ಮತ್ತೊಂದು ಶಾಸನದಲ್ಲಿ ಕಾಲತ್ರಯಗಳಲ್ಲೂ ಬಳಸಬಾರದೆಂದು ಜೈನರಿಂದ ಜಯಪತ್ರ ಬರೆಸಿಕೊಳ್ಳುತ್ತಾರೆ.

ಜೈನಧರ್ಮ ಕಾಲ ಮತ್ತು ಪ್ರದೇಶಗಳಿಗೆ ತಕ್ಕಂತೆ ಧರ್ಮದ ಉಳಿವಿಗಾಗಿ ರಾಜೀ ಮನೋಭಾವ ಅನುಸರಿಸಲು ಸಿದ್ಧವಾಗಿತ್ತೆಂದು ಸ್ಪಷ್ಟವಾಗುತ್ತದೆ.

**೫.೫.೪ ಮತಾಂತರ**

ಮತಾಂತರವೆಂಬುದು ಆಧುನಿಕ 'ನಾಗರಿಕ' ಪ್ರಪಂಚದಲ್ಲಿ ಹೊಂದಿರಬಹುದಾದಂತಹ ಸೂಕ್ಷ್ಮಸ್ತರದ ಅರ್ಥವನ್ನು ಹೊಂದಿರಲಿಲ್ಲ. ಅದೊಂದು ಮನುಕುಲದ 'ನಾಗರಿಕ' ಇತಿಹಾಸದಲ್ಲಿ ಸಹಜ ಪ್ರಕ್ರಿಯೆಯಾಗಿ ಸ್ವೀಕಾರಾರ್ಹವಾಗಿತ್ತು. ವ್ಯಕ್ತಿ ತನಗಿಷ್ಟವಾದ ಧರ್ಮವನ್ನು ಒಪ್ಪಿಕೊಳ್ಳುವ, ಇಷ್ಟವಾದ ತತ್ವಗಳನ್ನು ಅಳವಡಿಸಿಕೊಳ್ಳುವ ಹಾಗೂ ತನಿಗಿಷ್ಟವಾದ ದೇವರನ್ನು ಆರಾಧಿಸುವ ಸ್ವಾತಂತ್ರವನ್ನು ಹೊಂದಿದ್ದ. ಆದರೆ ಕಾಲಾನಂತರ ಮತಾಂತರ ಪ್ರಕ್ರಿಯೆ ಸಂಘರ್ಷಗಳಿಗೂ ಅವಕಾಶವನ್ನು ನೀಡಿತ್ತು. ಆರಂಭದಲ್ಲಿ ಸಂಘರ್ಷಗಳು ತಾತ್ವಿಕ ಸ್ವರೂಪದಲ್ಲಿರುತ್ತಿದ್ದವು. ಸೈದ್ಧಾಂತಿಕ ಭಿನ್ನತೆಗಳು ಮೂಡಿ ತಾತ್ವಿಕವಾಗಿ ಒಂದು ಪಂಥವನ್ನು ಗೆಲ್ಲುವ ಮೂಲಕ ಆ ಪಂಥದ ಅನುಯಾಯಿಗಳು ಎದುರಾಳಿ ಪಂಥಕ್ಕೆ, ಅದರ ತತ್ವಗಳಿಗೆ ಶರಣಾಗುತ್ತಿದ್ದರು ಮತ್ತು ಗೆದ್ದ ಪಂಥದ ಅನುಯಾಯಿಗಳಾಗುತ್ತಿದ್ದರು. ಆ ಮೂಲಕ ಒಂದು ಧರ್ಮದಿಂದ ಮತ್ತೊಂದು ಧರ್ಮಕ್ಕೆ ತಾತ್ವಿಕವಾಗಿ ಒಪ್ಪಿಯೇ ಹೋಗುತ್ತಿದ್ದರು.

ಹತ್ತನೆಯ ಶತಮಾನಾನಂತರ ಮತಾಂತರ ಕ್ರಿಯೆ ತಾತ್ವಿಕ ಸಂಘರ್ಷಗಳಿಗಿಂತ ಪ್ರಬಲ ಧರ್ಮಗಳ ಮತಾಚಾರಗಳನ್ನು ಅನಿವಾರ್ಯವಾಗಿ ಅಪ್ಪಿಕೊಳ್ಳುವ, ಒಪ್ಪಿಕೊಳ್ಳುವ ಪ್ರಕ್ರಿಯೆಯಾಗಿ ಕಾಣುತ್ತದೆ. ಮತಾಂತರದ ಪರಿಕಲ್ಪನೆ ಈಗಿರುವಷ್ಟು ಸಂಕೀರ್ಣವಾಗಿರದೆ, ಸರಳವಾಗಿತ್ತು. ಒಂದೇ ಕುಟುಂಬದ ವಿವಿಧ ಸದಸ್ಯರು ತಮಗಿಷ್ಟವಾದ ಧರ್ಮಗಳನ್ನು ಒಪ್ಪಿಕೊಂಡು ಅನುಸರಿಸಬಹುದಿತ್ತು ಮತ್ತು ಇಂಥ ವಿಭಿನ್ನ ಧರ್ಮಗಳ, ಕುಟುಂಬಗಳ ನಡುವೆ ಕೊಡು-ಕೊಳ್ಳುವ ವ್ಯವಹಾರಗಳು ಸಹಜವಾಗೇ ನಡೆಯುತ್ತಿದ್ದವು. ವೀರಶೈವ ಪ್ರಾಬಲ್ಯತೆಯನ್ನು ಪಡೆದ ನಂತರ ಕುಟುಂಬಗಳಲ್ಲಿ ಹೀಗೆ ವಿಭಿನ್ನ ಧರ್ಮಗಳನ್ನು ಆರಾಧಿಸುವ ಬಗ್ಗೆ ಅಪಸ್ವರಗಳೂ ಕೇಳಲಾರಂಭಿಸಿದವು. ಇದರ ಪ್ರತಿಧ್ವನಿಯನ್ನು

ನಾವು ಹರಿಹರನ ಆದಯ್ಯನ ರಗಳೆ, ಮಹಾದೇವಿಯಕ್ಕನ ರಗಳೆ, ಹೇರೂರು ಹೆಂಗೂಸಿನ ರಗಳೆ, ಮುಂತಾದ ರಗಳೆಗಳಲ್ಲಿ ಕೇಳಬಹುದು. ಹರಿಹರನ ಸಮಾಜದಲ್ಲಿ ಅಸ್ತಿತ್ವದಲ್ಲಿರುವುದು ಎರಡೇ ಜಾತಿಗಳು. ಒಂದು ಭವಿ, ಮತ್ತೊಂದು ಭಕ್ತ. ಶಿವನ ಆರಾಧಕರಾದ ಭಕ್ತರು ಭವಿಗಳನ್ನು ಮದುವೆಯಾಗಬೇಕಾಗಿ ಬಂದಂತಹ ಸಂದರ್ಭಗಳಲ್ಲಿ ಅನುಭವಿಸುವ ತೊಳಲಾಟವನ್ನು ಹರಿಹರ ಸಮರ್ಥವಾಗಿ ಕಟ್ಟಿಕೊಟ್ಟಿದ್ದಾನೆ. ಹೇರೂರು ಹೆಂಗೂಸಿನ ಕತೆಯಲ್ಲಂತೂ, ಹೆಂಗೂಸು ತಾನು ಮದುವೆಯಾದ ನಂತರ ಜೈನನಾದ ಭವಿ ಗಂಡನ ಮನೆಗೆ ಹೋಗಬೇಕಲ್ಲ ಎನ್ನುವ ಕಳವಳದಿಂದ ತನ್ನ 'ಸ್ತ್ರೀತ್ವ'ವನ್ನೇ ಇಲ್ಲವಾಗಿಸಿಕೊಳ್ಳುವ ಹಂತಕ್ಕೆ ಹೋಗುತ್ತಾಳೆ.

ಹರಿಹರನ ರಗಳೆಗಳಲ್ಲಿ ಕಂಡುಬಂದಂತಹ ಅಂತಹ ಘರ್ಷಣೆಗಳು ತತ್ಕಾಲೀನ ಸಮಾಜದಲ್ಲೂ ಪ್ರಚಲಿತದಲ್ಲಿತ್ತು. ಅಂತಹ ಸಂದರ್ಭಗಳಲ್ಲಿ ಅಲ್ಪಸಂಖ್ಯಾತ ಧರ್ಮಗಳು ಭಯ, ಆತಂಕ, ಅಭದ್ರತೆಗಳಿಂದ ಜೀವನ ಸಾಗಿಸಬೇಕಿತ್ತು. ಬಲಾಢ್ಯ ಮತಗಳಿಗೆ ಮತಾಂತರಗೊಂಡರೆ ಸಮಾಜದಲ್ಲಿ ಸುಸ್ಥಿರವಾದ, ಶಾಂತಿಯುತ ಜೀವನ ನಡೆಸಬಹುದೆಂಬ ಅಭಿಲಾಷೆಯಿಂದ ಹಲವಾರು ಜನ ಮತಾಂತರ ಪ್ರಕ್ರಿಯೆಗೆ ಒಳಗಾದರು.

ಮತಾಂತರ ಪ್ರಕ್ರಿಯೆಯಲ್ಲಿ ಪ್ರಭುತ್ವದ ಪಾತ್ರ ಮಹತ್ತರವಾಗಿರುತ್ತದೆ. ರಾಜ್ಯವನ್ನಾಳುವ ಅರಸ ಯಾವ ಧರ್ಮವನ್ನು ಅನುಸರಿಸುತ್ತಾನೋ, ಅದು ಕೆಲವು ಅಪವಾದ ಮತ್ತು ಸಂದರ್ಭಗಳ ಹೊರತು, ಇಡೀ ಸಾಮ್ರಾಜ್ಯದ ಮತ ಧರ್ಮವಾಗಿ ಮಾರ್ಪಾಡಾಗುತ್ತದೆ. ವಿಷ್ಣುವರ್ಧನ ವೈಷ್ಣವ ಮತದ ಅನುಯಾಯಿಯಾದ ಮೇಲೆ ಅಲ್ಲಿನ ಬಹುಸಂಖ್ಯಾತರ ಜನ ಸಮುದಾಯ ವೈಷ್ಣವ ಧರ್ಮದ ಕಡೆ ಆಕರ್ಷಿತರಾಗುತ್ತಾರೆ. ಈ ಅವಧಿಯಲ್ಲಿ ಹಾಕಿಸಿದ ಶಾಸನಗಳು, ನಿರ್ಮಿಸಿದ ದೇವಾಲಯಗಳು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ. ಇದರರ್ಥ ತಾವು ಅನುಸರಿಸಲಿಚ್ಛಿಸುವ ಮತ ಸರ್ವ ಶ್ರೇಷ್ಠವೆಂದು ಭಾವಿಸಿ ಅದನ್ನು ಸ್ವೀಕರಿಸಿರುವುದಿಲ್ಲ. ಅದಕ್ಕಿಂತ ಮಿಗಿಲಾಗಿ ಬಲಾಢ್ಯ ಸಾಮ್ರಾಜ್ಯದಲ್ಲಿ ತಾವು ಅಲ್ಪಸಂಖ್ಯಾತರಾಗಿಬಿಡುವ ಭಯಾತಂಕಗಳು ಇದಕ್ಕೆ ಕಾರಣವಿರಬಹುದು.

ಬಾಸವೂರ ೧ಳಂನ್ನು ಆಳುತ್ತಿದ್ದ ಹೆಮ್ಮಾಡಿದೇವರಸನು ಮೊದಲು 'ಪದ್ಮಾವತೀಲಬ್ಧವರಪ್ರಸಾದನಾಗಿದ್ದವನು'[೬೨] ನಂತರ 'ಮಾಹೇಶ್ವರ ದೀಕ್ಷೆಯಂ' ಕೈಗೊಳ್ಳುತ್ತಾನೆ.[೬೩] ಬ್ರಹ್ಮಶಿವ ತಾನು 'ಮುನ್ನ ಮಾಹೇಶ್ವರದೊಳೊಳ್ಪುಗಾಣದೆ' ಜಿನಧರ್ಮವನ್ನು ಅಂಗೀಕರಿಸಿದುದಾಗಿ ಹೇಳಿಕೊಳ್ಳುತ್ತಾನೆ.[೬೪] ಅವನು ತಾನು 'ಘನಮಿಥ್ಯಾತ್ವಾಚಳಭೇದನ ವಜ್ರ'ನಾದ್ದರಿಂದ ಪರಸಮಯಗಳನ್ನು ಪಂಥಕ್ಕೆ ಆಹ್ವಾನಿಸುವುದಕ್ಕಾಗಿ ಸಮಯ ಪರೀಕ್ಷೆಯನ್ನು ಬರೆದುದಾಗಿ ಹೇಳಿಕೊಂಡಿದ್ದಾನೆ. ಅವನ ಕೃತಿಯಲ್ಲಿ ವೈದಿಕ ಧರ್ಮದ ದೇವರು, ಆರಾಧನೆಗಳ ಬಗ್ಗೆ ಎತ್ತಿರುವ ಪ್ರಶ್ನೆಗಳು ಆ ಕಾಲಕ್ಕೆ ಹೆಚ್ಚು ಕ್ರಾಂತಿಕಾರವಾಗಿವೆ. ಆ ಮೂಲಕ ಅವನು ಬೇರೆ ಮತವನ್ನು ಅಂಗೀಕರಿಸುತ್ತಿದ್ದ ಜನರನ್ನು ಮತಾಂತರವಾಗದಂತೆ ತಡೆಯುವ ಧ್ವನಿಯೂ ಅಲ್ಲಿದೆ. ನಯಸೇನನೂ ಸಹ 'ಧರ್ಮಾಮೃತ'

ಕೃತಿಯಲ್ಲಿ ಜೈನರು ಇತರ ಧರ್ಮಕ್ಕೆ ಮತಾಂತರವಾಗುತ್ತಿರುವುದನ್ನು ಸೂಚ್ಯವಾಗಿ ತಿಳಿಸುತ್ತಾನೆ. ರತ್ನಾಕರವರ್ಣಿ ಜೈನ ಗುರುಗಳ ತಾತ್ವಿಕ ಭಿನ್ನಾಭಿಪ್ರಾಯದಿಂದ ಜಿನಮತ ತೊರೆದು ಶೈವನಾದನೆಂದು ಹೇಳಲಾಗುತ್ತದೆ.

ಮಧ್ಯಕಾಲೀನ ಕರ್ನಾಟಕದ ಸಂದರ್ಭದಲ್ಲಿ ಇಂತಹ ಮತಾಂತರ ಕಾರ್ಯಗಳು ಯಥೇಚ್ಛವಾಗಿ ನಡೆಯುತ್ತವೆ. ಕೆಲವೊಮ್ಮೆ ಒತ್ತಾಯಪೂರ್ವಕವಾಗಿ ನಡೆದರೆ, ಕೆಲವೊಮ್ಮೆ ತಮ್ಮ ಉಳಿವಿಗಾಗಿ ಸ್ವತಃ ಜೈನರೇ ಇತರ ಧರ್ಮಗಳಿಗೆ ಪರಿವರ್ತನೆಯಾಗುತ್ತಿದ್ದರು. "ಜೈನರು ತಮ್ಮ ಮೇಲೆ ನಡೆಯುತ್ತಿದ್ದ ಹಿಂಸಾತ್ಮಕ ಆಕ್ರಮಣಗಳಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ಸಾಮೂಹಿಕವಾಗಿ ಮತಾಂತರವಾಗುತ್ತಿದ್ದರು. ತಾವು ಮತಾಂತರವಾದ ನಂತರ ತಮ್ಮ ಬಸದಿಗಳು ನಿಷ್ಪ್ರಯೋಜಕವಾಗಿ ಉಳಿಯಬಾರದೆಂದು ಅವುಗಳನ್ನು ತಾವು ಮತಾಂತರಕ್ಕೊಳಪಟ್ಟ ಧರ್ಮದ ದೇವಾಲಯಗಳನ್ನಾಗಿ ರೂಪಾಂತರಿಸಿರುವ ಸಾಧ್ಯತೆ ಇರುವುದು".[೮೫]

ಅಬ್ಬಲೂರಿನ ಜಯಪತ್ರ, ಅದನ್ನನುಸರಿಸಿ ರೂಪುಗೊಂಡ ಹರಿಹರನ ಕೆಲವು ರಗಳೆಗಳು ಒತ್ತಾಯಪೂರ್ವಕವಾಗಿ ಶೈವದೀಕ್ಷೆಯನ್ನು ಸ್ವೀಕರಿಸಿದಂತಹ ವಿವರಗಳನ್ನು ಕಟ್ಟಿಕೊಡುತ್ತವೆ. ವೈಜಕವ್ವೆಯ ರಗಳೆಯಲ್ಲಿ ವೈಜಕವ್ವೆ ಜೈನನಾಗಿದ್ದ ತನ್ನ ಗಂಡನಿಗೆ ಶೈವ ದೀಕ್ಷೆ ನೀಡುತ್ತಾಳೆ. ಆದಯ್ಯನ ರಗಳೆಯಲ್ಲಿ ಆದಯ್ಯ ತನ್ನ ಹೆಂಡತಿ ಶಿವಭಕ್ತರಿಗಾಗಿ ತಯಾರಿಸಿದ್ದ ಅಡುಗೆಯನ್ನು ತನ್ನ ಅತ್ತೆ–ಮಾವ ಜೈನಮುನಿಗಳಿಗೆ ಬಡಿಸಿದರೆಂದು ಕೋಪುಗೊಂಡು ಪುಲಿಗೆರೆಯಲ್ಲಿದ್ದ ಜಿನನ ಮೂರ್ತಿಯನ್ನು ಒಡೆದುಹಾಕಿ ಸೌರಾಷ್ಟ್ರದಿಂದ ಸೋಮೇಶ್ವರನನ್ನು ತಂದು ಅಲ್ಲಿ ಪ್ರತಿಷ್ಠಾಪಿಸುತ್ತಾನೆ. ಜೈನಧರ್ಮದ ಮೇಲಾದ ಅಂಥ ಆಕ್ರಮಣಗಳಿಂದ ರಕ್ಷಿಸಿಕೊಳ್ಳಲು ಬಹುಶಃ ಜೈನರು ಲಿಂಗದೀಕ್ಷೆ ಅಥವಾ ವೈಷ್ಣವ ದೀಕ್ಷೆಯನ್ನು ಪಡೆದುಕೊಂಡಿದ್ದಾರೆ. 'ಜೈನ ಕೆಟ್ಟು ಬಣಜಿಗನಾದ' ಗಾದೆ ಬಹುಶಃ ಇಂಥ ಸಂದರ್ಭದಲ್ಲಿ ಹುಟ್ಟಿಕೊಂಡಿರಬಹುದು. ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಸಂಭವಿಸಿದ ಮತೀಯ ಘರ್ಷಣೆಯಲ್ಲಿ ತತ್ತರಿಸಿ ಹೋದ ಲಕ್ಷಾಂತರ ಜೈನರು ಜೀವ ಉಳಿದರೆ ಸಾಕೆಂದು ಲಿಂಗಧಾರಣೆ ಮಾಡಿದರು. ಜೈನಮತಗಳು ವೀರಶೈವ ಮಠಗಳಾದವು, ಜೈನಮಂದಿರಗಳು ಶಿವಾಲಯಗಳಾದವು. ಇದು ಪ್ರಾಣಭಯ ಭೀತಿಯಿಂದ ಆದ ಸಾಮೂಹಿಕ ಮತಾಂತರಕ್ಕೆ ಜೀವಂತ ದೃಷ್ಟಾಂತವಾಯಿತು.[೮೬]

ದಕ್ಷಿಣ ಕರ್ನಾಟಕದಲ್ಲಿ ರಾಮಾನುಜಾಚಾರ್ಯರ ಪ್ರಭಾವದಿಂದ ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಮತ್ತು ಆನಂತರ ನಾನಾ ಮತಗಳವರು ಶ್ರೀವೈಷ್ಣವರಾದರು. ಅನೇಕ ಜೈನ ಕುಟುಂಬಗಳೂ ಶ್ರೀವೈಷ್ಣವ ಧರ್ಮಕ್ಕೆ ಮತಾಂತರ ಮಾಡಿದರು. ಎಷ್ಟೋ ಜೈನ ದೇವಾಲಯಗಳನ್ನು ಈ ಹಂತದಲ್ಲಿ ಶ್ರೀವೈಷ್ಣವರು ವಶಪಡಿಸಿಕೊಂಡರು. ವಶಪಡಿಸಿಕೊಳ್ಳಲು ಆಗದ ಜಿನಗೃಹಗಳನ್ನು ಪುಡಿಗುಟ್ಟಿದರು.[೮೭] ಜೈನರು ಈ ರೀತಿ ಮತಾಂತರಗೊಳ್ಳದೆ, ಉಳಿವು ಸಾಧ್ಯವಿರಲಿಲ್ಲ. ಒಂದು ವೇಳೆ ಎದುರಿಸಿ ನಿಂತರೆ, ಅಬ್ಬಲೂರು ಚರಿತ್ರೆಯಲ್ಲಿ ಹೇಳಿದಂತೆ ಅವರು 'ಘಟ್ಟದ ಕೆಳಗೆ

ಓಡಿಹೋಗಬೇಕಾಗುತ್ತದೆ. ಇಂತಹ ಆಕ್ರಮಣಗಳನ್ನು ಎದುರಿಸಲು ಅಸಮರ್ಥವಾದ ಜೈನಧರ್ಮ ವೈದಿಕ ಧರ್ಮದೊಂದಿಗೆ ರಾಜೀ ಮಾಡಿಕೊಂಡು ಉಳಿಯಬೇಕಾಯಿತು. "ಒಟ್ಟಾರೆಯಾಗಿ ಜೈನರು ಜೈನೇತರರನ್ನು ಅವಲಂಬಿಸಿಯೇ ತಮ್ಮ ಲೌಕಿಕ ಸಂಸ್ಥೆಗಳ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾಗಿತ್ತು. ಈ ಕೆಲಸವನ್ನು ಜೈನರು ಚೆನ್ನಾಗಿಯೇ ಮಾಡಿದರು. ಅದರಲ್ಲೂ ಅಬ್ಬಲೂರು ಘಟನೆಯ ನಂತರ ಜೈನರ ದೇವಾಲಯ ಸಂಸ್ಥೆಗಳು ಹಿಂದೆ ಈ ಪ್ರದೇಶದಲ್ಲಿ ಕಾಣದಷ್ಟು ಸಮೃದ್ಧವಾಗಿ ಬೆಳೆದವು. ಹಾಗಾಗಿ ವೀರಶೈವರ ಉಗ್ರಭಕ್ತಿ ಜೈನರ ಮೇಲೆ ಆಕ್ರಮಣಶೀಲತೆಯನ್ನು ತೋರಿಸಿದರೂ, ಅದರ ಪರಿಣಾಮ ಕೇವಲ ವಿನಾಶ ಮಾತ್ರ ಆಗಿರಲಿಲ್ಲ. ಜೈನ ಸಂಸ್ಥೆಗಳು ತಮ್ಮ ಅಸ್ತಿತ್ವದ ಹೊಸ ತಂತ್ರಗಳನ್ನು ಕಂಡುಕೊಂಡು ಬಹಳ ಪರಿಣಾಮಕಾರಿಯಾಗಿಯೇ ಅವುಗಳನ್ನು ಪ್ರಯೋಗಕ್ಕೆ ತಂದಿರಬಹುದು".[೮೮]

## ೫.೬ ಧಾರ್ಮಿಕ ಸಮನ್ವಯತೆಯ ಸ್ವರೂಪ

ಕರ್ನಾಟಕದ ಶಾಸನವೊಂದು ಇಂಡಿ ನಾಡಿನ ಚಿತ್ರಣವನ್ನು ನೀಡುತ್ತಾ ಅದು "ಹರಿಗ್ರಿಹದಿಂ ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ ಗೊರವರ ಸವಣರ ಬೌದ್ಧರ ನೆರವಿಗಳಿಂದಿಂಡೆನಾಡೆ ಸೊಗಯಿಸಿ ತೋರ್ಕುಂ" ಎಂದು ವರ್ಣಿಸುತ್ತದೆ.[೮೯] ಇಂಡಿನಾಡಿನಲ್ಲಿ ಸರ್ವಧರ್ಮಗಳ ಜನಸಮೂಹ ಸಾಮರಸ್ಯ ಭಾವದಿಂದ ಸಹಬಾಳ್ವೆ ನಡೆಸುತ್ತಿದ್ದರೆಂಬ ಆಶಯ ಶಾಸನಕಾರನದು. ಶಾಸನಗಳಲ್ಲಿ ಧರ್ಮಕ್ಕೆ ಪರ್ಯಾಯವಾಗಿ 'ಸಮಯ' ಎಂಬ ಪದವನ್ನು ಬಳಸಲಾಗಿದ್ದು, ಕರ್ನಾಟಕದ ಬಹುತೇಕ ಅರಸರಿಗೆ 'ಚತುಸ್ಸಮಯ ಸಮುದ್ಧರಣರೆಂಬ' ಬಿರುದಿತ್ತು.[೯೦]

ಈ ಚತುಸ್ಸಮಯಗಳನ್ನು ಆಧರಿಸುವ ಮನೋಭಾವ ಪ್ರಭುತ್ವದ ನೆಲೆಯಲ್ಲಲ್ಲದೆ, ಕೌಟುಂಬಿಕ ನೆಲೆಯಲ್ಲೂ ಸ್ಥಿರಗೊಂಡಿತ್ತೆಂಬುದಕ್ಕೆ ಅತ್ಯುತ್ತಮ ಉದಾಹರಣೆ ಹೊಯ್ಸಳ ಅರಸು ವಿಷ್ಣುವರ್ಧನನ ಕುಟುಂಬ, ವಿಷ್ಣುವರ್ಧನ ವೈಷ್ಣವ ಧರ್ಮದೆಡೆ ಆಕರ್ಷಿತನಾಗಿದ್ದರೆ, ಆತನ ಪಟ್ಟಮಹಿಷಿ ಶಾಂತಲೆ ಮತ್ತು ಆಕೆಯ ತಾಯಿ ಮಾಚಿಕಬ್ಬೆ ಜೈನಧರ್ಮದ ಅನುಯಾಯಿಗಳಾಗಿದ್ದರು. ಶಾಂತಲೆಯ ತಂದೆ ಮಾರಸಿಂಗಯ್ಯ ಶೈವ ಧರ್ಮದ ಅನುಯಾಯಿಯಾಗಿದ್ದ. ಬಾಚಿದೇವನೆಂಬ ಸಾಮಂತನ ಕುಟುಂಬದ ಸದಸ್ಯರಲ್ಲಿ ವಿವಿಧ ಧರ್ಮದ ಅನುಯಾಯಿಗಳಿದ್ದು, ಅವರು ಮೃತರಾದಾಗ ಬಾಚಿದೇವ ತನ್ನ ತಂದೆಯ ಪರೋಕ್ಷ ವಿನಯವಾಗಿ ಗಂಗೇಶ್ವರ ದೇವಾಲಯವನ್ನು, ತನ್ನ ಮುತ್ತಯ್ಯ ಸಾಮಂತ ಚಲವರೆವಂಗೆ ಚಲವರೇಶ್ವರ ದೇವಾಲಯವನ್ನು, ಮಗಳು ಕುಮಾರಿ ಚಿಂತವೆನಾಯಕಿತಿಗೆ ಪರೋಕ್ಷ ವಿನಯವಾಗಿ ಶ್ರೀರಾಮೇಶ್ವರ ದೇವಾಲಯವನ್ನು, ಪತ್ನಿ ಭೀಮವೆ ನಾಯಕಿತಿಗೆ ಪರೋಕ್ಷ ವಿನಯವಾಗಿ ಭೀಮ ಜಿನಾಲಯವೆಂಬ ಬಸದಿಯನ್ನು ನಿರ್ಮಿಸಿದ.[೯೧] ಶಾಸನಗಳಲ್ಲಿ ಬರುವ ಇಂತಹ ಹಲವಾರು ನಿರ್ದಶನಗಳ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಇತಿಹಾಸವನ್ನು ರಚಿಸುವಾಗ ಕರ್ನಾಟಕದ ಅರಸರ ಧಾರ್ಮಿಕ ಸಾಮರಸ್ಯದ ಸಿದ್ಧಾಂತವನ್ನು ನಮ್ಮ ಇತಿಹಾಸ ಕಥನಗಳಲ್ಲಿ ಮತ್ತೆ ಮತ್ತೆ ಪ್ರತಿಪಾದಿಸುತ್ತಲೇ ಬರಲಾಗಿದೆ. ಇದಕ್ಕೆ ಶಾಸನಗಳಲ್ಲಿ ಉಕ್ತವಾಗಿರುವ ಹರಿಹರಪುರಗಳ ಸ್ಥಾಪನೆ,

ತ್ರೈಪುರುಷ ಮತ್ತು ಬಹುಕೂಟ ದೇವಾಲಯಗಳ ನಿರ್ಮಾಣ, ಬುದ್ಧನನ್ನು ವಿಷ್ಣುವಿನ ಹತ್ತನೆಯ ಅವತಾರವಾಗಿ ಪರಿಗ್ರಹಿಸಿದುದು, ವೈದಿಕ ಅರಸು/ ಸಾಮಂತ/ಅಧಿಕಾರಿಗಳಿಂದ ಜಿನಾಲಯಗಳ ನಿರ್ಮಾಣ, ಮುಂತಾದ ಪ್ರಕ್ರಿಯೆಗಳನ್ನು ನಿದರ್ಶನಾರ್ಥವಾಗಿ ನೀಡಲಾಗುತ್ತಿದೆ.

ಕರ್ನಾಟಕದಲ್ಲಿ, 'ಧರ್ಮಸಮನ್ವಯತೆಯ' ಅಸ್ತಿತ್ವದ ಬಗ್ಗೆ ಮೊದಲು ಪ್ರಶ್ನೆಯನ್ನು ಎತ್ತಿದವರು ಶಂಬಾ ಜೋಶಿಯವರು "ಭಾರತೀಯ ರಾಜರು ಸಾಮಾನ್ಯವಾಗಿ (ವಿಶಿಷ್ಟ) ಧರ್ಮಾತೀತ ದೃಷ್ಟಿಯವರಾಗಿರುತ್ತಿದ್ದರು. ಅವರು ಎಲ್ಲಾ ಧರ್ಮಪೀಠಗಳಿಗೆ, ದೇವಾಲಯಗಳಿಗೆ ಉಂಬಳಿಗಳನ್ನು ಕೊಟ್ಟಿದ್ದುಂಟು. ಈ ರಾಜರು ಸರ್ವಸಮನ್ವಯ ದೃಷ್ಟಿ ಅಥವಾ ಧರ್ಮಸಹಿಷ್ಣುತೆಯಂತಹ ತಾತ್ವಿಕ ವಿಚಾರದಿಂದ ಈ ಬಗೆಯಲ್ಲಿ ನಡೆದುಕೊಂಡಿರಬಹುದೇ? ಅಥವಾ ತಮ್ಮ ಅರಸೊತ್ತಿಗೆಯು ನಿರ್ವಿಘ್ನದಿಂದ ಸಾಗಿದರಾಯಿತು ಎಂಬ ರಾಜಕೀಯ ದೂರದೃಷ್ಟಿಯಿಂದ ಹೀಗೆ ನಡೆದುಕೊಂಡಿರಬಹುದೆ?"[೬೨] ಎಂದು ಪ್ರಶ್ನಿಸುವ ಮೂಲಕ ರಾಜರ 'ಧರ್ಮಸಮನ್ವಯ ಅಥವಾ ಧಾರ್ಮಿಕ ಸಾಮರಸ್ಯದ' ಸಿದ್ಧಾಂತದ ಬಗ್ಗೆ ಪುನರ್ ವಿಮರ್ಶಿಸಬೇಕಾದ ಮತ್ತು ಮರುವ್ಯಾಖ್ಯಾನಕ್ಕೊಳಪಡಿಸಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುತ್ತಾರೆ. ಈ ಹಿನ್ನೆಲೆಯಲ್ಲಿ ಇತಿಹಾಸಕಾರರು 'ಸಮನ್ವಯತೆ'ಗಾಗಿ ಕೊಡುವ ನಿದರ್ಶನಗಳ ಹಿನ್ನಲೆಯಲ್ಲಿ ಧಾರ್ಮಿಕ ಸಮನ್ವಯ ಸಿದ್ಧಾಂತವನ್ನು ಇಲ್ಲಿ ಮರುವಿವೇಚನೆಗೆ ಒಳಪಡಿಸಲಾಗಿದೆ.

**೫.೬.೧ ಹರಿಹರಪುರ ನಿರ್ಮಾಣ/ ಹರಿಹರ ದೇವಾಲಯಗಳ ಸ್ಥಾಪನೆ**

ಹರಿಹರ ಅಬೇಧ ಕಲ್ಪನೆಯನ್ನು ಶಾಸನಗಳು ಪದೇ ಪದೇ ಒತ್ತಿ ಹೇಳುತ್ತವೆ. ಶಾಸನಗಳನ್ನು ಗಮನಿಸಿದಾಗ 'ಹರಿಹರಪುರ' ಸ್ಥಾಪನೆ ಮತ್ತು 'ಹರಿಹರ' ದೇವಾಲಯಗಳ ನಿರ್ಮಾಣ ಕಂಡುಬರುವುದು ಹನ್ನೊಂದನೆಯ ಶತಮಾನದ ತರುವಾಯ. ಎಂದರೆ, ಕರ್ನಾಟಕದಲ್ಲಿ ಧಾರ್ಮಿಕರೂಪಿ ಸಂಘರ್ಷಗಳು ಕಾಣಿಸಿಕೊಳ್ಳುತ್ತಿದ್ದ ಅವಧಿಯಲ್ಲಿ, ಹರಿಹರಪುರ, ಹರಿಹರ ದೇವಾಲಯಗಳ ನಿರ್ಮಾಣವೇ ಭಿನ್ನಾಭಿಪ್ರಾಯಗಳನ್ನು ತಿಳಿಗೊಳಿಸುವ ಪ್ರಕ್ರಿಯೆಯಂತೆ ಕಂಡುಬರುತ್ತದೆ.

ಶಂಕರಾಚಾರ್ಯರು ಪ್ರಸ್ತುತಪಡಿಸಿದ ಅದ್ವೈತದ ಮೂಲ ತಾತ್ವಿಕತೆಯೇ ಸಮನ್ವಯತೆಯನ್ನು ಸಾಧಿಸುವುದಾಗಿತ್ತು. ಶಂಕರಾಚಾರ್ಯರು ಸರ್ವ ಮತಗಳ ಜನರನ್ನು ಒಳಗೊಳ್ಳುವುದಕ್ಕಾಗಿ ಆಗ ದಕ್ಷಿಣ ಭಾರತದಲ್ಲಿ ಹೆಚ್ಚು ಚಾಲ್ತಿಯಲ್ಲಿದ್ದ ಶಿವ, ವಿಷ್ಣು, ಸೂರ್ಯ, ಗಣೇಶ, ಕುಮಾರ, ಶಕ್ತಿ ಈ ಆರು ದೇವತೆಗಳ ಸಾಮೂಹಿಕ ಆರಾಧನೆಗೆ ಒತ್ತು ನೀಡಿದರು. ಜನಸಮುದಾಯಗಳ ಅವೈದಿಕ ದೇವತೆಗಳ ಆರಾಧನೆಯ ಹೊರತಾಗಿ, ವೈದಿಕ ಸಮೂಹ ಈ ದೇವತೆಗಳ ಆರಾಧನೆಗೆ ಪ್ರಾಧಾನ್ಯತೆಯನ್ನು ನೀಡಿತು. ಇವುಗಳನ್ನು ವೈಷ್ಣವ ಮತ್ತು ಶೈವ ಬ್ರಾಹ್ಮಣರೆಲ್ಲರೂ ಸಮಾನವಾಗಿ ಯಾವುದೇ ತರತಮ ಭಾವವಿಲ್ಲದೆ

ಆರಾಧಿಸುತ್ತಿದ್ದರು. ರಾಮಾನುಜರ ಪ್ರವೇಶದ ನಂತರ ಶ್ರೀವೈಷ್ಣವ ಧರ್ಮದ ಧಾರ್ಮಿಕ ಆಚರಣೆಗಳಲ್ಲಾದ ಬದಲಾವಣೆಗಳು, ಅಗ್ರಹಾರಗಳಿಗೆ ಹೆಚ್ಚಿದ ಕೊಡುಗೆಗಳು, ಭೂಮಾನ್ಯಗಳು ಇವರ ನಡುವೆ ಸಂಘರ್ಷ ಹುಟ್ಟಿಕೊಳ್ಳುವುದಕ್ಕೆ ಕಾರಣವಾಯಿತು. ಇಂತಹ ಸಂದರ್ಭಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದ್ದೇ ಹರಿಹರ ಪುರಗಳು. ಹರಿಹರಪುರಗಳು ಪ್ರಧಾನವಾಗಿ ಸ್ಥಾಪನೆಯಾಗಿರುವುದು ಹೊಯ್ಸಳ ಸಾಮ್ರಾಜ್ಯದ ಭೂಪರಿಧಿಯಲ್ಲಿ ಎಂಬುದು ಗಮನಾರ್ಹ ಸಂಗತಿ. ಎಲ್ಲ ದೇವರುಗಳೂ ಒಂದೇ ಎಂಬ ಸಂದೇಶ ಸಾರುವ "ಯಂ ಶೈವ ಸಮುಪಾಸತೇ ಶ್ಲೋಕ, ಹರಿಹರೇಶ್ವರ ದೇವಾಲಯದ ಶಾಸನದ ಪದ್ಯಗುಚ್ಚಗಳು ಬಿಗಡಾಯಿಸುತ್ತಿದ್ದ ಶೈವ, ವೈಷ್ಣವ ಮತಗಳ ವಿವಿಧ ಧರ್ಮಗಳ ಸಂಘರ್ಷವನ್ನು ಇಲ್ಲವಾಗಿಸಿ ಸಮನ್ವಯವನ್ನು ಸಾರಲೆಂದೇ ಮೂಡಿಬಂದವೆಂಬುದು ಸ್ಪಷ್ಟವಾಗಿದೆ".[೯೩] ಆದರೆ, ಪ್ರಭುತ್ವ ಸಾಮರಸ್ಯವನ್ನು ಕಾಪಾಡಲು ಎಷ್ಟೇ ಪ್ರಯತ್ನಪಟ್ಟರೂ, ದೇವಾಲಯಗಳಲ್ಲಿ ಪ್ರಸಾದ ವಿನಿಯೋಗದ ಬಗ್ಗೆ,ಅಗ್ರಹಾರದ ದೇವಭೂಮಿಗಳಿಗೆ ನೀರನ್ನು ಹಂಚಿಕೆ ಮಾಡುವ ಬಗ್ಗೆ ವಿವಾದಗಳು ಉದ್ಭವಿಸಿ ಘರ್ಷಣೆಯ ರೂಪ ಪಡೆದವು. ಹದಿಮೂರನೆಯ ಶತಮಾನಾನಂತರ ಹರಿಹರ ಪುರಗಳ ಸ್ಥಾಪನೆ ಮತ್ತು ದೇವಾಲಯಗಳ ನಿರ್ಮಾಣ ಕಂಡುಬರುವುದಿಲ್ಲ. ಶೈವ ದೇವಾಲಯ ಸಂಸ್ಕೃತಿ ಪ್ರಬಲವಾಗಿದ್ದ ಪ್ರದೇಶಗಳಲ್ಲಿ 'ಹರಿಹರಪುರಗಳ' ಅಸ್ತಿತ್ವ ನಮಗೆ ಕಂಡುಬರುವುದಿಲ್ಲ. ಅಲ್ಲದೆ, ಬದಲಾಗಿ ಅಲ್ಲಿ ನಮಗೆ 'ಬಹುಕೂಟ' ದೇವಾಲಯಗಳ ರಚನೆ ಕಂಡುಬರುತ್ತದೆ.

**೫.೬.೨ ಬಹುಕೂಟ ದೇವಾಲಯಗಳ ನಿರ್ಮಾಣ**

ರಾಮಾನುಜಾಚಾರ್ಯರ ಶ್ರೀವೈಷ್ಣವ ಧರ್ಮದ ಪ್ರಭಾವ ಹೊಯ್ಸಳ ಸಾಮ್ರಾಜ್ಯಕ್ಕೆ ಮಾತ್ರ ಪರಿಮಿತವಾಗಿತ್ತು. ಅದರಾಚೆ ಕಲ್ಯಾಣ ಚಾಲುಕ್ಯ ಮತ್ತಿತರ ಸಾಮ್ರಾಜ್ಯದಲ್ಲಿ ವೈಷ್ಣವರು ಅಲ್ಪಸಂಖ್ಯಾತರಾಗಿದ್ದರು. ದೇವಾಲಯ ಸಂಸ್ಕೃತಿಯಲ್ಲಿ ಅವರನ್ನು ಒಳಗೊಳ್ಳುವ ಸಲುವಾಗಿ ಮತ್ತು ಅವರಲ್ಲಿ ಅನ್ಯಪ್ರಜ್ಞೆ ಮೂಡದಂತೆ ಕಂಡುಕೊಂಡ ಮಾರ್ಗಗಳೇ ತ್ರಿಕೂಟ ಮತ್ತು ಬಹುಕೂಟ ದೇವಾಲಯಗಳ ನಿರ್ಮಾಣ. ತ್ರಿಕೂಟ ದೇವಾಲಯಗಳು ಪ್ರಮುಖವಾಗಿ ಮೂರು ಗರ್ಭಗೃಹಗಳನ್ನು ಒಳಗೊಂಡಿರುತ್ತವೆ. ತ್ರಿಕೂಟ ದೇವಾಲಯಗಳ ರೂವಾರಿಗಳು ಮತ್ತು ಪ್ರವರ್ತಕರು ಶೈವ ಕಾಳಾಮುಖ ಯತಿಗಳು "ಬಹುಕೂಟ ಪೂಜೆಯ ಮಾದರಿಯನ್ನು ಕಾಳಾಮುಖರು ಮತ್ತೊಂದು ಪ್ರಬಲ ಪೂಜಾ ಸಂಪ್ರದಾಯವಾದ ವೈಷ್ಣವರನ್ನು ಒಳಗೊಳ್ಳಲು ಬಳಸಿದರು".[೯೪] ಇವುಗಳಲ್ಲಿ ಪ್ರಧಾನ ಗರ್ಭಗೃಹ ಲಿಂಗಕ್ಕೆಮೀಸಲಾಗಿದ್ದು,ಎಡಭಾಗದ ಗರ್ಭಗೃಹದಲ್ಲಿ ವೈಷ್ಣವ ಸಂಬಂಧಿ ದೇವತಾ ಮೂರ್ತಿಗಳಿದ್ದರೆ, ಉಳಿದ ಬಲಭಾಗದ ಗರ್ಭಗುಡಿಯಲ್ಲಿ ಸೂರ್ಯ, ಸರಸ್ವತಿ ಮತ್ತಿತ್ತರ ದೇವತಾ ಶಿಲ್ಪಗಳಿರುತ್ತವೆ. ಈ ದೇವಾಲಯಗಳಿಗೆ ದಾನ ನೀಡುವಾಗ ಶೈವ ಮತ್ತು ವೈಷ್ಣವ ದೇವರಿಗೆ ದಾನ ನೀಡಿದರೂ, ದಾನ ಸ್ವೀಕರಿಸುವವರು ಮಾತ್ರ ಕಾಳಾಮುಖ ಯತಿಗಳೇ ಆಗಿರುತ್ತಾರೆ. ತ್ರಿಕೂಟ ದೇವಾಲಯಗಳ ವಿನ್ಯಾಸ

ಧಾರ್ಮಿಕವಾಗಿ ವೈಷ್ಣವರನ್ನು ಒಳಗೊಳ್ಳುವ ಕ್ರಿಯೆಯ ಭಾಗವಾದರೂ, ಭೌತಿಕವಾಗಿ ಇತರ ಧರ್ಮಗಳ ಮೇಲಿನ ನಿಯಂತ್ರಣ, ಅಧಿಕಾರ ತಂತ್ರದ ಭಾಗವಾಗಿಯೂ ಕಂಡುಬರುತ್ತದೆ.

**೫.೬.೩ ಬುದ್ಧ ಮತ್ತು ಜಿನನನ್ನು ವೈದಿಕ ದೇವತೆಗಳ ಅವತಾರವಾಗಿ ಪರಿಗ್ರಹಿಸುವುದು**

ವೈದಿಕ ಆರಾಧನಾ ಸ್ವರೂಪವನ್ನು ಅಳವಡಿಸಿಕೊಂಡಿದ್ದ ಶೈವ ಮತ್ತು ವೈಷ್ಣವ ದೇವತೆಗಳ ಏಕೀಭಾವ ಇತಿಹಾಸದಲ್ಲಿ ಸಹಜಕ್ರಿಯೆಯೆಂಬಂತೆ ತೋರುತ್ತದೆ. ಈ ಅವಧಿಯ ವೇಳೆಗೆ ಬೌದ್ಧಧರ್ಮ ಕರ್ನಾಟಕದಲ್ಲಿ ಪಳೆಯುಳಿಕೆಗಳ ರೀತಿಯಲ್ಲಿ ಅಸ್ತಿತ್ವದಲ್ಲಿತ್ತು. ಹಾಗಾಗಿ ಬೌದ್ಧಧರ್ಮ ಶೈವ ಮತ್ತು ವೈಷ್ಣವ ಧರ್ಮಗಳಿಗೆ ಎದುರಾಳಿಯೇ ಅಲ್ಲವೆನಿಸಿತ್ತು. ಆದರೆ ಈ ಎರಡೂ ಆರಾಧನಾ ಪಂಥಗಳಿಗೆ ಅನ್ಯವಾಗೇ ಉಳಿದದ್ದು ಜೈನಧರ್ಮ. ಶೈವ, ವೈಷ್ಣವ ಮತ್ತು ಜೈನ ಧರ್ಮಗಳ ನಡುವೆ ನಿರಂತರವಾಗಿ ಸಂಘರ್ಷ ನಡೆಯುತ್ತಿದ್ದರೂ, ಇವುಗಳ ನಡುವೆ ಸಾಮರಸ್ಯ ತರಲು ಪ್ರಭುತ್ವ ಹಾಗೂ ಅಧಿಕಾರಿ ವರ್ಗ ಪ್ರಯತ್ನ ಪಡುತ್ತಲೇ ಇತ್ತು. ಇದು ಶಾಸನ, ಸಾಹಿತ್ಯ ಹಾಗೂ ದೇವಾಲಯಗಳ ಶಿಲ್ಪಗಳಲ್ಲಿ ಪ್ರತಿಫಲಿತವಾಗಿರುವುದನ್ನು ಕಾಣಬಹುದು.

ಚಾಲುಕ್ಯ ಜಯಸಿಂಹನ ಅಕ್ಕ ಅಕ್ಕಾದೇವಿ ಇತರರಿಗೆ ತಾನೇ ಮಾದರಿಯಾಗಿ ಜೈನ, ಶೈವ, ಬೌದ್ಧ, ವೈಷ್ಣವ ಈ ಎಲ್ಲಾ ಧರ್ಮಗಳ ಕಾರ್ಯಗಳನ್ನು ಸ್ವತಃ ತಾನೇ ನಿರ್ವಹಿಸುತ್ತಿದ್ದಳೆಂದು ಶಾಸನ ಆಕೆಯನ್ನು ಹೊಗಳುತ್ತದೆ. ಒಂದನೆಯ ಸೋಮೇಶ್ವರನ ಶಾಸನ ಜಿನ, ವಿಷ್ಣು ಹಾಗೂ ಈಶ್ವರನಿಗಾಗಿ ದೇವಾಲಯವೊಂದನ್ನು ಕಟ್ಟಿಸಿದ್ದನ್ನು ಹೇಳುತ್ತದೆ. ಶೃಂಗೇರಿಯ ವಿದ್ಯಾಶಂಕರ ದೇವಾಲಯದ ಹೊರಭಾಗದ ಭಿತ್ತಿಯಲ್ಲಿ ಬುದ್ಧನ ಶಿಲ್ಪವಿದೆ. ಹಾಗೆಯೇ ಹಂಪೆಯ ದಶಾವತಾರ ದೇವಾಲಯದ ಬಿಡಿಸಲಾಗಿರುವ ವಿಷ್ಣುವಿನ ಉಬ್ಬು ಶಿಲ್ಪಗಳಲ್ಲಿ ತೀರ್ಥಂಕರನ ಶಿಲ್ಪವೂ ಇದೆ.

ಈ ಎಲ್ಲ ಪ್ರಯತ್ನಗಳು ಎಲ್ಲ ಧರ್ಮಗಳೂ ಒಂದೇ ಎಂದು ಸಾರುವ ಮೂಲಕ ಅಬಲ ಧರ್ಮೀಯರ ಅನ್ಯಾಕ್ರಾಂತ ಭಾವವನ್ನು ಓಡಿಸುವುದಾಗಿದೆ. ಸಾಮಾನ್ಯವಾಗಿ ಭಾರತೀಯ ಪರಂಪರೆಯಲ್ಲಿ ಬುದ್ಧನನ್ನು ವಿಷ್ಣುವಿನ ಹತ್ತನೆಯ ಅವತಾರವೆಂದು ಪರಿಗಣಿಸಲಾಗಿದೆ. ಆದರೆ ಕರ್ನಾಟಕದ ಸಂದರ್ಭದಲ್ಲಿ ಈ ಸನ್ನಿವೇಶ ಭಿನ್ನವಾಗಿದೆ. ಕರ್ನಾಟಕದ ಧಾರ್ಮಿಕ ಕ್ಷೇತ್ರದಲ್ಲಿ ಬೌದ್ಧ ಧರ್ಮಕ್ಕಿಂತ ಜೈನಧರ್ಮ ಪ್ರಾಬಲ್ಯ ಪಡೆದಿದ್ದು, ಬೌದ್ಧ ಧರ್ಮಕ್ಕಿಂತ ಜೈನಧರ್ಮೀಯರ ಅನುನಯ ಪ್ರಾಧಾನ್ಯತೆಯನ್ನು ಪಡೆಯುತ್ತದೆ.

**೫.೬.೪ ವೈದಿಕ ಪ್ರಭುತ್ವ ವರ್ಗದಿಂದ ಜಿನಾಲಯಗಳ ನಿರ್ಮಾಣ ಮತ್ತು ಪೋಷಣೆ**

ಕರ್ನಾಟಕದಲ್ಲಿ ಪ್ರಾರಂಭದಿಂದಲೂ ಅರಸರು ಸರ್ವಧರ್ಮಗಳಿಗೂ ಸಮಾನ ಆದರಣೆಯನ್ನು ನೀಡಿದ್ದರು. ಕದಂಬರು ವೈದಿಕರಾದರೂ, 'ಯಾಪನೀಯ, ದಿಗಂಬರ ಕೂರ್ಚಕ ಮುನಿಗಳಿಗೆ ಮೂವತ್ತು ಮೂರು ನಿವರ್ತನಗಳಷ್ಟು ಭೂಮಿ ನೀಡುತ್ತಾರೆ. ಅವರ ಪ್ರಕಾರ ಎಲ್ಲಿ ಜಿನೇಂದ್ರ ಪೂಜೆ

ನಡೆಯುತ್ತದೆಯೋ ಆ ದೇಶವು ವೃದ್ಧಿಯಾಗುತ್ತದೆ ಮತ್ತು ನಗರಗಳೂ ನಿರ್ಭಯವಾಗಿರುತ್ತವೆ ಮತ್ತು ಆ ದೇಶದ ರಾಜನು ಊರ್ಜಿತನಾಗುತ್ತಾನೆ.[೯೫] ಈ ಪ್ರಭುತ್ವದ ಈ ಮನೋಧರ್ಮ ಇತಿಹಾಸದುದ್ದಕ್ಕೂ ಹಾಗೆ ಮುಂದುವರೆದುಕೊಂಡು ಬಂದಿದೆ.

ಮಧ್ಯಕಾಲೀನ ಕರ್ನಾಟಕದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ಉಂಟಾದ ಪಲ್ಲಟಗಳಿಂದ ಧರ್ಮ, ಧರ್ಮಗಳ ನಡುವೆ ಸಂಘರ್ಷ ಏರ್ಪಟ್ಟರೂ, ಈ ಅವಧಿಯಲ್ಲಿ ಹೆಚ್ಚಿನ ಸಂಖ್ಯೆಯ ಬಸದಿಗಳನ್ನು ನಿರ್ಮಿಸಿದವರು ಜೈನೇತರರು ಮತ್ತು ಇವುಗಳಿಗೆ ಹೆಚ್ಚು ದಾನಗಳನ್ನು ನೀಡಿದುದೂ ಜೈನೇತರರೇ.

ಶ್ರವಣಬೆಳಗೊಳದಲ್ಲಿ ಹುಳ್ಳರಾಜ ಕಟ್ಟಿಸಿದ ಬಸದಿಯನ್ನು ಒಂದನೆಯ ನರಸಿಂಹ 'ಭವ್ಯ ಚೂಡಾಮಣಿ' ಎಂದು ಹೆಸರಿಟ್ಟು ಅದಕ್ಕೆ ಒಂದು ಗ್ರಾಮವನ್ನು ದತ್ತಿ ನೀಡುತ್ತಾನೆ[೯೬]. ದೋರಸಮುದ್ರದ ಶಾಂತಿನಾಥ ಬಸದಿಗೆ ಮುಮ್ಮಡಿ ನಾರಸಿಂಹನು ಹದಿನಾಲ್ಕು ಹಳ್ಳಿಗಳನ್ನು ದಾನ ನೀಡುತ್ತಾನೆ. ಚಿಕ್ಕಮಾಗಡಿಯಲ್ಲಿ ಸಾವಂತ ಶಂಕರ ಕಟ್ಟಿಸಿದ ಪಾರ್ಶ್ವನಾಥ ಬಸದಿಗೆ ಬಳ್ಳಿಗಾವೆಯ ತ್ರಿಪುರಾಂತಕ ದೇವಾಲಯದ ಸ್ಥಾನಚಾರ್ಯ ಸೂರ್ಯಾಭರಣ ಪಂಡಿತರು ಅರ್ಧ ಮತ್ತರು ಭೂಮಿ, ೫೦೦ ಅಡಿಗೆ ಮರಗಳನ್ನು ದಾನ ನೀಡುತ್ತಾನೆ[೯೭].

ಪ್ರಭುತ್ವ ತನ್ನ ಅಧೀನದಲ್ಲಿ ಬರುವ ಎಲ್ಲ ಧರ್ಮಗಳನ್ನು ಸಮಾನವಾಗಿ ಆಧರಿಸುವುದು ಸಾಮ್ರಾಜ್ಯದ ಸುಗಮ ನಿರ್ವಹಣೆಗೆ, ಕಾನೂನು ಮತ್ತು ಸುವ್ಯವಸ್ಥೆಯ ಪಾಲನೆಗೆ ಅನಿವಾರ್ಯ ಕ್ರಮವಾಗಿತ್ತು. ಕರ್ನಾಟಕದ 'ಧಾರ್ಮಿಕ ಸಮನ್ವಯ' ಸಿದ್ಧಾಂತಕ್ಕೆ ಅತ್ಯುತ್ತಮ ಉದಾಹರಣೆಯಾಗಿ ತೆಗೆದುಕೊಳ್ಳಲಾಗುವ ಶ್ರವಣಬೆಳಗೊಳದ ಬುಕ್ಕರಾಯನ ಶಾಸನ ರಾಚನಿಕವಾಗಿ ಜಯಪತ್ರವೇ ಆಗಿದೆ. ಇಲ್ಲಿ ಜೈನ ಮತ್ತು ವೈಷ್ಣವ ಧರ್ಮದ ಕಲಹಕ್ಕೆ ಮುಖ್ಯ ಕಾರಣ ಲಕ್ಷ್ಮೇಶ್ವರದ ಜಯಪತ್ರದಂತೆಯೇ ಜೈನರು ತಮ್ಮ ಬಸದಿಗಳಲ್ಲಿ ವೈದಿಕರ ಪೂಜಾ ಲಾಂಛನಗಳಾದ ಪಂಚ ಮಹಾಶಬ್ಧಗಳನ್ನು ಬಳಸಿದುದು. ಈಗಾಗಲೇ ಆಗ ತಾನೇ ಸ್ಥಾಪಿತವಾಗಿದ್ದ ಸಾಮ್ರಾಜ್ಯದ ಉಳಿವಿಗಾಗಿ ಮತ್ತು ಸುಗಮ ಮುಂದುವರಿಕೆಗಾಗಿ ಬುಕ್ಕರಾಯ ಎಚ್ಚರಿಕೆಯಿಂದ ಹೆಜ್ಜೆ ಇಡುವ ಅನಿವಾರ್ಯತೆಯಿತ್ತು. ಪ್ರಕರಣ ತುಂಬಾ ಗಂಭೀರ ಮತ್ತು ಸೂಕ್ಷ್ಮವಾಗಿದ್ದರಿಂದ ದೂರಾಲೋಚನೆಯಿಂದ ಜೈನರ ಪಾಲಿಗೆ ಶತೃಗಳಾಗಿದ್ದಂತಹ ವೈಷ್ಣವರಿಗೆ ಅವರನ್ನು ರಕ್ಷಿಸುವ ಹಾಗೂ ಜಿನಾಲಯಗಳನ್ನು ನಿರ್ವಹಿಸುವ ಜವಾಬ್ದಾರಿ ವಹಿಸಿದ. ಅಬಲರ ಕೈಯನ್ನು ಸಬಲರ ಕೈಗಿಟ್ಟು 'ರಾಜಿ' ಮಾಡಿಸಿದ ಹೀಗಾಗಿ 'ಧಾರ್ಮಿಕ ಸಾಮರಸ್ಯ ಎನ್ನುವುದು ರಾಜ ಪ್ರಭುತ್ವದ ಅನಿವಾರ್ಯತೆಗೋಸ್ಕರ ಸೃಷ್ಟಿಸಿಕೊಂಡ ಒಂದು ತಾತ್ಕಾಲಿಕ ವ್ಯವಸ್ಥೆಯಾಗಿದೆ'.[೯೮]

ಹೊಯ್ಸಳ ನರಸಿಂಹನನ್ನು ಶಾಸನವೊಂದು ಪ್ರಶಂಸಿಸುತ್ತಾ ಅವನು 'ವರ್ಣ ಸಂಕರಂ ಈ ರಾಷ್ಟ್ರದೊಳಿಲ್ಲೆನಿಸಿ ಧಾತ್ರೀ ಚಕ್ರವನು ರಕ್ಷಿಸುತ್ತಿದ್ದಾನೆ ಇದು ಆಶ್ಚರ್ಯ' ಎಂದು ಉದ್ಗರಿಸುತ್ತದೆ.[೯೯] ಈ ಸಂದರ್ಭದಲ್ಲಿ ಎರಡು ಪ್ರಧಾನ ಪ್ರಶ್ನೆಗಳು ಉದ್ಭವವಾಗುತ್ತವೆ. ಒಂದನೆಯದಾಗಿ ಇಲ್ಲಿ 'ಇಲ್ಲ' ಎಂಬ ನಕಾರಾತ್ಮಕ ಪದವೇ ಅದರ ಇರುವಿಕೆಯನ್ನು ಸ್ಪಷ್ಟಪಡಿಸುವುದಿಲ್ಲವೇ? ಎರಡನೆಯದಾಗಿ ವರ್ಣ ಸಂಕರ 'ಈ ರಾಷ್ಟ್ರದೊಳಿಲ್ಲ ಎನಿಸಿ' ಎಂದರೆ, ಹಾಗಿದ್ದರೆ ವರ್ಣ ಸಂಕರಗಳು ಇರುವ ಮತ್ತೊಂದು ರಾಷ್ಟ್ರವಿರಬೇಕಲ್ಲವೇ? ಅದು ಯಾವುದು?

ಬಸವಣ್ಣನವರು ಸಮಾಜದ ಎಲ್ಲ ಸ್ತರದವರಿಗೂ ಲಿಂಗದೀಕ್ಷೆ ನೀಡಿ ಸಮಾನತೆಯನ್ನು ಮೆರೆದಂತೆ, ರಾಮಾನುಜಾಚಾರ್ಯರು ಎಲ್ಲರಿಗೂ ಸಾಮೂಹಿಕವಾಗಿ ದೀಕ್ಷೆ ನೀಡಿ ದೇವಾಲಯಗಳ ಕಾರ್ಯಚಟುವಟಿಕೆಗಳಲ್ಲಿ ಅವರು ಪಾಲ್ಗೊಳ್ಳುವಂತೆ ಮಾಡಿದರು. ಇಂಥ ಸಂದರ್ಭದಲ್ಲಿ ರೂಪುಗೊಂಡ ಹೊಸ ಸಮಾಜದ ನಡುವಿನ ಸಂಬಂಧಗಳಿಂದ, ಸಾಮಾಜಿಕ ವಿನ್ಯಾಸಗಳಿಂದ ಎದ್ದಂತಹ ಕಲಹ, ಜಗಳ, ಸಂಘರ್ಷಗಳನ್ನು ಪ್ರಭುತ್ವಮಟ್ಟ ಹಾಕಿದ್ದರ ದ್ಯೋತಕವೇ? ಈ ಬಗ್ಗೆ ಹೆಚ್ಚಿನ ವಿಶ್ಲೇಷಣೆಯ ಅಗತ್ಯವಿದೆ. ಶಂಬಾ ಜೋಷಿಯವರು ಅಭಿಪ್ರಾಯಪಡುವಂತೆ 'ಸಮನ್ವಯ' ಎಂಬುದೇ ಸಂಘರ್ಷದ ಅಸ್ತಿತ್ವವನ್ನು ಸಿದ್ಧಪಡಿಸುತ್ತದೆ.[೧೦೦]

ಸಾಮರಸ್ಯವನ್ನು ಸಂಪೂರ್ಣವಾಗಿ ನಿರಾಕರಿಸುವುದು ನನ್ನ ಉದ್ದೇಶವಲ್ಲ. ಸಾಮರಸ್ಯದ ಹಿಂದಿರುವ ತಾತ್ವಿಕ ಕಾರಣ ಹಾಗೂ ಚಾರಿತ್ರಿಕ ಒತ್ತಡಗಳನ್ನು ವಿಶ್ಲೇಷಿಸುತ್ತಲೇ, ಇತಹ ಧರ್ಮಗಳೆಡೆಗೆ ಪ್ರಭುತ್ವಕ್ಕಿದ್ದ ಉದಾರವಾದಿ ಮನೋಧರ್ಮವನ್ನು ಮಾನವೀಯ ಅಂತಃಕರಣವನ್ನು ಅನಾವರಣಗೊಳಿಸುವುದು ನನ್ನ ಆಶಯವಾಗಿದೆ. ಅದಕ್ಕೆ ನಿದರ್ಶನವಾಗಿ ನಾವು ಕೃಷ್ಣದೇವರಾಯನ ಶಾಸನವನ್ನು ಗಮನಿಸಬಹುದು.

ಜೈನರು ಆಕ್ರಮಣ, ಆಪಾದನೆಗಳಿಗೆ ಹೆದರಿ ಗ್ರಾಮಗಳನ್ನು ತೊರೆದು ಹೋಗುವಂತಹ ಭಯಭೀತ ವಾತಾವರಣ ಸೃಷ್ಟಿಯಾಗಿತ್ತು. ಕೃಷ್ಣದೇವಯರಾಯನ ಕಾಲದಲ್ಲಿ ಕಕ್ಕೆ ದಾಸುಶೆಟ್ಟಿ ಮತ್ತು ಅಡ್ಡಣಿ ಬಾಲ್ಯಮ್ಮ ಸೆಟ್ಟಿಯ ಮನೆಗಳ ಮೇಲೆ ಆಕ್ರಮಣ ಮಾಡಿ, ಮನೆಯಿಂದ ಸರ್ವಸ್ವವನ್ನು ಸೂರೆಗೊಂಡು ಹೋದಾಗ, ಜೈನರು ಎಲ್ಲ ಬಸ್ತಿಗಳ ಬಾಗಿಲುಗಳನ್ನು ಮುಚ್ಚಿಕೊಂಡು ಊರನ್ನು ತೊರೆಯಲು ಮುಂದಾಗಿದ್ದರು. ಇದನ್ನು ತಿಳಿದ ಕೃಷ್ಣದೇವರಾಯ ಎಲ್ಲವನ್ನು ಮರಳಿ ಕೊಡಿಸಿ, ಬಸದಿಯ ಬಾಗಿಲುಗಳನ್ನು ತೆಗೆಸಿ, ಎರಡು ಬಸದಿಗಳಿಗೆ ದತ್ತಿ ನೀಡಿ, ಇನ್ನು ಮುಂದೆ ನಮ್ಮವರು ನಿಮ್ಮ ಮನೆಗಳ ಹೊಸ್ತಿಲನ್ನು ದಾಟದಂತೆ ಹಾಗೂ ನಿಮ್ಮ ಮನೆಯ ಬಾಗಿಲುಗಳಿಗೆ ಕಲ್ಲನ್ನೇರಿಸದಂತೆ ನೋಡಿಕೊಳ್ಳುತ್ತೇವೆ. ನೀವು ಮುಂದಿನಂತೆ ಇರಬಹುದೆಂದು ಹೇಳಿ ಅಭಯವನ್ನು ನೀಡಿದಂತಹ ಸಂದರ್ಭಗಳೂ ಇವೆ.[೧೦೧]

ಶ್ರವಣಬೆಳಗೊಳದಲ್ಲೂ ಸಹ ಇಂತಹುದೇ ಪರಿಸ್ಥಿತಿ ಉದ್ಭವವಾಗಿ ಬಸದಿಗಳ ಭೂಮಿಗಳನ್ನೆಲ್ಲ ಅಡವಿಟ್ಟು, ಬಸದಿಗಳನ್ನು ನಿರ್ವಹಿಸುವುದೇ ಕಷ್ಟಕರವಾಗಿದ್ದಾಗ, ಚಾಮರಾಜ ಒಡೆಯರು ಅಡ ಹಿಡಿದಂತಾವರನ್ನು ಕರೆಸಿ ಆಸ್ತಿಗಳ ಒತ್ತೆಯನ್ನು ಬಿಡಿಸಿ ಬಸದಿಗಳಲ್ಲಿ ಪೂಜೆಗಳು ನಡೆಯುವಂತೆ ಮಾಡುತ್ತಾರೆ.[೧೦೨] ಮನುಷ್ಯ ಮನುಷ್ಯರ ನಡುವೆ ಶಾಂತಿ, ಸಹನೆ, ವಿಶಾಲ ಮನೋಭಾವ ಮೂಡಿಸಬೇಕಾದ ಧರ್ಮಗಳು ಗಲಭೆ, ಅಸಹನೆಯ ಕಿಚ್ಚನ್ನು ಹಚ್ಚಿ ಮನುಷ್ಯರ ನಡುವೆ ಸಂಕುಚಿತ ಭಾವನೆಗಳನ್ನು ಮೂಡಿಸಿ ಬದುಕುವ ವಾತಾವರಣವನ್ನು ಅಸಹನೀಯಗೊಳಿಸುವ ಸಂದರ್ಭಗಳಲ್ಲಿ ಇತಿಹಾಸದಲ್ಲಿ ಪ್ರಭುತ್ವಗಳು ವಹಿಸಿದ ಪಾತ್ರಗಳು, ತೆಗೆದುಕೊಂಡ ಎಚ್ಚರಿಕಾ ಕ್ರಮಗಳು ಇಂದಿಗೂ ಪ್ರಸ್ತುವೆನಿಸುತ್ತವೆ. ಸಮನ್ವಯ, ರಾಜಿ, ಸಹಬಾಳ್ವೆ, ಹೊಂದಾಣಿಕೆ ಎಂಬುವು ಪ್ರಭುತ್ವದ ಅನುಕೂಲಸಿಂಧು ತಂತ್ರಗಳಷ್ಟೇ. ಎಲ್ಲರನ್ನೂ, ಎಲ್ಲವನ್ನೂ ಒಳಗೊಂಡು ಆಡಳಿತ ನಡೆಸಬೇಕಾದಾಗ ಇಂಥ 'ಸಮನ್ವಯ'ಗಳು ಚರಿತ್ರೆಯಲ್ಲಿ ಅಗತ್ಯವಾಗುತ್ತವೆ. ಸಾಂಸ್ಕೃತಿಕ ಇತಿಹಾಸದ ಸಂದರ್ಭದಲ್ಲಿ ಧಾರ್ಮಿಕ ಸ್ಥಿತ್ಯಂತರಗಳನ್ನು ವಿವರಿಸುವ ಇತಿಹಾಸಕಾರನಿಗೆ, ಅದರ ಸಾಮಾಜಿಕಧಾರಣೆಯ ಮೌಲ್ಯಗಳನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಆದಕಾರಣ ಆ ಧಾರ್ಮಿಕ ಸಂಘರ್ಷದಲ್ಲಿ ಅಡಕವಾದ ವಿಚಾರಪ್ರಣಾಲಿಯ ಮೌಲ್ಯಮಾಪನವನ್ನು ಸಮಾಜ ಸುದಾರಣೆಯ ದೃಷ್ಟಿಯಿಂದ ಮಾಡುವುದು ಇತಿಹಾಸಕಾರನ ಕ್ರಮಪ್ರಾಪ್ತ ಕರ್ತವ್ಯವಾಗಿರುತ್ತದೆ. ನಿನ್ನೆಯು ಇಂದಿನಲ್ಲಿ ಮಾರ್ಪಡುತ್ತ ಬಂದ ರೀತಿಯನ್ನು ಕಾರ್ಯಕಾರಣ ಸಂದರ್ಭದಲ್ಲಿ ವಿವರಿಸುವುದು ಇತಿಹಾಸದ ಕೆಲಸ.[೧೦೩]

**ಅಡಿಟಿಪ್ಪಣಿಗಳು**

1. ಕಾಣೆ ಪಿ.ವಿ.: ಧರ್ಮಶಾಸ್ತ್ರದ ಇತಿಹಾಸ, ಸಂ. ೧, ಭಾಗ-೧, ಪು. ೧
2. ರಾಮಚಂದ್ರನ್ ಸಿ.ಎನ್: ಆಶಯ-ಆಕೃತಿ, ಪು. ೧೩೦
3. ಮೋಹನ ಕೃಷ್ಣ ರೈ: ಪ್ರಭುತ್ವ ಮತ್ತು ಜನತೆ, ಪು. ೧೨೭
4. ಸಾಲ್ತೊರೆ ಬಿ.ಎ.: ಮೀಡಿವೆಲ್ ಜೈನಿಸಂ, ಪು. ೨, (ಉದ್ಧೃತ: ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೭೪)
5. ಬಾಂಬೆ ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್: ಸಂ.೧, ಭಾಗ-೧, ಸಂ. ೫೨, ೫೩
6. ಹಿರೇಮಠ ಎಸ್.ಎಸ್.: ಬಹುಮುಖಿ ಶೈವಧಾರೆಗಳು ಮತ್ತು ಹರಿಹರ, ಹರಿಹರನ ರಗಳೆಗಳು-ಸಾಂಸ್ಕೃತಿಕ ಮುಖಾಮುಖಿ, (ಸಂ) ಶಿವಾನಂದ ಎಸ್. ವಿರಕ್ತ ಮಠ, ಪು. ೭೫
7. ಗೋಪಾಲ ಬಾ.ರಾ: ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರು, ಪು. ೧೬
8. ಮೋಹನ್ ರಾಂ: ದಲಿತರ ದೇವಸ್ಥಾನ ಪ್ರವೇಶದ ಸಾವಿರ ವರ್ಷ-ದಲಿತರು ಮರೆತ ರಾಮಾನುಜ, ಪು. ೩೭
9. ಶೆಟ್ಟರ್. ಎಸ್: ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ, ಕನ್ನಡ ಸಾಹಿತ್ಯ ಚರಿತ್ರೆ, ಭಾಗ- III, ಪು. ೨೬
10. ಎ.ಕ-೨ (ಪರಿಷ್ಕೃತ): ಶ್ರವಣ ಬೆಳಗೊಳ ೪೭೫, ಕ್ರಿ.ಶ. ೧೫೬೮
11. ಎ.ಕ-೯ (ರೈಸ್): ಮಾಗಡಿ
12. ಚಿದಾನಂದ ಮೂರ್ತಿ ಎಂ: ಬೌದ್ಧಕೇಂದ್ರ ಕಲಾವತಿ ನಗರದ ಅಭಿಜ್ಞೆ-ಈಗಿನ ಕಲ್ಯ ಜೊತೆ, ಹೊಸತು ಹೊಸತು, ಪು. ೨೨೫
13. ಶಾಂತಿನಾಥ ದಿಬ್ಬದ (ಸಂ): ಮುನಿವಂಶಾಭ್ಯುದಯ, ಎರಡನೆಯ ಸಂಧಿ, ಪು. ೧೮-೨೮
14. ಎ.ಕ-೨: ಶ್ರವಣ ಬೆಳಗೊಳ ಸಂ. ೩೫೨, ೪೮೫
15. ರಾಮಚಂದ್ರನ್ ಸಿ.ಎನ್: ಹೊಸ ಮಡಿಯ ಮೇಲೆ ಚದುರಂಗ, ಪು. ೧೧೨
16. ಗೋಪಾಲ ಬಾ.ರಾ: ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು, ಪು. ೨೯
17. ಅದೇ, ಪು. ೧೬
18. ಲಲಿತಾಂಬ ಎನ್.ಆರ್.: ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಪು. ೨೨೭
19. ಅದೇ ಅನುಬಂಧ- ಉಬ್ಬೇನಹಳ್ಳಿ, ಹಾಸನ ತಾಲೂಕು: ಕ್ರಿ.ಶ. ೧೨೩೭, ಪು. ೩೩೫
20. ಎಕ-೧೦ (ಪರಿಷ್ಕೃತ): ಅರಸೀಕೆರೆ, ೧೪೯, ೧೬೦, ೧೨ನೆಯ ಶತಮಾನ
21. ಗೋಪಾಲ ಬಾ.ರಾ: ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರು, ಶಾ. ಸಂ. ೫೨, ಪು. ೧೩೫

22. ಶೆಟ್ಟರ್. ಎಸ್: ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ-ಸಾಮಾಜಿಕ ಜೀವನ ಕನ್ನಡ ಸಾಹಿತ್ಯ ಚರಿತ್ರೆ, ಭಾಗ-III, ಪು. ೨೮
23. ಲಲಿತಾಂಬ. ಎನ್.ಆರ್: ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಪು. ೨೫೮
24. ಬಾಂಬೆ ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್: ಸಂ. ೪ (೩), ಕ್ರಿ.ಶ. ೧೧೪೦
25. ಮೋಹನ್ ಕೃಷ್ಣ ರೈ: ಪ್ರಭುತ್ವ ಮತ್ತು ಜನತೆ, ಪು. ೫೦
26. ಕಲಬುರ್ಗಿ ಎಂ.ಎಂ.: ಮಾರ್ಗ ೧, ಪುಟ ೨೭೬
27. ಎ.ಕ-೭: ಭಾಗ-೧, ಶಿಕಾರಿಪುರ-೧೦೨, ಕ್ರಿ.ಶ. ೧೧೬೨
28. ದೇವರಕೊಂಡಾರೆಡ್ಡಿ: ಬಳ್ಳಿಗಾವೆಯ ಕೋಡಿಮಠ, ಸಾಧನೆ, ಪು. ೮೩
29. ಮಂಜುನಾಥ ಸಿ.ಯು: ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಪು. ೧೦
30. ಎ.ಕ-೭: ಮಳವಳ್ಳಿ ೪೧, ಕ್ರಿ.ಶ. ೧೧೩೨
31. ಎಸ್‌ಐಐ ೧೫: ಸಂ. ೧, ಕ್ರಿ.ಶ. ೧೧೪೬
32. ಎ.ಕ. ೬ (ಪರಿಷ್ಕೃತ): ತರಿಕೆರೆ ೧೮, ಕ್ರಿ.ಶ. ೧೧೬೬, ೧೧೬೯
33. ಎಸ್‌ಐಐ ೧೫ (೨): ಸಂ. ೩೧, ಕ್ರಿ.ಶ. ೧೧೪೬
34. ಸುಂದರ ಅ (ಸಂ): ಕರ್ನಾಟಕ ಚರಿತ್ರೆ ಸಂ.೧, ಪು. ೨೪೩
35. ಶಂಬಾ ಜೋಷಿ: ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ, ಪು.೧೪೨
36. ಕುಂದಣಗಾರ ಕೆ.ಜಿ (ಸಂ): ಆದಿಪುರಾಣ ೨-೨೩, ಪು.೩೧
37. Govindacharya: The Life of Ramanujacharya, P. 207-208, (ಉದ್ಧೃತ: ಗೋಪಾಲ ಬಾ.ರಾ: ಕರ್ನಾಟಕದಲ್ಲಿ ಶ್ರೀರಾಮಾನುಜಾಚಾರ್ಯರು, ಪು. ೧೪)
38. ಎ.ಕ-೨: ಶ್ರವಣಬೆಳಗೊಳ ೭೦, ೭೩, ೩೬೦
39. ಎಸ್‌ಐಐ: ೯ (೧): ಸಂ. ೩೦, ಕ್ರಿ.ಶ. ೧೦೬೬
40. ಎಂಎಆರ್-೧೯೨೩, ಪು. ೩೮, ಕ್ರಿ.ಶ. ೯೯೦
41. ಐಎ-೨೪: ಪು. ೧೪, ಕ್ರಿ.ಶ. ೧೧೨೩-೩೪
42. ಎ.ಕ-೨ (ಪರಿಷ್ಕೃತ): ಶ್ರವಣಬೆಳಗೊಳ ೩೬೦
43. ಎ.ಕ.-೨, ಶ್ರವಣ ಬೆಳಗೊಳ ೫೨
44. ಎ.ಕ-೭ (ಪರಿಷ್ಕೃತ): ಶಿಕಾರಿಪುರ ೨೦, ಕ್ರಿ.ಶ. ೧೦೩೨
45. ಎಸ್‌ಐಐ-೧೫, ನವಲಗುಂದ-೫೯, ಕ್ರಿ.ಶ. ೧೧೮೪
46. ಎಸ್‌ಐಐ-೨೫: ಸಂ. ೫೬, ೧೧೮೪ (------ ಪರಿಯಳಿಗೆ, ಅಣಲವಾಡ, ಉಣಕಲ್ಲು, ಸಂಪಗಾವಿ, ಅಬ್ಬಲೂರು ಮಾರುಡಿಗೆ ಅಣಂಪೂರ ಕರಹಾಡ ಕೆಂಬಾವಿ ಬಮ್ಮೆಕೂರು ಮೊದಲಾಗಿ ಅನನ್ತದೇಶ ದೇಶಾನ್ತರದಲಿದಿರಾದ ಪರಸಮಯಗಳಂ ಪಡಲ್ಪಿಡಿಪಿ ಲೋಕಮನಾಕಂಪಂಗೊಳ್ಸಿ ಬಸದಿಗಳಂ ಹೊಸೆದು ಮುಕ್ಕಿ ಶಿವಲಿಂಗಸಿಂಹಾ ಸನಮಂ ಕಣ್ಣೊಳ್ಸಿ

. . . ಚಲಮಂ ಮೆಱೆದು ಧೀರರೊಳು ನೆಱೆದು ಸ್ವರ್ಗಮರ್ತ್ಯಪಾತಾಳದೊಳ ನೆಂಗಾರಿಯ ಹೆಮ್ಮೆಯ್ಯಿಂ ತಮ್ಮ ಬ್ರಿತ್ಯಾಚಾರದ ತೊಮ್ಮೆಯ್ಮೆಂ ತಳದಲಕ್ಕಿ ತೋರ್ಪನ್ತ ತೋರಿದ ಪುರಾತನ ನೂತನರೆನಿಸಿದ ಅಸಂಖ್ಯಾತ ಗಣಂಗಳ ನಾಮಾದಿ ಪ್ರಶಸ್ತಿ ಸಹಿತಂ ಎಂದು ಹೊಗಳುತ್ತಾ. . .)

47. ವರದರಾಜರಾವ್: ಕುಮಾರ ರಾಮನ ಸಾಂಗತ್ಯಗಳು–೧: ಪು–೨೬೪–೬೫

48. ಕ.ವಿ.ವಿ.ಶಾ.ಸಂ.೨: ಕೊಪ್ಪಳ ಜಿಲ್ಲೆ, ಯಲಬುರ್ಗ ತಾಲೂಕು–೬

49. ಪರಮಶಿವ ಮೂರ್ತಿ ಡಿ.ವಿ (ಸಂ): ಕೃಷ್ಣದೇವರಾಯನ ಶಾಸನಗಳು, ಸಂಖ್ಯೆ ೧೬

50. ನಾಗರಾಜ್ ಡಿ.ಆರ್.: ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ೨೦೧೦, ಪು. ೫೦

51. amaswami Ayyangar: Studies in South India Jainism, P. No. 60

52. ಶಾಂತಿನಾಥ ದಿಬ್ಬದ: ಜೈನ ಸಂಸ್ಕೃತಿ ಸಮೀಕ್ಷೆ, ಪು. ೭೮

53. ದೇವರಕೊಂಡಾ ರೆಡ್ಡಿ, ಗಣೇಶ್ ಕೆ.ಆರ್ (ಸಂ): ಲಕ್ಷ್ಮೇಶ್ವರದ ಶಾಸನಗಳು, ಶಾ.ಸಂ. ೪೮

54. ಎ.ಕ.–೨ (ಪರಿಷ್ಕೃತ): ಶ್ರವಣಬೆಳಗೊಳ ೪೭೫, ಕ್ರಿ.ಶ. ೧೩೬೮

55. ರಾಮಚಂದ್ರನ್ ಸಿ.ಎನ್: ವಚನ ಚಳವಳಿ ಮತ್ತು ಲಿಖಿತ ಪರಂಪರೆಗಳ ಗ್ರಹಿಕೆ, ಹರಿಹರನ ರಗಳೆಗಳು–ಸಾಂಸ್ಕೃತಿಕ ಮುಖಾಮುಖಿ (ಸಂ), ಶಿವಾನಂದ ವಿರಕ್ತ ಮಠ, ಪು–೩೪

56. ರಾಜಾರಾಮ ಹೆಗಡೆ: ಲೌಕಿಕ–ಅಲೌಕಿಕ, ಪು. ೧೬೮–೧೬೯

57. ರಾಮಲಿಂಗಪ್ಪ ಟಿ. ಬೇಗೂರು: ಹರಿಹರನ ರಗಳೆಗಳು, ಪರಿವಾರ ನಿರ್ಮಾಣ ಮತ್ತು ಪರ್ಯಾಯ ನಿರ್ಮಾಣದ ಕಥನಗಳು, ಹರಿಹರನ ರಗಳೆಗಳು–ಸಾಂಸ್ಕೃತಿಕ ಮುಖಾಮುಖಿ, ಪು. ೧೩೮

58. ಎ.ಕ (ಪರಿಷ್ಕೃತ): ಚಿಕ್ಕಮಗಳೂರು ೧೩೭

59. ಎ.ಕ– ೧೨ (ಪರಿಷ್ಕೃತ): ತಿಪಟೂರು ೬೬

60. ಎ.ಕ–೧೧ (ಪರಿಷ್ಕೃತ): ದಾವಣಗೆರೆ ೨೫, ಕ್ರಿ.ಶ. ೧೨೨೪

61. ಎ.ಕ–೫ (ಪರಿಷ್ಕೃತ): ಬೇಲೂರು ೯೯, ಕ್ರಿ.ಶ. ೧೧೯೮

62. ಎ.ಕ–೧೨ (ಪರಿಷ್ಕೃತ): ತಿಪಟೂರು ೩೧, ಕ್ರಿ.ಶ. ೧೧೯೩

63. ಸಣ್ಣಯ್ಯ ಬಿ.ಎಸ್ (ಸಂ): ರಾಜಾವಳಿ ಕಥಾಸಾರ, ಪು. ೭೭

64. ಅದೇ, ಪು. ೯೪

65. ಉಪಾಧ್ಯ ಜಿ.ಎಸ್, ದೇವರ ಕೊಂಡಾರೆಡ್ಡಿ (ಸಂ): ಮಹಾರಾಷ್ಟ್ರದ ಕನ್ನಡ ಶಾಸನಗಳು, ಸಂ. ೬, ಸಂ. ೪, ಕ್ರಿ.ಶ. ೧೦೧೩

66. ಎ.ಕ. ೧೦ (ರೈಸ್): ಚಿಕ್ಕಬಳ್ಳಾಪುರ–೨೯, ಕ್ರಿ.ಶ. ೭೫೦

67. ಎಸ್ಐಐ ೧೧(೧): ಸಂ. ೫೨, ಕ್ರಿ.ಶ. ೧೦೦೭

68. ಎಸ್ಐಐ ೫: ಸಂ. ೮೪೯

69. ಹಂಪ ನಾಗರಾಜಯ್ಯ: ಮೂಲ ಚೂಲ, ಪು-೬೨-೬೭

70. ಅಪ್ಪಣ್ಣ ಹಂಜೆ: ಕರ್ನಾಟಕದಲ್ಲಿ ಜೈನಧರ್ಮ ಆರ್ಥಿಕ ಮತ್ತು ಸಾಮಾಜಿಕ ಚರಿತ್ರೆಯ ಕೆಲವು ನೆಲೆಗಳು-೨, ಪು-೧೧೪

71. ಹಂಪ ನಾಗರಾಜಯ್ಯ: ಕರ್ನಾಟಕದಲ್ಲಿ ಜೈನಧರ್ಮ, ಹೊಸ ಶೋಧಗಳು, ಅರವಂಟಿಗೆ, ಸಂ ೧/೧, ಪು. ೬೮

72. ರಾಜಾರಾಂ ಹೆಗಡೆ: ಲೌಕಿಕ-ಅಲೌಕಿಕ, ಪು. ೧೫೧

73. ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್-೫: ಸಂ. ೨೧, ಕ್ರಿ.ಶ. ೧೧೨೩

74. ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್-೫: ಸಂ. ೯೮

75. ಎ.ಕ. ೮ (ಪರಿಷ್ಕೃತ): ಸೊರಬ, ಸಂ. ೨೮

76. ನಂದಿ ಆರ್. ಎನ್.: (ಉದ್ಧೃತ ರಾಜಾರಾಂ ಹೆಗಡೆ, ಲೌಕಿಕ ಅಲೌಕಿಕ, ಪು-೧೬೫

77. ಎ.ಕ-೮ (ಪರಿಷ್ಕೃತ): ನಗರ ೫೭, ಕ್ರಿ.ಶ. ೧೦೭೭

78. ಎ.ಕ-೧೧ (ಪರಿಷ್ಕೃತ): ಹೊಳಲ್ಕೆರೆ ೧, ಕ್ರಿ.ಶ. ೧೧೫೪

79. ಚಿದಾನಂದ ಮೂರ್ತಿ ಎಂ,: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು-೯೯-೧೦೦

80. ಎ.ಕ-೯ (ರೈಸ್): ನೆಲಮಂಗಲ ೬೧, ಕ್ರಿ.ಶ. ೮೦೨

81. ಕುಲಕರ್ಣಿ ಬಿ.ಎಸ್. (ಸಂ): ಸಮಯ ಪರೀಕ್ಷೆ ೪/೧೨೧

82. ಎ.ಇಂ-೧೯: ಪು. ೧೮೦, ಕ್ರಿ.ಶ. ೧೧೨೧

83. ಎ.ಇಂ-೧೯: ಪು. ೧೯೨, ಕ್ರಿ.ಶ. ೧೧೨೧

84. ಕುಲಕರ್ಣಿ ಬಿ.ಎಸ್. (ಸಂ): ಸಮಯ ಪರೀಕ್ಷೆ, ೧೫೯

85. ಅಪ್ಪಣ ಹಂಜೆ: ಕರ್ನಾಟಕದಲ್ಲಿ ಜೈನಧರ್ಮ ಆರ್ಥಿಕ, ಸಾಮಾಜಿಕ ಚರಿತ್ರೆಯ ಕೆಲವು ನೆಲೆಗಳು-೨, ಪು. ೧೦೮

86. ಹಂಪ ನಾಗರಾಜಯ್ಯ: ಮತಾಂತರ ಮತ್ತು ಜೈನ ಸಮಾಜ, ಅನನ್ಯ, ಪು. ೭೩

87. ಅದೇ, ಪು. ೭೩

88. ರಾಜಾರಾಂ ಹೆಗಡೆ: ಲೌಕಿಕ-ಅಲೌಕಿಕ, ಪು. ೧೭೬

89. ಎಸ್‌ಐಐ-೧೮: ಬಿಜಾಪುರ ೧೯೯, ಕ್ರಿ.ಶ. ೧೧೯೬

90. ಎ.ಕ-೫ (ಪರಿಷ್ಕೃತ): ಅರಸೀಕೆರೆ ೭೯, ಕ್ರಿ.ಶ. ೧೧೪೮

91. ಎ.ಕ-೧೨ (ಪರಿಷ್ಕೃತ): ತುಮಕೂರು ೯, ಕ್ರಿ.ಶ. ೧೧೫೧

92. ಶಂಬಾ ಜೋಶಿ: ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಪು. ೧೩೪

93. ಲಲಿತಾಂಬ ಎನ್.ಆರ್: ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಪು. ೨೪೯

94. ರಾಜಾರಾಂ ಹೆಗಡೆ: ಲೌಕಿಕ-ಅಲೌಕಿಕ, ಪು. ೧೫೬

95. ಐ.ಎ. ಸಂ. ೬, ಪು. ೨೪, ಕ್ರಿ.ಶ. ೫೩೮
96. ಎ.ಕ–೨ (ರೈಸ್): ಶ್ರ. ಬೆ. ೩೪೯, ೧೩೬೮
97. ಎ.ಕ–೮ (ಪರಿಷ್ಕೃತ): ಸೊರಬ, ೧೯೭
98. ಮೋಹನ ಕೃಷ್ಣ ರೈ: ಪ್ರಭುತ್ವ ಮತ್ತು ಜನತೆ, ಪು. ೧೨೮
99. ಎ.ಕ–೯ (ಪರಿಷ್ಕೃತ): ಬೇಲೂರು ೪೧೦
100. ಶಂಬಾ ಜೋಶಿ: ಕರ್ನಾಟಕ ಸಂಸ್ಕೃತಿ ಪೂರ್ವಪೀಠಿಕೆ, ಪು. ೧೪೨
101. ಪರಮಶಿವಮೂರ್ತಿ ಡಿ.ವಿ. (ಸಂ): ಕೃಷ್ಣದೇವರಾಯನ ಶಾಸನಗಳು, ಶಾ.ಸಂ.೧
102. ಎ.ಕ–೨ (ಪರಿಷ್ಕೃತ): ಶ್ರವಣಬೆಳಗೊಳ ೮೪, ೧೪೦, ಕ್ರಿ.ಶ. ೧೬೩೪
103. ಶಂಬಾ ಜೋಶಿ: ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ, ಪು. ೧೩೭

* * *

## ಅಧ್ಯಾಯ–೬

## ಜಯರೇಖೆ ಶಾಸನಗಳಲ್ಲಿ ನ್ಯಾಯಲೋಕ

೬.೧ ವ್ಯಾಜ್ಯಗಳು

೬.೨ ನ್ಯಾಯ ನೀಡಿಕೆಯ ಪ್ರಧಾನ ನೆಲೆಗಳು

೬.೨.೧ ದೇಶಾಚಾರ ಆಧಾರಿತ ನ್ಯಾಯ ಪ್ರಕ್ರಿಯೆ

೬.೨.೨ ಕುಲಾಚಾರ ಆಧಾರಿತ ನ್ಯಾಯ ಪ್ರಕ್ರಿಯೆ

೬.೨.೩ ಪ್ರಭುತ್ವ ಕೇಂದ್ರಿತ ನ್ಯಾಯ ಪ್ರಕ್ರಿಯೆ

೬.೩ ತೀರ್ಪಿನ ಫಲಿತಗಳು

೬.೪ ನ್ಯಾಯ ನಿರ್ಣಯದ ಪ್ರಮಾಣಗಳು ಮತ್ತು ನೆಲೆಗಳು

೬.೪.೧ ಮೌಖಿಕ ಸಾಕ್ಷಿ

೬.೪.೨ ಲಿಖಿತ ಸಾಕ್ಷಿ (ದಾಖಲೆಗಳು)

೬.೪.೩ ಅಧಿಭೋಗ

೬.೪.೪ ಆಚರಣೆಯಲ್ಲಿರುವ ದೇಶಾಚಾರಗಳು (ಸದಾಚಾರಗಳು)

೬.೫ ಜಯರೇಖೆಗಳ ಆತ್ಯಂತಿಕ ಪ್ರಮಾಣಗಳಾಗಿ ದಿವ್ಯಗಳು

# ಅಧ್ಯಾಯ-೬

## ಜಯರೇಖೆ ಶಾಸನಗಳಲ್ಲಿ ನ್ಯಾಯಲೋಕ

ಪ್ರಾಚೀನ ಭಾರತದಲ್ಲಿ ಜಯರೇಖೆ ಶಾಸನಗಳ ರಚನೆಯ ಮೂಲ ಆಶಯ ಮತ್ತು ಉದ್ದೇಶವೇ ನ್ಯಾಯ ನೀಡಿಕೆಯಾಗಿದೆ. ಜಯರೇಖೆಗಳ ಸಂಸ್ಕೃತ ಸಂವಾದಿ ರೂಪವಾದ 'ಜಯಪತ್ರ'ಕ್ಕೆ, Winner Certificate, Certificate of Success,[೧] Document of Victory, A Document recording Success[೨] ಎಂಬಂತಹ ಅರ್ಥ ವ್ಯಾಖ್ಯಾನ ನೀಡಲಾಗಿದೆ.

ಧರ್ಮಶಾಸ್ತ್ರಕಾರರು ಪ್ರಾಚೀನ ಭಾರತದ ಆಡಳಿತ ವ್ಯವಸ್ಥೆಯ ಮೂಲ ಘಟಕಗಳಾದ ಶಾಸನ, ಜಯಪತ್ರ, ಆಜ್ಞಾಪತ್ರ, ಪ್ರಜ್ಞಾಪನ ಪತ್ರಗಳಲ್ಲಿ, ಜಯಪತ್ರಕ್ಕೆ ಶಾಸನದ ನಂತರ ಎರಡನೆಯ ಮಹತ್ವದ ಸ್ಥಾನವನ್ನು ನೀಡಿದ್ದಾರೆ. ಆಧುನಿಕ ಪರಿಭಾಷೆಯಲ್ಲಿ ಹೇಳುವುದಾದರೆ, ಶಾಸನಗಳು ಶಾಸಕಾಂಗದ ಪಾತ್ರವನ್ನು, ಜಯಪತ್ರಗಳು ನ್ಯಾಯಾಂಗದ ಪಾತ್ರವನ್ನು, ಆಜ್ಞಾಪತ್ರಗಳು ಕಾರ್ಯಾಂಗದ ಪಾತ್ರವನ್ನು ನಿರ್ವಹಿಸುತ್ತಿದ್ದವು.

ಜಯಪತ್ರಗಳಿಗೆ ಧರ್ಮಶಾಸ್ತ್ರಕಾರರು ನೀಡಿರುವ ವ್ಯಾಖ್ಯಾನಗಳೆಲ್ಲವೂ, ಕಾನೂನಿನ, ನ್ಯಾಯದ ಪರಿಭಾಷೆಯಲ್ಲಿಯೇ ಮತ್ತು ಅವುಗಳ ಪರಿಪ್ರೇಕ್ಷ್ಯದಲ್ಲೇ ಇವೆ. "ಒಬ್ಬ ವ್ಯಕ್ತಿ ಸಾಕಷ್ಟು ಸಾಕ್ಷ್ಯ ಪುರಾವೆಗಳ ಮೂಲಕ ಚರ ಮತ್ತು ಸ್ಥಿರಾಸ್ತಿಯನ್ನು ಹೊಂದಿದ್ದಾಗ ಅಥವಾ ಆಸ್ತಿ ಪಾಲಿಗೆ ಸಂಬಂಧಿಸಿದ ವ್ಯಾಜ್ಯದಲ್ಲಿ ಜಯಶೀಲನಾದಾಗ ಅಥವಾ ತೀವ್ರ ಸ್ವರೂಪದ ಆಪಾದನೆಯಿಂದ ಖುಲಾಸೆಯಾದಾಗ, ಆ ಪ್ರಕರಣವನ್ನು ಖುದ್ದಾಗಿ ಅಥವಾ ಮುಖ್ಯ ನ್ಯಾಯಾಧೀಶರ ಮುಖಾಂತರ ವಿಚಾರಣೆ ನಡೆಸಿರಬಹುದಾದ ಅರಸನು ಆತನಿಗೆ ಡಿಕ್ರಿಯನ್ನು ನೀಡಬೇಕು. ಅದನ್ನೇ ಜಯಪತ್ರ ಎನ್ನುತ್ತಾರೆ".[೩] ಮತ್ತೊಬ್ಬ ಧರ್ಮಶಾಸ್ತ್ರಕಾರ ನಾರದನು ಸಹ ಜಯಪತ್ರವೆಂದರೆ "ಆಪಾದನೆ, ಉತ್ತರ, ವಿಚಾರಣೆಯ ಸಾರಾಂಶ, ಅವುಗಳಿಗೆ ನೀಡಿದ ಪರಿಗಣನೆ ಮತ್ತು ಅದರ ಮೇಲೆ ನೀಡಿದ ನಿರ್ಣಯ- ಈ ಅಂಶಗಳನ್ನು ಒಳಗೊಂಡ ದಸ್ತಾವೇಜು" ಎಂದು ಅಭಿಪ್ರಾಯ ಪಟ್ಟಿದ್ದಾನೆ.[೪]

ಜಯಪತ್ರಗಳಲ್ಲಿ ಅಡಕವಾಗಿರಬೇಕಾದ ಅಂಶಗಳ ಬಗ್ಗೆಯೂ ಸಹ ಧರ್ಮಶಾಸ್ತ್ರಗಳಲ್ಲಿ ವಿವರಣೆ ನೀಡಲಾಗಿದೆ. ವ್ಯಾಸನು ಜಯಪತ್ರವು ಈ ಮುಂದಿನ ಅಂಶಗಳನ್ನು ಒಳಗೊಂಡಿರಬೇಕೆಂದು ಸೂಚಿಸುತ್ತಾನೆ.

(i) ಆರೋಪದ ಮತ್ತು ಉತ್ತರದ ಸಂಕ್ಷಿಪ್ತ ಹೇಳಿಕೆ;

(ii) ಪಕ್ಷಕಾರರು ಮಂಡಿಸುವ ಸಾಕ್ಷ್ಯ;

(iii) ವಾದ ವಿಷಯದ ಬಗ್ಗೆ ಚರ್ಚೆ;

(iv) ಪಕ್ಷಕಾರರ ವಾದ-ಪ್ರತಿವಾದಗಳ (ಸಾಕ್ಷ್ಯಗಳ) ಪರ್ಯಾಲೋಚನೆ;

(v) ಪ್ರಕರಣಕ್ಕೆ ಅನ್ವಯವಾಗಬಹುದಾದ ಕಾನೂನುಗಳು;

(vi) ಸಭ್ಯರ (ನ್ಯಾಯಾಧೀಶರ) ಅಭಿಪ್ರಾಯಗಳು;

(vii) ಮುಖ್ಯ ನ್ಯಾಯಮೂರ್ತಿ ಅಥವಾ ಇತರ ನ್ಯಾಯಾಧೀಶರು ನೀಡಿದ ತೀರ್ಪು;

(viii) ತೀರ್ಪಿಗೆ ಹಾಕಿರುವ ರಾಜಮುದ್ರೆ.[೫]

ಪಿತಾಮಹನ ಪ್ರಕಾರ ನ್ಯಾಯಾಸ್ಥಾನದಲ್ಲಿ ಲೇಖಿಕ, ಗಣಕ, ಶಾಸ್ತ್ರ, ಸಾಧ್ಯಪಾಲ, ಸಭಾಸದರು, ಸುವರ್ಣ, ಅಗ್ನಿ ಮತ್ತು ಜಲ-ಮುಂತಾದ ಎಂಟು ಅಂಗಗಳಿರಬೇಕು.[೬] ಇದಲ್ಲದೆ, ಧರ್ಮಶಾಸ್ತ್ರಗಳು ಜಯಪತ್ರಗಳನ್ನು ಯಾರಿಗೆ ನಿಡಬೇಕು, ಯಾವ ಸಂದರ್ಭದಲ್ಲಿ ನೀಡಬೇಕು ಎಂಬ ಬಗ್ಗೆಯೂ ವಿವರಿಸಿವೆ. "ಜಯಶೀಲನಾದ ವ್ಯಕ್ತಿಗೆ ಅವನ ವಿಜಯಕ್ಕೆ ಸಾಕ್ಷಿಯಾಗಿ ಪ್ರಡ್ವಿವಾಕನ (ಮುಖ್ಯ ನ್ಯಾಯಮೂರ್ತಿ) ಸಹಿ ಮತ್ತು ರಾಜಮುದ್ರೆಯೊಂದಿಗೆ ಜಯಪತ್ರ ನೀಡಬೇಕೆಂದು" ವೃದ್ಧಹಾರೀತನು ಅಭಿಪ್ರಾಯಪಡುತ್ತಾನೆ.[೭] ಯಾಜ್ಞವಲ್ಕ್ಯನು "ಒಂದೇ ವಿಷಯ ಮತ್ತೆ ಮತ್ತೆ ಸಂಕ್ಷೋಭೆಗೊಳಗಾಗುವುದನ್ನು ತಪ್ಪಿಸಲು ಜಯಪತ್ರವನ್ನು ವಿಶೇಷವಾಗಿ ನೀಡಲಾಗುತ್ತದೆಂದು" ಅಭಿಪ್ರಾಯಪಡುತ್ತಾನೆ.[೮]

ಜಯಪತ್ರಗಳ ಮೂಲ ಮತ್ತು ಪ್ರಾಚೀನತೆ, ಲಕ್ಷಣ, ವಿಭಿನ್ನ ಕಲ್ಪನೆ-ಮಾದರಿಗಳ ಬಗ್ಗೆ ಜಯರೇಖೆಗಳ ಸಾಂಸ್ಕೃತಿಕ ಸಂಕಥನದ ತಾತ್ವಿಕ ಚರ್ಚೆ ಎಂಬ ಅಧ್ಯಾಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ. ಧರ್ಮಶಾಸ್ತ್ರಕಾರರು ಜಯಪತ್ರಗಳಿಗೆ ನೀಡಿರುವ ವ್ಯಾಖ್ಯಾನಗಳು ಎಲ್ಲವೂ ನ್ಯಾಯಿಕ ಪ್ರಕ್ರಿಯೆಯ ಅಂಗವಾಗಿಯೇ ಮೂಡಿಬಂದಿವೆ. ಎಂದರೆ, ನ್ಯಾಯಿಕ ವ್ಯವಹರಣೆಯ ಪ್ರಕ್ರಿಯೆಯಲ್ಲಿ ಗೆದ್ದಂತಹ ವ್ಯಕ್ತಿಗೆ ಸಭಾಸದರು ಮತ್ತು ರಾಜನು ನೀಡುತ್ತಿದ್ದ ನ್ಯಾಯದಾನದ ವಿವರಗಳನ್ನು ಒಳಗೊಂಡ ದಾಖಲೆ ಎಂಬುದು ಸ್ಪಷ್ಟವಾಗುತ್ತದೆ.

ನ್ಯಾಯ ವ್ಯವಹರಣೆಯ ಭಾಗವಾಗಿದ್ದ ಜಯರೇಖೆಗಳು, ಕಾಲಕ್ರಮೇಣ ಮತಪಂಥೀಯ ವಾಗ್ವಾದಗಳಲ್ಲಿ ವಿಜಯಿಯಾದ ವಿದ್ವಾಂಸರಿಗೆ ನೀಡುವಂತಹ ಪಾರಿತೋಷಕಗಳಾಗಿ ಪರಿವರ್ತನೆ ಗೊಂಡವು. ಶಾಸನಗಳಿಗಿಂತ ಸಾಹಿತ್ಯ ಕೃತಿಗಳಲ್ಲಿ ಜಯಪತ್ರಗಳ ಬಗ್ಗೆ ಹೆಚ್ಚಿನ ಉಲ್ಲೇಖಗಳು ಕಂಡುಬರುವುದು ಇದಕ್ಕೆ ನಿದರ್ಶನವಾಗಿದೆ. ಕರ್ನಾಟಕದಲ್ಲಿಯೂ ಆದಿಪುರಾಣ, ಪಂಪ ರಾಮಾಯಣ, ಸನತ್ಕುಮಾರ ಚರಿತೆ, ಜೀವಂಧರ ಚರಿತೆ, ಮುಂತಾದ ಹಲವಾರು ಕೃತಿಗಳಲ್ಲಿ ಜಯಪತ್ರ ಪಡೆದ ಬಗ್ಗೆ ಉಲ್ಲೇಖಗಳಿವೆ. ಹಲವಾರು ಸಂಗೀತ ಸಾಧಕರು, ಪಂಡಿತರಿಗೆ ಸಂಬಂಧಿಸಿದಂತಹ ಮೌಖಿಕ ಕಥಾನಕಗಳಲ್ಲಿ ಸಹ ಸಾಧಕರು ಬೇರೆ ಬೇರೆ ವಿದ್ವತ್ಪೂರ್ಣ ಸಭೆಗಳಲ್ಲಿ

ಭಾಗವಹಿಸಿ, ಎದುರಾಳಿಗಳನ್ನು ಮಣಿಸಿ ಜಯಪತ್ರಗಳನ್ನು ಪಡೆದಂತಹ ಉಲ್ಲೇಖಗಳು ಕಂಡುಬರುತ್ತವೆ.

ಕರ್ನಾಟಕದಲ್ಲಿ ಕಂಡುಬರುವ ಜಯಪತ್ರ, ಅವುಗಳ ಸಂವಾದಿ ರೂಪಗಳಾದ ಜಯರೇಖೆ, ಕಂಚಿಪತ್ರ, ಚೆಪ್ಪೋಡು, ಸೋತಪತ್ರಗಳು ಭಾರತೀಯ ನ್ಯಾಯಪದ್ಧತಿಯ ಹಿನ್ನೆಲೆಯಲ್ಲಿ ರೂಪುಗೊಂಡಿವೆಯೇ ಎಂಬುದನ್ನು ಕರ್ನಾಟಕದಲ್ಲಿ ಕಂಡುಬರುವ ಜಯರೇಖೆ ಶಾಸನಗಳ ಹಿನ್ನೆಲೆಯಲ್ಲಿ ಗಮನಿಸುವುದು ಅಗತ್ಯವಾಗಿದೆ.

ಕರ್ನಾಟಕದ ಬಹುತೇಕ ಜಯರೇಖೆಗಳೆಲ್ಲವೂ ಧರ್ಮದ ಔನ್ನತ್ಯತೆ, ಆರಾಧನಾ ನೆಲೆಗಳ ಮೇಲಿನ ಸಾರ್ವಭೌಮತೆ, ಕುಲವೃತ್ತಿಗಳ ಆರ್ಜನೆ, ಗ್ರಾಮದ ಕಮ್ಮಾರಿಕೆ, ದೇವರ ಪೂಜಾರಿಕೆ, ಶಾನುಭೋಗಾರಿಕೆ, ಗ್ರಾಮದ ಗೌಡಿಕೆ, ಕುಲಗೌಡಿಕೆ, ಗ್ರಾಮದ ಒಡೆತನ, ಮುಂತಾದವುಗಳ ಹಕ್ಕನ್ನು ಪಡೆದುಕೊಳ್ಳುವ ಸಲುವಾಗಿ ನಡೆದ ವ್ಯಾಜ್ಯಗಳಲ್ಲಿ ತೆಗೆದುಕೊಳ್ಳುವ ನ್ಯಾಯನಿರ್ಣಯವನ್ನು ಒಳಗೊಂಡಿವೆ.

ಇಂಥ ವ್ಯಾಜ್ಯಗಳು ಇಬ್ಬರು ವ್ಯಕ್ತಿ ಅಥವಾ ಎರಡು ಕುಲಗಳು ಅಥವಾ ಪಕ್ಷಗಳ ನಡುವೆ ನಡೆಯುತ್ತವೆ. ಮೊದಲಿಗೆ ನ್ಯಾಯ ತೀರ್ಮಾನ ಸ್ಥಳೀಯವಾಗಿಯೇ ನಡೆಯುತ್ತದೆ. ನ್ಯಾಯ ತೀರ್ಮಾನಕ್ಕೆ ಸಾಕ್ಷಿಗಳಾಗಿ ವಿವಿಧ ಕುಲದ ಪ್ರಧಾನರು/ಮುಖಂಡರೂ ಸೇರಿರುತ್ತಾರೆ. ಸಾಕ್ಷ್ಯ ನೀಡಿಕೆಯಲ್ಲಿ ಆಯಗಾರರ ಪಾತ್ರ ಪ್ರಧಾನವಾಗಿರುತ್ತದೆ. ವಾದಿ–ಪ್ರತಿವಾದಿಗಳು ತಮ್ಮ ವಾದಗಳನ್ನು ಮಂಡಿಸುವುದಕ್ಕೆ ಅವಕಾಶವಿರುತ್ತಿತ್ತು. ಇಂಥ ಸಂದರ್ಭದಲ್ಲಿ ಮುಖಂಡರು ವಿಷಯಗಳಿಗೆ ಸಂಬಂಧಿಸಿದಂತೆ ಧರ್ಮಶಾಸ್ತ್ರಗಳ ಮೊರೆವೊಕ್ಕು ಪ್ರಸಕ್ತ ವ್ಯಾಜ್ಯದ ಬಗ್ಗೆ ಈ ಗ್ರಂಥಗಳಲ್ಲಿ ಆಧಾರಗಳೇನಾದರೂ ಇವೆಯೇ ಎಂದು ಪರೀಕ್ಷಿಸುತ್ತಿದ್ದರು. ಇವಲ್ಲದೆ ಹಳೆಯ ಕಡತ, ಪತ್ರ, ಭಾಷಾಪತ್ರ, ಆಣೆಬಾರದ ಪತ್ರ, ಕಟ್ಟುತ್ತರಗಳನ್ನು ಸಾಕ್ಷ್ಯಾಧಾರಗಳನ್ನಾಗಿ ಪರಿಗಣಿಸಲಾಗುತ್ತಿತ್ತು.

ಈ ಎಲ್ಲ ಪ್ರಕ್ರಿಯೆಗಳ ನಂತರ ನ್ಯಾಯದಾನ ಮಾಡಲಾಗುತ್ತಿತ್ತು. ಆದರೆ ಎಷ್ಟೋ ಸಂದರ್ಭಗಳಲ್ಲಿ ವಾದಿ–ಪ್ರತಿವಾದಿಗಳು ಈ ನಿರ್ಣಯದಿಂದ ಸಂಪ್ರೀತರಾಗದಿದ್ದಲ್ಲಿ ರಾಜನಲ್ಲಿಗೆ ಮೇಲ್ಮನವಿ ಹೋಗುತ್ತಿದ್ದರು. ಅಲ್ಲಿಯೂ ಅವರಿಗೆ ಸಮಾಧಾನವಾಗದಿದ್ದಲ್ಲಿ ಕಂಚಿಗೆ ಹೋಗಿ ನ್ಯಾಯ ನಿರ್ಣಯ ಮಾಡಿಸಿಕೊಳ್ಳುತ್ತಿದ್ದರು.

ಕೆಲವೊಮ್ಮೆ ಗ್ರಾಮಮಟ್ಟದಲ್ಲಿ ಅಥವಾ ರಾಜನ ಸಮ್ಮುಖದಲ್ಲಿ ಆದ ನ್ಯಾಯವು ತೃಪ್ತಿಕರವಾಗಿಲ್ಲದಿದ್ದರೆ, ಸಾಕ್ಷಿಗಳು ಅಸಮರ್ಪಕವಾಗಿದ್ದಾಗ, ನ್ಯಾಯವನ್ನು ಮಾನುಷ ಕ್ರಿಯೆಯ ಮೂಲಕ ನಿರ್ಣಯಿಸಲು ಸಾಧ್ಯವಿಲ್ಲದಂಥಾ ಸಂದರ್ಭ ಎದುರಾದಾಗ ದಿವ್ಯದ ಮೂಲಕ ನ್ಯಾಯ ನಿರ್ಣಯ ಮಾಡಲಾಗುತ್ತಿತ್ತು.

ಯಾರು ಬೇಕಾದರೂ ವ್ಯಾಜ್ಯ ಹೂಡುವ ಹಾಗಿರಲಿಲ್ಲ. ಏಕೆಂದರೆ, ತಪ್ಪಿತಸ್ಥರೆಂದು ಕಂಡುಬಂದವರು ಸೋತಾಗ ತಪ್ಪು ದಂಡವನ್ನು ಕಡ್ಡಾಯವಾಗಿ ಕಟ್ಟಬೇಕಾಗಿತ್ತು. ಅಲ್ಲದೆ, ಕಂಚಿಯಂಥ ಕಡೆ ನ್ಯಾಯ ಮಾಡಿಸಬೇಕಾದರೆ ಇದಕ್ಕಾಗಿ ತಗಲುವ ವೆಚ್ಚವನ್ನು ಇತ್ತಂಡಗಳವರೂ ಕಡ್ಡಾಯವಾಗಿ ಭರಿಸಬೇಕಾಗಿತ್ತು.

ನ್ಯಾಯ ನಿರ್ಣಯ ನಡೆಯುತ್ತಿದ್ದ ಸ್ಥಳಗಳನ್ನು ಛಾವಡಿಗಳೆಂದು ಕರೆಯಲಾಗುತ್ತಿತ್ತು. ಚಿತ್ರದುರ್ಗದ ಜಯರೇಖೆಗಳಲ್ಲಿ ಕಟ್ಟೆಮನೆ, ಅರಮನೆ, ದೇವಾಲಯಗಳು, ನ್ಯಾಯಾಲಯಗಳಾಗಿ ಪರಿವರ್ತನೆಯಾಗಿರುವುದನ್ನು ಕಾಣಬಹುದು. ಇಲ್ಲಿ ಇತ್ಯರ್ಥವಾಗದ ವ್ಯಾಜ್ಯಗಳನ್ನು ಕಂಚಿಗೆ ಅಥವಾ ರಾಜನ ಆಸ್ಥಾನಕ್ಕೆ ಒಯ್ಯಲಾಗುತ್ತಿತ್ತು.

ಜಯರೇಖೆಗಳ ವ್ಯಾಜ್ಯ ನಿರ್ಣಯದಲ್ಲಿ ಕಂಚಿ ಪ್ರಮುಖ ಪಾತ್ರ ವಹಿಸುತ್ತದೆ. ಗ್ರಾಮಪಂಚಾಯತಿಯಲ್ಲಿ, ಚಾವಡಿಯಲ್ಲಿ ರಾಜರ ಸಮ್ಮುಖದಲ್ಲಿ ಆದಂತಹ ನ್ಯಾಯ ನಿರ್ಣಯವನ್ನು ಎಷ್ಟೋ ಸಾರಿ ನಿರಾಕರಿಸಿರುವುದುಂಟು. ಆದರೆ ಕಂಚಿಯಿಂದ ನೀಡಲ್ಪಟ್ಟ ನ್ಯಾಯವು ಅಂತಿಮವಾಗಿರುತ್ತದೆ ಮತ್ತು ಪ್ರಶ್ನಾತೀತವಾಗಿರುತ್ತದೆ. ಅಲ್ಲಿ ನೀಡಿದ ತೀರ್ಪನ್ನು ಯಾರೂ ಪ್ರಶ್ನಿಸುವಂತಿಲ್ಲ.

**೬.೧ ವ್ಯಾಜ್ಯಗಳು**

ಕರ್ನಾಟಕದಲ್ಲಿ ಕಂಡುಬರುವ ಜಯರೇಖೆಗಳ ಉದ್ದೇಶ, ಯಾವುದೋ ಒಂದು ವಿಷಯಕ್ಕೆ ಸಂಬಂಧಪಟ್ಟಂತೆ ವಿಜಯ ಸಾಧಿಸಿದ ವ್ಯಕ್ತಿಗಳಿಗೆ ನೀಡುವಂತಹ ಪತ್ರಗಳ ರೀತಿಯಲ್ಲಿಯೇ ಇವೆ. ಎಂದರೆ, ಅವುಗಳ ಆಂತ್ಯಂತಿಕ ಉದ್ದೇಶ ಗೆದ್ದ ವ್ಯಕ್ತಿಗೆ ಜಯರೇಖೆಗಳನ್ನು ನೀಡುವುದಾಗಿದ್ದರೂ, ಅವುಗಳಲ್ಲಿ ಅಂತರ್ನಿಹಿತವಾದ ವಿಷಯ ಕೇವಲ ನ್ಯಾಯವ್ಯವಸ್ಥೆಗೆ ಮಾತ್ರ ಸೀಮಿತವಾಗದೆ, ಕರ್ನಾಟಕದ ಮಧ್ಯಕಾಲೀನ ಸಮುದಾಯಗಳ ಬಗ್ಗೆ ಅಸಾಮಾನ್ಯ ವಿಷಯಗಳನ್ನು ಒಳಗೊಂಡಿವೆ.

ನನ್ನ ಅಧ್ಯಯನದ ಅವಧಿಯಲ್ಲಿ ಲಭ್ಯವಾದ ಶೃಂಗೇರಿ ಶಾಸನವು ಧರ್ಮಶಾಸ್ತ್ರಗಳಲ್ಲಿ ಹೇಳಲಾದಂತಹ ಎಲ್ಲಾ ಲಕ್ಷಣಗಳು ಒಳಗೊಂಡ ಏಕೈಕ ಶಾಸನವಾಗಿದೆ. ಆದರೆ, ಹೆಚ್ಚಿನ ಸಂಖ್ಯೆಯ ಜಯರೇಖೆಗಳನ್ನು ಸೀಮಾ ವಿವಾದ, ಆಸ್ತಿ ಹಕ್ಕುಗಳು, ದೇವರ ಪೂಜೆ, ಪೂಜಾರಿಕೆಯ ಹಕ್ಕು, ಕೆಲವೊಂದು ವೃತ್ತಿಗಳ ಮೇಲೆ ಸ್ವಾಮ್ಯತೆಗಾಗಿ ನಡೆದಂತಹ ಗೌಡಿಕೆ ಹಕ್ಕು, ತಳವಾರಿಕೆ ಹಕ್ಕು, ಮಾದಿಗತನದ ಕಾಣಾಜಿ ಹಕ್ಕು, ಮುಂತಾದ ಹಕ್ಕುಗಳಿಗಾಗಿ, ಕೆಲವು ಕುಲವಿಶಿಷ್ಟ ಚಹರೆಗಳ ಉಪಯೋಗಕ್ಕಾಗಿ ನಡೆದಂತಹ ಸಂಘರ್ಷ, ವ್ಯಾಜ್ಯ, ಕಲಹಗಳ ಹಿನ್ನೆಲೆಯಲ್ಲಿ ನೀಡಿರುವುದು ಮತ್ತು ಹೊರಡಿಸಿರುವುದು ಸ್ಪಷ್ಟವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಪ್ರಾತಿನಿಧಿಕವಾಗಿ ಕೆಲವು ಜಯರೇಖೆಗಳ ಚಿತ್ರಣವನ್ನು ನ್ಯಾಯವ್ಯವಸ್ಥೆಯ ಚೌಕಟ್ಟಿನೊಳಗೆ ಕಟ್ಟಿಕೊಡುವುದು ಸಮುಚಿತ ಕ್ರಮವೆನಿಸುತ್ತದೆ.

| | | | |
|---|---|---|---|
| (ಅ) | **ವ್ಯಾಜ್ಯ ಸಂಖ್ಯೆ ೧** | : | **ಏಕಾಂತದ ರಾಮಯ್ಯನ ಜಯಪತ್ರ ಶಾಸನ, ಕ್ರಿಶ. ಸುಮಾರು ೧೨೦೦** |
| | ವ್ಯಾಜ್ಯ ಕಾರಣ | : | ಧರ್ಮ ಸಂಘರ್ಷ (ಶಿವಸನ್ನಿಧಿಯಲ್ಲಿ ಅನ್ಯದೇವತಾ ಸ್ತುತಿ ಮಾಡಿದುದು) |
| | ವಾದಿ | : | ಸಂಕಗೌಡ |
| | ಪ್ರತಿವಾದಿ | : | ಏಕಾಂತದ ರಾಮಯ್ಯ |
| | ಪಂಥಾಹ್ವಾನ | : | ಜನರ ಸಮ್ಮುಖದಲ್ಲಿ ತಲೆಯನ್ನು ಕತ್ತರಿಸಿಕೊಂಡು ಏಳು ದಿನಗಳ ನಂತರ ಮರಳಿ ಬದುಕಿ ಬಂದರೆ ಜಿನನನ್ನು ಕಿತ್ತು ಶಿವನನನ್ನು ಪ್ರತಿಷ್ಠಾಪಿಸುವುದೆಂದು ಓಲೆಯನ್ನು ಬರೆದುಕೊಡಲಾಯಿತು. |
| | ವ್ಯಾಜ್ಯ ನಿರ್ಣಯದ ವಿಧಾನ | : | ಪವಾಡ ಮೆರೆದು ಏಳು ದಿನಗಳ ನಂತರ ಪ್ರತಿವಾದಿ ಬದುಕಿ ಬರುತ್ತಾನೆ. |
| | ತೀರ್ಪುಗಾರರು/ ಸಾಕ್ಷಿಗಳು | : | ಕಲಚೂರಿ ಬಿಜ್ಜಳ, ಕಲ್ಯಾಣ ಚಾಲುಕ್ಯ ಸೋಮೇಶ್ವರ, ಕದಂಬ ಕಾಮದೇವ |
| | ವ್ಯಾಜ್ಯ ನಿರ್ಣಯ (ತೀರ್ಪು) | : | ಜೈನರಿಗೆ ಪಂಥಾಹ್ವಾನ ನೀಡಿ ಪವಾಡ ಮೆರೆದು ಗೆದ್ದು ಬಂದ ರಾಮಯ್ಯನಿಗೆ ಜಯಪತ್ರ ನೀಡಿ ಸನ್ಮಾನಿಸಿ, ಆತ ನಿರ್ಮಿಸಿದ ಪರ್ವತೋಪಮವಾದ ದೇವಾಲಯಕ್ಕೆ ಗೋಗಾವೆ, ಅಬ್ಬಲೂರು, ಮಲ್ಲವಳ್ಳಿ ಗ್ರಾಮಗಳನ್ನು ದಾನ ಮಾಡಿದುದು.[೯] |
| (ಆ) | **ವ್ಯಾಜ್ಯ ಸಂಖ್ಯೆ ೨** | : | **ಲಕ್ಷ್ಮೇಶ್ವರದ ಜಯಪತ್ರ, ಕ್ರಿಶ. ೧೪೧೨** |
| | ವ್ಯಾಜ್ಯ ಕಾರಣ | : | ಭೂವಿವಾದ |
| | ವಾದಿ | : | ಶಂಖಬಸದಿಯ ಹೇಮದೇವಾಚಾರ್ಯ |
| | ಪ್ರತಿವಾದಿ | : | ಸೋಮೇಶ್ವರ ದೇವಾಲಯದ ಸ್ಥಾನಾಚಾರ್ಯ ಶಿವರಾಮಯ್ಯ |
| | ಪಂಥಾಹ್ವಾನ | : | ಇತ್ತಂಡಗಳು ಹೇಳಿದ ಹಾಗೆ ಕೇಳುವೆವೆಂದು ಹೇಳಿ ದಣಾಯಕರ ಹೆಸರಿನಲ್ಲಿ ಆಣೆ ವೋಲೆಗಳನ್ನು ಬರೆದುಕೊಡುತ್ತಾರೆ. |
| | ವ್ಯಾಜ್ಯ ನಿರ್ಣಯದ ವಿಧಾನ: | | ಪೂರ್ವದಲ್ಲಿ ನೀಡಿದ್ದ ಶಾಸನಗಳು ಮತ್ತು ಸಾಕ್ಷಿಗಳ ಆಧಾರದ ಮೇಲೆ |
| | ಸಾಕ್ಷಿಗಳು/ ತೀರ್ಪುಗಾರರು: | | ಹುಲಿಗೆರೆಯ ನಾಗಗೌಡ ಮುಂತಾದ ಗೌಡು ಪ್ರಜೆಗಳು ಮತ್ತು ಶಿವರಾಮಯ್ಯನ ಅಣ್ಣ ಗಂಗಣ್ಣ |
| | ನ್ಯಾಯಾಧೀಶರು | : | ನಾಗಣ್ಣ ದಂಡನಾಯಕ, ಅರಮನೆಯ ಪುರೋಹಿತ ಸಂಗಮದೇವ, ಇತರೆ ವಿದ್ವಾಂಸರು |
| | ತೀರ್ಪು | : | ನಾಗಗೌಡ ಮುಂತಾದ ಪ್ರಜೆಗಳು ಹೇಳಿದಂತೆ ನ್ಯಾಯ |

| | | | |
|---|---|---|---|
| | | | ಒಪ್ಪಿಕೊಳ್ಳುವರೆಂದು ಹೇಳಿ ಆಣೆಬಾರದ ಓಲೆಯನ್ನು ಹೇಮದೇವಾಚಾರ್ಯ ಕೊಟ್ಟರೆ, ಶಿವರಾಮದೇವರ ಅಣ್ಣ ಗಂಗಣ್ಣ ಕೊಡದೆ ಹಿಂದೆ ಸರಿಯುತ್ತಾನೆ. ಇದರಿಂದ ದಾಖಲೆ ಪ್ರಕಾರ ಶಂಖಬಸದಿಯ ಭೂಮಿಯನ್ನು ಶಿವರಾಮಯ್ಯ ಆಕ್ರಮಿಸಿಕೊಂಡಿದ್ದಾನೆಂದು ಹೇಳಿ ಹೇಮದೇವಾಚಾರ್ಯನಿಗೆ ಜಯಪತ್ರ ನೀಡಲಾಗುತ್ತದೆ.[೧೦] |
| (ಇ) | **ವ್ಯಾಜ್ಯ ಸಂಖ್ಯೆ ೩** | : | **ಆನೆಗೊಂದಿ ವಿಶ್ವಕರ್ಮ ಮಠದ ಜಯರೇಖೆ, ಹದಿನೆಂಟನೆಯ ಶತಮಾನ** |
| | ವ್ಯಾಜ್ಯ ಕಾರಣ | : | ಅಂತರವಳ್ಳಿಯ ನಿರಂಜನಯ್ಯ, ಮೂರು ಜಾವದಯ್ಯ ಎಂಬುವವರು ಆನೆಗೊಂದಿ ಪೀಠದ ಒಡೆತನ ತಮಗೆ ಸೇರಬೇಕು ಎಂದು ವಾದ ತೆಗೆದದ್ದು |
| | ವಾದಿ | : | ಸದ್ಯೋಜಾತ ಸ್ವಾಮಿ |
| | ಪ್ರತಿವಾದಿಗಳು | : | ಅಂತರವಳ್ಳಿಯ ನಿರಂಜನಯ್ಯ ಮತ್ತು ಮೂರು ಝಾವಿದೇವ |
| | ವ್ಯಾಜ್ಯ ನಿರ್ಣಯ ವಿಧಾನ | : | ದಾನಪತ್ರ ಶಾಸನಾದಿಗಳ ಆಧಾರದ ಮೇಲೆ |
| | ಸಾಕ್ಷಿಗಳು | : | ನರಸಿಂಹ ಭಾರತಿ, ರುದ್ರ ಕವಿಗಳು, ನಾರಾಯಣಾದ್ಯೋಪಕರರು, ವಾಸುದೇವ ದೀಕ್ಷಿತರು, ಗಂಗಾಧರ ಶಾಸ್ತ್ರಿಗಳು, ಗೋಪಾಲಕಿಶ್ನಾಚಾರ್ಯರು, ವೆಂಕಾವಧಾನಿಗಳು, ತಾತಾಚಾರ್ಯ, ಅಪ್ಪಾರಾವು, ತ್ರಿವಿಕ್ರಮ ಪಂಡಿತರು, ಇತ್ಯಾದಿ |
| | ತೀರ್ಪುಗಾರರು | : | ಅಶೇಷ ವಿದ್ವಜ್ಜನರು, ತ್ರಿಮತಸ್ಥ ಬ್ರಾಹ್ಮಸಭಾ ಸಮೂಹದವರು |
| | ತೀರ್ಪು | : | ಆನೆಗೊಂದಿ ಮಠ ತಮಗೆ ಸೇರಿದ್ದೆಂಬ ಬಗ್ಗೆ ಸನ್ನದು ಪತ್ರಗಳನ್ನು ಸಲ್ಲಿಸುತ್ತೇವೆಂದು ಹೇಳಿದ ಅಂತರವಳ್ಳಿಯವರು, ಅವುಗಳನ್ನು ಹಾಜರುಪಡಿಸಲು ವಿಫಲರಾಗಿ ಅಜ್ಞಾನದಿಂದ ಸದ್ಯೋಜಾತಸ್ವಾಮಿಗಳವರ ಸಂಗಾತ ಕಲಹ ಮಾಡಿದ್ದೇ ಹೊರತು ಸ್ವಬುದ್ಧಿಯಿಂದ ವ್ಯಾಜ್ಯ ಮಾಡಿದವರಲ್ಲ. ಕ್ಷುದ್ರ ಜನರ ಮಾತು ಕೇಳಿ ವ್ಯಾಜ್ಯ ಮಾಡಿದೆವೆಂದು ತಪ್ಪು ಒಪ್ಪಿಕೊಂಡು ಹಿಂದೆ ಬರೆದುಕೊಟ್ಟಿದ್ದ ೩೦೦ ಗದ್ಯಾಣಗಳನ್ನು ದಂಡವಾಗಿ ಸಂದಾಯ ಮಾಡುತ್ತಾರೆ. ಪೂರ್ವದಲ್ಲಿದ್ದಂತಹ ದಾನಪತ್ರ ಶಾಸನಾದಿಗಳನ್ನು ಪರಿಶೀಲಿಸಿ, ಸದ್ಯೋಜ್ಜಾತ ಸ್ವಾಮಿಗಳಿಗೆ ಜಯರೇಖೆ ನೀಡಲಾಗುತ್ತದೆ.[೧೧] |

| | | | |
|---|---|---|---|
| (ಈ) | **ವ್ಯಾಜ್ಯ ಸಂಖ್ಯೆ ೪** | : | **ಅಗಸರಿಗೂ ನಾಯಿಂದರಿಗೂ ನಡೆದ ವ್ಯಾಜ್ಯ ಕ್ರಿ.ಶ. ಸು. ೧೮೦೦** |
| | ವ್ಯಾಜ್ಯ ಕಾರಣ | : | ಬೂತಾಳಹಳ್ಳಿಯಲ್ಲಿ ವಾಲಗದವರು ಡೋಲಿನ ಮೇಲೆ ಬಿಳೀವಸ್ತ್ರ ಹಾಕಿಕೊಂಡಿದ್ದು |
| | ವಾದಿ | : | ಅಗಸರು |
| | ಪ್ರತಿವಾದಿಗಳು | : | ವಾಲಗದವರು |
| | ವ್ಯಾಜ್ಯ ನಿರ್ಣಯ ವಿಧಾನ | : | ಗ್ರಾಮಮಟ್ಟದಲ್ಲಿ ನಡೆದು ಅಲ್ಲಿನ ತೀರ್ಪನ್ನು ಒಪ್ಪದೇ ಕಂಚಿಯ ಏಕಾಂಬರೇಶ್ವರ ದೇವರ ಸನ್ನಿಧಾನದಲ್ಲಿ ತೀರ್ಮಾನ ಮಾಡಲಾಗುತ್ತದೆ. |
| | ಸಾಕ್ಷಿಗಳು | : | ಗುರುಗಳು, ದೇಶದವರು, ಹದಿನೆಂಟು ಪಣದವರು ಮತ್ತು ಕೃಷ್ಣದೇವರಾಯನ ಕಾಲದಲ್ಲಿ ರೀತಿ ರಿವಾಜುಗಳ ಬಗ್ಗೆ ಕಂಚಿಯಲ್ಲಿ ಏಕಾಂಬರೇಶ್ವರ ಸನ್ನಿಧಿಯಲ್ಲಿರುವ ಶಾಸನ. |
| | ತೀರ್ಪುಗಾರರು | : | ಸುಬ್ಬಾದೀಕ್ಷಿತರು, ಮಹಿನಿ ರಾಮಶಾಸ್ತ್ರಿಗಳು, ವರದೈಯ್ಯನವರು, ರಾಮಾಜೈಯ್ಯನವರು, ಕೊಂಡಾವಧಾನಿಗಳು, ದಿವಾನರು, ದೇಶದವರು, ಕಂಚಿ ಮುತ್ತ್ಯಾಲಯ್ಯ. |
| | ತೀರ್ಪು | : | ಚತುರ್ದಿಕ್ಕುಗಳಿಗೆ ಐವತ್ತಾರು ದೇಶಗಳಿಗೂ ವಾಲಗದವರು ಸರ್ವವಿಧದಲ್ಲಿ ಬೇಕಾಗಿರುವುದರಿಂದ, ಅವರಿಗೆ ಕೈದಾರೆ ಅಕ್ಕಿ, ಮಲ್ಲಿಗೆ ಹೂವು ಸಲ್ಲುತ್ತವೆ. ವಾಲಗದವರ ಮನೆಯಲ್ಲಿ ಮದುವೆಯಾದರೆ ಅಗಸರು ಬಟ್ಟೆ ಬರೆ ಮಡಿ ಮಾಡುವುದು, ಪಂಕ್ತಿ ಊಟಕ್ಕೆ ಬಟ್ಟೆ ಹಾಸುವುದು, ದೀವಟಿ ಹಿಡಿಯುವುದು, ನಡೆಮುಡಿ ಹಾಸುವುದು, ಅಗಸರ ಮನೆಯಲ್ಲಿ ಮದುವೆಯಾದರೆ, ವಾಲಗದವರು ಕಾಲುಗುರು ತೆಗೆಯುವುದು, ಪಂನ್ನೆ ತೆಗೆಯುವುದು, ಮೇಳ ಮಾಡುವುದೆಂದು ಹೇಳಿ ಅಗಸರು ಮಾಡಬಾರದ ವ್ಯವಹಾರ ಮಾಡಿದ್ದರಿಂದ ದಿವಾನರಿಗೆ, ದೇಶಕ್ಕು, ಕುಲಕ್ಕು ತಪ್ಪು ದಂಡ ನೀಡಿದರು.[೧೨] |
| | | | (ಇದೇ ಸ್ವರೂಪದ ಮತ್ತೊಂದು ಶಾಸನ ಕಾನಕಾನಹಳ್ಳಿಯಲ್ಲಿದ್ದು ಅದರಲ್ಲಿ ಮಡಿವಾಳರು ವಾಲಗಕ್ಕೆ ಮಲ್ಲಿಗೆ ಹೂ ಸುತ್ತಿದ್ದರಿಂದ ಜಗಳ ಪ್ರಾರಂಭವಾಗುತ್ತದೆ ಮತ್ತು ಅಲ್ಲಿ ಅಗಸರ ಪರವಾಗಿ ನ್ಯಾಯ ನೀಡಲಾಗುತ್ತಿದೆ)[೧೩]. |
| (ಉ) | **ವ್ಯಾಜ್ಯ ಸಂಖ್ಯೆ ೫** | : | **ದಾವಣಗೆರೆ ಗ್ರಾಮದ ಗೌಡಿಕೆ ಹಕ್ಕಿನ ವ್ಯಾಜ್ಯ,ಕ್ರಿ.ಶ. ೧೮೦೬** |
| | ವ್ಯಾಜ್ಯ ಕಾರಣ | : | ದಾವಣಗೆರೆ ಗ್ರಾಮದ ಗೌಡಿಕೆಯ ಮೇಲಿನ ಹಕ್ಕುಸ್ವಾಮ್ಯತೆಗಾಗಿ ವ್ಯಾಜ್ಯ ಪ್ರಾರಂಭ |

| | | | |
|---|---|---|---|
| | ವಾದಿಗಳು | : | ಸಾದರ ಮುದಿಯಣ್ಣ |
| | ಪ್ರತಿವಾದಿ | : | ಕುರುಬರ ನಾಗಯ್ಯ, ಗೊಲ್ಲರ ಗಿಡ್ಡಯ್ಯ |
| | ವ್ಯಾಜ್ಯ ನಿರ್ಣಯ ವಿಧಾನ | : | ದಿವ್ಯ (ಕಾದ ಹಾರೆ ಮಂಡಿ ಎತ್ತುವ ಮೂಲಕ) |
| | ಸಾಕ್ಷಿಗಳು | : | ಆಯಗಾರರು, ತಳವಾರ, ಕಮ್ಮಾರ, ಬಡಗಿ, ಅಕ್ಕಸಾಲಿ, ಇತರರು |
| | ತೀರ್ಪುಗಾರರು | : | ರಾಜಶ್ರೀಯರು, ದಳವಾಯಿಗಳು, ಕುಮಾರರು, ಅಳಿಯಂದಿರು, ಗುರಿಕಾರರು, ಸಮಾಜಿಕರು, ಊಳಿಗದವರು, ಮುಂತಾದ ಸಮಸ್ತರು |
| | ತೀರ್ಪು | : | ಕೆಲವು ಆಯಗಾರರು ಮುದಿಯಣ್ಣ ಮೂರು ತಲೆ ಆರಭ್ಯಗೌಡಿಕೆ ಮಾಡಿದವನು, ಕುರುಬರ, ಗೊಲ್ಲರನ್ನು ನಾವು ಅರಿಯವೆಂದು ಹೇಳಿದರೆ, ಇನ್ನು ಕೆಲವರು ಹನುಮಪ್ಪನಾಯಕನ ಅವಾಂತರದಲ್ಲಿ ದಾವಣಗೇರಿ ಗ್ರಾಮ ಹಾಳಾಗಿದ್ದಾಗ, ಕುರುಬರ ಕರಿಯಣ್ಣನ ಬೆದರಿಸಿ ಅಟ್ಟಿದನೆಂದು ನಮ್ಮ ಹಿರಿಯರು ಹೇಳುತ್ತಾರೆಂದು ಹೇಳಿದಾಗ 'ಆಯಗಾರ ಮಾತು ಎರಡು ಬಗೆ ಆಯಿತು ಎಂದು, ದಿವ್ಯ ಪರೀಕ್ಷೆಗೆ ಗುರಿಯಾಗುವಂತೆ ಹೇಳಿದಾಗ ಕುರುಬರ ಬೀರೇದೇವರ ಪೂಜಾರಿ ಕರಿಯಣ್ಣನ ಮಗ ನಾಗೈಯ್ಯ ಒಪ್ಪಿಕೊಂಡು, ಅದರಂತೆ, ಕಾದ ಉಕ್ಕಿನ ಗಟ್ಟಿಯನ್ನು ಕೈಯಲ್ಲಿ ಹಿಡಿದು ಏಳುಮಂಡಲ ದಾಟಿ ದೇವರಿಗೆ ಆರತಿ ಎತ್ತಿ ಗಟ್ಟಿ ಕೆಳಗೆ ಹಾಕಿ ವಿಜಯಿಯಾಗುತ್ತಾನೆ. ಅವನಿಗೆ ದಾವಣಗೆರೆಯ ಗೌಡಿಕೆಯ ವೀಳ್ಯ ನೀಡಿ ಶಾಸನ ಬರೆದುಕೊಡಲಾಗುತ್ತದೆ[೧೪]. |
| (ಊ) | **ವ್ಯಾಜ್ಯ ಸಂಖ್ಯೆ ೬** | : | **ಕೊಯಮತ್ತೂರು ವೈಶ್ಯರ ವ್ಯಾಜ್ಯ,ಕ್ರಿ.ಶ. ೧೮೨೩** |
| | ವ್ಯಾಜ್ಯ ಕಾರಣ | | ಗುರುವಿಶೆಟ್ಟಿ ಎಂಬುವವನನ್ನು ಟಿಪ್ಪು ಸುಲ್ತಾನರ ಕಾಲದಲ್ಲಿ ಬಲಾತ್ಕಾರದಿಂದ ಮತಾಂತರ ಮಾಡಿದ್ದರಿಂದ, ಇವನು ಮತಾಂತರವಾಗುವುದಕ್ಕೆ ಮೊದಲೇ ಹುಟ್ಟಿದ್ದ ಕಾವೇರಿ ಎಂಬ ಹೆಣ್ಣನ್ನು ಅವನ ಹೆಂಡತಿ ರಂಗಶಾಮಿಸೆಟ್ಟಿ ಎನ್ನುವವನಿಗೆ ಮದುವೆ ಮಾಡಿಕೊಟ್ಟಿದ್ದು. |
| | ವಾದಿ | | ಕೋಮಟಿಗರ ಸೆಟ್ಟಿ ವೆಂಕಟೇಶಯ್ಯ, ತಿಂಮಪ್ಪ, ನಂದ್ಯಪ್ಪ, ವೆಂಗಟರಮಣಯ್ಯ ಮುಂತಾದವರು |
| | ಪ್ರತಿವಾದಿಗಳು | : | ಅಪ್ಪಾಜಿ ಸೆಟ್ಟಿ ಮುಂತಾದವರು |
| | ವ್ಯಾಜ್ಯ ನಿರ್ಣಯ ವಿಧಾನ | : | ಧರ್ಮಶಾಸ್ತ್ರಗಳ ಆಧಾರದ ಮೇಲೆ |
| | ಸಾಕ್ಷಿಗಳು | : | ಮಠ ಮುದ್ರೆಯವರು, ಅಶೇಷ ಮಹಾಜನಗಳು |

| | | | |
|---|---|---|---|
| | ತೀರ್ಮಗಾರರು | : | ಶ್ರೀಮಠ |
| | ತೀರ್ಪು | : | ಪ್ರತಿವಾದಿಗಳಲ್ಲಿ ಸಾಕ್ಷಿ ಬಲ್ಲವಿಲ್ಲದ್ದರಿಂದ, ಧರ್ಮಶಾಸ್ತ್ರಗಳಲ್ಲಿ ಪತಿತಾವಸ್ಥೆಯಲ್ಲಿ ಹುಟ್ಟಿದ ಹೆಣ್ಣಿಗೂ ಕೂಡ ಪಾತಿತ್ಯವಿಲ್ಲ. ಸಂಸರ್ಗ ದೋಷ, ಪಾಪ ಮಾತ್ರ ಉಂಟು, ಆ ಪಾಪಕ್ಕೆ ಪ್ರಾಯಶ್ಚಿತ್ತಾ ಮಾಡಿದ ಮೇಲೆ ಪರಿಶುದ್ಧಳೇ ಸರಿ ಎಂಬುದಾಗಿ ಧರ್ಮಶಾಸ್ತ್ರ ವಚನಗಳು ಇರುವುದರಿಂದ ಈ ಕಾವೇರಿ ಎಂಬ ಹೆಣ್ಣು ಮಗಳು, ಇವಳ ಗಂಡ, ಇವಳ ಮಕ್ಕಳು ಪರಿಶುದ್ಧರೇ ಸರಿ ಎಂದು ಜಯರೇಖೆ ಬರೆದುಕೊಡಲಾಗುತ್ತದೆ[೧೫]. |
| | **ವ್ಯಾಜ್ಯ ಸಂ. ೭** | : | **ಗೋಸಂಗಿ (ಮಾದಿಗ) ಸಮುದಾಯ ಮತ್ತು ಚಲವಾದಿಗಳ ನಡುವೆ ನಡೆದ ವ್ಯಾಜ್ಯ** |
| | ವ್ಯಾಜ್ಯ ಕಾರಣ | : | ಜಾಂಬವ ಕುಲದವರಿಗೆ ಮದುವೆಯಲ್ಲಿ ಹನ್ನೆರಡು ಕಂಬ, ಹನ್ನೆರಡು ಕುಂಬ, ಜೋಡಿ ಪಂಜು, ಕೆಂಪು ಕುದುರೆ ವಾಹನ, ನಾಲ್ಕು ಮೂಲೆ ತಳಿ, ಬಾನತಿ ಚಪ್ಪರ ಸಲ್ಲುವುದಿಲ್ಲವೆಂದು ಚಲವಾದಿಗಳ ವಾದ. |
| | ವಾದಿ | : | ಹುಲ್ಲಪ್ಪನ ಮಗ ಮಾರಪ್ಪ |
| | ಪ್ರತಿವಾದಿಗಳು | : | ಚಲವಾದಿ ವೀರಬಸಯ್ಯ |
| | ವ್ಯಾಜ್ಯ ನಿರ್ಣಯ ವಿಧಾನ | : | ಧರ್ಮಶಾಸ್ತ್ರಗಳು, ಕಂಚಿಪತ್ರ ಮತ್ತು ಪೂರ್ವ ಕುಲಾಚಾರದ ಆಧಾರದ ಮೇಲೆ |
| | ಸಾಕ್ಷಿಗಳು | : | ಗೋಸಂಗಿ ಕುಲದವರು ಮತ್ತು ಚಲವಾದಿ ಕುಲದವರು |
| | ತೀರ್ಮಗಾರರು | : | ಕಂಚಿಯ ವಜ್ರ ಸಿಂಹಾಸನಾಧೀಶರಾದ ಮಹಾರಾಜ ಅಪ್ಪಾರಾಯರು, ನರಸಿಂಹರಾಯರು, ಕಂಚಿ ವರದಪ್ಪ ಗೌಡರು, ಪಂಚಾಂಗದ ಬ್ರಾಹ್ಮಣರು, ಕ್ಷತ್ರಿಯರು, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ, ಮುಂತಾದವರು. |
| | ವ್ಯಾಜ್ಯ ನಿರ್ಣಯ: | | ಸಭಾಸದರು, ಮಾದಿಗರು ಭೂಮಿಯ ಕರ್ತರೆಂದು ಬ್ರಹ್ಮಾಂಡಪುರಾಣ, ಶಿವಪುರಾಣಗಳಲ್ಲಿ, ಇತಿಹಾಸ, ಭಾರತ, ರಾಮಾಯಣದಲ್ಲಿ ಪಂಕ್ತಿ ರೂಪವಾಗಿ ಹೇಳಿರುವುದರಿಂದ ಮತ್ತು ತರ್ಕ, ವ್ಯಾಕರಣ, ಛಂದಸ್ಸು, ಅಲಂಕಾರ, ಮೀಮಾಂಸೆ, ನಿರುಕ್ತ, ಭೂಲೋಕಗಳಲ್ಲಿ ಮತ್ತು ೧೮ ಪುರಾಣಗಳಲ್ಲಿ ಚಲವಾದಿ ಮತ ಶ್ರೇಷ್ಠರೆಂಬ ದೃಷ್ಟಾಂತ ತಂದರೆ ನಾವು ಒಪ್ಪುತ್ತೇವೆಂದು ಹೇಳುತ್ತಾರೆ. ಚಲವಾದಿಗಳು ಪಂಪಾಕ್ಷೇತ್ರ ವಿಜಯನಗರದಲ್ಲಿ ನಯ ನ್ಯಾಯ ಪಣಕಟ್ಟಿಗೆ ಸೇರಿದ ಶೆಟ್ರು, ಮತದ |

| | | | |
|---|---|---|---|
| | | | ಹಿರಿಯರಲ್ಲಿ ಶಾಸ್ತ್ರ ಸಮ್ಮತ ದೃಷ್ಟಾಂತಗಳಿದ್ದರೆ ತರುತ್ತೇವೆಂದು ಹೋಗಿ, ತರಲು ಸಾಧ್ಯವಾಗದ್ದರಿಂದ, ಮಾತಂಗ ಮತಸ್ಥರಿಗೆ ಮದುವೆಗಳಲ್ಲಿ ಹನ್ನೆರಡು ಕಂಬ, ಹನ್ನೆರಡು ಕುಂಬ, ಜೋಡಿ ಪಂಜು, ಕರಿ ಕಂಬಳಿ ಗದ್ದುಗೆ, ನಾಲ್ಕು ಮೂಲೆ ತಳಿ, ಮಲ್ಲಿಗೆ ಹೂವಿನ ಹಾರ, ಮುಂತಾದ ಬಿರುದುಗಳ ಸಮೇತ ಗ್ರಾಮದೇವರ ಗುಡಿಯ ಬಳಿಯಿಂದ ಮೆರವಣಿಗೆ ಮಾಡಬಹುದೆಂದು ತೀರ್ಮಾನ ನೀಡಲಾಗುತ್ತದೆ.[೧೬] (ಈ ವಿವಾದವನ್ನು ನಿರೂಪಿಸುವಂತಹ ವ್ಯಾಜ್ಯಗಳು ಬಹುಪಠ್ಯೀಯ ನೆಲೆಗಳಲ್ಲಿ ಲಭ್ಯವಾಗುತ್ತವೆ). |

ವಿವಿಧ ಸಮುದಾಯ ಸಂಸ್ಕೃತಿಗಳಿಗೆ ಸೇರಿದ ಜನರ ನಡುವೆ ವ್ಯಕ್ತ ಹಾಗೂ ಅವ್ಯಕ್ತ ಕಾರಣಗಳಿಗಾಗಿ ನಡೆದ ಇಂಥ ವ್ಯಾಜ್ಯಗಳ ಬಗ್ಗೆ ಇನ್ನೂ ಹೆಚ್ಚಿನ ಜಯರೇಖೆಗಳಿದ್ದು, ಇಲ್ಲಿ ಪ್ರಾತಿನಿಧಿಕವಾಗಿ ಕೆಲವನ್ನು ಮಾತ್ರ ನೀಡಲಾಗಿದೆ.

ಯಾವುದೇ ಒಂದು ವಿವಾದ ಉದ್ಭವಿಸಿದರೆ, ಸ್ಥಳೀಯ ಗೌಡ, ಪ್ರಭುಗಳು, ಸಂಧಾನಗಳ ಮೂಲಕವೇ ಬಗೆಹರಿಸಲು ಪ್ರಯತ್ನಿಸುತ್ತಿದ್ದುದುಂಟು. ಸಂಧಾನಗಳು ವಿಫಲವಾದಾಗ ಅವು ಅಧಿಕೃತವಾಗಿ ಪಂಚಾಯತಿ, ಛಾವಡಿ, ಕಟ್ಟೆಮನೆ, ಮಠ, ದೇವಾಲಯ ಮತ್ತು ಪ್ರಭುತ್ವದ ಮುಂದೆ ಬರುತ್ತಿದ್ದವು. ಇಂಥ ವಿವಾದಗಳನ್ನು ಬಗೆಹರಿಸಲು ಒಂದು ನಿರ್ದಿಷ್ಟವಾದ ಮಾರ್ಗವಿಧಾನಗಳಿದ್ದವು.

ವಿವಾದಗಳನ್ನು ತೀರ್ಮಾನಿಸುವ ಬಗ್ಗೆ ಧರ್ಮಶಾಸ್ತ್ರಕಾರರು ಹಲವಾರು ಮಾರ್ಗಸೂಚಿಗಳನ್ನು ನೀಡಿದ್ದಾರೆ. ಕಾತ್ಯಾಯನನು ಒಂದೇ ದೇಶದ ಅಥವಾ ರಾಜಧಾನಿಯ, ಗೋಪಾಲಕರು, ಗ್ರಾಮದ, ನಗರ ಅಥವಾ ಹಳ್ಳಿಯ ನಿವಾಸಿಗಳ ನಡುವೆ ಏಳುವ ವಿವಾದಗಳಲ್ಲಿ ರೂಢಿಯಲ್ಲಿರುವ ಆಚಾರಗಳ ಆಧಾರದ ಮೇಲೆ ತೀರ್ಮಾನ ನೀಡಬೇಕು. ಆದರೆ, ಈ ಪ್ರದೇಶದ ನಿವಾಸಿಗಳಿಗೂ, ಇತರರಿಗೂ ಸಂಭವವಿರುವ ವಿವಾದಗಳಲ್ಲಿ ಪವಿತ್ರವಾದ ಶ್ರುತಿ, ಸ್ಮೃತಿಗ್ರಂಥಗಳಿಗನುಗುಣವಾಗಿ ತೀರ್ಮಾನವಾಗಬೇಕು. ಆದ್ದರಿಂದ ರಾಜನು ಶಾಸ್ತ್ರ ನಿಯಮಗಳಿಗನುಸಾರವಾಗಿ ಜನರ ವಿವಾದಗಳನ್ನು ನಿಶ್ಚಯಿಸಬೇಕು. ಶಾಸ್ತ್ರ ವಚನಗಳಿಲ್ಲದಿರುವಾಗ ದೇಶದ ಆಚಾರಕ್ಕನುಸಾರವಾಗಿ ನಡೆಯಬೇಕು ಎಂದು ಅಭಿಪ್ರಾಯಪಡುತ್ತಾನೆ.

ದೇಶವೊಂದರ ಜನರ ಅನುಮತಿಗನುಸಾರವಾಗಿ ಯಾವ ಯಾವ ವ್ಯವಸ್ಥೆಗಳು ನಿರ್ಧಾರವಾಗಿರುವುವೋ ಅವುಗಳನ್ನು ಬರವಣಿಗೆಗೊಳಪಡಿಸಿ ಅದರ ಮೇಲೆ ರಾಜಮುದ್ರೆ ಹಾಕಿ ಉಳಿಸಿಕೊಂಡು ಬರಬೇಕು. ಅಂಥ ಸಂಪ್ರದಾಯಗಳನ್ನು ಅವು ಶಾಸ್ತ್ರವಿಧಿಗಳೇ ಆಗಿದ್ದರೆ ಹೇಗೋ

ಹಾಗೆ ಕಟ್ಟುನಿಟ್ಟಾಗಿ ಕಾಪಾಡಿಕೊಂಡು ಬರಬೇಕು. ರಾಜನು ಅವುಗಳನ್ನೆಲ್ಲ ಕೂಲಂಕಷವಾಗಿ ಪರಿಶೀಲಿಸಿದ ಮೇಲೆ ವಿವಾದಗಳನ್ನು ಬಗೆಹರಿಸಬೇಕು ಎಂದು ಸೂಚಿಸುತ್ತಾನೆ.[೧೭]

ವಿಜ್ಞಾನೇಶ್ವರನು ರಾಜನ ಕರ್ತವ್ಯಗಳನ್ನು ಹೇಳುತ್ತಾ "ವಿಜಯಿಯಾದವನೊಬ್ಬನು ದೇಶವೊಂದನ್ನು ಗೆದ್ದು ಸ್ವಾಧೀನ ಮಾಡಿಕೊಂಡಾಗ ಅಲ್ಲಿ ತಲೆಮಾರಿನಿಂದ ತಲೆಮಾರಿಗೆ ಯಾವ ಯಾವ ಆಚಾರಗಳು, ಶಾಸನಗಳು, ನ್ಯಾಯಾಲಯ ವಿಧಾನಗಳು ಮತ್ತು ಕುಲಾಚಾರಗಳು ಪರಂಪರೆಯಾಗಿ ಬಂದಿವೆಯೋ ಅವುಗಳನ್ನು (ಅವು ಶಾಸ್ತ್ರಕ್ಕೆ ವಿರುದ್ಧವಾಗಿಲ್ಲದಿದ್ದರೆ) ಇದ್ದಂತೆಯೇ ಕಾಪಾಡಿಕೊಂಡು ಬರಬೇಕು" ಎಂದು ಹೇಳುತ್ತಾನೆ.[೧೮] ಬೃಹಸ್ಪತಿಯು ಸಹ "ಬಹಳ ಕಾಲದಿಂದ ರೂಢಿಯಲ್ಲಿರುವ ದೇಶಾಚಾರಗಳನ್ನು, ಕುಲಾಚಾರಗಳನ್ನು, ಜಾತಿಯ ಆಚಾರಗಳನ್ನು ರಾಜನು ಇದ್ದುದ್ದನ್ನು ಇದ್ದಂತೆಯೇ ಉಳಿಸಿಕೊಂಡು ಬರಬೇಕೆಂದು"[೧೯] ರಾಜನಿಗೆ ಬುದ್ಧಿಮಾತು ಹೇಳುತ್ತಾನೆ.

ದೇಶಾಚಾರಗಳು ಮತ್ತು ಕುಲಾಚಾರಗಳು ಎಂದರೇನು ಮತ್ತು ಅವುಗಳನ್ನು ಹೇಗೆ ಮತ್ತು ಯಾವಾಗ ಜಾರಿಗೊಳಿಸಬೇಕೆಂಬುದನ್ನು ಕಾತ್ಯಾಯನನು ವಿವರಿಸುತ್ತಾನೆ. "ದೇಶವೊಂದರಲ್ಲಿ ಯಾವುದು ದೀರ್ಘಕಾಲದಿಂದ ರೂಢಿಯಲ್ಲಿದೆಯೋ ಶ್ರುತಿಗೂ ಸ್ಮೃತಿಗೂ ವಿರೋಧವಾಗಿಲ್ಲವೋ ಅಂಥದು ದೇಶಾಚಾರವೆನಿಸುವುದು. ಕುಲವೊಂದರಲ್ಲಿ ಆ ಕುಲದವರೆಲ್ಲರೂ ವಂಶಪಾರಂಪರ್ಯ ವಾಗಿ ಸದಾಚಾರವೆಂದು ಅನುಸರಿಸುತ್ತಾ ಬಂದಿರುವುದು ಕುಲಾಚಾರ ವೆನಿಸುವುದು"[೨೦] ಎಂದರೆ, ಸ್ಥೂಲವಾಗಿ ಹೇಳುವುದಾದರೆ, ಎಲ್ಲ ಪ್ರದೇಶಗಳಿಗೂ ಸಾರ್ವತ್ರಿಕವಾಗಿ ಅನ್ವಯಿಸಬಹುದಾದ ಕಾನೂನು ಕಟ್ಟಳೆಗಳು ದೇಶಾಚಾರವಾದರೆ, ಕೆಲವೊಂದು ನಿರ್ದಿಷ್ಟ ಪ್ರದೇಶ, ಸಂಸ್ಕೃತಿ ಸಮುದಾಯಗಳಿಗೆ ಪರಿಮಿತವಾಗಿ ಅನ್ವಯಿಸಬಹುದಾದ ರೀತಿ ರಿವಾಜುಗಳು ಕುಲಾಚಾರ ವಾಗುತ್ತವೆ. ಹೀಗಾಗಿ ವಿವಾದಗಳನ್ನು ಪ್ರದೇಶ, ಪರಿಸರ, ಸಂದರ್ಭ, ಸಮುದಾಯಗಳಲ್ಲಿ ಪ್ರಚಲಿತದಲ್ಲಿರುವ ಆಚರಣೆಗಳು, ಪೂರ್ವಾಚಾರಗಳ ಆಧಾರದ ಮೇಲೆ ನಿರ್ಣಯಿಸಲಾಗುತ್ತಿತ್ತು.

ವಾದಿ, ಪ್ರತಿವಾದಿಗಳು ನ್ಯಾಯಾಧೀಶರ ಸ್ಥಾನದಲ್ಲಿರುವ ಸಭಾಸದರ ಸಮ್ಮುಖದಲ್ಲಿ ಸೂಕ್ತ ಸಾಕ್ಷ್ಯಗಳನ್ನು/ಸಾಕ್ಷಿಗಳನ್ನು ಮಂಡಿಸಬೇಕಾಗಿತ್ತು. ಅಲ್ಲದೆ, ಕೊನೆಯಲ್ಲಿ ಜಯಪತ್ರ ಪಡೆಯಬೇಕಾದರೆ, ಇಬ್ಬಣಗಳೂ ಅದಕ್ಕೂ ಮೊದಲು ತಾವು ಮುಂದೆ ನೀಡಲಾಗುವ ಎಲ್ಲ ತೀರ್ಮಾನಗಳಿಗೂ ಬದ್ಧರಾಗಿರುತ್ತೇವೆಂದು ಪಂಥಾಹ್ವಾನ ನೀಡಲು ಮುಚ್ಚಳಿಕೆ ಪತ್ರಗಳನ್ನು ಎಂದರೆ 'ಆಣೆ ಬಾರದ ಓಲೆ'[೨೧] ಯನ್ನು, 'ಪ್ರಮಾಣ ಓಲೆ'ಯನ್ನು,[೨೨] 'ಕಟ್ಟುತ್ತರ' ಪತ್ರಗಳನ್ನು[೨೩] 'ಒಪ್ಪಿಗೆ ಪತ್ರ'ಗಳನ್ನು[೨೪] ಬರೆದುಕೊಡಬೇಕಾಗಿತ್ತು. ನೈಜವಲ್ಲದ ಸುಳ್ಳು ದೂರುಗಳನ್ನು ತೆಗೆದುಕೊಂಡು ಹೋಗುವುದನ್ನು ತಪ್ಪಿಸುವ ಸಲುವಾಗಿ ದೂರುಗಳು ಸುಳ್ಳೆಂದು ಕಂಡುಬಂದರೆ ಅದಕ್ಕೆ ದಂಡವನ್ನು ವಿಧಿಸಲಾಗುತ್ತಿತ್ತು.[೨೫]

ನಂತರ, ವಾದಿ-ಪ್ರತಿವಾದಿಗಳು ಮಂಡಿಸಿದ ಕಾಗದಪತ್ರಗಳು, ಶಾಸನಗಳು, ಮುಂತಾದ ಸಾಕ್ಷ್ಯಗಳನ್ನು ಹಾಗೂ ಸಾಕ್ಷಿಗಳು ಹೇಳಿದ ಹೇಳಿಕೆಗಳನ್ನು ಪರಾಮರ್ಶಿಸಿ ಅಥವಾ ಧರ್ಮಶಾಸ್ತ್ರಗಳ ಹಿನ್ನೆಲೆಯಲ್ಲಿ ಅಂತಹ ವ್ಯಾಜ್ಯಗಳನ್ನು ಜಿಜ್ಞಾಸೆಗೊಳಪಡಿಸಿ ತರುವಾಯ ತೀರ್ಮಾನ ನೀಡಲಾಗುತ್ತಿತ್ತು. ಹೇಳಿಕೆಗಳು ಇಬ್ಬಗೆಯದಾಗಿದ್ದು, ತೀರ್ಮಾನ ಮಾಡುವುದು ಅಸಂಭವವೆನಿಸಿದಾಗ ದೈವದ ಮೊರೆ ಹೋಗಿ ದಿವ್ಯ ಪರೀಕ್ಷೆಗಳ ಮೂಲಕ ತೀರ್ಮಾನ ನೀಡಲಾಗುತ್ತಿತ್ತು. ಅಂತಿಮವಾಗಿ ಸೋತ ವ್ಯಕ್ತಿಗೆ ದಂಡ ವಿಧಿಸಿ, ಗೆದ್ದವರಿಗೆ ತಾಮ್ರಪತ್ರದಲ್ಲಿ ಜಯ ಘೋಷಿಸಿ ಜಯರೇಖೆಗಳನ್ನು ನೀಡಲಾಗುತ್ತಿತ್ತು.

ಕಾನೂನಿಗೆ ನಾನಾ ರೀತಿಯ ಪರಿಭಾಷೆಗಳಿದ್ದರೂ "ಸಂಕ್ಷೇಪವಾಗಿ ಹೇಳುವುದಾದರೆ, ಯಾವುದಾದರೂ ಸಮುದಾಯದ ಸದಸ್ಯರ ಲೌಕಿಕ ಜೀವನಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ನಿಯಂತ್ರಿಸುವ ನಿಯಮಗಳ ಸಮೂಹವೇ ಕಾನೂನು".[೨೬] ಅಸಂಖ್ಯ ಸಮುದಾಯಗಳ ನೆಲೆಯಾದ ಭಾರತದಲ್ಲಿ, ಹಾಗೆಯೇ ಕರ್ನಾಟಕದಲ್ಲಿನ ಕಲಹಗಳನ್ನು ಹಾಗೂ ನ್ಯಾಯ ನಿರ್ಣಯ ವಿಧಾನವನ್ನು ಗಮನಿಸಿದಾಗ, ಅವುಗಳನ್ನು ಏಕರೂಪದ ನ್ಯಾಯ ವ್ಯವಸ್ಥೆ ಚೌಕಟ್ಟಿನಲ್ಲಿ ನೀಡಲಾಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಹಾಗೆ ಏಕರೂಪದ ನ್ಯಾಯವ್ಯವಸ್ಥೆಯನ್ನು ನಿರೀಕ್ಷಿಸುವುದೂ ಅಸಂಭವವೆನಿಸುತ್ತದೆ. ಹಾಗಾಗಿ ನ್ಯಾಯ ನೀಡಿಕೆ ವಿಧಾನವೂ ಪ್ರದೇಶದಿಂದ ಪ್ರದೇಶಕ್ಕೆ, ಸಂಸ್ಕೃತಿಯಿಂದ, ಸಂಸ್ಕೃತಿಗೆ ಭಿನ್ನವಾಗಿರುತ್ತದೆ. ಸಮಾಜದ ಮೇಲ್ತುದಿಯಲ್ಲಿರುವ ಸಮುದಾಯಗಳಲ್ಲಿ ನ್ಯಾಯ ನೀಡಿಕೆ ವಿಧಾನ ಧರ್ಮಶಾಸ್ತ್ರಗಳ ಆಧಾರದ ಮೇಲೆ ನಡೆಯುತ್ತದೆ. ಆದರೆ ತಳಸಮುದಾಯಗಳು ಧರ್ಮಶಾಸ್ತ್ರಗಳನ್ನಾಧರಿಸಿದ ನ್ಯಾಯಪದ್ಧತಿಗೆ ಎಂದೂ ಮುಖಾಮುಖಿ ಯಾಗಿರುವುದಿಲ್ಲ. ಬದಲಿಗೆ ಪರ್ಯಾಯ ನ್ಯಾಯ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದು, ತಮ್ಮ ಸಮುದಾಯಗಳಲ್ಲಿ ಪಾರಂಪರಿಕವಾಗಿ ನಡೆದು ಬಂದ ನ್ಯಾಯವ್ಯವಸ್ಥೆಗೆ ಬದ್ಧವಾಗಿರುತ್ತವೆ. ಸಮುದಾಯಗಳ ಆಳದಲ್ಲಿ ಬೇರೂರಿದ ಕೆಲವು ಸಂಪ್ರದಾಯ/ಆಚರಣೆಗಳೇ ಕಾನೂನು-ಕಟ್ಟಳೆಗಳಾಗಿ ಅಂಗೀಕೃತಗೊಂಡಿರುತ್ತವೆ. ಆದ್ದರಿಂದ ಕರ್ನಾಟಕದ ವಿವಿಧ ಸಮುದಾಯಗಳ ನಡುವೆ ನಡೆದ ಕಲಹ, ವ್ಯಾಜ್ಯ, ಸಂಘರ್ಷಗಳ ಹಿನ್ನೆಲೆಯಲ್ಲಿ ಕರ್ನಾಟಕದ ಜಯರೇಖೆ ಶಾಸನಗಳಲ್ಲಿ ಬಿಂಬಿತವಾದ ನ್ಯಾಯ ವ್ಯವಸ್ಥೆಯ ವಿಭಿನ್ನ ನೆಲೆಗಳನ್ನು ಗ್ರಹಿಸುವುದು ಅಗತ್ಯ

### ೬.೨ ನ್ಯಾಯ ನೀಡಿಕೆಯ ಪ್ರಧಾನ ನೆಲೆಗಳು

ಜಯರೇಖೆಗಳ ಅಧ್ಯಯನದ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಪ್ರಧಾನವಾಗಿ ನ್ಯಾಯನೀಡಿಕೆ ವ್ಯವಸ್ಥೆಯನ್ನು ಮೂರು ನೆಲೆಗಳಲ್ಲಿ ಗುರುತಿಸಬಹುದಾಗಿದೆ:

(i) ದೇಶಾಚಾರ ಆಧಾರಿತ ನ್ಯಾಯ ಪ್ರಕ್ರಿಯೆ;

(ii) ಕುಲಾಚಾರ ಆಧಾರಿತ ನ್ಯಾಯ ಪ್ರಕ್ರಿಯೆ;
(iii) ಪ್ರಭುತ್ವ ನಿರ್ಣಯ ಆಧಾರಿತ ನ್ಯಾಯ ಪ್ರಕ್ರಿಯೆ;

### ೬.೨.೧ ದೇಶಾಚಾರ ಆಧಾರಿತ ನ್ಯಾಯ ಪ್ರಕ್ರಿಯೆ

ಒಂದು ವಿಶಾಲ ವ್ಯಾಪ್ತಿಯ ಪ್ರದೇಶದಲ್ಲಿರುವ ಎಲ್ಲರಿಗೂ ಅನ್ವಯವಾಗಬಹುದಾದ ಆಚಾರಗಳು–ಕಾನೂನುಗಳು ದೇಶಾಚಾರದ ವ್ಯಾಪ್ತಿಯಲ್ಲಿ ಬರುತ್ತವೆ. ದೇಶಾಚಾರ ಆಧರಿತ ನ್ಯಾಯವ್ಯವಸ್ಥೆಯಲ್ಲಿ ನ್ಯಾಯನೀಡಿಕೆ ಪ್ರಕ್ರಿಯೆ ಧರ್ಮಶಾಸ್ತ್ರಗಳನ್ನು ಆಧರಿಸಿರುತ್ತದೆ. ಆಯಾ ವಿವಾದಗಳಿಗೆ ಸಂಬಂಧಿಸಿದಂತೆ ಧರ್ಮಶಾಸ್ತ್ರಗಳಲ್ಲಿ ಹೇಳಿರುವ ಸೂತ್ರ/ಸೂಕ್ತಗಳ ಪ್ರಕಾರ ಸಂಬಂಧಪಟ್ಟ ವಿವಾದಗಳನ್ನು ಬಗೆಹರಿಸಲಾಗುತ್ತದೆ.

ಕರ್ನಾಟಕದಲ್ಲಿ ಸಂಪೂರ್ಣವಾಗಿ ಧರ್ಮಶಾಸ್ತ್ರಗಳನ್ನು ಆಧರಿಸಿ ನ್ಯಾಯತೀರ್ಮಾನ ಮಾಡಿದ ನಿದರ್ಶನಗಳು ಅತಿ ವಿರಳ. ಆದರೆ, ಇತರ ಸಾಕ್ಷಿ/ಸಾಕ್ಷ್ಯಗಳ ಜೊತೆಗೆ ಧರ್ಮಶಾಸ್ತ್ರಗಳನ್ನು ಪ್ರಾಮಾಣ್ಯವನ್ನಾಗಿ ತೆಗೆದುಕೊಂಡ ಉದಾಹರಣೆಗಳು ಅಲ್ಪಮಟ್ಟಿಗೆ ಕಂಡುಬರುತ್ತವೆ. ಸಮಾಜದ ಮೇಲ್‌ಸ್ತರದಲ್ಲಿರುವ ಕುಲ–ಮತಗಳಿಗೆ ಸೇರಿದ ಜನರ ತೀರ್ಮಾನಗಳಿಗೆ ಧರ್ಮಶಾಸ್ತ್ರಗಳನ್ನೇ ಆಧರಿಸಿ ನ್ಯಾಯ ನೀಡಲಾಗಿದೆ.

ಪುಲಿಗೆರೆಯಲ್ಲಿ ಶಂಖಬಸ್ತಿಯ ಶಾಂತಿನಾಥ ತೀರ್ಥಂಕರ ಉತ್ಸವದಲ್ಲಿ ಸೋಮೇಶ್ವರ ದೇವರಿಗೆ ಸಲ್ಲುವ ಅಷ್ಟದಿಕ್ಪಾಲಾದಿಗಳನ್ನು ಧ್ವಜಪತಾಕಾದಿಗಳನ್ನು ಬಳಸಿದ ಬಗ್ಗೆ ವಿವಾದ ಉದ್ಭವವಾಗುತ್ತದೆ. ಈ ವಿಷಯವನ್ನು ಧರ್ಮಗ್ರಂಥಗಳ ಆಧಾರದ ಮೇಲೆ ನಿರ್ಣಯ, ವಿಚಾರಣೆ ಮಾಡಿ ವೇದ, ಶಾಸ್ತ್ರ, ಪುರಾಣ, ಆಗಮಾದಿಗಳಲ್ಲಿ ಕಾಲತ್ರಯಗಳಲ್ಲಿ ಜಿನಸಮಯಕ್ಕೆ ಅಷ್ಟದಿಕ್ಪಾಲಾದಿಗಳು, ಧ್ವಜಪತಾಕಾದಿಗಳು ಸಲ್ಲುವುದಿಲ್ಲವೆಂದು ಹೇಳಿ ಶಂಖಬಸದಿಯ ಹೇಮದೇವಣಾಚಾರ್ಯರು, ಸಂಖಣಾಚಾರ್ಯರು ಸೋಮೇಶ್ವರ ದೇವಾಲಯದ ಶಿವರಾಮಯ್ಯಗಳಿಗೆ ಜಯಪತ್ರ ಬರೆದುಕೊಡುತ್ತಾರೆ.[೨೬] ಈ ಪ್ರಕರಣದಲ್ಲಿ ಇತರೆ ಸಾಕ್ಷಿಗಳನ್ನು ಪರಿಗಣನೆಗೆ ತೆಗೆದುಕೊಳ್ಳದೆ, ಶಾಸ್ತ್ರಗಳ ಪ್ರಕಾರ ವೈದಿಕ ಧರ್ಮದ ಅಷ್ಟದಿಕ್ಪಾಲಾದಿಗಳು ಮತ್ತು ಧ್ವಜಪತಾಕಾದಿಗಳನ್ನು ಜೈನಧರ್ಮದಲ್ಲಿ ಬಳಸುವುದು ಸರಿಯೇ? ತಪ್ಪೇ? ಎಂದು ಪರಾಮರ್ಶಿಸಿ ತೀರ್ಪು ನೀಡಲಾಗಿದೆ. ವ್ಯಾಪಾರ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ಕಲಹಗಳು ಉಂಟಾದರೂ ಸಹ ಧರ್ಮಶಾಸ್ತ್ರಗಳನ್ನು ಪ್ರಮಾಣ್ಯವಾಗಿಟ್ಟುಕೊಂಡು ಅದರ ಪ್ರಕಾರ ನಡೆಯುವುದಾಗಿ ಹೇಳಲಾಗುತ್ತಿತ್ತು. ಬಾರಕೂರಿನ ಚೌಳಿಯಗೇರಿ ಮತ್ತು ಮೂರುಕೇರಿ ವ್ಯಾಪಾರಿಗಳ ನಡುವೆ ಸಕ್ಕರೆಯ ವಿಷಯಕ್ಕಾಗಿ ಮನಸ್ತಾಪವಾಗಿ ವ್ಯವಹಾರ ಕೆಟ್ಟು ಹೋಗಿರುವಾಗ ದೇವರಾಯನ ಮಹಾಪ್ರಧಾನಿ ಚಂಡರಸವೊಡೆಯ ಎರಡು ಕೇರಿಯವರನ್ನು ಕರೆದು ಸಂಧಾನ ಮಾಡಿ ಸುಲಲಿತ ವ್ಯಾಪಾರ ನಿರ್ವಹಣೆಗೆ ಕೆಲವು ಕಟ್ಟಳೆಗಳನ್ನು ರೂಪಿಸುತ್ತಾನೆ. ನಂತರ ಇನ್ನು ಮುಂದೆ ನಮ್ಮ ಎರಡೂ

ಕೇರಿಯಲ್ಲೂ ನಂಮೊಳಗೆ ನಾವು ಸಂವಾದ ಹುಟ್ಟಿದರೆ ಸಮಯ ಸಂಕೇತದ ಮೇಲೆ ಬಗೆಹರಿಸಿಕೊಳ್ಳುತ್ತೇವೆ. ಕೈದುವ ಹಿಡಿಯುವುದಿಲ್ಲವೆಂದು ತೀರ್ಮಾನಕ್ಕೆ ಬಂದು ಶಾಸನ ಬರೆಸುತ್ತಾರೆ.೨೮

ಧರ್ಮಶಾಸ್ತ್ರಗಳನ್ನೇ ಸಂಪೂರ್ಣವಾಗಿ ಆಧರಿಸಿ ನೀಡಿದಂತಹ ಜಯರೇಖೆ ಶೃಂಗೇರಿ ಮಠದ ಜಯರೇಖೆ. ಕಾವೇರಿ ಎಂಬ ಹೆಣ್ಣುಮಗಳ ಪಾತಿತ್ಯಕ್ಕೆ ಸಂಬಂಧಪಟ್ಟ ಈ ವ್ಯಾಜ್ಯದ ವ್ಯಾಪ್ತಿ ಕೊಯಮತ್ತೂರು, ಮೈಸೂರುಗಳಾಚೆ ಶೃಂಗೇರಿಯವರೆಗೂ ವಿಸ್ತರಿಸಿದ್ದರಿಂದ, ಶೃಂಗೇರಿ ಮಠದ ಪ್ರವೇಶ ಅನಿವಾರ್ಯವಾಯಿತು. ಸುಲ್ತಾನರ ಕಾಲದಲ್ಲಿ ಗುರುವಿಶೆಟ್ಟಿ ಎಂಬುವವನು ಬಲಾತ್ಕಾರದಿಂದ ಮತಾಂತರಗೊಂಡಿರುತ್ತಾನೆ. ಅವನು ಶ್ರೀರಂಗಪಟ್ಟಣಕ್ಕೆ ಬಂದ ಮೇಲೆ ತನ್ನ ಹೆಂಡತಿಯನ್ನು ಕರೆದುಕೊಂಡು ಬರುತ್ತಾನೆ. ಕೆಲದಿನಗಳ ನಂತರ ಅವನು ಮೃತನಾದ ತರುವಾಯ ಆತನ ಹೆಂಡತಿ ಕೊಯಮತ್ತೂರಿಗೆ ಹೋಗಿ, ತನ್ನ ಗಂಡ ಮತಾಂತರವಾಗುವುದಕ್ಕೆ ಮೊದಲೇ ಹುಟ್ಟಿದ್ದ ಕಾವೇರಿ ಎಂಬ ಹೆಣ್ಣು ಮಗಳನ್ನು ರಂಗಶಾಮಿಸೆಟ್ಟಿ ಎಂಬುವವನಿಗೆ ಮದುವೆ ಮಾಡಿಕೊಡುತ್ತಾಳೆ. ಇದರಿಂದ ಸ್ವಜಾತಿ ಜನರಲ್ಲಿ ಎರಡು ಬಣಗಳು ಏರ್ಪಟ್ಟು ಚೆಲಾ (ಮತಾಂತರ) ಸಂಬಂಧದ ಹೆಣ್ಣನ್ನು ಪರಿಗ್ರಹಿಸಬಹುದೋ, ಪರಿಗ್ರಹಿಸಬಾರದೋ ಎಂಬ ಜಿಜ್ಞಾಸೆಯೊಂದಿಗೆ ಅಲ್ಲಿ ಇದ್ದ ಅಶೇಷ ಮಹಾಜನಗಳನ್ನು ಸೇರಿಸಿ ವಿಚಾರಿಸಿ ಧರ್ಮಶಾಸ್ತ್ರಗಳನ್ನು ಒಡ್ಡಿ ಈ ಹೆಣ್ಣಿಗೆ ಚೆಲಾದವರ ಸಂಸರ್ಗ ದೋಷವೇ ಹೊರತು, ಪಾತಿತ್ಯವಿಲ್ಲವೆಂದು ಹೇಳಿ, ಶಾಸ್ತ್ರೋಕ್ತ ಪ್ರಕಾರ ಸಂಸರ್ಗ ಪ್ರಾಯಶ್ಚಿತ್ತಗಳನ್ನು ಮಾಡಿಸಿ ನಡೆದ ವಿದ್ಯಾಮಾನಗಳನ್ನು ಶೃಂಗೇರಿ ಮಠಕ್ಕೆ ವಿಜ್ಞಾಪನೆ ಮಾಡಿಕೊಳ್ಳುತ್ತಾರೆ.

ಶೃಂಗೇರಿ ಮಠದವರು ಪರಾಶರ, ಮಾಧವೀಯ, ವಿಜ್ಞಾನೇಶ್ವರೀಯ, ಅಪಸ್ತಂಭ ಮುಂತಾದ ಧರ್ಮಶಾಸ್ತ್ರಗಳನ್ನೆಲ್ಲ ಪರಿಶೀಲಿಸಿ ಆ ಹೆಣ್ಣುಮಗಳಿಗೆ ಪಾತಿತ್ಯದೋಷವಿಲ್ಲ, ಸಂಸರ್ಗದೋಷ ಮಾತ್ರ ಉಂಟು. ಇದಕ್ಕೆ ಪ್ರಾಯಶ್ಚಿತ್ತಗಳಿಂದ ಪರಿಶುದ್ಧತೆ ಉಂಟು ಎಂದು ಧರ್ಮಶಾಸ್ತ್ರಗಳಲ್ಲಿ ಹೇಳಿರುವುದರಿಂದ ನೀವು ಯಥಾಶಾಸ್ತ್ರೀಯವಾಗಿ ಪ್ರಾಯಶ್ಚಿತ್ತಾದಿಗಳನ್ನು ಮಾಡಿಸಿ ಇದಕ್ಕೆ ಯಾರು ವ್ಯತಿರಿಕ್ತವಾಗಿ ನಡೆದರೂ, ಅವರು ಮಠಮುದ್ರಾ ಜ್ಞಾಪಕಕ್ಕೆ ಬಹಿಷ್ಕೃತರೇ ಸರಿ ಎಂದು ಉತ್ತರ ಬರೆದು ಕಳಿಸುತ್ತಾರೆ.

ಕೆಲವು ದಿನಗಳ ತರುವಾಯ ಕಾವೇರಿ ಮೈಸೂರು, ಶ್ರೀರಂಗಪಟ್ಟಣಕ್ಕೆ ಬಂದು ಪುನಃ, ಕೊಯಮತ್ತೂರಿಗೆ ಹೋದ ತರುವಾಯ ಮೈಸೂರು, ಶ್ರೀರಂಗಪಟ್ಟಣದ ಕೆಲವು ವೈಶ್ಯರು ಕಾವೇರಿಯನ್ನು ಪರಿಗ್ರಹಿಸಬಹುದು ಎಂದರೆ ಪ್ರತಿವಾದಿಗಳು ಪರಿಗ್ರಹಿಸಬಾರದೆಂದು ಪರಸ್ಪರ ಕದನ ಮಾಡಿಕೊಂಡು ದೊರೆಗಳಿಗೆ ತಿಳಿಸಿದ್ದರಿಂದ, ಅವರು ಧರ್ಮಶಾಸ್ತ್ರ ಪ್ರಕಾರ ಈ ವ್ಯವಹಾರ ನಿರ್ಣಯಿಸಿ ಎಂದು ಮಠಕ್ಕೆ ತಿಳಿಸಿದ್ದರಿಂದ ಪ್ರತಿವಾದಿಗಳನ್ನೆಲ್ಲ ಕರೆಸಿ ಕೇಳಿದಾಗ, ಅವರು ಶ್ರೀಮಠದಲ್ಲಿ ಈ ಹಿಂದೆ ಅಶಾಸ್ತ್ರೀಯವಾಗಿ, ಅಸಂಗತವಾಗಿ ನಿರ್ಣಯ ನೀಡಿ ಸಂಸರ್ಗ ದೋಷ, ಪ್ರಾಯಶ್ಚಿತ್ತ ಮಾಡಿಸಿದ್ದಾರೆ. ಆದರೆ ಆ ಹೆಣ್ಣು ಮಗಳಿಗೆ ಮದ್ಯ, ಮಾಂಸ ಭಕ್ಷಣೆ ಉಂಟು. ಅವಳು ಪತಿತಳೆ ಹೊರತು ಸಂಸರ್ಗ

ಅಲ್ಲವಾದ್ದರಿಂದ, ಪತಿತಳಿಗೆ ಧರ್ಮಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತವಿಲ್ಲ. ಪಾತಿತ್ಯವನ್ನು ಈ ಹೆಣ್ಣುಮಗಳು ಮಾಡಿದ್ದಕ್ಕೆ ನಾವು 'ಸಭಾ ಸಮ್ಮತ'ವಾದ ಸಾಕ್ಷಿಗಳನ್ನು ತಂದುಕೊಡುತ್ತೇವೆಂದು ಹೇಳಿ, ಸಾಕ್ಷಿಗಳನ್ನು ಕರೆತರಲಿಲ್ಲ. ಪ್ರತಿವಾದಿಗಳಲ್ಲಿ ಸಾಕ್ಷಿ ಬಲವಿಲ್ಲದ್ದರಿಂದಾ ಧರ್ಮಶಾಸ್ತ್ರಗಳಲ್ಲಿ ಪತಿತಾವಸ್ಥೆಯಲ್ಲಿ ಹುಟ್ಟಿದ ಹೆಣ್ಣಿಗೂ ಕೂಡಾ ಪಾತಿತ್ಯವಿಲ್ಲ. ಸಂಸರ್ಗದೋಷ ಪಾಪ ಮಾತ್ರ ಉಂಟು. ಆ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿದ ಮೇಲೆ ಪರಿಶುದ್ಧಳೇ ಸರಿ ಎಂದು ಧರ್ಮಶಾಸ್ತ್ರ ವಚನಗಳು ಇರುವುದರಿಂದಲೂ, ಆಕೆಗೆ ಪ್ರಾಯಶ್ಚಿತ್ತವಾದ್ದರಿಂದಲೂ ಈ ಕಾವೇರಿ ಎಂಬ ಹೆಣ್ಣು ಮಗಳು, ಇವಳ ಗಂಡ. ಇವಳ ಮಕ್ಕಳು ಪರಿಶುದ್ಧಳೇ ಸರಿ ಎಂದು ಜಯರೇಖೆ ಬರೆದುಕೊಡಲಾಗುತ್ತದೆ.

ಪ್ರಸ್ತುತ ಜಯರೇಖೆ ಶಾಸನದಲ್ಲಿ ಈ ನ್ಯಾಯ ನಿರ್ಣಯಕ್ಕೆ ಪೂರಕವಾಗಿ ಪರಾಶರ, ಮಾಧವೀಯ, ಯಜ್ಞಾವಲ್ಕ್ಯ, ಹಾರಿತಿ, ಬೋಧಾಯನ, ವಶಿಷ್ಠ, ಆಪಸ್ತಂಭ, ವಿಜ್ಞಾನೇಶ್ವರೀಯ, ಮುಂತಾದವರ ಧರ್ಮಶಾಸ್ತ್ರಗಳ ಸಂಸ್ಕೃತ ಭಾಗಗಳನ್ನೆಲ್ಲ ಯಥಾವತ್ತಾಗಿ ಸುದೀರ್ಘವಾಗಿ ನಮೂದಿಸಿ, ಜಯರೇಖೆ ಬರೆದುಕೊಟ್ಟು ಕೊನೆಯಲ್ಲಿ ಸರ್ಕಾರದ ದಸ್ಕತ್ತು, ಮೊಹರು, ಉಪಸ್ಥಿತರಾದ ವಿದ್ವಾಂಸರುಗಳ ಸ್ವಹಸ್ತ ಸಹಿತ ಜಯರೇಖೆ ಬರೆದುಕೊಡಲಾಗಿದೆ.

ವಿಷಯ ಇಷ್ಟಕ್ಕೆ ನಿಲ್ಲುವುದಿಲ್ಲ. ಭಾಸ್ಕರಪಂತ ನಂಜಪ್ಪ ಎಂಬುವವನು ಮತ್ತೆ ಇದರ ಬಗ್ಗೆ ತಕರಾರು ತೆಗೆದದ್ದರಿಂದ, ಸಕಲ ದೇಶಗಳಲ್ಲಿಯು ಈ ಆಚಾರ ನಡೆದು ಬರುವುದರಿಂದಾ ವಿವಾದಾಸ್ಪದವೇನೂ ಇಲ್ಲ ಎಂದು ಹೇಳಿ, ಧರ್ಮಶಾಸ್ತ್ರೋಲ್ಲಂಘನೆ, ಶ್ರೀಮಠ ಮುದ್ರೋಲ್ಲಂಘನೆ, ಸಭಾ ಧಿಕ್ಕಾರವನ್ನು ಮಾಡಿದಂತಹ ಭಾಸ್ಕರಪಂತ ನಂಜಪ್ಪನಿಗೆ ಸನ್ನಿಧಾನಕ್ಕೆ ಬಂದು ತೀರ್ಥಪ್ರಸಾದ ಪರಿಗ್ರಹ ಮಾಡಿ ಅಪ್ಪಣೆ ತೆಗೆದುಕೊಂಡು ಬರುವವರೆಗೆ ನಿಮ್ಮಲ್ಲಿ ಆಗುವ ವಿವಾಹ, ಉಪನಯನಾದಿ ಶುಭ ಕಾರ್ಯಕ್ರಮಗಳಿಗೆ ನಂಜಪ್ಪನನ್ನು ಬಿಟ್ಟು ಪುರೋಹಿತರ ಮುಖಾಂತರ ನಡೆದುಕೊಳ್ಳಿ ಎಂದು ಅಪ್ಪಣೆ ನೀಡಲಾಗುತ್ತದೆ. ಈ ಜಯರೇಖೆಯಲ್ಲಿ ನ್ಯಾಯ ಧರ್ಮಶಾಸ್ತ್ರಗಳ ಆಧಾರದ ಮೇಲೆಯೇ ನಿರ್ಣಯವಾಗುತ್ತದೆ.

ಧರ್ಮಶಾಸ್ತ್ರಕಾರರು ಕಾವೇರಿಗೆ ಸಂಸರ್ಗ ದೋಷವೇ ಹೊರತು ಪಾತಿತ್ಯವಿಲ್ಲವೆಂದು ತೀರ್ಮಾನಿಸುತ್ತಾರೆ. ಧರ್ಮಶಾಸ್ತ್ರಗಳು "ಪತಿತನೊಡನೆ ಸಂಸರ್ಗ ಬೆಳೆಸಿದರೆ, ಆ ರೀತಿ ಸಂಪರ್ಕ ಬೆಳಸುವವನೂ ಸಧ್ಯಃ ಪತಿತನಾಗುವನೆಂದು ಅರ್ಥವಲ್ಲ, ಸಲ್ಲಾಪ, ಸ್ಪರ್ಷ, ಅದೇ ಗಾಳಿ ಸೇವಿಸುವುದು, ಒಂದೇ ವಾಹನದಲ್ಲಿ ಪ್ರಯಾಣ, ಒಂದೇ ಆಸನ ಮತ್ತು ಹಾಸಿಗೆಯಲ್ಲಿರುವುದು, ಸಹಪಂಕ್ತಿ ಭೋಜನ, ಪತಿತನಿಗೆ ಯಾಚಕನಾಗುವುದು ಅಥವಾ ವೇದ ಕಲಿಸುವುದು ಅಥವಾ ಅವನೊಡನೆ ವಿವಾಹ ಸಂಬಂಧ ಬೆಳೆಸುವುದು"– ಇವು ಒಂಭತ್ತು ಪತಿತಗಳೆಂದು ಹೇಳುತ್ತಾವೆ.[೨೯] ಪರಾಶರನು "ಪತಿತನೊಡನೆ ಮಾತನಾಡುವುದು, ಅವನನ್ನು ಸ್ಪರ್ಶಿಸುವುದು, ಅವನಿಂದ ಹಣ ಪಡೆಯುವುದು ಇವುಗಳಿಗಾಗಿ ಯಾವ ಪ್ರಾಯಶ್ಚಿತ್ತದ ಅವಶ್ಯಕತೆ ಇಲ್ಲವೆಂದೂ, ಆದರೆ ಇವುಗಳನ್ನು ಮೀರಿ ಸಂಸರ್ಗವು

ಮುಂದುವರೆದರೆ ಆ ಸಂಸರ್ಗದಿಂದ ಪಾಪವುಂಟಾಗುವುದು ಎನ್ನುತ್ತಾನೆ".[೩೦] ಪಾತಿತ್ಯದ ಬಗ್ಗೆಯೂ ಸಹ ಧರ್ಮಶಾಸ್ತ್ರಕಾರರು ವ್ಯಾಖ್ಯಾನ ನೀಡುತ್ತಾ "ಮಹಾಪಾತಕಗಳ ಅಪರಾಧಕ್ಕೊಳಗಾದವನೊಡನೆ ಯಾನ, ಕೂರುವುದು ಅಥವಾ ಸಹಪಂಕ್ತಿ ಭೋಜನ ಮೊದಲಾದವುಗಳಲ್ಲಿ ಒಂದು ವರ್ಷ ಸಂಸರ್ಗವನ್ನು ಯಾವನು ಹೊಂದುವನೋ ಅವನೂ ಪತಿತನಾಗುತ್ತಾನೆ" ಎಂದು ಅಭಿಪ್ರಾಯಪಡುತ್ತಾರೆ.[೩೧]

ಇಡೀ ಪ್ರಕರಣವನ್ನು ಧರ್ಮಶಾಸ್ತ್ರಗಳ ಹಿನ್ನೆಲೆಯಲ್ಲಿ ಬಗೆಹರಿಸಿದರೂ, ಮನುಷ್ಯನ ಬದುಕಿನ ಹಕ್ಕಿಗೆ ಚ್ಯುತಿ ಬರದಂತೆ ಪ್ರಕರಣವನ್ನು ಇತ್ಯರ್ಥಗೊಳಿಸಲಾಗಿದೆ. ಏಕೆಂದರೆ ಶಾಸ್ತ್ರಕಾರರೇ "ಪತಿತರಾದ ಸ್ತ್ರೀಯರು ತಕ್ಕ ಪ್ರಾಯಶ್ಚಿತ್ತವನ್ನು ಇನ್ನು ಮಾಡಿಕೊಳ್ಳದಿರುವಾಗಲೂ ಅವರನ್ನು ಬೀದಿಯ ಪಾಲು ಮಾಡಬಾರದೆಂದೂ, ಅವರ ವಾಸಕ್ಕೆ ಮನೆಯ ಹತ್ತಿರ ಗುಡಿಸಲೊಂದನ್ನು ಏರ್ಪಡಿಸಿ ಪ್ರಾಣಧಾರಣೆಗೆ ಅವಶ್ಯಕವಾದ ಜೀವನಾಂಶವನ್ನು ಒದಗಿಸಬೇಕೆಂದೂ, ಇನ್ನೂ ಮುಂದಿನ ಅಪರಾಧಗಳಿಂದ ಅವರನ್ನು ಕಾಪಾಡಬೇಕೆಂದೂ" ವಿಧಿಸಿದ್ದಾರೆ.[೩೨]

ಇಡೀ ಪ್ರಕರಣವನ್ನು ಮಾನವೀಯ ನೆಲೆಯಲ್ಲಿ ಇತ್ಯರ್ಥಗೊಳಿಸಲಾಗಿದೆ. ಆದರೆ ಇಂಥದೇ ಒಂದು ಮತಾಂತರದ ನಿದರ್ಶನಕ್ಕೆ ಮಹಾರಾಷ್ಟ್ರದಲ್ಲಿ ಶೃಂಗೇರಿ ಜಯರೇಖೆಗಿಂತ ಭಿನ್ನವಾದ ತೀರ್ಪು ವ್ಯಕ್ತವಾಗಿದೆ. 'Selection from Peshwas Daftar' ಕೃತಿಯಲ್ಲಿ ಪತಿ ಮಹಮದೀಯನಾಗಿ ಮತಾಂತರಗೊಂಡುದರಿಂದಲೂ, ಸರಿಯಲ್ಲದ ಪ್ರಾಯಶ್ಚಿತ್ತ ವಿಧಾನದಿಂದ ನ್ಯಾಯ ವಿರುದ್ಧವಾಗಿ ಅವನನ್ನು ಜಾತಿಗೆ ಸೇರಿಸಿಕೊಂಡ ಕಾರಣದಿಂದ ಪತ್ನಿಯ ವಿಚ್ಛೇದನೆಗೆ ಅನುಮತಿ ನೀಡಲಾಯಿತು.[೩೩]

ಸಾಮಾನ್ಯ ವರ್ಗದ ಜನತೆಯ ಭೂವಿವಾದಗಳನ್ನು ಪಂಚಾಯತಿಗಳೋ, ಕಟ್ಟೆ ಮನೆಗಳ ಗೌಡರೋ, ದೊರೆ-ದಿವಾನರೋ ಬಗೆಹರಿಸುತ್ತಾರೆ. ಬ್ರಾಹ್ಮಣರಿಗೆ ಸಂಬಂಧಪಟ್ಟ ವ್ಯಾಜ್ಯಗಳನ್ನು ಬ್ರಾಹ್ಮಣರ ಧಾರ್ಮಿಕ ಗುರುಗಳೇ ಬಗೆಹರಿಸುತ್ತಿದ್ದರೆಂಬುದಕ್ಕೆ ವಿರೂಪಾಕ್ಷ ಜೋಯಿಸರ ಸ್ವಾಸ್ತಿ ಗ್ರಾಮಗಳ ಹಕ್ಕಿನ ವ್ಯಾಜ್ಯ ಉದಾಹರಣೆಯಾಗಿ ನಿಲ್ಲುತ್ತದೆ.[೩೪] ಬಿಳಿಚೋಡು ಜೋಯಿಸರ ಸಂತತಿಗೆ ಸೇರಿದ ಚೆನ್ನದಮನೆ ಚಂಗರಾಮಣ್ಣನ ಮಗ ಕೆಂಚಪ್ಪನಿಗೂ, ಅದೇ ಸಂತತಿಯ ಯೋಗಪ್ಪನಿಗೂ ವಿರೂಪಾಕ್ಷ ಜೋಯಿಸರ ಸ್ವಾಸ್ತಿ ಗ್ರಾಮಗಳ ಹಕ್ಕಿನ ವಿಚಾರದಲ್ಲಿ ವ್ಯಾಜ್ಯ ಉಂಟಾದಾಗ, ಆಗ ಚಿತ್ರದುರ್ಗಕ್ಕೆ ದಯಮಾಡಿಸಿದ್ದ ಶ್ರೀಮಾನ್‌ನೃಸಿಂಹ ಭಾರತೀಸ್ವಾಮಿಗಳವರ ಸಮ್ಮುಖದಲ್ಲಿ ತಮ್ಮ ಅಹವಾಲು ತೋಡಿಕೊಳ್ಳುತ್ತಾರೆ.

ಶ್ರೀನೃಸಿಂಹ ಭಾರತೀಸ್ವಾಮಿಗಳು ತಾವು ನೇರವಾಗಿ ವ್ಯಾಜ್ಯದಲ್ಲಿ ಭಾಗವಹಿಸದೆ ಸ್ಥಳೀಯ ಬ್ರಾಹ್ಮಣ ಸಭೆಯ ಜೋಯಿಸರು, ಬಿಳಿಚೋಡು, ಈಸಾಮುದ್ರ, ಹುಲ್ಲೂರು, ಗುಂಟನೂರು, ದುರ್ಗಗಳ ಶಾನುಭೋಗರನ್ನೆಲ್ಲ ಕರೆಸಿ ಅವರಿಂದ 'ವಿಜ್ಞಾನೇಶ್ವರ ಶಾಸ್ತ್ರ'ವನ್ನು ಓದಿಸಿ, ಅದರಲ್ಲಿಯ

ನ್ಯಾಯವಿಧಿಗಳಂತೆ, ಶಾಸ್ತ್ರನಿರ್ಣಯದಂತೆ ತೀರ್ಮಾನ ಕೈಗೊಳ್ಳುತ್ತಾರೆ. ಹಾಗೆಯೇ ಆಯಗಾರರ ನಿರ್ಣಯಕ್ಕೂ ಮನ್ನಣೆ ನೀಡಿ, ಸ್ವಾಸ್ತಿಗ್ರಾಮಗಳು ವಿರೂಪಾಕ್ಷ ಜೋಯಿಸನ ಸಂತತಿಯವರಿಗೆ ಸಲ್ಲತಕ್ಕದ್ದೆಂದು ನಿರ್ಣಯಿಸುತ್ತಾರೆ.

ಈ ಪ್ರಕರಣದಲ್ಲಿ ಪ್ರಧಾನವಾಗಿ ಸ್ಥಳೀಯ ವಿದ್ವಾಂಸರನ್ನು ಮತ್ತು ಸುತ್ತಮುತ್ತಲಿನ ಗ್ರಾಮಗಳ ಶಾನುಭೋಗರನ್ನು ಕರೆಸಿ ಅವರ ಮೂಲಕ ವ್ಯಾಜ್ಯ ಬಗೆಹರಿಸಿರುವುದು ನೃಸಿಂಹ ಭಾರತೀಸ್ವಾಮಿಗಳ ವ್ಯವಹಾರಿಕ ಜಾಣ್ಮೆಯನ್ನು ತೋರಿಸುತ್ತದೆ. ಇಲ್ಲಿ ಧರ್ಮಶಾಸ್ತ್ರಗಳ ಆಧಾರದ ಜೊತೆಗೆ ಸ್ಥಳೀಯ ಸಾಕ್ಷಿಗಳಾದ ಆಯಗಾರರ ಸಾಕ್ಷ್ಯವನ್ನು ಪರಿಗಣಿಸಿ ವ್ಯಾಜ್ಯ ನಿರ್ಣಯಿಸಲಾಗಿದ್ದು, ಅನವಶ್ಯಕವಾಗಿ ವ್ಯಾಜ್ಯ ಹೂಡಿದ ಇಬ್ಬರಿಗೂ ದಂಡ ವಿಧಿಸಲಾಗಿದೆ. ಸಾರ್ವತ್ರಿಕ ಸ್ವರೂಪವನ್ನು ಹೊಂದಿರುವ ಧರ್ಮಶಾಸ್ತ್ರಗಳನ್ನಾಧರಿಸಿ ಇನ್ನೂ ಹಲವಾರು ವಿವಾದಗಳನ್ನು ಬಗೆಹರಿಸಿರುವ ಉದಾಹರಣೆಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಪ್ರಸಕ್ತ ಅಧ್ಯಾಯದಲ್ಲಿ ಜಯರೇಖೆಗಳಿಗೆ ಮಾತ್ರ ಅಧ್ಯಯನವನ್ನು ಪರಿಮಿತಗೊಳಿಸಿಕೊಳ್ಳಲಾಗಿದೆ.

**೬.೨.೨ ಕುಲಾಚಾರ ಆಧರಿತ ನ್ಯಾಯ ಪ್ರಕ್ರಿಯೆ**

ಪ್ರಾದೇಶಿಕ ವ್ಯಾಪ್ತಿಯನ್ನು ಮೀರಿ ಎಲ್ಲ ಜನಾಂಗಗಳಿಗೂ ಅನ್ವಯಿಸಬಹುದಾದ ಧರ್ಮಶಾಸ್ತ್ರಗಳನ್ನಾಧರಿಸಿ ನೀಡಲಾಗುವ ದೇಶಾಚಾರ ನ್ಯಾಯ ಪ್ರಕ್ರಿಯೆಗೆ ವಿಪರ್ಯಯವಾಗಿ ಕುಲಗಳ ಆಚಾರ ವಿಚಾರ, ರೂಢಿ, ನಂಬಿಕೆಗಳನ್ನಾಧರಿಸಿ ನೀಡುವ ನ್ಯಾಯ ವಿಧಾನವೇ ಕುಲಾಚಾರ ನ್ಯಾಯಪದ್ಧತಿ.

ಧರ್ಮಶಾಸ್ತ್ರಗಳು ಕುಲಾಚಾರ ವ್ಯವಹಾರಗಳಿಂದ ರಾಜನನ್ನು ದೂರವಿರಿಸುತ್ತವೆ. "ರಾಜನು ಬಹುಶೃತರಾದ ಬ್ರಾಹ್ಮಣರ ಆಚಾರಗಳನ್ನು ಗೌರವಿಸುವಂತೆ, ಅದೇ ರೀತಿಯಲ್ಲಿ ವೃತ್ತಿಸಂಘದವರ (ಶಿಲ್ಪಿಗಳು, ಮುಂತಾದವರ ವ್ಯೂಹಗಳು), ನೈಗಮರ (ವ್ಯಾಪಾರಿಗಳು), ನಾಸ್ತಿಕರ ಮತ್ತು ಸಂಘಗಳು (ಸಿಪಾಯಿಗಳು, ಮುಂತಾದವರು) ಇವರ ಭಿನ್ನ ಭಿನ್ನವಾದ ಆಚಾರಗಳನ್ನು, ಸಂಪ್ರದಾಯಗಳನ್ನು ಗೌರವಿಸಬೇಕೆಂದು" ಯಜ್ಞವಲ್ಕ್ಯ ಸ್ಮೃತಿ ವಿಧಿಸುತ್ತದೆ.[೩೫] ಬೃಹಸ್ಪತಿಯೂ ಸಹ ಬಹಳ ಕಾಲದಿಂದ ರೂಢಿಯಲ್ಲಿರುವ ದೇಶಾಚಾರಗಳನ್ನು, ಕುಲಾಚಾರಗಳನ್ನು, ಜಾತಿ ಆಚಾರಗಳನ್ನು ರಾಜನು ಇದ್ದುದಿದ್ದಂತೆ ಉಳಿಸಿಕೊಂಡು ಬರಬೇಕೆಂದು, ಇಲ್ಲದಿದ್ದರೆ ಪ್ರಜೆಗಳು ಕೆರಳುವರೆಂದೂ, ನಿಷ್ಠೆ ತೋರುವುದಿಲ್ಲವೆಂದೂ ಮತ್ತು ಐಶ್ವರ್ಯ, ಸೈನ್ಯ ನಷ್ಟವಾಗುವುದೆಂದು ತಿಳಿಸುತ್ತಾನೆ.[೩೬]

ಕಾತ್ಯಾಯನನು "ಕುಲವೊಂದರಲ್ಲಿ (ಆ ಕುಲದವರೆಲ್ಲರೂ) ವಂಶಪಾರಂಪರ್ಯವಾಗಿ ಸದಾಚಾರವೆಂದು (ಧರ್ಮ) ಅನುಸರಿಸುತ್ತ ಬಂದಿರುವುದು ಕುಲಾಚಾರವೆನಿಸುವುದು. ಒಂದು ದೇಶದ ಅಥವಾ ರಾಜಧಾನಿಯ, ಗೋಪಾಲಕರ, ಗ್ರಾಮದ, ನಗರ ಅಥವಾ ಹಳ್ಳಿಯ ನಿವಾಸಿಗಳ ನಡುವೆ

ಏಳುವ ವಿವಾದಗಳಲ್ಲಿ ಅವರವರಲ್ಲಿ ರೂಢಿಯಲ್ಲಿರುವ ಆಚಾರಗಳ ಆಧಾರದ ಮೇಲೆ ತೀರ್ಮಾನ ಮಾಡಬೇಕು" ಎಂದು ಹೇಳುತ್ತಾನೆ[೩೭]. ಕುಲಾಚಾರ ಆಧರಿತ ನ್ಯಾಯ ವ್ಯವಸ್ಥೆಯ ಅಡಿಯಲ್ಲಿ ಸಾಮಾನ್ಯವಾಗಿ ಗ್ರಾಮದ ಗೌಡಿಕೆ ಹಕ್ಕು, ಶಾನುಭೋಗತನದ ಹಕ್ಕು, ಮಾದಿಗತನದ ಕಾಣಾಚಿ, ಕೆಲವು ಸಾಂಸ್ಕೃತಿಕ ಕರ್ತವ್ಯಗಳ ಹೊಣೆಗಾರಿಕೆ, ಸ್ಥಳೀಯ ದೇವಾಲಯಗಳ ಪೂಜಾರಿಕೆ ಮತ್ತು ಕುಲಗಳೊಳಗಿನ ತಪ್ಪು-ಒಪ್ಪು, ನಡವಳಿಕೆಗಳ ವ್ಯಾಜ್ಯಗಳು ಬರುತ್ತವೆ. ಕುಲಾಚಾರಗಳ ಅಥವಾ ಕುಲಕಟ್ಟಳೆಗಳ ಉಲ್ಲಂಘನೆಯಾದರೆ, ಅವುಗಳನ್ನು ಮೀರಿ ನಡೆದರೆ ಅಂಥ ವಿವಾದಗಳ ಬಗ್ಗೆ ನ್ಯಾಯ ನೀಡುವ ಅಧಿಕಾರ ಆಯಾ ಕುಲ ಮುಖ್ಯಸ್ಥರಿಗೆ, ಕುಲಗೌಡರಿಗೆ, ಕುಲಗುರುಗಳಿಗೆ ಅಥವಾ ಸಂಬಂಧಪಟ್ಟ ಸಮುದಾಯಗಳಿಗೆ ಸೇರಿದ ಕಟ್ಟೆ ಮನೆಗಳ ಗೌಡರಿಗೆ ಇರುತ್ತದೆ.

ಕುಲಸಂಬಂಧಿ ವ್ಯವಹಾರಗಳನ್ನು ಗ್ರಾಮ ಪಂಚಾಯತಿಗಳಲ್ಲಿ, ದೇವಾಲಯಗಳಲ್ಲಿ, ಮಠಗಳಲ್ಲಿ, ಕಟ್ಟೆಮನೆಗಳಲ್ಲಿ, ಚಾವಡಿಗಳಲ್ಲಿ ನಡೆಸಲಾಗುತ್ತದೆ. ಪಣಕಟ್ಟು ಸಮುದಾಯಗಳಿಗೆ ಸಂಬಂಧಪಟ್ಟ ಕುಲಕಟ್ಟಳೆಗಳ ವ್ಯವಹಾರವನ್ನು ಕಂಚಿಯಲ್ಲಿ ನಡೆಸಲಾಗುತ್ತದೆ. ಕ್ರಿ.ಶ. ೧೫೦೦ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಲಿಪ್ಪನ್‌ನ ಪ್ರವಾಸಿ ದುಆರ್ತೆ ಬಾರ್ಬೋಸಾನು "ಇಲ್ಲಿ ವಿಧವಿಧ ಜಾತಿಗಳೂ (ಕ್ಯಾಲಿಕಟ್), ಜಾತಿ ಪದ್ಧತಿಗಳಿಗೂ ಇರುವುದರಿಂದ ತಪ್ಪು ಮಾಡಿದವರಿಗೆ ಜಾತಿ ನಿಯಮಗಳಂತೆ ರಾಜ್ಯಪಾಲ ತೀರ್ಮಾನ ಕೊಡುತ್ತಾನೆ . . . ಜಾತಿ ಪದ್ಧತಿಗಳಿಗೆ ಅನುಸರಿಸಿ ನ್ಯಾಯ ತೀರ್ಮಾನವಾಗುತ್ತದೆ" ಎಂದು ಉಲ್ಲೇಖಿಸಿದ್ದಾನೆ.[೩೮]

ಕುಲಕಟ್ಟಳೆಗಳ ವ್ಯಾಜ್ಯಗಳಲ್ಲಿ ರಾಜನು ಮಧ್ಯಪ್ರವೇಶಿಸುವುದಿಲ್ಲ. ಹಲವಾರು ಶತಮಾನಗಳಿಂದ ಒಂದು ಸಮುದಾಯದೊಳಗೆ ಅನೂಚಾನವಾಗಿ ಅನುಸರಿಸಿಕೊಂಡು ಬಂದ ಆಚಾರ ವಿಚಾರ, ಕಾನೂನುಕಟ್ಟಳೆ, ವಿಧಿ ವಿಹಿತಗಳನ್ನು ಅವುಗಳ ಅರಿವಿಲ್ಲದ ರಾಜನೊಬ್ಬ ಮಧ್ಯಪ್ರವೇಶಿಸಿ ಬಗೆಹರಿಸಿದರೆ, ಅದು ಪ್ರಭುತ್ವಕ್ಕಷ್ಟೇ ಅಲ್ಲ, ಆಯಾ ಸಮುದಾಯಗಳಲ್ಲಿ ಸಾಂದ್ರೀಕೃತಗೊಂಡು ಬಂದಿರುವ ನಂಬಿಕೆಗಳನ್ನೂ ವಿಘಟನೆಗೊಳಿಸಿದಂತಾಗುತ್ತದೆ. ಆದ್ದರಿಂದಲೇ ಕುಲಕಟ್ಟಳೆಗಳನ್ನು ಬಗೆಹರಿಸುವುದಕ್ಕೆ ಕುಲದ ಹೊರಗಿನ ವ್ಯಕ್ತಿಗಳನ್ನು ನೇಮಕ ಮಾಡುತ್ತಿರಲಿಲ್ಲ. ಕುಲದೊಳಗಿನ ಸಮರ್ಥ ವ್ಯಕ್ತಿಯನ್ನು ಆಯ್ಕೆ ಮಾಡಲಾಗುತ್ತಿತ್ತು.

ಕುಲಾಚಾರ ಗೌಡಿಕೆಯನ್ನು ನೀಡಲು ತನ್ನದೇ ಆದ ಮಾನದಂಡಗಳಿದ್ದವು. ಕೆಲವೊಮ್ಮೆ ವಂಶಪಾರಂಪರ್ಯವಾಗಿ ಬಂದ ಗೌಡಿಕೆಯನ್ನು ನೀಡಿದರೂ, ಅದಕ್ಕಿಂತಲೂ ಮುಖ್ಯವಾಗಿ ಸಮಾಜಮುಖಿ ಅಥವಾ ಕುಲಮುಖಿ ಕಾರ್ಯಗಳಲ್ಲಿ ತೊಡಗಿಕೊಂಡವರಿಗೆ, ಅಸಾಮಾನ್ಯ ಪರಾಕ್ರಮ ಮೆರೆದವರಿಗೆ ಕುಲಾಚಾರ ಗೌಡಿಕೆ ನೀಡಲಾಗುತ್ತಿತ್ತು.

ಕುಲಾಚಾರ ಗೌಡಿಕೆಯನ್ನು ಸ್ವೀಕರಿಸುವುದೆಂದರೆ, ಇಡೀ ಕುಲದ ಆಗು–ಹೋಗುಗಳ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕಾಗಿತ್ತು. ದಿಲ್ಲಿನ ಬಾದಷಹ ತನ್ನಲ್ಲಿರುವ ವಿಜಯನಗರ ದೊರೆಗಳಿಗೆ ಒಡ್ಡಿದಂತಹ ೧೨೦ ಜಟ್ಟಿಗಳೊಂದಿಗೆ ಕಾಳಗ, ಅವರ ಬಳಿಯಿದ್ದ ಅಗಡು ಸ್ವಭಾವದ ಕುದುರೆಯನ್ನು ಏರಿ ಪಳಗಿಸುವುದು, ಮುಂತಾದ ಪಣಗಳನ್ನು ಒಡ್ಡಿದಾಗ, ವಿಜಯನಗರದಲ್ಲಿದ್ದ ಹನ್ನೆರಡು ಸಾವಿರ ಭಟರುಗಳೆಲ್ಲ ಹಿಂದೆ ಸರಿದಾಗ, ಹಂಡೆ ಧನುಗರ ತಿಮ್ಮರಾವುತ ಪಂಥಾಹ್ವಾನ ಸ್ವೀಕರಿಸಿ, ಗೆದ್ದು ಬರುತ್ತಾನೆ. ಆಗ ದೊರೆ ಅವನಿಗೆ 'ಕುಲಾಚಾರದ ತಪ್ಪು ನಪ್ಪುಗಳ ವಿಚಾರಿಸಿಕೊಂಡು ಕುಲಾಚಾರದಲ್ಲಾದ ಹಾದರ, ಅನ್ಯಾಯ, ಚರಾದಾಯ, ಹೊರಾದಾಯ, ಕೈತಪ್ಪು, ಬಾಯತಪ್ಪು, ಸಂತಾನಗೆಟ್ಟ ಬದುಕು (ಮಕ್ಕಳಿಲ್ಲದವರ ಜೀವನ ನಿರ್ವಹಣೆ), ದಿಕ್ಕಿಲ್ಲದ ಹೆಣ್ಣು ಇಂತಹ ವಿಷಯಗಳ ಬಗ್ಗೆ ವಿಚಾರಿಸಿಕೊಂಡು ಎಂದರೆ, ನ್ಯಾಯ ನಿರ್ಣಯ ಮಾಡಿಕೊಂಡಿರುವಂತೆ ಹೇಳಿ ಸೀಮೆನಾಡ ತಳವಾರಿಕೆ ನೀಡುತ್ತಾನೆ.[೩೯]

ಸದಾಶಿವರಾಯ ಅಂಬಿಗರ ನಾಗಜೋಗಿ, ಬಸವಜೋಗಿಗೆ ಸಿವಾಯದೇವ, ಬ್ರಾಹ್ಮಣ, ಸಾದೂ ಸಂತತಿಯನ್ನು ನದಿ ದಾಟಿಸುವ ಸೇವೆಯಲ್ಲಿ ನಿರತರಾಗಿದ್ದರಿಂದ, ಅವರಿಗೆ ಭೂದಾನದ ಜೊತೆಗೆ ಕುಲಾಚಾರ, ನ್ಯಾಯ ಬಹಿಷ್ಕಾರ, ಸುದ್ಧಪತ್ರ ಕೊಡಲಿಕ್ಕೆ ಕಟ್ಟೆ ಮನೆ ಅಧಿಕಾರ ನೀಡಿ ಶಾಸನ ಹಾಕಿಸುತ್ತಾನ.[೪೦] ಕನಕಗಿರಿ, ಆನೆಗೊಂದಿ ಸಂಸ್ಥಾನದ ರಾಜಗುರುಗಳಾದ ಬಡೇರಾಮರಾಜನು ಹಂಪಿಯನ್ನು ನೋಡಲು ಬಂದಾಗ ಜರಿಮಲೆ ಪಾಳೆಯಗಾರ ಆಕ್ರಮಣ ಮಾಡುತ್ತಾನೆ. ಇದಕ್ಕೆ ಅಂಬಿಗರು ಹೆದರಿ ಓಡಿಹೋಗುತ್ತಾರೆ. ಆಗ ಟೋಪಿ ಬಸಪ್ಪ ಹೋರಾಟ ಮಾಡಿ ಕಾಪಾಡುತ್ತಾನೆ. ದೊರೆ ಸಂಪ್ರೀತನಾಗಿ ಟೋಪಿ ಬಸಪ್ಪನಿಗೆ "ಕಟ್ಟೆ ಮನೆ ಗೌಡಕುಲಕ್ಕೆ ಹಿರಿಯರಿಗೆ ಇನ್ನೂ ಕಾಲದಲ್ಲಿ ತಪ್ಪು, ತೀರ್ಪಾಟು ಕೊಡುವುದಕ್ಕೆ, ಲಗ್ನ ಆದರೆ ವೀಳ್ಯ ತಾಂಬೂಲ ತೆಗೆದುಕೊಳ್ಳುವುದಕ್ಕೆ, ಗುರುದಕ್ಷಿಣೆ ತೆಗೆದುಕೊಳ್ಳುವುದಕ್ಕೆ, ಹಿರಿಯರ ಬಾಬತ್ತಿಗೆ ತಿರುಪಾಟು (ತೀರ್ಮಾನ) ಮಾಡುದುದಕ್ಕೆ, ಸರ್ವ ಕಾರ್ಯಕ್ಕೆ ಈತನೇ ಬಾಧ್ಯಸ್ತನು ಎಂದು ಅವನಿಗೆ ಐದು ಕುಲದವರು ಪ್ರತಿವಾದಿ ಮಾಡಕೂಡದು ಎಂದು ಸೂರ್ಯ ಚಂದ್ರ ಮುಣುಗೋವರೆಗು ಯಿಗೆ ಇರಬೇಕು"[೪೧] ಎಂದು ಹೇಳಿ ಶಾಸನ ಬರೆದು ಕೊಡುತ್ತಾನೆ.

ಗೊಲ್ಲ ಜನಾಂಗದ ಒಂದು ದಾಖಲೆ ಪ್ರಕಾರ.[೪೨] ಗೊಂದಿಹಳ್ಳಿ ಕಾಟಂದೇವರ ಪೂಜಾರಿಯಾದ ದೇವರ ಮನೆ ಕಾಟಯ್ಯ ಭೂತಭವಿಷ್ಯದ್ವರ್ತಮಾನವನ್ನು ಹೇಳತಕ್ಕ ಸತ್ಯವಂತನೆಂದು ತಿಳಿದು ಆನೆಗೊಂದಿಯ ದೊರೆ ಅವನನ್ನು ಭೇಟಿ ಮಾಡಲು ಬರುತ್ತಾನೆ. ಅವನ ಸತ್ಯಾಸಂಧತೆಯನ್ನು ನೋಡಿ ಮೆಚ್ಚುತ್ತಾನೆ. ಬಹುಶಃ ಈ ವೇಳೆಗೆ ಕಾರಣಾಂತರಗಳಿಂದ ಅವನು ದೇವರ ಪಟ್ಟದ ಹಕ್ಕು ಕಳೆದುಕೊಂಡಿರುವಂತೆ ತೋರುತ್ತದೆ. ಅಲ್ಲಿದ್ದ ಹವಾಲ್ದಾರ ಮತ್ತು ಸಭಾಸದರು ದೊರೆಗೆ "ದೇವರ ಕಾಟಯ್ಯ ಆರ್ಷಿಯಿಂದಲೂ, ಇವರ ತಂದೆ–ತಾತಂದಿರ ಕಾಲದಿಂದಲೂ ಶಾಲಿವಾಹನ ಶಕ ಕಾರ್ನಿಕದ

ಮನೆತನ. ಹೀಗಾಗಿ ಎಲ್ಲ ಕಾಲಕ್ಕೂ ಯೀತನ ವಂಶಸ್ಥರೇ ಪೂಜಾರಿಕೆಯನ್ನು ಮಾಡುವಂತೆ ವ್ಯವಸ್ಥೆ ಮಾಡಿಕೊಡಿ" ಎಂದಾಗ ದೊರೆ, ಅವರ ಕುಲಗುರು ಗೋಸಿಕೆರ ಈಶ್ವರಪ್ಪನ ಮುಖಾಂತರ ಪಟ್ಟ ಕಟ್ಟಿ ತಾಂಬ್ರದ ತಗಡನ್ನು ಮಾಡ್ಸಿ ಅದರಲ್ಲಿ ನಡೆದ ವಾರ್ತೆಯನ್ನು ಬರೆಸಿ ಮತ್ತು ಮುಂದಕ್ಕೆ ಕಾಟಯ್ಯನ ವಂಶಸ್ಥರೇ ಈ ಪಟ್ಟಕ್ಕೆ ಇರಬೇಕೆಂದು ಶಾಸನ ಬರೆಸುತ್ತಾನೆ.

ಈ ಎಲ್ಲ ಶಾಸನಗಳಲ್ಲಿ ಅವರಿಗೆ ಅವರ ಸಾಮರ್ಥ್ಯ, ತಮ್ಮ ತಮ್ಮ ಸಮುದಾಯ–ಕುಲಗಳ ಬಗೆಗಿರುವ ಕಾಳಜಿ–ಬದ್ಧತೆಯನ್ನು ನೋಡಿ ಆಯಾ ಕುಲಗಳ ಗೌಡರನ್ನಾಗಿ ಮಾಡಿರುವುದು ಕಂಡುಬರುತ್ತದೆ. ಅಲ್ಲದೆ, ಕುಲ ಗೌಡರಾಗಿ ಅವರು ನಿರ್ವಹಿಸಬೇಕಾದ ಕರ್ತವ್ಯಗಳನ್ನು, ಶಾಸನಗಳು ಅವರಿಗೆ ವಿಧಿಸುತ್ತದೆ. ಎಂದರೆ, ಕುಲಗಳಲ್ಲಿ ನಡೆಯುವ ಹಾದರ, ಅನ್ಯಾಯ, ಆದಾಯ ಸಂಗ್ರಹ, ಕಳ್ಳತನ ಮಾಡುವವರನ್ನು, ಸುಳ್ಳು ಹೇಳುವವರನ್ನು ಶಿಕ್ಷಿಸುವುದು, ಮಕ್ಕಳಿಲ್ಲದಂತಹ ದಂಪತಿಗಳ ಜೀವನ ನಿರ್ವಹಣೆಗೆ ವ್ಯವಸ್ಥೆ ಮಾಡುವುದು, ಪರಿತ್ಯಕ್ತ ಅಥವಾ ನಿರ್ಗತಿಕ ಹೆಣ್ಣುಮಕ್ಕಳನ್ನು ಪೋಷಿಸುವುದು, ಬಹಿಷ್ಕಾರ ಹಾಕುವುದು, ಶುದ್ಧಪತ್ರ ನೀಡುವುದು, ಲಗ್ನ, ಶುಭಕಾರ್ಯದಲ್ಲಿ ಅಗ್ರ ತಾಂಬೂಲ ಸ್ವೀಕರಿಸುವುದು, ಕಾಣಿಕೆ, ಗುರುದಕ್ಷಿಣೆ (ಕುಲಗುರುಗಳಾದರೆ) ತೆಗೆದುಕೊಳ್ಳುವುದು ಮುಂತಾದ ಕೆಲಸಗಳಿಗೆ ಬಾಧ್ಯಸ್ಥರನ್ನಾಗಿ ಮಾಡಲಾಗುತ್ತದೆ.

ಕುಲಾಚಾರಗಳನ್ನು ಬಗೆಹರಿಸುವಲ್ಲಿ ಕುಲಗುರುಗಳ ಪಾತ್ರ ಸಹ ಮಹತ್ವದ್ದಾಗಿರುತ್ತದೆ. ಕುರುಬ ಸಮುದಾಯದಲ್ಲಿ ಕುಲಗುರುಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಲಾಗುತ್ತಿತ್ತು. ಸಮುದಾಯಗಳೊಳಗೆ ಜಗಳವಾದಾಗ ಕುಲಗುರುಗಳು ಮಧ್ಯಪ್ರವೇಶಿಸಿ ಅವುಗಳನ್ನು ಶಮನಗೊಳಿಸುತ್ತಿದ್ದರು. ಸಮುದಾಯಗಳೊಳಗೆ ಶಾಂತಿ ಕದಡಿ, ವಾತಾವರಣ ಅಸಹನೀಯವಾದಾಗ ಇಂಥ ಗುರುಗಳ ಮಧ್ಯಪ್ರವೇಶ ಅನಿವಾರ್ಯವಷ್ಟೇ ಅಲ್ಲ, ಅತ್ಯಾವಶ್ಯಕವೂ ಆಗಿರುತ್ತಿತ್ತು. ಸುಗ್ಗನಹಳ್ಳಿಯ ಸಮಸ್ತ ಹಾಲುಮತದ ಕುಲದವರು "ಫಕೀರಪ್ಪ ಕಂಬಳಿ ಎಂಬುವವನು ನಮ್ಮ ಕುಲಾಚಾರ್‍ಯದಲ್ಲಿ ತಪ್ಪಾವಿಲ್ ಮಾಡಿದ ಬಗ್ಗೆ ಸಮಸ್ತ ದೈವದವರು ಕರೆಸಿ ವಿಚಾರ ಮಾಡಿದಾಗ, ಫಕೀರಪ್ಪನ ಕಡೆಗೆ ತಪ್ಪಾವಿಲ್ ಕಂಡುಬಂದು ಸದರಿ ಮನುಷ್ಯ ತಪ್ಪು ತೀರಿಸಲಿಕ್ಕೆ ಬಾಧ್ಯನಾಗಿ ಈಗ ನನ್ನ ಕಡೆಗೆ ಏನೂ ಅಪರಾಧವಿಲ್ಲ, ತಪ್ಪು ತೀರಿಸಿಕೊಳ್ಳುವುದಿಲ್ಲವೆಂದು ತಕರಾರು ಮಾಡುತ್ತಿದ್ದಾನೆ. ತಾವು ಮುದ್ದಾಂ ಬಂದು ವ್ಯವಸ್ಥಾಪನೆ ಮಾಡಬೇಕು ಮತ್ತು ತಮ್ಮ ಹುಕುಮ ಯಾವ ಪ್ರಕಾರ ಆಗುತ್ತದೋ ಆ ಪ್ರಕಾರ ನಾವು ನಡೆದುಕೊಳ್ಳುತ್ತೇವೆ"ಎಂದು ಕುಲಗುರುಗಳಿಗೆ ಪತ್ರ ಬರೆಯುತ್ತಾರೆ[೪೩] ಗುರುಗಳ ನೇಮಕದ ವಿಷಯದಲ್ಲಿ ತಕರಾರುಗಳು ಬಂದಾಗ ಸ್ವತಃ ಪ್ರಭುತ್ವವೇ ಮಧ್ಯಪ್ರವೇಶಿಸಿ ಕುಲ ಗುರುಗಳನ್ನು ನೇಮಕ ಮಾಡುತ್ತಿತ್ತೇ ಹೊರತು, ತಾನೇ ಕುಲದ ನ್ಯಾಯಾಧೀಶನ ಪಾತ್ರ ವಹಿಸುತ್ತಿರಲಿಲ್ಲ.

ಹಾಗೆಯೇ ಹಲವಾರು ಕುಲಕಲಹಗಳಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ಆನೆಗೊಂದಿ ಪಟ್ಟಣವು ನ್ಯಾಯಪಂಚಾಯತಿಯ ಕೇಂದ್ರ ನೆಲೆಯಾಗಿತ್ತು. ಚಿತ್ರದುರ್ಗ ನಾಯಕರ ಅವಧಿಯಲ್ಲಿ ವ್ಯಾಜ್ಯಗಾರರು

ತಮ್ಮ ತಮ್ಮ ದೂರು/ಮನವಿಗಳನ್ನು ಮೇಲುದುರ್ಗದ ಚಾವಡಿ ಅಥವಾ ಅರಮನೆ ಕಚೇರಿಯಲ್ಲಿ ದಾಖಲಿಸುತ್ತಿದ್ದರು. ಆದರೆ, ನ್ಯಾಯ ವಿಚಾರಣೆ ಮತ್ತು ತೀರ್ಮಾನಗಳು ಸರ್ವಮಾನ್ಯವಾದ ಯಾವುದೇ ಎಡೆಯಲ್ಲಿ ನಡೆಯಬಹುದಿತ್ತು. ಇತರೆಡೆಗಳಲ್ಲಿದ್ದಂತೆ ನ್ಯಾಯ ತೀರ್ಮಾನಕ್ಕೆಂದು ಸಮಸ್ತರು ಸೇರುತ್ತಿದ್ದ ಸಾರ್ವಜನಿಕ ಸ್ಥಳಗಳೆಂದರೆ ಅರಳೀ ಮರಕಟ್ಟೆ, ದೇವಾಲಯ, ಅಯ್ಯನವರ ಛಾವಡಿ, ಪಂಚಾಯತಿ ಕಟ್ಟೆ, ಇತ್ಯಾದಿ. ಗ್ರಾಮೀಣ ನ್ಯಾಯಾಡಳಿತ ಪ್ರಚಲಿತವಿದ್ದ ಈ ಕಾಲದಲ್ಲಿ "ಗ್ರಾಮೀಣ ಹಂತದಲ್ಲಿ ತೀರ್ಮಾನಗೊಳ್ಳದ ವ್ಯಾಜ್ಯಗಳು ಮಾತ್ರ ಅಂತಿಮವಾಗಿ ಮೇಲುದುರ್ಗದ ರಾಜ ದರ್ಬಾರಿನಲ್ಲಿ ಇತ್ಯರ್ಥಗೊಳ್ಳುತ್ತಿದ್ದವು".[೪೪]

ಕೆಲವು ಕುರುಬ ಜನರು ಸಣ್ಣಸಿದ್ದಪ್ಪ ಕುರುಬರ ಗುರುತ್ವ ಅನುಭವಿಸುತ್ತಿದ್ದುದಕ್ಕೆ ತಕರಾರು ತೆಗೆದರು. ಈ ಬಗ್ಗೆ ಪ್ರಭುತ್ವಕ್ಕೆ ಸಣ್ಣಸಿದ್ಧಪ್ಪ ಮನವಿ ಮಾಡಿಕೊಂಡಾಗ, ಸರ್ಕಾರವೇ ಮಧ್ಯಪ್ರವೇಶಿಸಿ, "ಪೂರ್ವದ ಪ್ರಕಾರ ನಡಕೊಳ್ಳುತ್ತಾ ಬಂದು ಇರುವ ಪದ್ಧತಿ ಪ್ರಕಾರ ಯಾವತ್ತು ವಿಚಾರಿಸಲಾಗಿ, ನೀನು ಹಿರೇರ ಲಾಗಾಯ್ತು ಹಾಲುಮತಕ್ಕೆ ಗುರುವು ಎಂದು ಸಾಬೀತು ಆಯ್ತು. ಇನ್ನು ಮುಂದೆ ಈ ಜನರಿಂದ ಕಾಣಿಕೆ ತೆಗೆದುಕೊಳ್ಳುತ್ತಾ ನಿಮ್ಮ ಕುಲ-ಮತಾಚಾರ ಪದ್ಧತಿಗೆ ವಿರೋಧವಾಗದಂತೆ ನಡೆದುಕೊಂಡು ಇರಬೇಕು" ಎಂದು ತೀರ್ಪು ನೀಡಲಾಗುತ್ತದೆ.[೪೫]

ಆನೇಕಲ್ಲಿನ ದೇಶದ ಪೇಟೆಯಲ್ಲಿ ನಂದಿಕೋಲು ಮೆರವಣಿಗೆ ಮತ್ತು ನಗರ್ತಪೇಟೆಯ ಕಾಳಿಕಾದೇವಿಯ ಮೆರವಣಿಗೆಗೆ ಸಂಬಂಧಿಸಿದಂತೆ ಮುತ್ತದಾಸರಿ ಕಾರಣದಿಂದ ಕಲಹವುಂಟಾಗಿ ಎರಡೂ ಪೇಟೆಗಳು ಅರೂಪಗೊಂಡಾಗ ಗುರು ವೆಂಕಟಾಚಾರ್ಯರು ಈ ಸ್ಥಳಕ್ಕೆ ಆಗಮಿಸಿ ಶೆಟ್ಟಿ ವರ್ತಕರು ಮುಂತಾದ ಸಮಸ್ತ ಪಣಕಟ್ಟು ಜನರನ್ನು ಒಪ್ಪಿಸಿ, ಪೂರ್ವಪ್ರಕಾರಕ್ಕೆ ದೇಶಪೇಟೆಯಲ್ಲಿ ನಂದಿಕೋಲು ಮೆರಣಿಗೆ ಮತ್ತು ನಗರ್ತಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆ ನಡೆಯುವಂತೆ ಮಾಡಿದಾಗ ಸುಗಟೂರ ದೊರೆ ಮುಮ್ಮಡಿ ಚಿಕ್ಕರಾಯ ತಮ್ಮೇಗೌಡ ನಮ್ಮ ಅರಮನೆ ಶ್ರೇಯಶ್ಚಿಂತನೆಯನ್ನು, ಉಭಯಪೇಟೆ ಪ್ರಜೆಗಳ ಶ್ರೇಯಶ್ಚಿಂತನೆಯನ್ನು ನಿರಂತರವಾಗಿ ಮಾಡಿಕೊಂಡು ಈ ಸ್ಥಳದಲ್ಲಿಯೇ ವಾಸ ಮಾಡಿಕೊಂಡಿರೆಂದು ಹೇಳಿ ಅವರ ವಾಸಕ್ಕೆ, ಜೀವನ ನಿರ್ವಹಣೆಗೆ ಅಗತ್ಯವಾದ ಎಲ್ಲ ಸೌಲಭ್ಯಗಳನ್ನು ಕಲ್ಪಿಸಿಕೊಡುತ್ತಾನೆ.[೪೬]

ಕರ್ನಾಟಕದಲ್ಲಿ ತಾತಾಚಾರ್ಯ ಗುರುಪರಂಪರೆಯು ಕುಲಕಟ್ಟಳೆಗಳನ್ನು ರೂಪಿಸುವಲ್ಲಿ, ಸಮುದಾಯಗಳು ಸಮುಚಿತ ನ್ಯಾಯಮಾರ್ಗದಲ್ಲಿ ನಡೆಯುವಂತೆ ನಿರ್ದೇಶಿಸುವಲ್ಲಿ ಜವಾಬ್ದಾರಿಯುತ ಸ್ಥಾನ ವಹಿಸಿದ್ದಂತೆ ತೋರುತ್ತದೆ. ಇತರ ಕುಲಗುರುಗಳು ಆಯಾ ಕುಲ ಅಥವಾ ಸಮುದಾಯಕ್ಕೆ ಸೀಮಿತವಾಗಿದ್ದರೆ, ತಾತಾಚಾರ್ಯ ಪರಂಪರೆಯ ಗುರುಗಳು ಕರ್ನಾಟಕದ ಶ್ರೀವೈಷ್ಣವ ಧರ್ಮವನ್ನನುಸರಿಸುವ ಎಲ್ಲ ಸಮುದಾಯಗಳಿಗೂ ಕುಲಗುರುಗಳಾಗಿದ್ದರು. ಕಲಬುರ್ಗಿಯವರ ಕರ್ನಾಟಕದ ಕೈಫಿಯತ್ತುಗಳು ಕೃತಿಯಲ್ಲಿ ಉಲ್ಲೇಖಿಸಲಾಗಿರುವ ಇತರ ಪ್ರವರ್ಗದ ಜಾತಿ-ಕುಲಗಳಿಗೆ

ಸಂಬಂಧಿಸಿದ ಕೈಫಿಯತ್ತುಗಳಲ್ಲಿ ಕುಂಚಿ ವಕ್ಕಲಿಗ ಕೈಫಿಯತ್ತು, ಕುಡಿಕುಂಬಾರ ಕೈಫಿಯತ್ತು, ಚನ್ನಯ್ಯನ ಕುಲದ ಜಾತಿ ಕೈಫಿಯತ್ತು, ತೆಲುಗು ಬಣಜಿಗರ ಜಾತಿ ಕೈಫಿಯತ್ತು, ಪದ್ಮಸಾಲೇರ ಕೈಫಿಯತ್ತು, ಮಣ್ಣು ವಡ್ಡ ಜಾತಿ ಕೈಫಿಯತ್ತು, ವುಂಡೆ ಗಂಗಟಿಕಾರ, ಮುಂತಾದ ಹೆಚ್ಚಿನ ಸಂಖ್ಯೆಯ ಕೈಫಿಯತ್ತುಗಳಲ್ಲಿ ಆಯಾ ಜಾತಿಯ ರೀತಿ-ರಿವಾಜುಗಳನ್ನು ಕುಲದಲ್ಲಿ ಪಾಲಿಸಬೇಕಾದ ವಿಹಿತಾಚಾರಗಳನ್ನು ನಮೂದಿಸಿದ್ದು, ಅವುಗಳನ್ನು ತಮ್ಮ ಗುರುಗಳಾದ 'ತಾತಾಚಾರ್ಯರು' ಬರೆಸಿಕೊಟ್ಟುದಾಗಿ ಉಲ್ಲೇಖಿಸಲಾಗಿದೆ.

ತಾತಾಚಾರ್ಯ ಸೊಂಡೂರಿನಲ್ಲಿದ್ದಾನೆಂದು ಪದ್ಮಸಾಲೇರ ಕೈಫಿಯತ್ತು ದಾಖಲಿಸುತ್ತಾರೆ. "ನಮ್ಮ ಕುಲದ ಆಚಾರ ವ್ಯವಹಾರ ಏನು ಇದ್ದಾಗ್ಯೂ ಅದಕ್ಕೆ ಸೊಂಡೂರಿನಲ್ಲಿ ಇರುವ ತಾತಾಚಾರ್ಯರು ಅಧಿಕಾರಿಗಳು" ಎಂದು ಉಲ್ಲೇಖಿಸುತ್ತದೆ.[೪೭] ಆನೆಗೊಂದಿ ವಿಶ್ವಕರ್ಮಿ ಮಠದ ವ್ಯಾಜ್ಯದಲ್ಲಿ ಹಲವಾರು ಸಾಕ್ಷಿದಾರರಲ್ಲಿ ತಾತಾಚಾರ್ಯರೂ ಒಬ್ಬರಾಗಿದ್ದಾರೆ. ಜಿರ್ಲೆ ಮಲ್ಲಮ್ಮ ತನ್ನ ಸೂರು ಗೌಡ ಮನೆತನಗಳಿಗೆ 'ತಾತಾಚಾರ್ಯ'ನನ್ನು ಗುರುಗಳನ್ನಾಗಿ ನೇಮಕ ಮಾಡುತ್ತಾಳೆ. ತಾತಾಚಾರ್ಯ ಒಬ್ಬ ವ್ಯಕ್ತಿಯಾಗಿರದೆ, ಶ್ರೀವೈಷ್ಣವ ಧರ್ಮದ ಒಂದು ಗುರುಪರಂಪರೆಯನ್ನು ಸೂಚಿಸುತ್ತದೆ. ರಾಮಾನುಜಾಚಾರ್ಯರ ಶಿಷ್ಯವರ್ಗದಲ್ಲಿ ಬರುವ ತಾತಾಚಾರ್ಯ ಕುಟುಂಬವು ಹೊಯ್ಸಳ ಅರಸರಿಂದ ಮೈಸೂರು ಒಡೆಯರ ಕಾಲದವರೆಗಿನ ಕರ್ನಾಟಕದ ಹಲವಾರು ಶಾಸನಗಳಲ್ಲಿ ಉಕ್ತರಾಗಿದ್ದಾರೆ. ಬುಕ್ಕರಾಯನ ಶಾಸನದಲ್ಲೂ ಸಹ ತಿರುಮಲೆ ತಾತಾಚಾರ್ಯನು ಉಪಸ್ಥಿತನಿರುವ ಉಲ್ಲೇಖ ಬರುತ್ತದೆ. ಶ್ರೀವೈಷ್ಣವ ಧರ್ಮ ಕರ್ನಾಟಕದ ದಕ್ಷಿಣ ಭಾಗದಲ್ಲಿ ತಳವರ್ಗಗಳನ್ನು ಆಕರ್ಷಿಸುತ್ತಿದ್ದಂತೆ, ಅಂತಹ ತಳಸಮುದಾಯಗಳಿಗೆ ತಾತಾಚಾರ್ಯ ಪರಂಪರೆಯ ಗುರುಗಳು ಮುಖ್ಯಸ್ಥರಾಗಿದ್ದುಕೊಂಡು ಅವರಿಂದ ದೀಕ್ಷೆ ಪಡೆದ ದಾಸಯ್ಯಗಳು ಆ ಸಮುದಾಯಗಳ ಸಾಂಪ್ರದಾಯಿಕ ಆಚರಣೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

ಆನೇಕಲ್ಲಿನ ಉಭಯ ಪೇಟೆಯ ಕಲಹಗಳಲ್ಲೂ ತಾತಾಚಾರ್ಯ ಪರಂಪರೆಯ ಗುರುಗಳು ಅಲ್ಲಿ ಬಂದು ನೆಲೆಸುವ ಮೂಲಕ ಅಲ್ಲಿಯ ವಾತಾವರಣವನ್ನು ತಿಳಿಗೊಳಿಸಿ ಸಾಮರಸ್ಯವುಂಟಾಗುವಂತೆ ಮಾಡುತ್ತಾರೆ. ಕುಲಗಳಿಗೆ ಮತ್ತು ಪಣಕಟ್ಟುಗಳಿಗೆ ಸಂಬಂಧಿಸಿದ ಎಲ್ಲ ಕಟ್ಟಳೆಗಳನ್ನು ಕಂಚಿಯಲ್ಲಿ ಬರೆದಿಡಲಾಗಿದೆಂಬ ನಂಬಿಕೆ ಕರ್ನಾಟಕದ ಅದರಲ್ಲೂ ಕರ್ನಾಟಕದ ದಕ್ಷಿಣ ಭಾಗದ ತಳ ಹಾಗೂ ಪಣಕಟ್ಟು ಸಮಾಜದಲ್ಲಿ ಆಳವಾಗಿ ಬೇರೂರಿದೆ. ಆದ್ದರಿಂದ ಕರ್ನಾಟಕದಲ್ಲಿ ಕುಲಕಟ್ಟಳೆಗಳಿಗೆ ಸಂಬಂಧಿಸಿದಂತೆ ಏನೇ ಕಲಹಗಳು ಬಂದರೂ, ನ್ಯಾಯದಾನಕ್ಕಾಗಿ ಕಂಚಿಯವರೆಗೆ ಎಡೆತಾಗುವುದು ಸಾಮಾನ್ಯ ಸಂಗತಿಯೆಂಬಂತೆ ಕಂಡುಬರುತ್ತದೆ.

ಕಾನಕಾನಹಳ್ಳಿಯ ಶಾಸನದಲ್ಲಿ[೪೮] ನಾಯಿಂದರು ವಾಲಗಕ್ಕೆ ಮಲ್ಲಿಗೆ ಹೂವು ಮುಡಿದ ವಿಚಾರಕ್ಕೆ ಸಂಬಂಧಿಸಿದಂತೆ ಅಗಸರು ನಾಯಿಂದರಿಗೆ ಮಲ್ಲಿಗೆ ಹೂವು ಸಲ್ಲುವುದಿಲ್ಲವೆಂದು ವ್ಯಾಜ್ಯ ಮಾಡುತ್ತಾರೆ.

ಸ್ಥಳೀಯವಾಗಿ ಗ್ರಾಮಮಟ್ಟದಲ್ಲಿ ನೀಡುವ ತೀರ್ಮಾನವನ್ನು ಒಪ್ಪದೆ, ಹದಿನೆಂಟು ಪಣದವರು ಕುಳಿತುಕೊಂಡು ಇಬ್ಬರಲ್ಲಿ ಯಾರ ಮಾತು ತಪ್ಪು ಬಂದರೂ, ದಿವಾನರಿಗೆ ೧೨೦ ತಪ್ಪು ಕಾಣಿಕೆ, ಚನ್ನಪಟ್ಟಣದವರಿಗೆ ಹಗಲುದೇವರ ತಪ್ಪು, ಕುಲದವರ ತಪ್ಪು ಕೊಟ್ಟು ಹೋಗಬೇಕೆಂದು ನಿಷ್ಕರ್ಷೆಮಾಡಿ ಹೇಳಿ, ಕಂಚಿಯಲ್ಲಿ ಕೃಷ್ಣರಾಯರು ಯಾರ್‍ಯಾರಿಗೆ ತಮ್ಮ ಕುಲದಲ್ಲಿ ಯಾವ ರೀತಿ ನಡೆಯತಕ್ಕದ್ದೆಂಬ ಪದ್ಧತಿಗಳು ಇದ್ದಾವೆಂದು ಹೇಳಿ ಬರೆಸಿದ್ದಾರೆಂದು ಕಂಚಿಗೆ ಹೋಗುತ್ತಾರೆ "ಕಂಚಿಯಲ್ಲಿ ಶಾಸನ ಪ್ರಕಾರ ಇದ್ದ ಹಾಗೆ ತೀರ್ಪು ನೀಡುವಂತೆ" ಕೇಳುತ್ತಾರೆ. ಅಲ್ಲಿ ಶಾಸನ ತೆಗೆದು ತೋರಿಸುವುದಕ್ಕೂ ಖರ್ಚಾಗುತ್ತದೆಂದು ಹೇಳಿ ಎರಡು ಬಣಗಳಿಂದಲೂ ತಲಾ ಎರಡು ಸಾವಿರ ರೂ.ಗಳನ್ನು ಪಡೆದು ಕಂಚಿಯಲ್ಲಿದ್ದ ಶಾಸನದ ಪ್ರಕಾರ ಅಗಸರಿಗೆ ಮಲ್ಲಿಗೆ ಹೂವು ಸಲ್ಲುತ್ತದೆಂದು ತೀರ್ಪು ನೀಡುತ್ತಾರೆ.

ಇಂತಹುದೇ ಮತ್ತೊಂದು ಕಂಚಿಪತ್ರದಲ್ಲಿ ಚಲವಾದಿಗಳಿಗೂ, ಮಾದಿಗರಿಗೂ ಕಲಹ ಉಂಟಾಗುತ್ತದೆ.[೪೯] ಚಲವಾದಿ ಪೂಜಪ್ಪನ ಮಗ ಮಾದಪ್ಪನಿಗೆ ಲಗ್ನ ಮಾಡುವಾಗ ಹನ್ನೆರಡು ಕಂಬದ ಚಪ್ಪರ, ಹನ್ನೆರಡು ಪಂಜುಗಳು, ಹನ್ನೆರಡು ಕಂಬಗಳನ್ನು ಬಳಕೆ ಮಾಡುತ್ತಾನೆ. ಗೋಸಂಗಿ ಸಂಬೋಲ ಐವತ್ತಾರು ದೇಶಗಳಲ್ಲಿ ಇದು ಸಲ್ಲುವುದಿಲ್ಲ ಎಂದು ಕಿತ್ತೊಗೆಯುತ್ತಾನೆ. ನ್ಯಾಯ ನಿರ್ಣಯಕ್ಕಾಗಿ ಗಜಪತಿ ಬಳಿ ಹೋದಾಗ, ಗಜಪತಿಯು ಕೋಟೆಗಾರರಿಗೆ ಹನ್ನೆರಡು ಕಂಬ, ಹನ್ನೆರಡು ಕುಂಬ ಸಲ್ಲುವುದಿಲ್ಲವೆಂದು ಹೇಳುತ್ತಾರೆ. ಈ ನ್ಯಾಯವನ್ನು ಅಂಗೀಕರಿಸದೆ ಪಂಪಾಕ್ಷೇತ್ರ ವಿಜಯನಗರಕ್ಕೆ ಹೋಗುತ್ತಾನೆ. ಅಲ್ಲಿ ನರಪತಿ ದೈವಾಚಾರದವರನ್ನು ಕರೆಸಿ ವಿಚಾರಣೆ ಮಾಡಿ ಕೋಟೆಗಾರರಿಗೆ ಸಲ್ಲುವುದಿಲ್ಲವೆಂದು ಹೇಳುತ್ತಾರೆ. ಕೋಟೆಗಾರ (ಚಲವಾದಿ) ಪೋಜಪ್ಪನಿಗೆ ಆ ನ್ಯಾಯವೂ ಅಂಗೀಕಾರವಾಗದೆ ಕಂಚಿಗೆ ಹೋಗಲು ಅಪ್ಪಣೆ ಕೇಳಿಹೋದಾಗ, ಕಂಚಿಯಲ್ಲಿ ವಜ್ರ ಸಿಂಹಾಸನಾಧೀಶ್ವರರಾದ ದೇಶಾಯಿ ಅಪ್ಪಾರಾವ್, ಕರಣಂ ನರಸಿಂಗರಾವ್, ಮುಂತಾದವರು ಕಂಚಿಯಲ್ಲಿದ್ದ ಶಾಸನಗಳನ್ನೆಲ್ಲ ಪರಾಮರ್ಶಿಸಿ, ಜಾಂಬರಿಗೆ ಸಲ್ಲುವಂತಹ, ಚಲವಾದಿಗಳಿಗೆ ಸಲ್ಲದಿರುವಂತಹ ವಸ್ತುಗಳನ್ನು, ವಿಹಿತ ಕ್ರಮಗಳನ್ನು ನಿರ್ದೇಶಿಸಿ, ಐವತ್ತಾರು ದೇಶಗಳಿಗೂ ಇದೇ ಶಾಸನ ಅನ್ವಯವಾಗುತ್ತದೆ. ಇದು ತಪ್ಪು ಅಂದವರ ಬಾಯಲ್ಲಿ ಹುಳ ಬೀಳುತ್ತದೆ ಎಂಬ ಎಚ್ಚರಿಕೆಯನ್ನು ನೀಡಿ, ನ್ಯಾಯ ನಿರ್ಣಯ ಮಾಡಿ ಕಳಿಸಲಾಗುತ್ತದೆ. ಕುಲಾಚಾರಗಳಿಗೆ ಸಂಬಂಧಿಸಿದ ಇಂಥ ಶಾಸನಗಳು ನಕಲು ಶಾಸನಗಳಾಗಿರುವುದರಿಂದ ಕಾಲದ ಅಧಿಕೃತತೆ ಇರುವುದಿಲ್ಲ. ಆದರೆ ಅವುಗಳಲ್ಲಿ ಅಡಕವಾದ ವಿಷಯ ಅನಧಿಕೃತವಾದುದಲ್ಲ.

ಕುಲಗಳಲ್ಲಿ ಅದರಲ್ಲೂ ನಿರ್ದಿಷ್ಟವಾಗಿ ಪಣಕಟ್ಟುಗಳಲ್ಲಿ ಆಚರಿಸಬೇಕಾದ ಮತ್ತು ಆಚರಿಸಬಾರದಂತಹ ಕೆಲವು ಕ್ರಮಗಳ ಬಗ್ಗೆ ವ್ಯಾಜ್ಯ ಉಂಟಾದಾಗ, ನ್ಯಾಯಕ್ಕಾಗಿ ಕಂಚಿಗೆ ಹೋಗುವುದು ೧೯ನೆಯ ಶತಮಾನಗಳಲ್ಲಿ ಕಂಡುಬರುವ ಕಂಚಿಪತ್ರಗಳಲ್ಲಿ ಸರ್ವೇಸಾಮಾನ್ಯವಾಗಿದೆ.

ಕುಲಾಚಾರಗಳಿಗೆ ಸಂಬಂಧಿಸಿದಂತೆ ಕಟ್ಟಳೆಗಳನ್ನು ವಿಧಿಸಿ, ಆಚರಣೆಗಳನ್ನು ಅಧಿಕೃತಗೊಳಿಸುವ ಮತ್ತು ನಿರ್ದಿಷ್ಟಪಡಿಸುವ ಪ್ರವೃತ್ತಿ ಕಂಚಿ ಪತ್ರಗಳಲ್ಲಿ ಕಂಡುಬರುತ್ತವೆ. ಇಲ್ಲಿ ಮುಖಾಮುಖಿಯಾಗುವುದು ಚಲವಾದಿ, ಜಾಂಬವಂತ, ಅಗಸ, ಮಡಿವಾಳ, ಗೊಲ್ಲ, ದಕ್ಕಲಿಗ, ಮಾಸ್ತೀಕರು, ಸಿಂದ್ ಮಾದಿಗರಂತಹ ಸ್ಥಳೀಯ ಕೆಳ ಮತ್ತು ತಳ ಸಮುದಾಯಗಳೇ.

ಕಂಚಿಪತ್ರಗಳಲ್ಲಿ ಮೂರು ಹಂತಗಳ ನ್ಯಾಯವ್ಯವಸ್ಥೆ ಕಂಡುಬರುತ್ತದೆ. ಮೊದಲನೆಯದು ಸ್ಥಳೀಯ ಹಂತ, ಇಲ್ಲಿ ಇತ್ಯರ್ಥವಾಗಿದ್ದಾಗ, ಪ್ರಭುತ್ವದ ಸಮ್ಮುಖಕ್ಕೆ ವರ್ಗಾವಣೆಯಾಗುತ್ತದೆ. ಪ್ರಭುತ್ವದ ತೀರ್ಪು ತೃಪ್ತಿಕರವಾಗದಿದ್ದರೆ, ಕಂಚಿಗೆ ವರ್ಗಾವಣೆ. ಕಂಚಿಯಲ್ಲಿ ನೀಡುವ ತೀರ್ಪೇ ಅಂತಿಮ. ಪ್ರಶ್ನಾತೀತ ಮತ್ತು ಅಧಿಕೃತವಾದುದಾಗಿರುತ್ತದೆ. ಇದು ಮತ್ತೊಂದು ಗಮನಾರ್ಹ ಅಂಶವೆಂದರೆ, ಕಂಚಿಗೆ ನ್ಯಾಯಕ್ಕಾಗಿ ಬರುವ ಪ್ರತಿಯೊಂದು ಕುಲವೂ, ತಮ್ಮ ಕುಲದ ಸಂಪ್ರದಾಯಗಳ ಬಗ್ಗೆ ಕಂಚಿಯಲ್ಲಿ ಶಾಸನದಲ್ಲಿ ಬರೆಸಿಡಲಾಗಿದೆ ಎಂಬ ನಂಬುಗೆಯಿಂದಲೇ ಬರುವುದರಿಂದ ಅದನ್ನು ಪ್ರಶ್ನಿಸುವ ಧೈರ್ಯ ತೋರುವುದಿಲ್ಲ. 'ಕಂಚಿ ಶಾಸನ'ದ ನೆಪದಲ್ಲಿ ಆಯಾ ಕುಲದ ಮುಖಂಡರು ಹಿಂದಿನಿಂದ ರೂಢಿಗತವಾಗಿ ನಂಬಿಕೊಂಡು ಬಂದ ಆಚರಣೆ, ಸಂಪ್ರದಾಯಗಳನ್ನಾಧರಿಸಿ ನ್ಯಾಯ ನಿರ್ಣಯಿಸುತ್ತಿದ್ದರು.

ಶಿಷ್ಟ ಸಮಾಜದಲ್ಲಿ ಧರ್ಮಶಾಸ್ತ್ರಗಳ ಆಧಾರದ ಮೇಲೆ ನ್ಯಾಯ ನಿರ್ಣಯವಾದರೆ, ಶಿಷ್ಟೇತರ ಅಥವಾ ಪರಿಶಿಷ್ಟ ಸಮುದಾಯಗಳಲ್ಲಿ ಸ್ಥಳೀಯ ನ್ಯಾಯ ಪಂಚಾಯತಿಗಳ ಮೂಲಕ, ಪಣಗಳ ಮುಖ್ಯಸ್ಥರ ಮೂಲಕ ಹದಿನೆಂಟು ಹಿಟ್ಟುಗಳೆಂದು, ನಾಯಕರೆಂದು, ಗೌಡರೆಂದು ಕರೆಯಲ್ಪಡುವ ವಿವಿಧ ಸಮುದಾಯಗಳ ಸಮ್ಮುಖದಲ್ಲಿ ನ್ಯಾಯ ವಿತರಣೆಯಾಗುತ್ತಿತ್ತು. "ಕುಲಾಚಾರ ಪದ್ಧತಿಗೆ ಒಳಪಡುತ್ತಿದ್ದ ಅಂದಿನ ಜಾತಿಗಳೆಂದರೆ ಬೇಡರು, ಕುರುಬರು, ಗೊಲ್ಲರು, ಕಬ್ಬಲಿಗರು, ಹೊಲೆಯರು, ಮಾದಿಗರು, ಕುಂಬಾರರು, ಕಂಬಾರರು, ಲಿಂಗಾಯತರು, ಪಾಂಚಾಳರು, ಮುಂತಾದವರು. ಇವರು ತಮ್ಮ ತಮ್ಮ ಜಾತಿಗಳ ನ್ಯಾಯಗಳನ್ನು ಬಗೆಹರಿಸುವ ಪದ್ಧತಿ ಜಾರಿಯಲ್ಲಿತ್ತು"[೫೦].

**೬.೨.೩ ಪ್ರಭುತ್ವ ಆಧಾರಿತ ನ್ಯಾಯ ಪ್ರಕ್ರಿಯೆ**

ನ್ಯಾಯ ನಿರ್ಣಯ ಪ್ರಕ್ರಿಯೆಗಳಲ್ಲಿ ರಾಜನ ನೇರ ಪಾಲ್ಗೊಳ್ಳುವಿಕೆ ವಿರಳವೇ. ಆದರೆ, ರಾಜನ ಪ್ರತಿನಿಧಿಗಳಾಗಿ, ದಂಡನಾಯಕರು, ಅರಮನೆಯ ಪುರೋಹಿತರು, ದಳವಾಯಿಗಳು, ಸಾಮಂತರು ನ್ಯಾಯ ನಿರ್ಣಯ ಕಾರ್ಯಪ್ರಕ್ರಿಯೆಯಲ್ಲಿ ಸಭಾಸದರಾಗಿ ಅಥವಾ ನ್ಯಾಯಾಧೀಶರಾಗಿ ಪಾಲ್ಗೊಳ್ಳುತ್ತಿದ್ದರು. ನೇರವಾಗಿ ರಾಜನೇ ಖುದ್ದಾಗಿ ನ್ಯಾಯನಿರ್ಣಯ ಮಾಡಿದ ಶಾಸನೋಲ್ಲೇಖಗಳು ತುಂಬಾ ವಿರಳವಾಗಿ ದೊರೆಯುತ್ತವೆ. ಕೆಲವು ಜಯರೇಖೆ, ಕಂಚಿಪತ್ರಗಳಲ್ಲಿ ಗಜಪತಿ, ಹಯಪತಿ, ನರಪತಿ, ಆನೆಗೊಂದಿ ಸಂಸ್ಥಾನ, ವಿಜಯನಗರದ ಕೃಷ್ಣಾರಾವು, ರಾಮರಾಯ, ಅಚ್ಯುತರಾವುರವರ

ಸಮಕ್ಷಮದಲ್ಲಿ ತೀರ್ಪು ನೀಡಲಾಯಿತೆಂದು ಹೇಳಲಾಗುತ್ತದಾದರೂ, ವಾಸ್ತವವಾಗಿ ಅಂಥ ನಿರ್ಣಯಗಳಿಗೆ ಪ್ರಾಚೀನತೆಯನ್ನು ಆರೋಪಿಸಲು ಹಾಗೂ ಇದು ರಾಜರೇ ನೀಡಿದ ಅಧಿಕೃತ ತೀರ್ಪು ಎಂಬುದನ್ನು ಪ್ರಮಾಣೀಕರಿಸುವ ಉದ್ದೇಶದಿಂದ ನಕಲು ಮಾಡಿಕೊಳ್ಳುವಾಗ ಕಾಲಾನಂತರಗಳಲ್ಲಿ ಸೇರಿಸಲಾದ ಪ್ರಕ್ಷಿಪ್ತ ಹೆಸರುಗಳಾಗಿವೆ.

ರಾಜನ ಆಸ್ಥಾನದಲ್ಲಿ ತಾತ್ವಿಕ ಚರ್ಚೆಗಳಲ್ಲಿ ಗೆದ್ದಂತಹವರಿಗೆ ಸ್ವತಃ ರಾಜನೇ ಜಯಪತ್ರ ನೀಡುತ್ತಿದ್ದ. ನೇಮಿಚಂದ್ರ, ಪ್ರೌಢದೇವರಾಯನ ಸಭೆಯಲ್ಲಿ ವಾದಿ ವಿದ್ವಾಂಸರುಗಳ ಮದವಳಿಸಿ ಜೈನಧರ್ಮದ ಶ್ರೇಷ್ಠತ್ವವನ್ನು ಪ್ರತಿಪಾದಿಸಿ ಜಯಪತ್ರವನ್ನು ಪಡೆಯುತ್ತಾನೆ[೫೧]. ಇಲ್ಲಿಯೂ ಸಹ ವಾದಿ ಮತ್ತು ಪ್ರತಿವಾದಿಗಳು ಇದ್ದು ಇದಕ್ಕೆ ಇಡೀ ಸಭೆ ಇದಕ್ಕೆ ಸಾಕ್ಷಿಯಾಗಿರುತ್ತದೆ. ರಾಜ ಇಲ್ಲಿ ನ್ಯಾಯಾಧೀಶನ ಪಾತ್ರ ವಹಿಸಿ ಅಂತಿಮವಾಗಿ ಇಬ್ಬಣದ ತರ್ಕಗಳನ್ನು ಆಲಿಸಿ, ಒಬ್ಬನನ್ನು ವಿಜಯಿಯೆಂದು ಘೋಷಿಸಿ ಜಯಪತ್ರ ನೀಡುತ್ತಾನೆ.

ಸಮುದಾಯಗಳೊಳಗೆ ನಡೆಯುವ ಆಂತರಿಕ ವ್ಯಾಜ್ಯಗಳನ್ನು ಕುಲಕಟ್ಟಳೆಗಳನ್ನು ಆಧರಿಸಿ ಬಗೆಹರಿಸಿಕೊಳ್ಳುವುದರಿಂದ ಅಲ್ಲಿ ಪ್ರಭುತ್ವದ ಉಪಸ್ಥಿತಿ ಅಗತ್ಯವಿರುವುದಿಲ್ಲ. ಹಾಗೆಯೇ ಧರ್ಮಶಾಸ್ತ್ರಗಳನ್ನಾಧರಿಸಿ ನೀಡಲಾಗುವ ನಿರ್ಣಯಗಳನ್ನು ಪಂಡಿತ ಮಂಡಳಿಯೇ ನಿರ್ಣಯಿಸುವುದರಿಂದ ಅಲ್ಲಿಯೂ ರಾಜನ ಹಾಜರಿಯ ಅವಶ್ಯಕತೆ ಇರುವುದಿಲ್ಲ. ಆದರೂ ಕುಲಾಚಾರಕ್ಕೆ ಸಂಬಂಧಪಟ್ಟಂತೆ ಸ್ವತಃ ಪ್ರಭುತ್ವವೇ ನೇರವಾಗಿ ಭಾಗಿಯಾದ ಉಲ್ಲೇಖ ನಮಗೆ ಚನ್ನಭೈರಾದೇವಿ ಶಾಸನದಲ್ಲಿ ಕಂಡುಬರುತ್ತದೆ. ಅಂಜಿಗರ ಮದುವೆ ಸಂದರ್ಭದಲ್ಲಿ ಅಗಸರು ಅಂಜಿಗರ ಬಟ್ಟೆ ಒಗೆಯುವುದಿಲ್ಲವೆಂದು ಮತ್ತು ನಾಯಿಂದರು ಕ್ಷವುರ ಮಾಡುವುದಿಲ್ಲವೆಂದು ಹಠ ಮಾಡಿದಾಗ, ಈ ವಿಚಾರವನ್ನು ಸ್ಥಳೀಯ ಶೆಟ್ಟಿ ಮತ್ತು ದಂಡನಾಯಕರು ಚನ್ನಭೈರಾದೇವಿಯ ಗಮನಕ್ಕೆ ಬಂದಾಗ, ಚನ್ನಭೈರಾದೇವಿ ಇವರು ಗಂಗಪುತ್ರರಾದ್ದರಿಂದ ಅಪವಿತ್ರವೇನೂ ಅಲ್ಲವೆಂದು ಹೇಳಿ ಮೂರು ಸಮುದಾಯಗಳ ನಡುವೆ ಸಂಧಾನ ಮಾಡಿಸುತ್ತಾಳೆ.[೫೨]

ಸಮಾಜದಲ್ಲಿ ಬಹುಸಂಖ್ಯಾತ ಸಮುದಾಯಗಳ ನಡುವೆ ನಡೆಯುವ ಕಲಹಗಳು ಸಮಾಜದ ಸ್ವಾಸ್ಥ್ಯವನ್ನು ಕದಡುವಂತಿರುತ್ತವೆ. ಇಂಥ ಕಲಹಗಳಲ್ಲಿ ಭಾಗಿಯಾದ ಸಮುದಾಯಗಳ ಪ್ರಾದೇಶಿಕ ವ್ಯಾಪ್ತಿ ವಿಸ್ತಾರವಾಗಿದ್ದರೂ ಸಹ, ಇವುಗಳ ನಡುವೆ ಕುಲಸಂಬಂಧಿ ಆಚರಣೆಗೆ ಸಂಬಂಧಿಸಿದಂತೆ ಕಲಹಗಳು ಉದ್ಭವಿಸುವುದರಿಂದ ಇಂಥ ಸಂದರ್ಭದಲ್ಲಿ ಕುಲಾಚಾರ ಅಥವಾ ದೇಶಾಚಾರಗಳನ್ನಾಧರಿಸಿ ನ್ಯಾಯ ನೀಡುವುದಕ್ಕೆ ಸಾಧ್ಯವಾಗುವುದಿಲ್ಲ. ಆಗ ಪ್ರಭುತ್ವದ ಮಧ್ಯಪ್ರವೇಶಿಕೆ ಅಗತ್ಯ ಮತ್ತು ಅನಿವಾರ್ಯವಾಗುತ್ತದೆ. ದಕ್ಷಿಣ ಭಾರತದಾದ್ಯಂತ ನೆಲೆಗೊಂಡಿರುವ ಕುರುಬ ಮತ್ತು ಬಣಜಿಗ ಜನಾಂಗದ ನಡುವಿನ ವ್ಯಾಜ್ಯಕ್ಕೆ ಮಹಾರಾಜ ರಾಜಶ್ರೀ ನರಪತಿ ಶ್ರೀ ಕೃಷ್ಣ ವಡೆಯರು, ದಿಲ್ಲಿ ಸುಲತಾನ್, ಹರಪನಹಳ್ಳಿ ವೀರಭದ್ರಪ್ಪ, ಚಿತ್ರಕಲ್ಲು ದುರ್ಗದ ಭರಮಣ್ಣ ನಾಯಕ, ಕನಕಗಿರಿ

ಬಂಗಾರುನಾಯಕ, ಗುಡೇಕೋಟೆ ನಾಯಕರು, ಜರಿಮಲೆ ರಾಮಪ್ಪ ನಾಯಕ, ನಿಡಗಲ್ಲು ದೊರೆ, ಸುರಪುರ ದೊರೆಗಳು, ಕಣಿಕಲ್ಲು ಲಕ್ಕ ತಿಮ್ಮನಗೌಡ, ಗದ್ದಲ್ ಪೆದ್ದರೆಡ್ಡಿ, ರಾಮನಮಲೆ ರಾಮನಾಯಕ, ಕನಕಗಿರಿ ರುದ್ರಪ್ಪ, ಸೊಂಡೂರು ಮಲ್ಲನಗೌಡ . . . ಅಂಗ, ಕಳಿಂಗ, ಕಾಸ್ಮೀರ, ಕಾಂಭೋಜ, ಕೌಮರು, ಸೌರಾಷ್ಟ್ರ, ಮಹಾರಾಷ್ಟ್ರ, ಮಗಧ, ಮಾಳವ, ದ್ರಾವಿಡ, ಕರ್ನಾಟಕ, ನಾಟ, ಕರಾಟ, ಮಾಟ, ನೇಪಳ, ಕೇರಳ, ಪಾಂಚಾಳಿ, ಗೌಳಿ, ಅತಳ, ಸುತಳ, ಪಸಾತಳ, ತಳಾತಳ, ಪಾತಾಳ, ಭೂಲೋಕ . . . ಮುಂತಾದ ಐವತ್ತಾರು ದೇಶದವರು ಕಲೆತು ಮಹಾನಾಡು ಸಭೆಯವರನ್ನು ಕರೆಸಿ, ಸಕಲ ಹಿರಿಯರು ಸೇರಿಕೊಂಡು ಇವರವರ ವಾದವಿವಾದಗಳನ್ನು ವಿಚಾರಣೆ ಮಾಡಿ ಇವರು ಹೆಚ್ಚು ಅಲ್ಲ, ಅವರು ಕಡಿಮೆ ಅಲ್ಲ, ಶುಭ ಅಂದರೆ ಕುರುಬರು ಮುಂದೆ ಬೇಕು, ಕುರುಬರ ದಾರ ಕಂಕಣ ಬೇಕು, ಕಂಬಳಿ ಗದ್ದುಗೆ ಬೇಕು . . . ಕುರುಬರಿಗೆ ಒಂದು ಸಂದಿಗೆ ಸಾವಿರ ಬಿರುದುಗಳು ಸಲ್ಲುವುದೆಂದು ಹೇಳಿ ಪಂಚಾಯತಿಯಲ್ಲಿರುವ ಕುರುಬರು ಮುಟ್ಟದ ಬದುಕು ಇಲ್ಲ, ಕುರುಬರಿಗೂ ಬಣಜಿಗರಿಗೂ ವಂದೆ ಸಮೂಹವೆಂದು ಅವರನ್ನು ಇವರನ್ನು ಸಮಾಧಾನ ಮಾಡುತ್ತಾರೆ.[೫೩]

ರಾಜನ ನಿಜ ಉಪಸ್ಥಿತಿಯನ್ನು ಬಯಸುವಂತಹ ವ್ಯಾಜ್ಯಗಳೆಂದರೆ, ಧರ್ಮಸಂಬಂಧಿ ಕಲಹಗಳು, ಧರ್ಮದ ವಿಷಯ ಸಂಕೀರ್ಣವಾಗಿರುವುದರಿಂದ ಅವುಗಳನ್ನು ಸೂಕ್ಷ್ಮ ಸ್ತರಗಳಲ್ಲಿ ನಿರ್ವಹಿಸಬೇಕಾಗುತ್ತದೆ. ಇಂಥ ಸಂದರ್ಭಗಳಲ್ಲಿ ಕುಲಾಚಾರ, ಧರ್ಮಶಾಸ್ತ್ರಗಳಿಗಿಂತ ಹೆಚ್ಚಾಗಿ ರಾಜನು ಜಾಣ್ಮೆ ಹಾಗೂ ತಾಳ್ಮೆಯಿಂದ ವರ್ತಿಸಿ ವಿವೇಚನೆಯಿಂದ ನಿರ್ಣಯ ತೆಗೆದುಕೊಳ್ಳಬೇಕಾಗುತ್ತದೆ. ಅರಸನೇ ನೇರವಾಗಿ ಹಲವಾರು ವ್ಯಾಜ್ಯಗಳನ್ನು ಪರಿಹರಿಸಿದ್ದರೂ, ಜಯಪತ್ರಗಳಲ್ಲಿ ಅಂತಹ ನಿದರ್ಶನಗಳು ಅತಿ ವಿರಳವಾಗಿರುವುದರಿಂದ ಅವುಗಳಿಗೆ ಹೆಚ್ಚು ಆದ್ಯತೆ ನೀಡಿ ಉಳಿದ ವ್ಯಾಜ್ಯಗಳನ್ನು ಪ್ರಾಸಂಗಿಕವಾಗಿ ಅವಲೋಕಿಸಬೇಕಾಗುತ್ತದೆ.

ಕುರುವತ್ತಿಯ ಶಾಸನದಲ್ಲಿ ಬೊಪ್ಪಯ್ಯ ಮಾನ್ಯನು ದುಷ್ಟನಾಗಿ ಹೊಳಲು ಎಂಬ ಗ್ರಾಮವನ್ನು ಸೂರೆಗೊಂಡು ಅನೇಕ ಬ್ರಾಹ್ಮಣರನ್ನು ಕೊಲ್ಲುತ್ತಾನೆ. ಅಲ್ಲಿಯ ಮಹಾಜನಗಳು ಚಕ್ರವರ್ತಿಯ ತನಕ ದೂರನ್ನು ಒಯ್ಯುತ್ತಾರೆ. ಚಕ್ರವರ್ತಿ ಅವರ ಮಾತುಗಳನ್ನು ಸಾವದಾನನಾಗಿ ಕೇಳಿ ಆ ಅಗ್ರಹಾರಕ್ಕೆ ಯಾರೂ ಮಾನ್ಯರಿರಕೂಡದೆಂದು ನಿಯಮಿಸುತ್ತಾ, ಪ್ರಧಾನಿ ಮುಂತಾದವರಿಂದಬೊಪ್ಪನನ್ನು ಕರೆದು ನೀನಾಗಲೀ, ನಿನ್ನ ವಂಶಜರಾಗಲೀ ಹೊಳಲಿಗೆ ಮಾನ್ಯರಾಗಿರಲು ಸಾಧ್ಯವಿಲ್ಲವೆಂದು ತಿಳಿಸಿದಾಗ ಆತ ತಪ್ಪೊಪ್ಪಿಕೊಂಡು 'ಆಣೆಪತ್ರ'ವನ್ನು ಕೊಟ್ಟು ತಾನು ನುಡಿದಂತೆ ನಡೆಯುವವನೆಂಬುದನ್ನು ಸ್ಥಿರಪಡಿಸಲು ದೇವರ ಬಳಿ ನೀರನ್ನು ಕುಡಿಯುತ್ತಾನೆ. ಆ ವಿಷಯವನ್ನು ಸಾರುವ ಕಲ್ಲುಗಳನ್ನು ಹತ್ತಾರು ಊರುಗಳಲ್ಲಿ ಹಾಕಿಸುತ್ತಾನೆ.[೫೪] ಏಕಾಂತದ ರಾಮಯ್ಯನಿಗೆ ಪಂಥಾಹ್ವಾನ ನೀಡಿ ತಮ್ಮ ನೆಲೆಗಳನ್ನು ಕಳೆದುಕೊಳ್ಳುವ ಹಂತಕ್ಕೆ ಹೋದ ಜೈನರು ಬಿಜ್ಜಳನಲ್ಲಿಗೆ ದೂರನ್ನು ಒಯ್ಯುತ್ತಾರೆ. ರಾಜ ಬಿಜ್ಜಳನೇ ನೇರವಾಗಿ ವ್ಯಾಜ್ಯವನ್ನು ಬಗೆಹರಿಸುತ್ತಾನೆ. ಈ ಪ್ರಕರಣದಲ್ಲಿ ರಾಮಯ್ಯ ಜೈನರನ್ನು ಜೈನ ಬಸದಿಗಳನ್ನು

ನಿರ್ನಾಮ ಮಾಡಿದ್ದು ಅಪರಾಧವಾಗುವುದಿಲ್ಲ. ಅದಕ್ಕೆ ಪ್ರಭುತ್ವ ಶಿಕ್ಷೆಯನ್ನು ವಿಧಿಸುವುದಿಲ್ಲ. ಜೈನರು ಇದಕ್ಕೆ ಮೊದಲೇ ಸಮ್ಮತಿಸಿ ಓಲೆಬಾರದ ಪತ್ರ ಬರೆದುಕೊಟ್ಟಿದ್ದರಿಂದ ಆ ಕೃತ್ಯ ರಾಮಯ್ಯನ ಗೆಲುವಾಗುತ್ತದೆ. ಹೀಗಾಗಿ ಪ್ರಭುತ್ವ ರಾಮಯ್ಯನ ಕೃತ್ಯವನ್ನು ಒಂದು ಅಭೂತಪೂರ್ವ ಕಾರ್ಯವೆಂಬಂತೆ ಮನ್ನಿಸಿ ಜಯಪತ್ರ ನೀಡುತ್ತದೆ.

ಜಯಪತ್ರಗಳಲ್ಲಿ ಪ್ರಭುತ್ವವೇ ನೇರವಾಗಿ ನೀಡುವ ತೀರ್ಪುಗಳಿಗೆ ರಾಮಧಾನ್ಯ ಚರಿತೆಯನ್ನು ಅತ್ಯುತ್ತಮ ಉದಾಹರಣೆಯನ್ನಾಗಿ ಪರಿಗಣಿಸಬಹುದು. ಇದು ಸಾಹಿತ್ಯ ಕೃತಿಯಾದರೂ, ಇಡೀ ಕಾವ್ಯದ ವಸ್ತುವಿಷಯ ಜಯರೇಖೆಯಲ್ಲಿನ ನ್ಯಾಯ ನಿರ್ಣಯವನ್ನು ನೆನಪಿಸುತ್ತದೆ. ಇಡೀ ಕಾವ್ಯದಲ್ಲಿ ರಾಗಿ ಮತ್ತು ಭತ್ತದ ಶ್ರೇಷ್ಠತ್ವ-ಅಧಮತ್ವದ ನಡುವಿನ ಕಲಹ, ಅದನ್ನು ಪ್ರಭುತ್ವದ (ರಾಮನ) ಎದುರಿನಲ್ಲಿ ಮಂಡಿಸುವ ರೀತಿ, ತೀರ್ಪು ನೀಡುವುದಕ್ಕೆ ಮೊದಲು ಅವುಗಳ 'ಸತ್ವ' ಪರೀಕ್ಷೆ ಮಾಡುವ ವಿಧಾನ, ಅನಂತರ ತೀರ್ಪು ನೀಡುವಾಗ ರಾಗಿಗೆ ಗೆಲುವನ್ನು ಘೋಷಿಸಿ, ಅದರ ಶ್ರೇಷ್ಠತೆಯನ್ನು ಮೆಚ್ಚಿ ಹಲವು ಬಿರುದಾವಳಿಗಳನ್ನು, ವ್ಯವಸಾಯದ ಪರಿಕರಗಳನ್ನು ನೀಡಿ ಗೌರವಿಸುವ ರೀತಿ- ಈ ಎಲ್ಲ ಅಂಶಗಳು ರಾಚನಿಕವಾಗಿ ಜಯರೇಖೆಗಳಲ್ಲಿ ಕಂಡುಬರುವ ವಾಗ್ವಾದ ಕಲಹಗಳನ್ನು ಹೋಲುತ್ತವೆ. ಕಾವ್ಯಗಳೆಂದರೆ ಪುರಾಣ ಹಾಗೂ ಇತಿಹಾಸದ ಪುರುಷರನ್ನೇ ಕೇಂದ್ರೀಕರಿಸಿ ಬರೆಯಬೇಕೆಂಬಂತಹ ಸಿದ್ಧ ಮಾದರಿಗಳನ್ನು ಮೀರಿರುವ ಕನಕದಾಸರು, ತಾತ್ಕಾಲೀನ ಸಮಾಜದಲ್ಲಿ ತಾವು ಕಂಡಿರಬಹುದಾದ, ಮತ್ತು ತಮ್ಮ ಅನುಭವಕ್ಕೆ ಬಂದಂತಹ ಕಲಹಗಳನ್ನೇ ತಮ್ಮ ಕಾವ್ಯ ರಚನೆಗೆ ಪ್ರೇರಣೆಯನ್ನಾಗಿ ಪಡೆದಿದ್ದು, ಇಲ್ಲಿ ನೇರವಾಗಿ ಇಡೀ ಕಲಹವನ್ನು ರಾಮನೇ ಮುಂದೆ ನಿಂತು ತೀರ್ಮಾನಿಸುತ್ತಾನೆ.

ಇದಕ್ಕೆ ತದ್ವಿರುದ್ಧವಾಗಿ ಬುಕ್ಕರಾಯ 'ಭಕ್ತರ ಅನ್ಯಾಯಗಳಿಗೆ' ಹೆದರಿ ತನ್ನ ಬಳಿಗೆ ನ್ಯಾಯ ಕೋರಿ ಬಂದ ಜೈನರಿಗೆ ಸೂಕ್ತ ನ್ಯಾಯ ಒದಗಿಸುತ್ತಾನೆ. ಸುತ್ತಮುತ್ತಲಿನ ಎಲ್ಲ ನಾಡುಗಳ ವೈಷ್ಣವ ಪ್ರಮುಖರನ್ನು ಕರೆಸಿ, ಜೈನರನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಅವರಿಗೇ ವಹಿಸುವ ಮೂಲಕ ಭಕ್ತರು ಒಂದು 'ನೈತಿಕ ಬದ್ಧತೆಯೊಳಗೆ' ವರ್ತಿಸುವಂತೆ ನೋಡಿಕೊಳ್ಳುತ್ತಾನೆ. ಅಲ್ಲದೆ, ಇದು ಒಂದು ರೀತಿಯಲ್ಲಿ ತಾತ್ಕಾಲೀನ ತೀರ್ಮಾನವಾಗಿ ಉಳಿಯದೆ, ಶಾಶ್ವತ ಪರಿಹಾರವಾಗಿರುವಂತೆ ರೂಪಿಸುತ್ತಾನೆ. ರಾಜರು ಹೀಗೆ ನ್ಯಾಯಗಳನ್ನು ನೀಡುವಾಗ ಅದು ಸಮಾಜದ ಮೇಲೆ ವ್ಯತಿರಿಕ್ತ ಪರಿಣಾಮವಾಗದಂತೆ ನ್ಯಾಯ ನೀಡಿದಂತಹ ನಿದರ್ಶನಗಳು ಇತಿಹಾಸದಲ್ಲಿ ನಮಗೆ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ.

ಹದಿನೆಂಟನೆಯ ಶತಮಾನದ ಶಾಸನಗಳಲ್ಲಿ ಪ್ರಭುತ್ವದ ತೀರ್ಪಿನ ಮೇಲೆ ಬ್ರಿಟೀಷ್ ನ್ಯಾಯಪದ್ಧತಿಯ ಪ್ರಭಾವ ಕಂಡುಬರುತ್ತದೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಪ್ಪಿತಸ್ಥರ ಮನೆ ಜಪ್ತಿ ಮಾಡಿ, ಸ್ಥಳ ಪಂಚನಾಮೆ ಮಾಡಿಸಿ ಅಲ್ಲಿರುವ ವಸ್ತುಗಳನ್ನು ಪಟ್ಟಿ ಮಾಡಲಾಗುತ್ತಿತ್ತು. ಅಂಥ ಒಂದು ನಿದರ್ಶನ ಚಿಕ್ಕದೇವರಾಜ ಒಡೆಯರ ಶಾಸನದಲ್ಲೇ ಕಂಡುಬರುತ್ತದೆ. ಚಿಕ್ಕ ದೇವರಾಜ ಒಡೆಯರು ಗುಬ್ಬಿ ಹೊನ್ನೆಗೌಡರಿಗೆ ಬರೆದ ಪತ್ರದಲ್ಲಿ ದುರ್ಮಾರ್ಗಿಗಳಾಗಿ ನಡೆದುಕೊಂಡ

ಕಾಳಯ್ಯಸಿದ್ಧ, ಅಂಗಡಿ ಸಿದ್ಧ, ಗುರುವ, ಶಾಂತ ಬಸವ, ಸೋಲಬ– ಈ ಐದು ಜನರ ಮನೆಯನ್ನು ಈ ನಿರೂಪ ಕಂಡಾಕ್ಷಣ ಅರಿಕೆ ಮಾಡಿ, ಒಂದು ತೃಣವಾದರೂ ಚದರದ ಹಾಗೆ ಅರಮನೆ ಗೊಲ್ಲನ ಮುಂದಿಟ್ಟು (ಸಾಕ್ಷಿಯಾಗಿಟ್ಟುಕೊಂಡು) ಅವರ ಮನೆಯಲ್ಲಿರುವಂಥಾ ಹಣ, ಚಿನ್ನ, ಬೆಳ್ಳಿ, ನಗನಾಣ್ಯ, ಕಂಚು, ತಾಮ್ರ, ಜವಳಿ, ದವಸ ಧಾನ್ಯ, ಪತ್ರಗಳು, ಮುಂತಾದ ಪಶ್ಚಾದೀ ಪಂಚ ಲೋಹವನ್ನು ಪಟ್ಟಿ ಬರೆಸಿ ಪಟ್ಟಿಯನ್ನು ಕಳಿಸೆಂದು ಆದೇಶಿಸುತ್ತಾರೆ.[೫೫] ಇದು ಆಧುನಿಕ ನ್ಯಾಯ ವ್ಯವಸ್ಥೆಯಡಿ ಬರುವ ಸ್ಥಳಜಪ್ತಿ, ಮಹಜರು ಮತ್ತು ಸ್ಥಳ ಪಂಚಾನಾಮೆಯ ರೀತಿಯಲ್ಲಿಯೇ ಇದೆ.

### ೬.೩ ತೀರ್ಪಿನ ಫಲಿತಗಳು

ಈ ಹಿಂದೆ ವಿವರಿಸಲಾದ ಎಲ್ಲ ಸಂದರ್ಭಗಳಲ್ಲಿ ತೀರ್ಪು ಯಾರ ಕಡೆಗೆ ಆಯಿತು? ನಿಷ್ಪಕ್ಷಪಾತವಾಗಿ ಆಯಿತೇ? ಎಂಬಂತಹ ಪ್ರಶ್ನೆಗಳನ್ನು ಹಾಕಿಕೊಂಡಾಗ, ಕೆಲವು ಪ್ರಕರಣಗಳಲ್ಲಿ ನಿಷ್ಪಕ್ಷಪಾತವಾಗಿ ಆಗಿದೆಯೆನಿಸಿದರೂ, ಇನ್ನು ಕೆಲವು ಸಂದರ್ಭಗಳಲ್ಲಿ ಅನುಕೂಲಕ್ಕೆ ತಕ್ಕ ಹಾಗೆ ನ್ಯಾಯ ನಿರ್ಣಯವಾಗಿರುವುದು ಕಂಡುಬರುತ್ತದೆ. ಕೆಲವು ನಿರ್ಣಯಗಳನ್ನು ಮಾನವೀಯತೆಯ ನೆಲೆಗಟ್ಟಿನ ಆಧಾರದ ಮೇಲೆಯೂ ನೀಡಿರುವುದು ತಿಳಿದುಬರುತ್ತದೆ.

ಆದರೂ, ಸಮಾಜದ ಬಲಾಢ್ಯ ಸಮುದಾಯಗಳ ವಿಷಯದಲ್ಲಿ ಇದನ್ನು ಒಪ್ಪಲು ಆಗುವುದಿಲ್ಲ. ಸಮಾಜದಲ್ಲಿ ಕೆಲವು ಸಮುದಾಯಗಳ ಸಹಕಾರ ಹೆಚ್ಚಾಗಿ ಅಗತ್ಯವಿದ್ದಾಗ, ಅಂಥವರ ಕಡೆಗೇ ನಿರ್ಣಯ ನೀಡಿರುವ ಉದಾಹರಣೆಗಳೂ ಕಂಡುಬರುತ್ತವೆ. ಹಜಾಮರು ಮತ್ತು ನಾಯಿಂದರಿಗೆ ಸಂಬಂಧಿಸಿದ ವ್ಯಾಜ್ಯದ ವಿಷಯ ಕಾನಕಾನಹಳ್ಳಿ (ಕನಕಪುರ) ಮತ್ತು ಧರ್ಮಸ್ಥಳಗಳೆರಡರಲ್ಲೂ ಒಂದೇ ರೀತಿ ಇದೆ. ಆದರೆ ಅಂತಿಮವಾಗಿ ನ್ಯಾಯ ನಿರ್ಣಯ ನೀಡುವಾಗ ಕಾನಕಾನಹಳ್ಳಿ ಶಾಸನದಲ್ಲಿ ಮಡಿವಾಳರ ಪರವಾಗಿ ನೀಡಿದರೆ, ಧರ್ಮಸ್ಥಳದ ಶಾಸನ ಹಜಾಮರ ಪರವಾಗಿ ಆಗುತ್ತದೆ. ಎರಡೂ ಶಾಸನಗಳಲ್ಲಿ ತೀರ್ಪು ನೀಡಿರುವುದು ಕಂಚಿಯಲ್ಲಿಯೇ. ಧರ್ಮಸ್ಥಳ ಶಾಸನದಲ್ಲಿ ಹಜಾಮರು ಡೊಳ್ಳಿನ ಮೇಲೆ ವಸ್ತ್ರ ಹಾಕಿಕೊಂಡರೆಂದು, ಕಾನಕಾನಹಳ್ಳಿ ಶಾಸನದಲ್ಲಿ ವಾಲಗಕ್ಕೆ ಮಲ್ಲಿಗೆ ಮುಡಿಸಿದರೆಂದು ಪ್ರಾರಂಭವಾದ ಕಲಹ ಕಂಚಿಗೆ ಹೋಗಿ ತೀರ್ಮಾನವಾಗಿ ಬಂದರೂ, ಎರಡರಲ್ಲೂ ಇಬ್ಬಗೆಯ ನ್ಯಾಯ ತೀರ್ಮಾನ ಹೇಗಾಯಿತು?

ಇಂಥ ವಾಗ್ವಾದಗಳ ನಂತರ ಗೆದ್ದಂತಹ ಮತಕ್ಕೆ/ಕುಲಗಳಿಗೆ ಬಲಾಢ್ಯ ಸಮುದಾಯಗಳು ಪೋಷಕರೂ ಆಗುತ್ತಾರೆ. ಅಷ್ಟೇ ಅಲ್ಲ ಪ್ರಭುತ್ವಗಳೂ ಸಹ ಕೆಲವೊಮ್ಮೆ ಪ್ರಬಲ ಧರ್ಮ/ಮತ/ ಸಮುದಾಯಗಳೆಡೆಗೆ ವಾಲುವ ಪ್ರವೃತ್ತಿ ಕಾಣಬಹುದು. ಸೋತ ಅಥವಾ ಬಲವಂತವಾಗಿ ಸೋಲೊಪ್ಪಿಕೊಳ್ಳುವ ಮತ/ಸಮುದಾಯಗಳು ಜಯಶಾಲಿಯಾದ ಸಮುದಾಯಗಳ ಕೃಪಾಕಟಾಕ್ಷದಲ್ಲಿ, ಅವರ ಆಶ್ರಯದಲ್ಲಿ, ಕೆಲವೊಮ್ಮೆ ಅವರ ಹಂಗಿನಲ್ಲಿ ಬದುಕುವ ಒತ್ತಡಕ್ಕೆ ಈಡಾಗುತ್ತವೆ.

## ೬.೪ ನ್ಯಾಯ ನಿರ್ಣಯದ ಪ್ರಮಾಣ ಮತ್ತು ನೆಲೆಗಳು

ನ್ಯಾಯ ತೀರ್ಮಾನಕ್ಕೆ ಕೆಲವು ಮಾನದಂಡಗಳನ್ನು ಅನುಸರಿಸಬೇಕಾಗಿತ್ತು. ಪಂಡಿತ ಮಂಡಳಿ, ಸಮುದಾಯಗಳು, ಪ್ರಭುತ್ವ ತಮಗಿಷ್ಟ ಬಂದ ರೀತಿ ನ್ಯಾಯ ತೀರ್ಮಾನ ಮಾಡುವಂತಿರಲಿಲ್ಲ. ನ್ಯಾಯ ನಿರ್ಣಯ ಮಾಡಲು ಪ್ರಧಾನವಾಗಿ ಪ್ರಮಾಣಗಳ ಮಂಡನೆ ಕಡ್ಡಾಯವಾಗಿತ್ತು. ಪ್ರಾಮಾಣ್ಯಗಳು ವ್ಯಕ್ತ ಹಾಗೂ ಅವ್ಯಕ್ತ ಸ್ವರೂಪದಲ್ಲಿರುತ್ತಿದ್ದವು. ಅವು ಮಾನುಷ್ಯರೂಪಿಯಲ್ಲಿರಬಹುದು, ವಸ್ತುರೂಪಿಯಲ್ಲಿರಬಹುದು ಅಥವಾ ಅಮೂರ್ತಸ್ವರೂಪದಲ್ಲಿರಬಹುದು. ಹೇಗೇ ಇರಲಿ ಅವುಗಳನ್ನು ಮಂಡಿಸಿ, ಸಂದರ್ಭಾನುಸಾರವಾಗಿ ವಿವೇಚನೆಯಿಂದ ಸ್ವೀಕರಿಸಿ ನ್ಯಾಯ ನಿರ್ಣಯ ಮಾಡಲಾಗುತ್ತಿತ್ತು.

ಕೌಟಿಲ್ಯನ ಪ್ರಕಾರ ನ್ಯಾಯ ವ್ಯವಹರಣೆಗೆ ಪ್ರಧಾನವಾಗಿ ಈ ಮುಂದಿನ ನಾಲ್ಕು ಪ್ರಮಾಣಗಳನ್ನು ಆಧರಿಸಿರಬೇಕು.

೧. **ಧರ್ಮ–** ಪ್ರತಿವಾದಿ ಅಥವಾ ತಪ್ಪಿತಸ್ಥ ತನ್ನ ಹೊಣೆಗಾರಿಕೆಯನ್ನು ಅಥವಾ ತಪ್ಪನ್ನು ಒಪ್ಪಿಕೊಂಡರೆ, ನ್ಯಾಯಾಲಯವು ಅವನ ತಪ್ಪೊಪ್ಪಿಗೆ ಹೇಳಿಕೆಗನುಸಾರವಾಗಿ ನಿರ್ಣಯವನ್ನು ನೀಡಬೇಕಾಗುತ್ತದೆ.

೨. **ವ್ಯವಹಾರ–** ವಾದಿ–ಪ್ರತಿವಾದಿಗಳು ಸಂಘರ್ಷಮಯ ಅಥವಾ ವ್ಯತಿರಿಕ್ತ ಹೇಳಿಕೆಗಳನ್ನು ನೀಡಿದರೆ ಮತ್ತು ತಮ್ಮ ತಮ್ಮ ಪ್ರಕರಣಗಳಿಗೆ ಪೂರಕವಾಗಿ ಸಾಕ್ಷ್ಯವನ್ನು ಮಂಡಿಸಿದರೆ, ನ್ಯಾಯಾಲಯವು ಸಾಕ್ಷ್ಯವನ್ನೆಲ್ಲ ದಾಖಲಿಸಿಕೊಂಡು ನಿಯತವಾಗಿ ವಿಚಾರಣೆ ನಡೆಸಿ ಪ್ರಕರಣವನ್ನು ಇತ್ಯರ್ಥಗೊಳಿಸಬೇಕಾಗುತ್ತದೆ.

೩. **ಚರಿತ್ರ–** ವಾದಿ ಪ್ರತಿವಾದಿಯ ಪ್ರಕರಣಗಳ ವಸ್ತುಸ್ಥಿತಿ ಮತ್ತು ಸನ್ನಿವೇಶಗಳಿಗೆ ಪೂರ್ವ ನಿದರ್ಶನ ನಿರ್ಣಯಗಳೇನಾದರೂ ಇದ್ದರೆ ಅವುಗಳನ್ನಾಧರಿಸಿ ನಿರ್ಣಯ ನೀಡಬೇಕು.

೪. **ರಾಜಶಾಸನ–** ವಾದದ ಸಂಗತಿಗಳನ್ನು ಸಾಬೀತುಪಡಿಸಲು ಅನ್ವಯಿಸಬಹುದಾದ ಯಾವುವೇ ಕಾನೂನು ತತ್ವಗಳಿಲ್ಲದಿದ್ದರೆ ಮತ್ತು ಯಾವುದೇ ಸಾಕ್ಷ್ಯ ಲಭ್ಯವಾಗಿಲ್ಲದಿದ್ದಾಗ, ರಾಜನು ರಾಜಾಜ್ಞೆ ಮೂಲಕ, ತನ್ನ ವಿವೇಚನಾನುಸಾರ ಪ್ರಕರಣವನ್ನು ಇತ್ಯರ್ಥಪಡಿಸಬೇಕು.[೫೬] ಕಾತ್ಯಾಯನನು ಸೂಕ್ತ ವಾದಪತ್ರವು ತಪ್ಪು ಘೋಷಣೆಗಳಿಂದ ಮುಕ್ತವಾಗಿರಬೇಕು. ಸಮರ್ಥನೀಯ ಸಾಕ್ಷ್ಯವನ್ನು, ಉತ್ತಮ ಕಾರಣಗಳನ್ನು ಹೊಂದಿರಬೇಕು, ಸಂಕ್ಷಿಪ್ತವಾಗಿರಬೇಕು ಮತ್ತು ಸ್ವಯಂ ವೈರುಧ್ಯಗಳಿಂದ ಕೂಡಿರಬಾರದು ಎಂದು ಅಭಿಪ್ರಾಯಪಡುತ್ತಾನೆ.[೫೭]

ಪ್ರಮಾಣಗಳೆಂದರೆ ಸಾಕ್ಷಿಗಳು, ವ್ಯಾಸನು ನ್ಯಾಯ ನಿರ್ಣಯಕ್ಕೆ ಅಗತ್ಯವಾದ ಎಂಟು ಮಾನಕಗಳನ್ನು ವಿವರಿಸುತ್ತಾನೆ. ಮೂರು ರೀತಿಯ ಮಾನುಷ ಸಾಕ್ಷ್ಯಗಳು ಎಂದರೆ ಪ್ರಮಾಣಗಳು, (i) ಮೌಖಿಕ (ii) ಲಿಖಿತ (ದಾಖಲೆಗಳು) (iii) ಅಧಿಬೋಗ (iv) ತಾರ್ಕಿಕ ಊಹೆ (v)

ಚಾಲ್ತಿಯಲ್ಲಿರುವ ದೇಶಾಚಾರಗಳು (vi) ಪ್ರಮಾಣ ಅಥವಾ ದಿವ್ಯಗಳ ತಪ್ಪೊಪ್ಪಿಗೆ (vii) ರಾಜ ಶಾಸನಗಳು (viii) ವಾದಿ ಪ್ರತಿವಾದಿಗಳ ತಪ್ಪೊಪ್ಪಿಗೆ.[೨೮]

ಯಾಜ್ಞವಲ್ಕ್ಯನು ಒಬ್ಬ ವ್ಯಕ್ತಿಯು ತಾನು ಅಹವಾಲು ಮಾಡಿಕೊಂಡ ಪ್ರಕರಣವನ್ನು ರುಜುವಾತುಪಡಿಸುವುದಕ್ಕಾಗಿ ಸಲ್ಲಿಸಬಹುದಾದ ಪ್ರಮಾಣಗಳು ಎರಡು ರೀತಿ ಇವೆ. (i) ಮಾನುಷ ಸಾಕ್ಷಿಗಳು ಎಂದರೆ, ದಾಖಲೆಗಳು, ಸಾಕ್ಷಿಗಳು ಮತ್ತು ಅನುಭೋಗ (ಅಧಿಭೋಗ). ಮತ್ತೊಂದು ರೀತಿಯಲ್ಲಿ ಹೇಳುವುದಾದರೆ ಮೌಖಿಕ ಸಾಕ್ಷ್ಯ, ದಸ್ತಾವೇಜೀಯ ಸಾಕ್ಷ್ಯ ಮತ್ತು ಮೌಖಿಕ ಹಾಗೂ ದಸ್ತಾವೇಜೀಯ ಸಾಕ್ಷ್ಯಗಳ ಮೂಲಕ ಸ್ಥಿರಪಡಿಸಲಾದ ಅಧಿಭೋಗದ ಸಾಕ್ಷ್ಯ; (ii) ದಿವ್ಯ ಅಥವಾ ದೈವಸಾಕ್ಷಿ.[೨೯]

ನಾರದ ಹನ್ನೆರಡು ಬಗೆಯ ಸಾಕ್ಷಿಗಳನ್ನು ಹೆಸರಿಸುತ್ತಾನೆ. ಅವುಗಳಲ್ಲಿ ಐದನ್ನು ಕ್ರಿಯಾ (ನಿಯೋಜಿತ) ಸಾಕ್ಷಿಗಳೆಂದು ಮತ್ತು ಉಳಿದ ಆರನ್ನು ಅಕ್ರಿಯಾ (ನಿಯೋಜಿತವಲ್ಲದ ಸಾಕ್ಷಿಗಳೆಂದು) ಹೆಸರಿಸುತ್ತಾನೆ, ಕ್ರಿಯಾದಲ್ಲಿ,

(i) **ಲಿಖಿತ**– ದಾಖಲೆಗೆ ಸಹಿ ಹಾಕಿರುವ ಅಥವಾ ದಾಖಲೆಯಲ್ಲಿ ಹೆಸರಿರುವ ವ್ಯಕ್ತಿಗಳ ಸಾಕ್ಷಿ;

(ii) **ಗೂಢ**– ವ್ಯವಹಾರದ ಸಂದರ್ಭದಲ್ಲಿ ಕಾಣಿಸಿಕೊಳ್ಳದಂತೆ, ಆದರೆ ವಾದಿ ಪ್ರತಿವಾದಿಗಳು ಏನು ಹೇಳಿದರೆಂಬುದನ್ನು ಕೇಳುವಂತೆ ಪಕ್ಷಕಾರರಲ್ಲೊಬ್ಬನು ಕೋರಿರುವವನು ಗೂಢ ಸಾಕ್ಷಿ;

(iii) **ಉತ್ತರ (indirect witness)**– ಸಾಕ್ಷಿ ಮರಣ ಹೊಂದುವುದಕ್ಕೆ ಮೊದಲು ಅಥವಾ ಪರದೇಶಕ್ಕೆ ಹೋಗುವುದಕ್ಕೆ ಮೊದಲು ಮತ್ತೊಬ್ಬ ನಿಯೋಜಿತ ಸಾಕ್ಷಿಯಿಂದ ಕೇಳಿರುವ ಸಾಕ್ಷಿ ಉತ್ತರ ಸಾಕ್ಷಿ;

(iv) **ಸ್ಮರಿತ (reminded witness)**– ದಾಖಲೆಗಳಲ್ಲಿ ಉಲ್ಲೇಖಿಸದಿದ್ದರೂ ಅಥವ ದಾಖಲೆಗೆ ಸಹಿ ಹಾಕದಿದ್ದರೂ, ವ್ಯವಹಾರದ ಸಂದರ್ಭದಲ್ಲಿ ಹಾಜರಿರುವಂತೆ ಆಹ್ವಾನಿಸಲಾಗಿದ್ದ ಮತ್ತು ವ್ಯವಹಾರಕ್ಕೆ ಸಂಬಂಧಿಸಿದ ಸಂಗತಿಗಳ ಬಗ್ಗೆ ಪದೇ ಪದೇ ಜ್ಞಾಪಿಸಲಾಗಿರುವ ಸಾಕ್ಷಿ;

(v) **ಯಾದೃಚ್ಛಿಕ ಸಾಕ್ಷಿ (Casual witness)**– ವ್ಯವಹರಣೆ ನಡೆಯುತ್ತಿದ್ದ ಸ್ಥಳಕ್ಕೆ ಆಕಸ್ಮಿಕವಾಗಿ ಬಂದು ಅದಕ್ಕೆ ಸಾಕ್ಷ್ಯವಾಗಿದ್ದ ಸಾಕ್ಷಿ.[೩೦]

ಅಕ್ರಿಯಾ ಸಾಕ್ಷಿಗಳಲ್ಲಿ,-

(i) ಗ್ರಾಮಸ್ಥ; (ii) ನ್ಯಾಯಾಧೀಶರು; (iii) ರಾಜ; (iv) ಸಂಬಂಧಪಟ್ಟ ವಾದಿ ಪ್ರತಿವಾದಿಗಳ ವ್ಯವಹಾರಗಳ ಬಗ್ಗೆ ಪರಿಚಯವಿರುವ ವ್ಯಕ್ತಿಗಳು; (v) ಹಕ್ಕುದಾರನಿಂದ ನಿಯೋಜಿತನಾಗಿರುವವರು (vi) ಕುಟುಂಬದ ಸದಸ್ಯರು ಸೇರುತ್ತಾರೆ.[೬೧]

**೬.೪.೧ ಮೌಖಿಕ ಸಾಕ್ಷಿ**

ಮೌಖಿಕ ಪ್ರಮಾಣದಲ್ಲಿ ಸಾಕ್ಷಿಗಳು ಪ್ರಧಾನ ಪಾತ್ರ ವಹಿಸುತ್ತಾರೆ. ಮೌಖಿಕ ಸಾಕ್ಷ್ಯದಲ್ಲಿ ಯಾರು ಸಾಕ್ಷಿಗಳಾಗಬೇಕು ಎಂಬುದಕ್ಕೆ ಮನು "ವಾಸ್ತವವಾಗಿ ತನ್ನ ಕಣ್ಣುಗಳಿಂದ ತಾನೇ ನೋಡಿರುವ ಮತ್ತು ಒಬ್ಬ ವ್ಯಕ್ತಿಯಿಂದ ಕೇಳಿರುವ ವ್ಯಕ್ತಿಯು ಸಾಕ್ಷಿಯಾಗಬಹುದಾಗಿದ್ದು, ಆತನ ಸಾಕ್ಷ್ಯವನ್ನು ಅಂಗೀಕರಿಸಬಹುದು" ಎನ್ನುತ್ತಾನೆ.[೬೨] ಕಾತ್ಯಾಯನ ನ್ಯಾಯ ನಿರ್ಣಯದ ಸಮಯದಲ್ಲಿ ಇದ್ದು, ಆ ಸಂದರ್ಭದಲ್ಲಿ ತಾನು ಏನನ್ನು ಗ್ರಹಿಸಿದ್ದನೋ ಅಥವಾ ಅನುಭವಿಸಿದ್ದಾನೆಯೋ ಅದಕ್ಕೆ ಸಂಬಂಧಿಸಿದಂತೆ ನೀಡಿದ ಸಾಕ್ಷಿಯ ಹೇಳಿಕೆ ಅಂಗೀಕರಿಸಬೇಕೆಂದು ಹೇಳುತ್ತಾನೆ.[೬೩]

ಅಲ್ಲದೆ, ಎಷ್ಟು ಜನ ಸಾಕ್ಷಿಗಳಿರಬೇಕೆಂಬ ಬಗ್ಗೆ ಸಹ ಧರ್ಮಶಾಸ್ತ್ರಗಳಲ್ಲಿ ಚರ್ಚೆಯಾಗಿದ್ದು, ಧರ್ಮಕೋಶದಲ್ಲಿ ಏಕ ವ್ಯಕ್ತಿ ಸಾಕ್ಷ್ಯವನ್ನು ಅಂಗೀಕರಿಸಬಾರದೆಂದು ಹೇಳಲಾಗಿದೆ. ಮನು ಕನಿಷ್ಠ ಮೂರು ಜನ ಸಾಕ್ಷಿಗಳಿರಬೇಕೆಂದು ಹೇಳುತ್ತಾನೆ. ಯಾಜ್ಞವಲ್ಕ್ಯ ಇದಕ್ಕೆ ಕೆಲವು ಸಂದರ್ಭಗಳು ಅಪವಾದವೆಂದು ಹೇಳಿ ವಾದಿ ಪ್ರತಿವಾದಿಗಳ ಸಮ್ಮತಿಯೊಂದಿಗೆ ಒಂದು ಪ್ರಕರಣ ಇತ್ಯರ್ಥಗೊಳಿಸುವುದಕ್ಕೆ ಏಕ ವ್ಯಕ್ತಿ ಸಾಕ್ಷಿಯನ್ನು ಅಂಗೀಕರಿಸಬಹುದೆಂದು ಅಭಿಪ್ರಾಯಪಡುತ್ತಾನೆ.[೬೪]

ಜಯರೇಖೆಗಳಲ್ಲಿ ಕಂಡುಬರುವ ವ್ಯಾಜ್ಯಗಳಲ್ಲಿ ಎಲ್ಲಿಯೂ ಸಾಕ್ಷಿಗಳ ಸಂಖ್ಯೆ ಇಂತಿಷ್ಟು ಎಂದು ನಿರ್ದಿಷ್ಟಪಡಿಸಿಲ್ಲ. ಅಲ್ಲದೆ ಏಕವ್ಯಕ್ತಿ ಸಾಕ್ಷಿ ಕಂಡುಬರುವುದಿಲ್ಲ. ಬದಲಾಗಿ ಕೆಲವು ಶಾಸನಗಳಲ್ಲಿ ಇಬ್ಬರಿಂದ ಹಿಡಿದು ಇಪ್ಪತ್ತಕ್ಕಿಂತ ಹೆಚ್ಚಿನ ಸಂಖ್ಯೆಯ ವ್ಯಕ್ತಿಗಳು ಪ್ರಕರಣಕ್ಕೆ ಸಾಕ್ಷಿಗಳಾಗಿದ್ದು ಸಹಿ ಹಾಕಿರುವುದು ಕಂಡುಬರುತ್ತದೆ.

ಶ್ರವಣ ಬೆಳಗೊಳದಲ್ಲಿ ಜೈನರಿಗೂ-ಭಕ್ತರಿಗೂ ಸಂವಾಜವಾದಾಗ ಅದನ್ನು ಬಗೆಹರಿಸಲು ಕೋವಿಲ್ ತಿರುಮಲೆ, ಪೆರುಮಾಳೆ ಕೋವಿಲ್, ತಿರುನಾರಾಯಣ ಪುರ ಮುಖ್ಯವಾದ ಸಕಳಾಚಾರ್ಯರು, ಸಕಲ ಸಮಯಿಗಳು, ಸಕಲ ಸಾತ್ವಿಕರು, ಮೋಷ್ಟಿಕರು, ತಿರುಪಣಿ, ತಿರುವಿಡಿ, ತಣ್ಣೀರವರು, ನಲ್ವತ್ತೆಂಟು ಜನಾಂಗ, ಹದಿನೆಂಟು ನಾಡ ಶ್ರೀ ವೈಷ್ಣವರು ಸಾಕ್ಷಿಗಳಾಗಿ ಶ್ರವಣಬೆಳಗೊಳಕ್ಕೆ ಆಗಮಿಸುತ್ತಾರೆ.[೬೫] ಮಾದಿಹಳ್ಳಿಯ ಮಾದಿಗತನದ ಕಾಣಾಚಿಗೆ ಸಂಬಂಧಿಸಿದಂತೆ ವಿವಾದ

ಉಂಟಾದಾಗ ಕೆಂಚಣ್ಣಗೌಡ ದೇವರ ಸನ್ನಿಧಿಯಲ್ಲಿ ತನ್ನ ಸಂತತಿಯನ್ನು ಸಾಕ್ಷಿಯಾಗಿರಿಸಿ ಸಾಕ್ಷಿ ಹೇಳುತ್ತಾಮೆ.[೬೬]

ಪಣ ವ್ಯಾಜ್ಯಗಳು ನಡೆದಾಗ ಅವುಗಳಲ್ಲಿ ಗೆದ್ದು ಬಂದಂತಹ ವ್ಯಕ್ತಿಗಳಿಗೆ ನೀಡುತ್ತಿದ್ದ ವಿಶೇಷ ಹಕ್ಕುಗಳು, ಬಿರುದು ಬಾವಲಿಗಳಿಗೆ ವಿವಿಧ ಪಣಕಟ್ಟುಗಳಿಗೆ ಸೇರಿದ ವ್ಯಕ್ತಿಗಳೇ ಸಾಕ್ಷಿಗಳಾಗುತ್ತಿದ್ದರು. ಕಂಚಿಯ ಕಾಳಿಕಾ ದೇವಿಯ ತೇರು ಹಲವಾರು ವರ್ಷಗಳಿಂದ ಕದಲದೇ ಇದ್ದಾಗ, ಗೊಲ್ಲಕುಲದ ಹನುಮಂತ ಎಂಬುವವನು ತನ್ನ ಮಂತ್ರ, ತಂತ್ರ, ಬುದ್ಧಿಬಲಗಳಿಂದ ಚಲಿಸುವಂತೆ ಮಾಡಿದ್ದರಿಂದ ಇವನು ಹಿಂದೂ ಮಹಾಸಾಗರ, ಬಂಗಾಳಕೊಲ್ಲಿ, ಅರಬ್ಬೀಸಮುದ್ರ, ಶಾಂತಿಸಮುದ್ರ ಇವುಗಳ ಮಧ್ಯದಲ್ಲಿರುವಂತಹ ಪಣದವರಿಗೆ ಕೀರ್ತಿ ತಂದನೆಂದು ಹೇಳಿ ಹಲವಾರು ವಿಶೇಷ ಹಕ್ಕುಗಳೊಂದಿಗೆ ಬ್ರಹ್ಮಕಲ್ಪವಾಣಿ ಶಾಸನ ಬರೆಸಿಕೊಟ್ಟಾಗ ಇದಕ್ಕೆ ಕುಂಬಾರ ವೀರಭದ್ರಪ್ಪ, ಬಡಿಗೇರ ಕಾಳಪ್ಪ, ಕಂಚುಗಾರ ಶೇಷಪ್ಪ, ಅಕ್ಕಸಾಲಿಗ ರಾಮಪ್ಪ, ಕಂಚಿ ರಾಮಪ್ಪ, ಬೇಡರ ಕನ್ನಪ್ಪ, ಜಾಂಬುಮಲಪ್ಪ, ಮುಂತಾದವರು ಇದಕ್ಕೆ ಸಾಕ್ಷಿಗಳಾಗಿ ಸಹಿ ಹಾಕುತ್ತಾನೆ.[೬೭]

**೬.೪.೨ ಲಿಖಿತ ಸಾಕ್ಷಿ (ದಾಖಲೆಗಳು)**

ನ್ಯಾಯ ನಿರ್ಣಯದಲ್ಲಿ ಮೌಖಿಕ ಸಾಕ್ಷಿಗಿಂತಲೂ ಲಿಖಿತ ದಾಖಲೆಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಹಿಂದೆ ಬರೆದುಕೊಟ್ಟ ಆಣೆ ಬಾರದ ಓಲೆ, ಅರಮನೆಯಲ್ಲಿರುವ ದಾಖಲೆಗಳು, ಧರ್ಮಶಾಸ್ತ್ರಗಳು, ಕಟ್ಟುತ್ತರಗಳು, ಕಂಚಿಪತ್ರಗಳು ದಾಖಲೆಗಳ ವ್ಯಾಪ್ತಿಯಲ್ಲಿ ಬರುತ್ತವೆ. ನಾರದನ ಪ್ರಕಾರ ಒಂದು ಬರಹ ಸೃಷ್ಟಿಸುವ ಕಟ್ಟುಪಾಡು ಅಥವಾ ಹೊಣೆಗಾರಿಕೆಯನ್ನು ಮತ್ತೊಂದು ದಾಖಲೆ ಮೂಲಕ ಮಾತ್ರವೇ ರದ್ದುಪಡಿಸಬಹುದು. ಹಾಗೆಯೇ ಒಂದು ಬರಹ (ದಾಖಲೆ) ಎಲ್ಲ ಸಾಕ್ಷಿಗಳಿಗಿಂತ ಶ್ರೇಷ್ಠ ಸಾಕ್ಷ್ಯ. ಯಾವ ಸಾಕ್ಷ್ಯವೂ ದಾಖಲೆಗಳಿಗಿಂತ ಶ್ರೇಷ್ಠ ಸಾಕ್ಷ್ಯವಲ್ಲ.[೬೮] ದಾಖಲೆಗಳ ನೈಜತೆ ಮತ್ತು ಅಧಿಕೃತತೆಯ ಬಗ್ಗೆ ಚರ್ಚಿಸುತ್ತಾ, ಕಾತ್ಯಾಯನನು ದಾಖಲೆಗಳಲ್ಲಿ ನಮೂದಿಸಲಾದ ಎಲ್ಲ ವ್ಯಕ್ತಿಗಳು ಮರಣ ಹೊಂದಿದ್ದರೂ ಸಹ ರಾಜಮುದ್ರೆ ಹೊಂದಿರುವ ದಾಖಲೆಯನ್ನು ನೈಜ ದಾಖಲೆಯೆಂದು ಪರಿಗಣಿಸಬೇಕು ಎಂದು ಹೇಳುತ್ತಾನೆ.[೬೯]

ಮೂವತ್ತು ವರ್ಷಗಳಿಂದ ಯಾರೂ ನೋಡಿರದ ಅಥವಾ ಯಾರಿಗೂ ಓದಿ ಹೇಳಿರದ ದಾಖಲೆಯು, ಅದಕ್ಕೆ ಸಂಬಂಧಿಸಿದ ಸಾಕ್ಷಿಗಳು ಜೀವಂತವಾಗಿದ್ದರೂ ಸಹ ಮಾನ್ಯವಾಗುವುದಿಲ್ಲ. ಮಿತಾಕ್ಷರನ ಪ್ರಕಾರ ದಾಖಲೆಯ ನೈಜತೆಯ ಬಗ್ಗೆ ಸಂಶಯ ಉಂಟಾದಾಗ, ಪ್ರಶ್ನಿತ ದಾಖಲೆಯನ್ನು ಬರೆದಿರುವ ವ್ಯಕ್ತಿಯ ಕೈಬರಹದೊಂದಿಗೆ ಹೋಲಿಸಿ ನೋಡಬೇಕು. ಎರಡೂ ದಾಖಲೆಗಳಲ್ಲಿರುವ ಕೈಬರಹ ಒಂದೇ ಎಂದು ಕಂಡುಬಂದರೆ, ಪ್ರಶ್ನಿತ ದಾಖಲೆ ನೈಜವೆಂದು ಅಂಗೀಕರಿಸಬೇಕು. ಅಲ್ಲದೆ

ಎಲ್ಲ ಲಭ್ಯ ಮೌಖಿಕ ಮತ್ತು ಸಾಕ್ಷ್ಯ ಸನ್ನಿವೇಶಗಳನ್ನು ಪರಿಗಣನೆಗೆ ತೆಗೆದುಕೊಂಡು ವಿವಾದಿತ ದಾಖಲೆಯ ನೈಜತೆಯ ಬಗ್ಗೆ ತೀರ್ಮಾನ ತೆಗೆದುಕೊಳ್ಳುವುದಕ್ಕೆ ನ್ಯಾಯಾಲಯಕ್ಕೆ ಅವಕಾಶವಿದೆ.[೭೦]

ಜಯರೇಖೆ ಶಾಸನಗಳಲ್ಲಿ ಹಿಂದೆ ಬರೆದಿಟ್ಟಿರುವ ಶಾಸನಗಳು, ಪತ್ರಗಳು, ಕಂಚಿಪತ್ರಗಳ ಆಧಾರದ ಮೇಲೆ ನ್ಯಾಯ ನಿರ್ಣಯ ನೀಡಲಾಗಿದೆ. ಅರಮನೆಗಳಲ್ಲಿ ಭಂಡಾರಗಳು, ದಾಖಲೆ ಮನೆ, ಚಿನ್ನದ ಮನೆಗಳಲ್ಲಿ, ಮಠಗಳಲ್ಲಿ ಇಂಥ ದಾಖಲೆಗಳನ್ನು ಸಂಗ್ರಹಿಸಿಡಲಾಗುತ್ತಿತ್ತು. ಹಾಗೆಯೇ ಹೆಳವ ಸಮುದಾಯಗಳು ಕುಲ ಕೊಂಡಾಡುವ ಕಡತಗಳನ್ನು, ಚಪ್ಪೋಡುಗಳನ್ನು, ಕುಲದ ವಹಿಗಳನ್ನು ದಫ್ತರುಗಳನ್ನು ಪೀಳಿಗೆಯಿಂದ ಪೀಳಿಗೆಗೆ ಕಾಪಾಡಿಕೊಂಡು ನಿರ್ವಹಿಸಿಕೊಂಡು ಬರುತ್ತಿದ್ದವು. ಎಷ್ಟೋ ಕಲಹಗಳನ್ನು ಹೆಳವರ ಬಳಿಯಿರುವ ಚಪ್ಪೋಡುಗಳಿಂದಲೂ ಇತ್ಯರ್ಥಗೊಳಿಸಲಾಗಿದೆ. ಜಯರೇಖೆಗಳಲ್ಲಿ ಮೌಖಿಕ ಸಾಕ್ಷಿಗಳನ್ನು ಪರಿಗಣಿಸಿ ನ್ಯಾಯ ನಿರ್ಣಯ ಮಾಡಿರುವಂತೆ, ಲಭ್ಯ ಹಳೆಯ ದಾಖಲೆಗಳನ್ನು ಆಧರಿಸಿ ನ್ಯಾಯ ನೀಡಿರುವ ಉದಾಹರಣೆಗಳು ಕಂಡುಬರುತ್ತದೆ. ಆನೆಗೊಂದಿ ಮಠದ ಅಧಿಸ್ವಾಮ್ಯಕ್ಕೆ ಸಂಬಂಧಿಸಿದಂತೆ ಅಂತರವಳ್ಳಿಯ ನಿರಂಜನಯ್ಯ, ಮೂರು ಜಾವದಯ್ಯರ ನಡುವೆ ಕಲಹವಾದಾಗ ಅಂತರವಳ್ಳಿಯವರು ಈ ಸಂಬಂಧ ದಾಖಲೆಗಳನ್ನು ಸಲ್ಲಿಸುವುದಾಗಿ ಹೇಳಿ ಕೆಲವು 'ಪತ್ರಗಳನ್ನು' ತೋರಿಸುತ್ತಾರೆ. ಆದರೆ, ಆ ಪತ್ರಗಳನ್ನು ಸಭೆಯಲ್ಲಿದ್ದವರು ಸರಿಯಿಲ್ಲವೆಂದು ಹೇಳಿ ರೂಢಾಚಾರ್ಯ ಮಠದ ಸದ್ಯೋಜ್ಞಾತ ಸ್ವಾಮಿಗಳಿಗೆ ಜಯಪತ್ರ ಬರೆಸಿಕೊಡುತ್ತಾರೆ.

ಸಾಮಾನ್ಯವಾಗಿ ವ್ಯಾಜ್ಯಗಳು ಏರ್ಪಟ್ಟಾಗ ಪಂಥಾಹ್ವಾನ ನೀಡಿ, ಪಂಥಕ್ಕೆ ಒಪ್ಪಿರುವ ಸೂಚಕವಾಗಿ ಓಲೆ, ಭಾಷಾಪತ್ರ, ಆಣೆಬಾರದ ಪತ್ರ, ಮುಂತಾದವುಗಳನ್ನು ಬರೆಸಿಕೊಂಡು ತರುವಾಯ ಅವುಗಳ ಆಧಾರದ ಮೇಲೆ ಜಯಪತ್ರ ನೀಡಲಾಗುತ್ತಿತ್ತು. ಬಿಜ್ಜಳ ರಾಮಯ್ಯ ಬಸದಿಗಳನ್ನು ಹಾಳುಮಾಡಿರುವ ಬಗ್ಗೆ ಜೈನರು ಬಿಜ್ಜಳನಲ್ಲಿಗೆ ಹೋಗಿ ದೂರಿತ್ತಾಗ, ಬಿಜ್ಜಳ ರಾಮಯ್ಯನಿಗೆ 'ನೀವಿದ ನ್ಯಾಯವನೇಕೆ ಮಾಡಿದಿರಿ' ಎಂದು ಆಕ್ರೋಶಗೊಂಡಾಗ, ರಾಮಯ್ಯ ತನಗೆ ಜೈನರು ಪಂಥಾಹ್ವಾನ ಸ್ವೀಕರಿಸಿ ನೀಡಿದ್ದ 'ಓಲೆ'ಯನ್ನು ತೋರಿಸುತ್ತಾನೆ. ಬಿಜ್ಜಳ ಓಲೆಯನ್ನೇ ಸಾಕ್ಷಿಯನ್ನಾಗಿ ಅಂಗೀಕರಿಸಿ ರಾಮಯ್ಯಗೆ ಜಯಪತ್ರ ನೀಡುತ್ತಾನೆ[೭೧].

ಹಟ್ಟಿದೆರೆ ವಕ್ಕಲುತನಕ್ಕೆ ಸಂಬಂಧಿಸಿದಂತೆ ಕೊಡಬೇಕಾಗಿದ್ದ ಕುಲದ ಹಣದ ವಿಷಯದಲ್ಲಿ ವಿವಾದ ಉಂಟಾದಾಗ ಕಾಪಗೌಡ ತಾನು, ತನ್ನ ಮುತ್ತಯ್ಯ ಮೂರು ಥರದವರೂ ಹಟ್ಟಿ ಒಕ್ಕಲು ಅಲ್ಲ ಎಂದಾಗ, ಕುಲದ ವಹಿ ತರಿಸಿಕೊಂಡು ನೋಡಿ ಆನಂತರ ನ್ಯಾಯ ವ್ಯವಹಾರ ಬಗೆಹರಿಸಲಾಗುತ್ತದೆ.[೭೨]

ಶಂಖಬಸದಿಯ ಶಾಂತಿನಾಥ ತೀರ್ಥಂಕರರ ಉತ್ಸವದ ಸಂದರ್ಭದಲ್ಲಿ ನಡೆದ ವಿವಾದದಲ್ಲಿ ವೇದ ಶಾಸ್ತ್ರ ಆಗಮಗಳನ್ನು ದಾಖಲೆಗಳನ್ನಾಗಿ ಮಾಡಿಕೊಂಡು, ಅವುಗಳ ಆಧಾರದ ಮೇಲೆ ನ್ಯಾಯ ನಿರ್ಣಯ ನೀಡಿದರೆ,[೭೩] ಶೃಂಗೇರಿಯ ಒಂದು ಜಯರೇಖೆಯಲ್ಲಂತೂ ಆಪಸ್ತಂಭ, ವಿಜ್ಞಾನೇಶ್ವರ, ಪರಾಶರ, ಹಾರಿತಿ, ವಶಿಷ್ಠ, ಬೋಧಾಯನ, ಮುಂತಾದ ಸ್ಮೃತಿಕಾರರ ಸೂತ್ರಗಳನ್ನು ಸಂಸ್ಕೃತದಲ್ಲಿ ಯಥಾವತ್ತಾಗಿ ನಮೂದಿಸಿ ಅವುಗಳ ಆಧಾರದ ಮೇಲೆ ನ್ಯಾಯ ನಿರ್ಣಯಿಸಲಾಗಿದೆ.[೭೪] ವಿರೂಪಾಕ್ಷ ಜೋಯಿಸರ ಸ್ವಾಸ್ತಿ ಗ್ರಾಮಗಳ ಸಂಬಂಧದಲ್ಲಿ ವ್ಯಾಜ್ಯ ಉಂಟಾದಾಗ, ಶ್ರೀನೃಸಿಂಹ ಭಾರತಿ ಸ್ವಾಮಿಗಳು ಸ್ಥಳೀಯರಾದ ಬ್ರಾಹ್ಮಣ ಸಭೆಯ ಜೋಯಿಸರು, ಶಾಸ್ತ್ರಿಗಳು, ಅವಧಾನಿಗಳು, ದೀಕ್ಷಿತರು, ಸುತ್ತಮುತ್ತಲಿನ ಗ್ರಾಮಗಳ ಶಾನುಭೋಗರು, ಮುಂತಾದ ಸಕಲರನ್ನು ಸೇರಿಸಿ ವಿಜ್ಞಾನೇಶ್ವರ ಶಾಸ್ತ್ರವನ್ನು ಓದಿಸಿ ಅದರಲ್ಲಿಯ ನ್ಯಾಯವಿಧಿಗಳಂತೆ ನ್ಯಾಯ ನಿರ್ಣಯ ನೀಡುತ್ತಾರೆ.[೭೫]

ಮಠಗಳಲ್ಲಿ 'ಕೈವಾಲೆ ಕಟ್ಟುಗಳಿದ್ದು' ಅವುಗಳಲ್ಲಿ ಹಳೆಯ ದಾಖಲೆಗಳನ್ನು ಸಂಗ್ರಹಿಸಿಡಲಾಗುತ್ತಿತ್ತು. ಶೃಂಗೇರಿ ಮಠದ ಶ್ರೀಮುಖ ಎಂದರೆ ಸ್ವಾಮಿಗಳ ಅಧಿಕೃತ ಪತ್ರ ತೆಗೆದುಕೊಂಡು ಬಂದು ಕಾಣಿಕೆಗಳನ್ನು ಸಂಗ್ರಹಿಸಲು ಪ್ರಯತ್ನಿಸಿದಾಗ ಸ್ಥಳೀಯ ಆಡಳಿತಗಾರರು ದಳವಾಯಿ ದೇವರಾಜಯ್ಯನವರ ಗಮನಕ್ಕೆ ತಂದರು. ಆಗ ಅರಮನೆ ದಾಖಲೆ ಭಂಡಾರವನ್ನು ಪರಿಶೀಲಿಸಿ, ಶೆಟ್ಟಿ ವರ್ತಕರು ಈ ಎಲ್ಲ ಮಠದ ಬ್ರಾಹ್ಮಣರು ತಂದಿದ್ದ 'ಕೈವಾಲೆ ಕಟ್ಟುಗಳನ್ನು' ಪರಿಶೀಲಿಸಿ, ಶೃಂಗೇರಿ ಬಳಿಯಲ್ಲಿ ಇರುವ ವಿದ್ಯಾರಣ್ಯಪುರದಲ್ಲಿ ಪ್ರಾಯಶ್ಚಿತ್ತಗಳನ್ನು ಕೂಡ್ಲಿ ನರಸಿಂಹ ಭಾರತೀ ಸ್ವಾಮಿಗಳ ಬಳಿಯಲ್ಲಿಯ ತೀರಿಗೆ ಇರುವುದರಿಂದ ಶೃಂಗೇರಿ ನರಸಿಂಹ ಭಾರತಿಗಳು ತಾವು ಮಾಡಬೇಕೆಂದು ವಹಿಸದೆ ಕೂಡ್ಲಿ ಸ್ವಾಮಿಗಳಿಗೆ ಒಪ್ಪಿಸಿದವರಾದ ಕಾರಣ ಈ ಎಲ್ಲ ದಾಖಲೆಗಳನ್ನು ಪರಿಶೀಲಿಸಿ ಕಾಣಿಕೆ ಸಂಗ್ರಹಿಸುವ ಹಕ್ಕು ಕೂಡ್ಲಿ, ಶಿವಗಂಗೆ ಮಠಗಳಿಗೆ ಸಲ್ಲುವುದೆಂದು ನಿಶ್ಚಯಿಸಿ ಜಯರೇಖೆ ಬರೆದುಕೊಡಲಾಯಿತು.[೭೬]

ವೈಯಕ್ತಿಕವಾಗಿ ದಾನ-ದತ್ತಿಗಳನ್ನು ನೀಡಿದಾಗ, ಆ ಬಗ್ಗೆ ಶಾಸನಗಳನ್ನು ಬರೆಸಿ ಸಂಬಂಧಪಟ್ಟ ದಾನಾರ್ಥಿಗೆ ನೀಡಲಾಗುತ್ತಿತ್ತು. ವ್ಯಾಜ್ಯಗಳು ಉಂಟಾದಾಗ ಅವುಗಳನ್ನು ಹಾಜರುಪಡಿಸಬೇಕಾಗಿತ್ತು. ದೇವಾಲಯ ಮತ್ತಿತ್ತರ ಭೂವಿವಾದಗಳು ಉಂಟಾದಾಗ ಎರಡೂ ತಂಡಗಳ ಶಾಸನಗಳನ್ನು ಓದಿಸಿ ಅದರ ಪ್ರಕಾರ ತೀರ್ಮಾನ ಮಾಡಲಾಗುತ್ತಿತ್ತು. ಪುಲಿಗೆರೆ ಸೋಮನಾಥ ದೇವರ ಮತ್ತು ಶಂಖಬಸದಿಗೆ ಸಂಬಂಧಿಸಿದಂತೆ ಭೂವಿವಾದಗಳು ಉಂಟಾದಾಗ, ಪ್ರಧಾನ ನಾಗಣ ದಂಡನಾಯಕ, ಪುರೋಹಿತ ಸಂಗಮದೇವ, ಅರಮನೆಯ ವಿದ್ವಾಂಸರುಗಳು ಸೇರಿ ಎರಡೂ ಕಡೆಯ ಶಾಸನಗಳನ್ನು ಓದಿಸಿ ನಂತರ ತೀರ್ಪು ನೀಡುತ್ತಾರೆ.[೭೭]

ಕುಲಕಟ್ಟಳೆಗಳಿಗೆ ಮತ್ತು ಕುಲಗಳಿಗೆ ಯಾರು ಗುರುಗಳಾಗಬೇಕೆಂಬ ಬಗ್ಗೆ ವ್ಯಾಜ್ಯಗಳು ಉದ್ಭವಿಸಿದಾಗ ಅಂಥ ವ್ಯಾಜ್ಯಗಳನ್ನು ಬಗೆಹರಿಸಲು ಕಂಚಿಪತ್ರಗಳನ್ನು 'ಪ್ರಮಾಣ'ವಾಗಿ ಸ್ವೀಕರಿಸಲಾಗುತ್ತಿತ್ತು. ಕರ್ನಾಟಕದ ಹಲವಾರು ತಳ ಸಮುದಾಯಗಳು ತಮ್ಮ ಕುಲಕಟ್ಟಳೆಗಳಿಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ಕಂಚಿಯಲ್ಲಿರುವ ಶಾಸನದಲ್ಲಿ ಬರೆದಿಡಲಾಗಿದೆ ಎಂದು ಬಲವಾದ ನಂಬಿಕೆಯನ್ನು ಹೊಂದಿದ್ದರು. ಅಲ್ಲದೆ ತಮ್ಮ ಬಳಿ ಅದರ ನಕಲು ಇದೆ ಎಂದು ನಂಬಿರುತ್ತಿದ್ದರು. "ಈ ಮಹಾಕಂಚಿ ಶಾಸನವು ಕಾಮಾಕ್ಷಿ ಅಮ್ಮನವರ ವರದರಾಜಸ್ವಾಮಿ ಹಾಲ್ಯ ಮಧ್ಯದಲ್ಲಿರುತ್ತದೆ. ಕಂಚಿನಗರಕ್ಕೆ ಅಧಿಕ ತರವಾದ ಅಧಿಪತಿಯಾದಂತಹ ನಡುಬೀದಿ ತಿರುಮಲಾಚಾರ್ಯರು ಸಹಸ್ರ ಅಕ್ಷರಗಳಿಂದ ಐದೂವರೆ ತೊಲ ಪ್ರಮಾಣದ ಶಾಸನವನ್ನು ತೆಪ್ಪ ಕೋಣೆಯಲ್ಲಿ ನಿರ್ಮಿಸಿರುತ್ತಾರೆ. ಅಸಲಿಗೆ ಸರಿಯಾದ ನಕಲು ಎತ್ತಿ ಬರೆದಿರುತ್ತದೆ. 'ಈ ತಾಮ್ರದ ಯಥಾವತ್ತು ಮತ್ತೊಂದು ಪ್ರತಿಯಿದ್ದು, ಅಸಲಿಗೆ ಸರಿಯಾದ ನಕಲು'[೭೮] ಎಂದು ಹೇಳಲಾಗುತ್ತದೆ.

ಕಂಚಿಪತ್ರಗಳ ನೈಜತೆಯ ಬಗ್ಗೆ ಯಾರೂ ಸಂಶಯ ವ್ಯಕ್ತಪಡಿಸುವಂತಿರಲಿಲ್ಲ. ಅಲ್ಲದೆ ಇವುಗಳಲ್ಲಿರುವ ವಿಷಯವನ್ನು ಮುಂದೆ ಬರುವ ದೊರೆಗಳು ಅನುಸರಿಸಿಕೊಂಡು ಬರಬೇಕೆಂಬ ಷರತ್ತನ್ನು ವಿಧಿಸುತ್ತವೆ. ಇದು ಕಂಚಿ ಶಾಸನ. ಇದನ್ನು ಪೂರ್ವದಲ್ಲಿ ಜಾಂಬವಂತರು ಹಾಕಿಸಿದ್ದು, ತಪ್ಪು ಅಂದವನ ಬಾಯಲ್ಲಿ ಹುಳ ಬೀಳುತ್ತೆ. ಐವತ್ತಾರು ದೇಶಕ್ಕೆ ಇದೇ ಶಾಸನ. ಇದರಂತೆ ನಡೀಬೇಕು. ಇದಕ್ಕೆ ತಪ್ಪಿದವನು ಹಂದಿ, ನರಿ, ನಾಯಿ, ಗೂಗೆಯ ಜನ್ಮ ತಾಳುತ್ತಾನೆ. ನಾವು ಬರೆದುಕೊಟ್ಟಂತಹ ಬಹುಮಾನಗಳ ಯೀ ಕಂಚಿನ ಶಾಸನದಲ್ಲಿ ಇರುವ ವಚನಗಳು ಮುಂದೆ ಹುಟ್ಟಿದಂತ ದೊರೆಗಳು ನಡೆಸಿಕೊಡಬೇಕು. ನೀವು ನಡೆಸಿಕೊಡದಿದ್ದರೆ, ನಿಮ್ಮ ಹಿರೆ ಮಗುವಿಗೆ ಕೊರಳು ಕುಯಿದಾಗೆ ಯೆಂದು ಕಂಚಿನ ಶಾಸನದಲ್ಲಿ ಬರೆದುಕೊಡುತ್ತಿದ್ದರು"

### ೬.೪.೩ ಅಧಿಬೋಗ

ನ್ಯಾಯ ಪ್ರಮಾಣಗಳಲ್ಲಿ ಅಧಿಬೋಗಕ್ಕೆ ನಾಲ್ಕನೆಯ ಸ್ಥಾನವಿದೆ. ಪ್ರಧಾನವಾಗಿ ಸ್ಥಿರಾಸ್ತಿಗೆ ಸಂಬಂಧಿಸಿದಂತೆ ಈ ನ್ಯಾಯವನ್ನು ಅನ್ವಯಿಸಬಹುದು. ಪಿತಾಮಹನ ಪ್ರಕಾರ ನ್ಯಾಯಾಲಯಗಳು ಭೋಗ್ಯವನ್ನು ನಿರ್ಣಾಯಕವೆಂದು ಒಪ್ಪಲು ಐದು ಲಕ್ಷಣಗಳಿಂದ ಕೂಡಿರಬೇಕು. ಅವೆಂದರೆ ಹಕ್ಕು, ದೀರ್ಘಕಾಲ, ಅವಿಚ್ಛಿನ್ನ ಪರಂಪರೆ, ವಿರೋಧಿಸಲ್ಪಡದಿರುವಿಕೆ ಮತ್ತು ಪ್ರತಿವಾದಿಯ ಕಣ್ಣಿಗೆ ಬಿದ್ದಿರುವಿಕೆ.[೭೯]

ಇದಲ್ಲದೆ "ಸ್ವಹಸ್ತದಿಂದ ಬರೆದ ಒಂದು ಖಾಸಗಿ ಪತ್ರಕ್ಕಿಂತಲೂ ಸಾರ್ವಜನಿಕವಾಗಿ ಬರೆಯಲ್ಪಟ್ಟ ಜಾನಪದ ಪತ್ರಕ್ಕೆ ಬೆಲೆ ಹೆಚ್ಚು; ಜಾನಪದ ಪತ್ರಕ್ಕಿಂತಲೂ ರಾಜಶಾಸನಕ್ಕೆ ಬೆಲೆ ಹೆಚ್ಚು; ರಾಜಶಾಸನಕ್ಕಿಂತಲೂ ಮೂರು ತಲೆಮಾರುಗಳ ಭೋಗಕ್ಕೆ ಬೆಲೆ ಹೆಚ್ಚು" (ಸ್ವಹಸ್ತಕಾ ಜಾನಪದಂ

ತಸ್ಮಾತ್ತು ನೃಪಶಾಸನಮ್। ತತ್ಸ್ತ್ರೈಪುರುಷೋ ಭೋಗಃ ಪ್ರಮಾಣತರಮಿಷ್ಯತೇ) ಎಂದು ಸಾಕ್ಷ್ಯದಲ್ಲಿ ಅಧಿಭೋಗಕ್ಕಿರುವ ಮೌಲ್ಯವನ್ನು ಎತ್ತಿ ಹಿಡಿಯುತ್ತಾನೆ.[೮೦]

ಅಧಿಭೋಗ ಪ್ರಮಾಣವನ್ನು ಸಾಕ್ಷಿ ಹಾಗೂ ಸಾಕ್ಷ್ಯಗಳನ್ನು ಅವಲಂಬಿಸಿಯೇ ನಿರ್ಧರಿಸಬೇಕಾಗಿತ್ತು. ಹೀಗಾಗಿ ಒಂದು ಭೂಮಿಯ 'ಅಧಿಭೋಗ್ಯ' ಪ್ರಮಾಣವಾಗಿದ್ದರೂ, ಅದು ಯಾರ ಅಧಿಭೋಗದಲ್ಲಿತ್ತು ಎಂಬ ಬಗ್ಗೆ ಸಾಕ್ಷಿಗಳು ಸಾಕ್ಷ್ಯ ನುಡಿಯಲೇಬೇಕಾಗಿತ್ತು ಅಥವಾ ಅದಕ್ಕೆ ದಾಖಲೆಗಳು ಸಾಕ್ಷ್ಯವಾಗಿ ಇರಬೇಕಾಗಿತ್ತು.

ಪುಲಿಗೆರೆಯ ಶಂಖಬಸದಿ ಮತ್ತು ಸೋಮೇಶ್ವರದ ದೇವಾಲಯದ ಭೂವಿವಾದ ಏರ್ಪಟ್ಟಾಗ, ಉಭಯ ವಾದಿ ಪ್ರತಿವಾದಿಗಳನ್ನು ಕರೆದು, ಹರಿಹರರಾಯರ ಕಾಲದಿಂದ ಇಂದು ಪರ್ಯಂತರದಲು ಹುಲಿಗೆರೆಯ ನಾಡಗೌಡ ಮುಂತಾದ ಪ್ರಜೆಗಳು ಹರಿಹರ ರಾಯರ ಮನ್ವಂತರ ಪರಿಯಂತರಾಗಿ ಈ ಮೂರು ಕೈಯ್ಯನು ನಿರಾಸೇದದಿಂದ ಶಿವರಾಮ ಅಯ್ಯಗಳು ಭೋಗಿಸಿಹರೆಂದು ಹುಲಿಗೆರೆ ನಾಡಗೌಡ, ಮುಂತಾದ ಗೌಡು ಪ್ರಜೆಗಳು ಹೇಳಿದರೆ, ಹೇಮದೇವಾಚಾರ್ಯ ಆ ಹೊಲವನ್ನು ಶಿವರಾಮಯ್ಯನಿಗೆ ಬಿಡಬೇಕೆಂದು ಆಣೆಬಾರದ ಓಲೆ ಬರೆಸಿಕೊಳ್ಳುತ್ತಾರೆ.[೮೧] ಪ್ರಸ್ತುತ ಶಾಸನ ಒಂದನೆಯ ದೇವರಾಯನದಾಗಿದ್ದು,(ಕ್ರಿ.ಶ. ೧೪೧೨), ಅದಕ್ಕೂ ಪೂರ್ವದಲ್ಲಿ ಹರಿಹರದ ಕಾಲದಿಂದಲೂ ಭೂಮಿಯನ್ನು ಶಿವರಾಮಯ್ಯ ಅನುಭವಿಸುತ್ತಿದ್ದನೇ? ಇಲ್ಲವೇ? ಎಂಬುದನ್ನು ಸಾಕ್ಷ್ಯವಾಗಿ ಅಂಗೀಕರಿಸಲಾಗಿದೆ.

**೬.೪.೪. ಆಚರಣೆಯಲ್ಲಿರುವ ದೇಶಾಚಾರಗಳು (ಸದಾಚಾರಗಳು)**

ಹಿಂದಿನ ಆಚರಣೆಗಳೇ ಪ್ರಮಾಣಗಳು. ಆದರೆ ಈ ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ, ಭಿನ್ನವಾದ ಕಾರಣ ಇವು ಸಾರ್ವತ್ರಿಕವಾಗಿ ಎಲ್ಲ ಕಡೆಗೂ ಪ್ರಮಾಣಗಳಾಗಿ ಸಲ್ಲುವುದಿಲ್ಲವೆಂಬುದೂ ಅಷ್ಟೇ ಸ್ಪಷ್ಟ. ಪಿತಾಮಹ "ಒಂದೇ ದೇಶ, ಪಟ್ಟಣ, ಸಮಾಜಗಳು, ಪುರಗಳು ಮತ್ತು ಗ್ರಾಮಗಳಲ್ಲಿಯ ಪ್ರತಿವಾದಿಗಳ ನ್ಯಾಯ ಪರಿಹಾರವನ್ನು ಅವರವರ ಸಮಯಾಚಾರಗಳಿಗೆ ಅನುಗುಣವಾಗಿ ಬಗೆಹರಿಸಬೇಕು; ಆದರೆ ಭಿನ್ನ ಭಿನ್ನ ದೇಶಾದಿಗಳವರ ವ್ಯವಹಾರವಾಗಿದ್ದರೆ ಶಾಸ್ತ್ರಾನುಸಾರವಾಗಿಯೇ ನಿರ್ಣಯಕ್ಕೆ ಬರಬೇಕು"[೮೨] ಎನ್ನುತ್ತಾನೆ. ಶ್ರುತಿ, ಸ್ಮೃತಿ ಮತ್ತು ಸದಾಚಾರ ಇವುಗಳನ್ನು ನಿರ್ದಿಷ್ಟ ಕ್ರಮಗಳಲ್ಲಿ ಧರ್ಮಮೂಲಗಳೆಂದು ಮನು ಹೇಳಿದ್ದರೂ, ಶಾಸ್ತ್ರಗಳನ್ನೇ ಆಧರಿಸಿ ನಿರ್ಣಯ ಮಾಡುತ್ತಿರಲಿಲ್ಲ. ಕುಲಾಚಾರಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದನ್ನು ಕಾಣುತ್ತೇವೆ. ಬೃಹಸ್ಪತಿ "ನ್ಯಾಯವನ್ನು ಆಲೋಚಿಸದೆ ಮಾಡಿದ ನಿರ್ಣಯ ಧರ್ಮ ಹಾನಿಗೆ ಕಾರಣವಾಗಿರುವುದರಿಂದ ಕೇವಲ ಶಾಸ್ತ್ರವನ್ನೇ ಆಶ್ರಯಿಸಿ ವಿಚಾರವೊಂದರ ಬಗೆಗೆ ನಿರ್ಣಯಕ್ಕೆ ಬರಬಾರದು ಎನ್ನುತ್ತಾನೆ. ಅಲ್ಲದೆ ಬೇಸಾಯಗಾರರು, ಶಿಲ್ಪಿಗಳು, ಕುಸ್ತಿಪಟುಗಳು, ಲೇವಾದೇವಿ ಮಾಡುವವನು, ಚೋರರು,

ಇವರುಗಳಲ್ಲಿ ಪರಸ್ಪರ ವಿವಾದ ಉಂಟಾದಾಗ ಅವರವರ ಧರ್ಮಕ್ಕನುಸಾರವಾಗಿ ನಿರ್ಣಯವನ್ನು ನೀಡಬೇಕೆಂದು" ಪ್ರತಿಪಾದಿಸುತ್ತಾನೆ.[೮೩]

ವರದರಾಜನು ತನ್ನ ಗೀರ್ವಾಣ ಪದಮಂಜರಿಯಲ್ಲಿ ಕನ್ಯಾಕುಬ್ಜ ಬ್ರಾಹ್ಮಣನೊಬ್ಬನಿಗೂ, ವಿಜಯನಗರದ ಸನ್ಯಾಸಿಯೊಬ್ಬನಿಗೂ ನಡೆಯುವ ಸಂಭಾಷಣೆಯಲ್ಲಿ ಒಂದೊಂದು ದೇಶದಲ್ಲಿ ಸದಾಚಾರವಾಗಿರುವ ಆಚರಣೆಗಳು ಮತ್ತೊಂದು ದೇಶದಲ್ಲಿ ಯಾವ ರೀತಿ ದುರಾಚಾರವಾಗುತ್ತವೆ ಎಂಬುದನ್ನು ಬ್ರಾಹ್ಮಣನ ಬಾಯಲ್ಲಿ ಹೇಳಿಸಿದ್ದಾನೆ "ದಾಕ್ಷಿಣಾತ್ಯದಲ್ಲಿ ಸೋದರ ಮಾವನ ಮಗಳನ್ನು ಮದುವೆಯಾಗುವುದು, ಹುಡುಗಿಯರಿಗೆ ನಾಲ್ಕು ವರ್ಷ ತುಂಬುವ ಮೊದಲೇ ಮದುವೆ ಮಾಡುವುದು, ಕರ್ನಾಟಕದಲ್ಲಿ ಸ್ನಾನ ಮಾಡದೆ ಊಟಕ್ಕೆ ಕುಳಿತುಕೊಳ್ಳುವುದು, ಅಣ್ಣನಿಗಿಂತ ಮೊದಲೇ ತಮ್ಮನ ಮದುವೆ ಮಹಾರಾಷ್ಟ್ರದಲ್ಲಿ ಮಾಡುವುದು, ಪರ್ವತ ಪ್ರದೇಶಗಳಲ್ಲಿ ನಿಯೋಗ ಪದ್ಧತಿ ಇರುವುದು ಇಂಥ ನಿದರ್ಶನಗಳೆಂದು"[೮೪] ಹೇಳುತ್ತಾನೆ.

ಈ ಎಲ್ಲ ಸ್ಮೃತಿಕಾರರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಸದಾಚಾರಗಳಿಗಿಂತ ಪೂರ್ವನಿಹಿತ ಆಚರಣಾ ಕ್ರಮಗಳನ್ನೇ ಪ್ರಮಾಣಗಳೆಂದು ಪರಿಗಣಿಸಲಾಗಿದೆ. ಕುಲಕಟ್ಟಳೆಗಳಿಗೆ ಸಂಬಂಧಪಟ್ಟ ಜಯರೇಖೆಗಳಲ್ಲಿ ಹಾಗೂ ಕಂಚಿಪತ್ರಗಳಲ್ಲಿ ಇಂಥ ಪೂರ್ವಾಚಾರ ನಿದರ್ಶನಗಳನ್ನು ಸಾಕ್ಷ್ಯವಾಗಿ ಪರಿಗಣಿಸಿರುವುದು ಕಂಡುಬರುತ್ತದೆ. ಛಲವಾದಿ ಮತ್ತು ಜಾಂಬವ ಸಮುದಾಯಗಳ ನಡುವೆ ಮದುವೆಯ ಸಂದರ್ಭದಲ್ಲಿ ಬಳಸಬಹುದಾದ ಮತ್ತು ಬಳಸಬಾರದಂತಹ ವಸ್ತುಗಳ ಬಗ್ಗೆ ಕಲಹ ಉಂಟಾದಾಗ, ಪೂರ್ವದಲ್ಲಿ ಅರುಂಧತಿಯ ಮದುವೆಯಲ್ಲಿ ವಶಿಷ್ಠರು ಬಳಸಿದಂತಹ ವಸ್ತುಗಳನ್ನು ಕಂಚಿಪತ್ರದಲ್ಲಿ ಬರೆದಿಟ್ಟಿದ್ದಾರೆಂಬ ನಂಬಿಕೆಯಿಂದ, ಆ ಕಂಚಿಪತ್ರದಲ್ಲಿರುವಂತೆ ನ್ಯಾಯ ನಿರ್ಣಯ ಮಾಡಿರುವುದು ಚಲವಾದಿ ಮತ್ತು ಗೋಸಂಗಿ (ಜಾಂಬವ) ಸಮುದಾಯಗಳ ನಡುವೆ ನಡೆದಿರುವ ಬಹುಪತ್ಯಗಳಲ್ಲಿ ದೊರೆತಿರುವ ಕಂಚಿಪತ್ರಗಳು ಪ್ರಮುಖ ನಿರ್ದಶನಗಳಾಗಿವೆ.[೮೫] ಇದಲ್ಲದೆ, ಕಂಚಿಯಲ್ಲಿ ರಾಜಗಳೂ ಸಹ, ಕುಲಾಚಾರಗಳಿಗೆ ಸಂಬಂಧಿಸಿದಂತೆ ಶಾಸನಗಳನ್ನು ಬರೆಸಿದ್ದಾರೆ ಎಂಬ ನಂಬಿಕೆಯನ್ನೂ ಸಹ ಪೋಷಿಸಿಕೊಂಡು ಬಂದಿರುವುದನ್ನು ಕಾಣಬಹುದು. ಅಗಸರು ಮತ್ತು ನಾಯಿಂದರಿಗೆ ಕೆಲವು ಕುಲಚಹರೆಗಳ ಬಳಕೆಗೆ ಸಂಬಂಧಿಸಿದಂತೆ ವಿವಾದ ಉಂಟಾದಾಗ ಕಂಚಿಯಲ್ಲಿ ಕೃಷ್ಣರಾಯರು ತನ್ನ ಕಾಲದಲ್ಲಿ ಯಾರ್‍ಯಾರಿಗೆ ಯಾವ ಕಾಲದಲ್ಲಿ ಯಾವ ರೀತಿ ನಡೆಯಬೇಕು ಎಂಬ ಬಗ್ಗೆ ಪದ್ಧತಿಗಳನ್ನು ವಿಧಿಸಿದ್ದು, ಅವುಗಳನ್ನು ನೋಡದೆ ಇದು ತೀರುವುದಿಲ್ಲವೆಂದು ಉಭಯ ಕುಲಸ್ಥರು ಕಂಚಿಗೆ ಹೋಗಿ ಅಲ್ಲಿ ನೀಡುವ ನ್ಯಾಯಕ್ಕೆ ಬದ್ಧರಾಗಿ ಅಂಗೀಕರಿಸುತ್ತಾರೆ.[೮೬]

ವಾದಿ ಪ್ರತಿವಾದಿಗಳ ತಪ್ಪೊಪ್ಪಿಗಳು ಕಾತ್ಯಾಯನನ ಪ್ರಕಾರ ಪ್ರತಿವಾದಿಯ ಹೇಳಿಕೆಯಲ್ಲಿ,-

(i) ಸತ್ಯ (ಒಪ್ಪಿಗೆ);

(ii) ಮಿಥ್ಯ (ಅಲ್ಲಗಳೆಯುವಿಕೆ);

(iii) ಪ್ರತ್ಯಾವಸ್ಕನ್ದನಮ್ (ವಿಶೇಷ ಹೇಳಿಕೆ);

(iv) ಪೂರ್ವಾಚಾರ (ಹಿಂದಿನ ತೀರ್ಪುಗಳು)

– ಈ ನಾಲ್ಕು ವಿಧಾನಗಳಿರಬಹುದು.[೮೭]

ಯಾವುದೇ ದಾಖಲೆಗಳನ್ನೋ, ಸಾಕ್ಷ್ಯಗಳನ್ನೋ ಇಟ್ಟುಕೊಂಡು ವ್ಯಾಜ್ಯಗಳನ್ನು ಹೂಡಿ, ತರುವಾಯ ಅದರಲ್ಲಿ ಹುರುಳಿಲ್ಲವೆಂದು ಕಂಡುಬಂದಾಗ, ವಾದಿ ಅಥವಾ ಪ್ರತಿವಾದಿಗಳು ತಪ್ಪನ್ನು ಒಪ್ಪಿಕೊಂಡು ದಂಡವನ್ನು ಕಟ್ಟಿಬಿಡುತ್ತಿದ್ದರು. ಅಂಥ ಸಂದರ್ಭದಲ್ಲಿ ತಪ್ಪೊಪ್ಪಿಗೆಯ ಆಧಾರದ ಮೇಲೆ ನ್ಯಾಯ ನಿರ್ಣಯ ಮಾಡಲಾಗುತ್ತಿತ್ತು.

ಆನೆಗೊಂದಿ ಮಠದ ಹಕ್ಕುಸ್ವಾಮ್ಯಕ್ಕೆ ಸಂಬಂಧಪಟ್ಟಂತೆ ಅಂತರವಳ್ಳಿಯ ನಿರಂಜನಯ್ಯ ಮತ್ತು ಮೂರು ಜಾವಿದೇವ ಹಾಗೂ ಸದ್ಯೋಜಾತ ಸ್ವಾಮಿಗಳ ನಡುವೆ ನಡೆದ ವ್ಯಾಜ್ಯದಲ್ಲಿ ಅಂತರವಳ್ಳಿಯವರು ಇದಕ್ಕೆ ಸಂಬಂಧಪಟ್ಟಂತೆ ದಾಖಲೆಗಳನ್ನು ಸಲ್ಲಿಸುತ್ತೇವೆಂದು ಹೇಳುತ್ತಾರೆ. ಆದರೆ ಸೂಕ್ತ ದಾಖಲೆಗಳನ್ನು ಸಲ್ಲಿಸಲು ವಿಫಲರಾಗುತ್ತಾರೆ. ಆಗ ಸಭೆಯಲ್ಲಿದ್ದವರು ಪತ್ರಗಳು ಇಲ್ಲದಿದ್ದಾಗ ವ್ಯಾಜ್ಯ ಮಾಡಲು ಏನು ಕಾರಣ ಎಂದು ಪ್ರಶ್ನಿಸಿದಾಗ, ಅಂತರವಳ್ಳಿಯ ನಿರಂಜನಯ್ಯ ಮೂರು ಝಾವಿದೇವರು, ನಮಗೆ ತಿಳಿಯದೆ ಅಜ್ಞಾನದಿಂದ ಕ್ಷುದ್ರ ಜನರ ಮಾತು ಕೇಳಿ ವ್ಯಾಜ್ಯ ಮಾಡಿದ್ದೇ ಹೊರತು, ತಮ್ಮ ಸ್ವಬುದ್ಧಿಯಿಂದ ವ್ಯಾಜ್ಯ ಮಾಡಿಲ್ಲವೆಂದು ಹೇಳಿ ತಪ್ಪೊಪ್ಪಿಕೊಂಡಾಗ, ಆನೆಗೊಂದಿಯ ರೂಢಾಚಾರ್ಯ ಮಠ ಸದ್ಯೋಜ್ಞಾತಸ್ವಾಮಿಗಳಿಗೆ ಸೇರಿದ್ದೆಂದು ನಿರ್ಣಯ ನೀಡಿ ಜಯರೇಖೆ ಬರೆದುಕೊಡುತ್ತಾರೆ.[೮೮]

ಮಾದಿಹಳ್ಳಿಯ 'ಮಾದಿಗತನದ' ವೃತ್ತಿ ಸ್ವಾಮ್ಯತೆಯನ್ನು ಪಡೆಯುವುದಕ್ಕಾಗಿ ದೊಡ್ಡೇರಿಯ ಮಾದಿಗರ ಹೊಟ್ಟೆರಂಗ ಮತ್ತು ಆತನ ವಿರುದ್ಧ ಮಾದಿಗರ ಚಿಕ್ಕ, ಮಧುರೆಗಿರಿಯ ತಿಮ್ಮ, ಬೆಳಗೆರೆಯ ಚನ್ನ, ಕೊಡಿ, ದಾಸ ಇವರು ವ್ಯಾಜ್ಯ ಹೂಡಿದಾಗ ಇದಕ್ಕೆ ಸಾಕ್ಷಿಯಾಗಿ ದೊಡ್ಡೇರಿಯ ಗೌಡರ ಮಲ್ಲಣ್ಣನ ಮೊಮ್ಮಕ್ಕಳಿಂದ ಸಾಕ್ಷಿ ಹೇಳಿಸುವುದಾಗಿ ಹೇಳುತ್ತಾರೆ. ಆದರೆ, ಕೆಂಚಣ್ಣಗೌಡ ಮಾದಿಹಳ್ಳಿ ಮಾದಿಗತನದ ಕಾಣಾಚಿ ಹೊಟ್ಟೆರಂಗನದೇ ಸರಿ, ಮಲ್ಲಪ್ಪನಹಳ್ಳಿ ಚಿಕ್ಕನಿಗೆ ಸಂಬಂಧಿಸಿದ್ದಲ್ಲ, ಎಂದು ಹೇಳಿಕೆ ನೀಡಿದಲ್ಲದೆ, ವೀರಭದ್ರದೇವರ ಗುಡಿಯ ಮುಂದೆ ಮಕ್ಕಳು ಮರಿಗಳನ್ನು ಸಾಕ್ಷಿಯಾಗಿಸಿ, ಮೇಲಿನ ಸತ್ಯ ನುಡಿದಾಗ, ಈ ಐವರು ತಪ್ಪೊಪ್ಪಿಕೊಂಡು ಸೋತಪತ್ರ ಬರೆದು ಕೊಡುತ್ತಾರೆ. ಆ ಸೋತಪತ್ರವನ್ನಾಧರಿಸಿ, ಹೊಟ್ಟೆರಂಗನ ಪರವಾಗಿ ನ್ಯಾಯ ನಿರ್ಣಯ ಮಾಡಲಾಗುತ್ತದೆ.[೮೯]

### ೬.೫ ಜಯರೇಖೆಗಳ ಆತ್ಯಂತಿಕ ಪ್ರಮಾಣಗಳಾಗಿ ದಿವ್ಯಗಳು

ವಾದ ವಿವಾದಗಳಲ್ಲಿ ಆಣೆ ಪ್ರಮಾಣಗಳನ್ನು ದೈವಸಾಕ್ಷಿಯಾಗಿ ಮಾಡಿಸಲಾಗುತ್ತಿತ್ತು. ಆದರೆ, ಆಣೆ ಪ್ರಮಾಣಗಳು ಮಾನುಷ ಪ್ರಜ್ಞೆಯ ಪರಿಧಿಯಲ್ಲೇ ನಡೆಯುವುದರಿಂದ ತಪ್ಪಾಗಿ ಸುಳ್ಳು ಪ್ರಮಾಣ ಆಣೆ ಮಾಡಬಹುದು. ಆದರೆ, ದಿವ್ಯಗಳು ಮಾನುಷ ಪ್ರಜ್ಞೆಯನ್ನು ಮೀರಿ ಅರಿವಿನಾಚೆಯ ದೈವದ ಎದುರಿನಲ್ಲಿ ನಡೆಯುತ್ತಿದ್ದವು. ಆಣೆ ಪ್ರಜ್ಞೆಯಾದರೆ, ದಿವ್ಯ ಕ್ರಿಯೆಯ ರೂಪದಲ್ಲಿರುತ್ತದೆ. ಧರ್ಮಶಾಸ್ತ್ರಗಳಲ್ಲಿ ಜೊತೆಗೆ ದಿವ್ಯ ಅಥವಾ ದೈವ ಪರೀಕ್ಷೆಯನ್ನು ಆತ್ಯಂತಿಕ ಸಾಕ್ಷ್ಯವನ್ನಾಗಿ ಅಂಗೀಕರಿಸಲಾಗಿದೆ. ದೇವರ ಮೇಲೆ ಪ್ರಮಾಣ ಮಾಡಿ, ದೈವವನ್ನು ಸಾಕ್ಷಿಯನ್ನಾಗಿರಿಸಿಕೊಂಡು ಆರೋಪಿ ತನ್ನ ನಿರಾಪರಾಧಿತ್ವವನ್ನು ರುಜುವಾತುಪಡಿಸಿಕೊಳ್ಳುವ ಪ್ರಕ್ರಿಯೆಯೇ ದಿವ್ಯ ಪದ್ಧತಿ. ಇದನ್ನು ವಿವಿಧ ವಿಧಾನಗಳನ್ನು ಅನುಸರಿಸುವ ಮೂಲಕ ಸಾರ್ವತ್ರಿಕವಾಗಿ ಆಚರಿಸಲಾಗುತ್ತದೆ. ಕನ್ನಡ ಶಿಷ್ಟ ಮತ್ತು ಜನಪದ ಸಾಹಿತ್ಯಗಳಲ್ಲಿ ದಿವ್ಯಪದ್ಧತಿಯ ಉಲ್ಲೇಖಗಳು ಕಂಡುಬರುತ್ತವೆ. ರಾಮಚಂದ್ರ ಚರಿತ ಪುರಾಣದಲ್ಲಿ ಅವಿವೇಕಿಯಾದ ದಶಕಂಠ ರಾವಣನು ಸೀತೆಯನ್ನು ಹಿಡಿದುಕೊಂಡಿದ್ದಕ್ಕೆ ಆಗಬಹುದಾದ ಘೋರ ಪರಿಣಾಮವನ್ನು ಕೆಲವು ಉಪಮೆಗಳ ಮೂಲಕ ಹೇಳುವಾಗ "ದೋಷಿ ಪಿಡಿವಂತೆ ದಿವ್ಯದ ಕಾಸಿದ ಕುಟುವಂ" ಅಪರಾಧಿಯು ಕಾಸಿದ ಕಬ್ಬಿಣವನ್ನು ಹಿಡಿಯುವಂತೆ ರಾವಣನು ಸೀತೆಯನ್ನು ಹಿಡಿದನೆಂದು ಹೇಳುತ್ತಾನೆ.[೯೦] ಪಂಪ ಭಾರತದಲ್ಲಿ ದಿವ್ಯದ ಪ್ರಸ್ತಾಪ ಬರುತ್ತದೆ. ಬೇಟೆಗೆ ಬಂದ ಶಂತನು ಮಹಾರಾಜ ಸತ್ಯವತಿಯನ್ನು ನೋಡಿ ಆಕರ್ಷಿತನಾಗಿ, ತನ್ನ ಪ್ರೀತಿಗೆ ಸಾಕ್ಷಿಯಾಗಿ ದಿವ್ಯವನ್ನು ಹಿಡಿಯುವ ಹಾಗೆ ಅವಳನ್ನು ಹಿಡಿಯುತ್ತಾನೆ. (ಸೋಲ್ತು ಕಂಡೊಲ್ದು ನಲ್ಮೆಗೆ ದಿವ್ಯಂಬಿಡಿವಂತೆ ವೋಲ್‌ಪಿಡಿದಂ).[೯೧]

ಧರ್ಮಶಾಸ್ತ್ರಗಳೆಲ್ಲವೂ ದಿವ್ಯವನ್ನು ಮೊದಲು ಬಳಸದಿರುವಂತೆ ನಿರ್ದೇಶಿಸಿವೆ. ಕಾತ್ಯಾಯನನು ವಾದ-ವಿವಾದಗಳು ಉಂಟಾದಾಗ ಸಾಕ್ಷಿಗಳು ಇದ್ದಾಗ ದಿವ್ಯ ಪರೀಕ್ಷೆಯ ಅಗತ್ಯವಿಲ್ಲ. ದಾಖಲೆಗಳಿದ್ದಾಗ, ಸಾಕ್ಷಿಗಳನ್ನಾಗಲೀ ಅಥವಾ ದಿವ್ಯಗಳನ್ನಾಲೀ ರುಜುವಾತುಪಡಿಸುವ ಸಾಧನವಾಗಿ ನಿಗದಿಪಡಿಸಿಲ್ಲ.[೯೨] ದಿವ್ಯಗಳ ಸಂಖ್ಯೆಯ ಬಗ್ಗೆ ಸ್ಮೃತಿಕಾರರಲ್ಲೇ ಭಿನ್ನಾಭಿಪ್ರಾಯಗಳಿವೆ. ಸಾಮಾನ್ಯವಾಗಿ ತುಲಾ, ಅಗ್ನಿ, ಜಲ, ವಿಷ, ಕೋಶ, ಧರ್ಮ, ತಂಡುಲ, ತಪ್ತಮಾಷ, ಫಲ, ಮುಂತಾದವುಗಳನ್ನು ದಿವ್ಯಗಳ ಪಟ್ಟಿಯಲ್ಲಿ ಸೇರಿಸಬಹುದಾಗಿದೆ. "ಪ್ರಾರಂಭದಲ್ಲಿ ಜಲ ಮತ್ತು ಅಗ್ನಿಯ ಎರಡು ರೂಪಗಳಲ್ಲಿದ್ದ ದಿವ್ಯಗಳ ಸಂಖ್ಯೆ ನಂತರ ಐದಕ್ಕೆ ಏರಿ ತರುವಾಯ ಒಂಭತ್ತು ದಿವ್ಯಗಳಾದವು, ಅವುಗಳೆಂದರೆ (i) ತುಲಾ (ii) ಅಗ್ನಿ (iv) ಜಲ (ಸಲಿಲ), (v) ವಿಷ (vi) ಕೋಶ (vii) ತಂಡುಲ (viii) ಸಪ್ತಮಾಶ (ix) ಪಾಲ (x) ಧರ್ಮಾಧರ್ಮ[೯೩] ಧರ್ಮಶಾಸ್ತ್ರಗಳಲ್ಲಿ ದಿವ್ಯಗಳ ಸಂಖ್ಯೆ, ದಿವ್ಯಗಳನ್ನು ಆಚರಿಸಲು ಅನುಸರಿಸಬೇಕಾದ ವಿಧಿ-ವಿಧಾನಗಳು, ವಿಹಿತ ಆಚರಣೆಗಳ ಬಗ್ಗೆ ವಿವರ ನೀಡಲಾಗಿದೆ.

ಕಾಣೆಯವರು ಕೋಶ, ರವಿ ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ ದಿವ್ಯಗಳ ಬಗ್ಗೆ ಚರ್ಚಿಸಿ, ಅವುಗಳನ್ನು ಅನುಸರಿಸುತ್ತಿದ್ದ ವಿಧಾನಗಳನ್ನು ಸಹ ತಿಳಿಸಿದ್ದಾರೆ. "ಪ್ರಾಚೀನ ಕರ್ನಾಟಕದಲ್ಲಿ ದಿವ್ಯಗಳನ್ನು ಸ್ಮೃತಿಗಳಲ್ಲಿ ಉಕ್ತವಾಗಿರುವಂತೆಯೇ ನಡೆಸುತ್ತಿದ್ದರೆಂದು ಹೇಳುವುದು ಕಷ್ಟ. ಅನುಕೂಲಕ್ಕೆ ತಕ್ಕಂತೆ ಮಾರ್ಪಾಟುಗಳನ್ನು ಮಾಡಿ ಸರಳಗೊಳಿಸಿಕೊಂಡಿರಬಹುದು"[೯೪] ಎಂದು ಚಿದಾನಂದ ಮೂರ್ತಿಯವರು ಅಭಿಪ್ರಾಯಪಡುತ್ತಾರೆ.

ನ್ಯಾಯ ವಿತರಣಾ ವ್ಯವಸ್ಥೆಯಲ್ಲಿ ಸಾಕ್ಷಿ ಅಥವ ದಾಖಲೆಗಳನ್ನಾಧರಿಸಿದ ನ್ಯಾಯ ಪ್ರಕ್ರಿಯೆ ಗ್ರಾಮ ಪಂಚಾಯತಿ, ಚಾವಡಿ, ಕಟ್ಟೆ ಮನೆ, ರಾಜನ ಆಸ್ಥಾನಗಳಲ್ಲಿ ನಡೆದರೆ, ದಿವ್ಯ ವಿಧಾನದ ಮೂಲಕ ನಡೆಸುವ ನ್ಯಾಯ ಪ್ರಕ್ರಿಯೆಯ ಕೇಂದ್ರ ದೇವಾಲಯವಾಗಿರುತ್ತಿತ್ತು. ಕುಲದೇವರ ದೇವಸ್ಥಾನದಲ್ಲಿ ಕ್ರಿ.ಶ. ೧೦೭೯ರ ಶಾಸನವು ಅಂಥ ದಿವ್ಯಗಳ ಆಚರಣೆಯಿಂದ ಬಂದ ಹಣವನ್ನು ಧರ್ಮಕಾರ್ಯಕ್ಕೆ ಬಳಸಬೇಕೆಂದು ತಿಳಿಸುತ್ತದೆ.[೯೫] ತಾಳಗುಂದದ ಪ್ರಣವೇಶ್ವರ ದೇವಾಲಯದಲ್ಲಿ ಸಪ್ತ ದಿವ್ಯಗಳು ನಡೆಯುತ್ತಿದ್ದ ಬಗ್ಗೆ ಶಾಸನಗಳು ತಿಳಿಸುತ್ತವೆ.[೯೬] ಹರದನಹಳ್ಳಿಯ ದಿವ್ಯ ಲಿಂಗೇಶ್ವರ ದೇವಾಲಯದಲ್ಲಿ ಕುಂಬಾರರು ತಮಗೆ ಕಾಲುಗುರು, ಮೇಲುಕಟ್ಟು ಇದೆಯೆಂಬುದನ್ನು ಸಾಬೀತುಪಡಿಸಲು ತುಪ್ಪದಲ್ಲಿ ಕೈಯಿಟ್ಟು ದಿವ್ಯವನ್ನು ಗೆದ್ದಂತಹ ಉಲ್ಲೇಖ ಕಂಡುಬರುತ್ತದೆ.[೯೭] ದಿವ್ಯಗಳನ್ನು ಯಾವಾಗ ಅನುಸರಿಸಬೇಕು, ಹೇಗೆ ಅನುಸರಿಸಬೇಕು, ಯಾವ ರೀತಿಯ ದಿವ್ಯಗಳನ್ನು ಅನುಸರಿಸಬೇಕು ಎಂಬ ಬಗ್ಗೆ ಧರ್ಮಶಾಸ್ತ್ರಕಾರರು ವಿವರವಾಗಿ ವಿವೇಚಿಸಿರುತ್ತಾರೆ.

ಮಾನುಷ ಸಾಕ್ಷಿಗಳು ಇದ್ದ ಸಂದರ್ಭಗಳಲ್ಲಿ ಎಲ್ಲಿಯೂ ದಿವ್ಯಗಳನ್ನು ಆಚರಿಸಬಾರದು. ಒಬ್ಬ ವ್ಯಕ್ತಿಯ ವಿರುದ್ಧ ಗಂಭೀರ ಆರೋಪಗಳಿದ್ದಾಗ ಮಾತ್ರ ಕೆಲವು ದಿವ್ಯಗಳನ್ನು ಅನುಸರಿಸಬಹುದು ಶೋಧ್ಯನು (ಆರೋಪಿಯು) ದಿವ್ಯ ಪರೀಕ್ಷೆಯನ್ನು ಗೆದ್ದುಬಂದರೆ, ವಾದಿಯು ಅದನ್ನು ಅಂಗೀಕರಿಸಬೇಕು. ಅಲ್ಲದೆ, ಶೋಧ್ಯನು ಸ್ವಯಂಪ್ರೇರಣೆಯಿಂದ ಮುಂದೆ ಬಂದು ತನ್ನ ನಿರಪರಾಧಿತನವನ್ನು ರುಜುವಾತುಪಡಿಸಬೇಕು.

ಸಾಮಾನ್ಯವಾಗಿ ದಿವ್ಯ ವಿಧಾನವನ್ನು, ಅನುಸರಿಸಬೇಕಾದ ಕಾರ್ಯವಿಧಾನವನ್ನು ಸಹ ಸ್ಮೃತಿಕಾರರು ವಿವರಿಸಿದ್ದಾರೆ. ಯಜ್ಞಾವಲ್ಕ್ಯನ ಪ್ರಕಾರ, ದಿವ್ಯವನ್ನು ಆಚರಿಸುವುದಕ್ಕೆ ನಿಗದಿಪಡಿಸಿದ ದಿನದ ಹಿಂದಿನ ದಿನ ತೀರ್ಪುಗಾರರು ಮತ್ತು ಶೊಧ್ಯನು (ಆರೋಪಿ) ಉಪವಾಸ ಇರಬೇಕು. ದಿವ್ಯ ಆಚರಿಸಲು ನಿರ್ದಿಷ್ಟಪಡಿಸಿದ ದಿನ ಬೆಳಿಗ್ಗೆ ಇಬ್ಬರೂ, ಆಣೆ-ಪ್ರಮಾಣ ತೆಗೆದುಕೊಳ್ಳಬೇಕು. ಆನಂತರ ತೀರ್ಪುಗಾರನು ಮಂತ್ರೋಚ್ಚಾರದೊಂದಿಗೆ ಎಲ್ಲ ದೇವತೆಗಳನ್ನು ಆಹ್ವಾನಿಸಿ, ಶೋಧ್ಯನಿಗೆ ಸುಳ್ಳು ಹೇಳುವುದರಿಂದ ಆಗುವ ಪ್ರತಿಕೂಲ ಫಲಿತಗಳ ಬಗ್ಗೆ ವಿವರಿಸಿ ಹೇಳಬೇಕು. ಶೋಧ್ಯನು

ಸಾಬೀತುಪಡಿಸಬೇಕಾದ ಸಂಗತಿಗಳನ್ನು ಅವನ ಹಣೆಯ ಮೇಲೆ ಬರೆದು ನಂತರ ಯಾವ ಪ್ರಕಾರದ ದಿವ್ಯ ಪರೀಕ್ಷೆ ನಡೆಸಬೇಕೆಂದು ನಿರ್ಧರಿಸಲಾಗಿದೆಯೋ ಅದರ ಪ್ರಕಾರ ದಿವ್ಯವನ್ನು ಅನುಸರಿಸಬೇಕು.[೯೮]

ಕನ್ನಡ ಸಾಹಿತ್ಯದಲ್ಲಿ ಶಾಂತಿಪುರಾಣ, ಪಂಪರಾಮಾಯಣ, ವಚನಗಳು, ಸಿದ್ಧರಾಮ ಚಾರಿತ್ರ್ಯ, ಮುಂತಾದ ಕೃತಿಗಳಲ್ಲಿ ದಿವ್ಯದ ಪ್ರಸ್ತಾಪ ಬಂದಿರುವುದನ್ನು ಚಿದಾನಂದಮೂರ್ತಿಯವರು ಚರ್ಚಿಸಿದ್ದಾರೆ.[೯೯] ಕನ್ನಡದ ಜಯಪತ್ರಗಳಲ್ಲಿ ಸ್ಮೃತಿಕಾರರು ಹೇಳಿರುವಂತೆ ಯಥಾರೀತಿಯಲ್ಲಿ ಮತ್ತು ಅದೇ ಹೆಸರುಗಳಲ್ಲಿ ದಿವ್ಯ ಪದ್ಧತಿಯನ್ನು ಅನುಸರಿಸಿರುವುದು ಕಂಡುಬರುವುದಿಲ್ಲ. ಕೆಲವು ಜಯಪತ್ರಗಳಂತೂ, ಯಾವುವೇ ಪ್ರಕಾರದ ದಿವ್ಯಗಳನ್ನು ಉಲ್ಲೇಖಿಸದೆ, ಕೇವಲ 'ದಿವ್ಯಗಳನ್ನು ಗೆದ್ದಿದ್ದನ್ನು' ಮಾತ್ರ ದಾಖಲಿಸಿವೆ. ಕರ್ನಾಟಕದಲ್ಲಿ 'ಮುದ್ದೆ ತುಪ್ಪದ ಪ್ರಮಾಣ'.[೧೦೦] 'ದಿಷ್ಟಿಯ ದೀವಿಗೆ ಮುಟ್ಟಿಸುವ ದಿವ್ಯ'.[೧೦೧], 'ಕಾದ ಹಾರೆಗಟ್ಟಿ ಎತ್ತುವ' ದಿವ್ಯ ಮುಂತಾದ ದಿವ್ಯಗಳ ಪ್ರಸ್ತಾಪವಿದೆ.

ಪಿತಾಮಹನು ಸ್ಥಿರಾಸ್ತಿಗೆ ಸಂಬಂಧಿಸಿದ ವಿವಾದಗಳಲ್ಲಿ ದಿವ್ಯ ಪದ್ಧತಿಯನ್ನು ತಿರಸ್ಕರಿಸಬೇಕು ಮತ್ತು ದಾಖಲೆ ಮತ್ತು ಅನುಭೋಗದ ಹಕ್ಕುಗಳ ಸಾಕ್ಷ್ಯವನ್ನು ಮಾತ್ರ ಪುರಸ್ಕರಿಸಬೇಕು. ಹಿಂಸೆ, ಅಪರಾಧ, ಮುಂತಾದಂತಹ ವಿವಾದಗಳಲ್ಲಿ ಸಾಕ್ಷಿಗಳು ಇಲ್ಲದಿರುವ ಸಂಭವವಿದ್ದಾಗ ದಿವ್ಯ ವಿಧಾನವನ್ನು ಬಳಸಬೇಕು ಎಂದು ಹೇಳುತ್ತಾನೆ.[೧೦೨]

ಕರ್ನಾಟಕದಲ್ಲಿ ಹೆಚ್ಚಿನ ದಿವ್ಯಗಳು ನಡೆದಿರುವುದು ಮತ್ತು ಅದಕ್ಕೆ ಜಯಪತ್ರಗಳನ್ನು ನೀಡಿರುವುದು ಭೂವಿವಾದಕ್ಕೆ ಸಂಬಂಧಪಟ್ಟಂತೆಯೇ ಎಂಬುದು ಗಮನಾರ್ಹ ಸಂಗತಿ. ಕಲ್ಲೇಶ್ವರ ದೇವಾಲಯದ ಸ್ಥಾನಪತಿ, ಶಿವಶಕ್ತಿಗೂ ಮೂಲಸ್ಥಾನ ದೇವರ ಸ್ಥಾನಪತಿ ಕಲ್ಯಾಣಶಕ್ತಿಗೂ ಭೂವಿವಾದಕ್ಕೆ ಸಂಬಂಧಪಟ್ಟಂತೆ ವಿವಾದ ಉದ್ಭವಿಸಿದಾಗ, ಶಿವಶಕ್ತಿ ದೇಗಾವೆ ಅಗ್ರಹಾರದ ಮಲ್ಲಿಕಾರ್ಜುನ ದೇವರ ಮುಂದೆ ಪಾಳದಿವ್ಯ ಹಿಡಿದು ಗೆಲ್ಲುತ್ತಾನೆ. ಗೆದ್ದ ಶಿವಶಕ್ತಿಗೆ ಮಹಾಪ್ರಧಾನ ಈಶ್ವರ ದಂಡನಾಯಕ ಜಯಪತ್ರ ನೀಡುತ್ತಾನೆ.[೧೦೩] ಮೂರುಡೀಪುರದವರಿಗೂ, ಗರುಡನಹಳ್ಳಿಯವರಿಗೂ ಸೀಮಾ ವಿವಾದ ಉಂಟಾದಾಗ, ಕನ್ನಯ್ಯ ಎಂಬುವವನು ಆ ಹೊಲ ತನ್ನದೆಂದು ವಾದಿಸಿ, ಅದನ್ನು ರುಜುವಾತುಪಡಿಸಲು ದೋರಸಮುದ್ರದ ಹೊಯ್ಸಳೇಶ್ವರ ಸನ್ನಿಧಿಯಲ್ಲಿ ಹೊಯ್ಸಳ ನಾರಸಿಂಹನ ಸಮಕ್ಷಮದಲ್ಲಿ ದಿವ್ಯವನ್ನು ಗೆಲ್ಲುತ್ತಾನೆ.[೧೦೪]

ಕಾಳಗೌಡ ಮತ್ತು ಕೆರೆಯಮಸೆಟ್ಟಿಯರ ಮಧ್ಯೆ ಭೂಮಿಗೆ ಸಂಬಂಧಿಸಿದಂತೆ ವಿವಾದ ಉಂಟಾದಾಗ ಬಂದಣಿಗೆ ಗ್ರಾಮದ ಕಲದೇವರ ದೇವಾಲಯದಲ್ಲಿ ಮಹಾಜನರು, ಪಂಚಮಠಗಳು, ಗೌಡುಗಳು, ನಕರರು, ಮುಂತಾದವರ ಸಮಕ್ಷಮದಲ್ಲಿ ಕಾಳಗೌಡ ದಿವ್ಯ ಗೆದ್ದು ಜಯಪತ್ರ ಪಡೆಯುತ್ತಾನೆ.[೧೦೫]

ಭೂವಿವಾದದ ಜೊತೆಗೆ ಗೌಡಿಕೆ, ಕಮ್ಮಾರಿಕೆ, ಪೂಜಾರಿಕೆ, ಮುಂತಾದ ವೃತ್ತಿಗಳ ಮೇಲೆ ಸ್ವಾಮ್ಯತೆ ಸಾಧಿಸುವ ಸಂದರ್ಭಗಳಲ್ಲೂ ದಿವ್ಯಗಳ ಮೊರೆ ಹೊಕ್ಕಿರುವುದು ಕಂಡುಬರುತ್ತದೆ. ದಾವಣಗೆರೆಯ 'ಗೌಡಿಕೆ ಗೆಲ್ಲುವ' ವ್ಯಾಜ್ಯದಲ್ಲಿ ಸಾದರ ಮುದಿಯಣ್ಣ ಮತ್ತು ಕುರುಬರ ನಾಗಯ್ಯನ ನಡುವೆ ವಿವಾದ ಉಂಟಾದಾಗ, ಸಾದರ ಮುದಿಯಣ್ಣ ಮೂರು ತಲೆಮಾರುಗಳ ಆರಭ್ಯ ಗೌಡಿಕೆಯನ್ನು ಮಾಡಿದುದಕ್ಕೆ ಆಯಗಾರರ ಬಳಿ ಸಾಕ್ಷಿ ಹೇಳಿಸಿದ. ನಾಗಯ್ಯನ ಪರವಾಗಿಯೂ ಆಯಗಾರರು ಸಾಕ್ಷಿ ಹೇಳುತ್ತಿದ್ದಾಗ "ಆಯಗಾರರ ಮಾತು ಎರಡು ಬಗೆ ಆಯಿತು" ಎಂದು ಹೇಳಿ ದೈವಾಚಾರದಲ್ಲಿ ಎಂದರೆ ದಿವ್ಯದ ಮೂಲಕ ಕಾದ ಹಾರೆ ಮಂಡಿ ಎತ್ತಿ ಗೌಡಿಕೆಯ ಗೆಲ್ಲುವಂತೆ ಇಬ್ಬರಿಗೂ ಹೇಳಿದಾಗ, ಅದಕ್ಕೆ ಕುರುಬರ ನಾಗಯ್ಯ ಒಪ್ಪಿಕೊಳ್ಳುತ್ತಾನೆ. ಅದರಂತೆ ಹನುಮಂತರಾಯನ ದೇವಾಲಯದಲ್ಲಿ ಸಕಲ ಸಮಸ್ತರು ಸೇರಿ ದೇವರ ಪೂಜೆ ಮಾಡಿಸಿ ಉಕ್ಕಿನ ಗಟ್ಟಿಯನ್ನು ಪೂಜೆ ಮಾಡಿಸಿ ಕಾಸಿ ಕುರುಬರ ಬೀರದೇವರ ಪೂಜಾರಿ ಕರಿಯಂಣನ ಮಗ ನಾಗಯ್ಯನಿಗೆ ಸ್ನಾನ ಮಾಡಿಸಿ, ಮಡಿ ಹೊದಿಸಿ, ದೇವರಿಗೆ ಎದುರಾಗಿ ನಿಲ್ಲಿಸಿ, ಏಳುಮಂಡಲವ ಬರೆಸಿ, ನಾಗಯ್ಯನ ಕೈಯೊಳಗೆ ಅರಳಿ ಎಲೆ ಹಿಡಿಸಿ, ಅಂಗನೂಲು ಸುತ್ತಿ ದೇವರ ಪ್ರಸಾದ ಇರಿಸಿ, ದುರ್ಗಸ್ಥಳದ ಕಮ್ಮಾರ ತಿಮ್ಮಯ್ಯನು ಕಾದ ಗಟ್ಟಿಯನ್ನು ಇಕ್ಕಳದಲ್ಲಿ ಹಿಡಿದು ನಾಗಯ್ಯನ ಕೈಯೊಳಗೆ ಇಟ್ಟಾಗ, ನಾಗಯ್ಯ ಏಳು ಮಂಡಲವ ದಾಟಿ ದೇವರಿಗೆ ಆರತಿಯನೆತ್ತಿ ಗಟ್ಟಿಯಾಗಿ ಕೆಳಕ್ಕೆ ಹಾಕಿದ. ಕುಳಿತಿರುವ ದೈವದವರೆಲ್ಲ ನಾಗಯ್ಯನ ಕೈಯನ್ನು, ಅರಳಿ ಎಲೆ, ಅಂಗನೂಲು ಸುಡಲಿಲ್ಲ ಎಂಬುದನ್ನು ನೋಡಿ ಅವನಿಗೆ ದಾವಣಗೆರೆ ಗೌಡಿಕೆ ಕೊಟ್ಟು ತಾಮ್ರಶಾಸನ ಬರೆಸಿಕೊಡುತ್ತಾರೆ.[೧೦೬]

ಹಿರಿಯೂರು ಸೀಮೆ ನಂದಿಹಳ್ಳಿಯ ರಂಗನಾಥಸ್ವಾಮಿ ದೇವರ ಪೂಜಾರಿಕೆಗೆ ಸಂಬಂಧಿಸಿದಂತೆ ನಂದಯ್ಯ ಮತ್ತು ತಿಮ್ಮ ಎಂಬುವವರ ನಡುವೆ ವ್ಯಾಜ್ಯ ಉಂಟಾದಾಗ, ದುರ್ಗದ ದೊರೆ ಹಿರೇಮದಕರಿನಾಯಕರ ಬಳಿ ಹೋಗುತ್ತಾರೆ. ವಿವಾದ ಮಾತಿನ ಸಾಕ್ಷ್ಯದ ಮೂಲಕ ಇತ್ಯರ್ಥವಾಗದಿದ್ದಾಗ, ಕೆಳದುರ್ಗದ ಹನುಮಂತದೇವರ ಮುಂದೆ 'ದಿಷ್ಟಿಯ ದೀವಿಗೆ' ಮುಟ್ಟಿಸುವ ದಿವ್ಯ ಪ್ರಮಾಣ ಅನುಸರಿಸಲು ಅನುಮತಿ ನೀಡಲಾಗುತ್ತದೆ. ಈ ದಿಷ್ಟಿದೀವಿಗೆ ಪ್ರಮಾಣದಲ್ಲಿ ತಿಮ್ಮಯ್ಯ ಗೆದ್ದು, ನಂದಯ್ಯ ಸೋತು ಹೋಗುತ್ತಾನೆ. ಅದರಂತೆ ಅರಮನೆಗೆ ಹನ್ನೆರಡು ವರಹದ ದಂಡ ವಿಧಿಸುತ್ತಾನೆ. ಲಕ್ಷ್ಮಣ್ ತೆಲಗಾವಿಯವರು "ದಿಷ್ಟಿ ದೀವಿಗೆ"ಯ ದಿವ್ಯ ಸ್ವರೂಪದ ಬಗ್ಗೆ ವಿಭಿನ್ನ ಅಭಿಪ್ರಾಯಗಳಿವೆ. ತೊಯ್ದ ಬಟ್ಟೆಯೊಡನೆ ಹನುಮಂತದೇವರ ಮುಂದೆ ತುಪ್ಪದ ದೀವಿಗೆಯನ್ನು ಒಬ್ಬರು ಉಡಿಸಿದರೆ, ಇನ್ನೊಬ್ಬರು ಆರಿಸುವ ನ್ಯಾಯವೆಂದು ಅಭಿಪ್ರಾಯವಿದೆ. ಈ ದಿಷ್ಟಿ ದೀವಿಗೆಯ ಸ್ವರೂಪ ಯಾವ ತೆರನಾಗಿದ್ದಿತೋ ತಿಳಿಯದು. ಆದರೆ ದೃಷ್ಟಿಯಿಂದಲೇ ದೀವಿಗೆಯನ್ನು ಆರಿಸುವ ದಿವ್ಯದ ಬಗೆಗೆ ಕೆಲವು ಸೂಚನೆಗಳು ದೊರೆಯುತ್ತವೆ. ಇಲ್ಲಿ ದೃಷ್ಟಿಯೆಂದರೆ (ದಿಷ್ಟಿ, ದಿಟ್ಟಿ) ನೋಟ, ದರ್ಶನ, ಕಣ್ಣು, ನೇತ್ರ, ಪರಿಣಾಮವನ್ನುಂಟು ಮಾಡುವ ನೋಟ ಎಂಬ ವಿವರಣೆಯೂ ಇದೆ. ನೋಟದಿಂದಲೇ ವಿಷವನ್ನು, ಅಮೃತವನ್ನಾಗಿಸುವ 'ದೃಷ್ಟಿ ವಿಷ', ಮುನಿದು ನೋಡಿದೊಡನೆಯೇ

ಸಾಯುವಂತೆ ಮಾಡುವ 'ದೃಷ್ಟಿವಿಷತ್ವ' ಎರಡು ಉದಾಹರಣೆಗಳೂ ದೊರೆಯುತ್ತವೆ. 'ದಿಷ್ಟಿ ದೀವಿಗೆ ದಿವ್ಯ' ಎಂಬುದು ದಿಟ್ಟಿಸಿ ನೋಡುವುದರಿಂದಲೇ ದೀವಿಗೆಯನ್ನು ಹೊತ್ತಿಸುವ (ಮುಟ್ಟಿಸುವ) ದಿವ್ಯವಾಗಿರಬಹುದು. ದೀಪವನ್ನು ನಂದಿಸುವ ದಿವ್ಯವಾಗಿಯೂ ಇದನ್ನು ಗುರುತಿಸಲಾಗುತ್ತದೆ[೧೦೭] ಎಂದು ಅಭಿಪ್ರಾಯಪಡುತ್ತಾರೆ.

ಕಮ್ಮಾರಿಕೆ ಹಕ್ಕಿಗೆ ಸಂಬಂಧಿಸಿದಂತೆ ಹಿರಿಯೂರಿನ ತೇರಯ್ಯ ಮತ್ತು ಬೊಬ್ಲೂರಿನ ಲಿಂಗಯ್ಯ ಎಂಬುವವರ ನಡುವೆ ವಿವಾದ ಉಂಟಾದಾಗ, ಪಂಚಾಯತರ ಮುಂದೆ ಈ ವ್ಯಾಜ್ಯ ಬಂದಾಗ, ಈ ವ್ಯಾಜ್ಯವನ್ನು ಸ್ಥಳದ ಹನ್ನೆರಡು ಕೈವಾಡದವರ ಹೇಳಿಕೆ ಮೇಲೆ ನಿರ್ಣಯಿಸಲು ತೀರ್ಮಾನಿಸಲಾಗುತ್ತದೆ. ಆದರೆ ವ್ಯಾಜ್ಯಗಾರರು ಕೈವಾಡದವರ ಮಾತನ್ನು ಒಪ್ಪಲು ನಿರಾಕರಿಸುತ್ತಾರೆ. ಪಂಚಾಯತರ ತೀರ್ಮಾನವನ್ನು ಒಪ್ಪುವುದಿಲ್ಲ. ಅಂತಿಮವಾಗಿ 'ಮುದ್ದೆ ತುಪ್ಪದ ಪ್ರಮಾಣ' ದ ಮೂಲಕ ಲಿಂಗಯ್ಯ ಗೆಲ್ಲುತ್ತಾನೆ. ಸೋತುಹೋದ ತೇರಯ್ಯ ಹನ್ನೆರಡು ವರಹಗಳನ್ನು ದಂಡವಾಗಿ ಅರಮನೆಗೆ ಕಟ್ಟುತ್ತಾನೆ. ಲಕ್ಷ್ಮಣ್ ತೆಲಗಾವಿಯವರು "ಮುದ್ದೆ ತುಪ್ಪದ ಪ್ರಮಾಣದ ಮೂಲಕ ವ್ಯಾಜ್ಯವನ್ನು ಬಗೆಹರಿಸಿದ ವಿಧಾನದ ಬಗೆಗೆ ನಿರ್ದಿಷ್ಟ ಸೂಚನೆಗಳಿಲ್ಲ. ಕುದಿಯುವ ತುಪ್ಪ ಅಥವಾ ಎಣ್ಣೆಯ ಪಾತ್ರೆಯಲ್ಲಿ ಮುಳುಗಿಸಿದ ಕಬ್ಬಿಣದ ತುಂಡನ್ನು ಹೊರತೆಗೆಯಲೋಸುಗ ಕೈಯನ್ನು ಅದ್ದಿಸುವ ದಿವ್ಯದ ಪ್ರಕಾರವಿರಬಹುದು. ಕನ್ನಡ ಶಾಸನವೊಂದರಲ್ಲಿ ಉಲ್ಲೇಖಗೊಂಡ 'ತುಪ್ಪದ ದೃಷ್ಟಿ ಪವಾಡಕ್ಕೂ' 'ಮುದ್ದೆ ತುಪ್ಪದ ಪ್ರಮಾಣಕ್ಕೂ', ಸಂಬಂಧವಿರಬಹುದೇನೂ. ದೇವಸ್ಥಾನವೊಂದರಲ್ಲಿ ಕಬ್ಬಿಣದ ಕೊಪ್ಪರಿಕೆಯಲ್ಲಿ ತುಪ್ಪವನ್ನು ಹುಯಿದು ಅದನ್ನು ಚೆನ್ನಾಗಿ ಕಾಸಿ, ಅದರಲ್ಲಿ ಮೂರು ಫಿರಂಗಿ ಗುಂಡುಗಳನ್ನು ಹಾಕಿ, ಅದನ್ನು ಇನ್ನೊಮ್ಮೆ ಹುಣಸೆ ಕೆಂಡದಿಂದ ಚೆನ್ನಾಗಿ ಕುದಿಸಿ, ಕುದಿಯುವ ತುಪ್ಪದ ಪಾತ್ರೆಯಲ್ಲಿ ಕೈಯನ್ನು ಅದ್ದಿ ಈ ಗುಂಡುಗಳನ್ನು ಹೊರತೆಗೆಯುವ ಪವಾಡವನ್ನು ಗೆದ್ದ ವಿವರವಿದೆ. ಹಾಗೆಯೇ ಮಹಾರಾಷ್ಟ್ರದ ಪೇಶ್ವೆಗಳ ಅವಧಿಯಲ್ಲಿ ಆಚರಣೆಯಲ್ಲಿದ್ದ ದಿವ್ಯಗಳ ಪೈಕಿ 'ರಾವಾದಿವ್ಯ'ವೂ ಒಂದಾಗಿದ್ದು, ಇದು 'ಮುದ್ದೆ ತುಪ್ಪದ ಪ್ರಮಾಣ'ವನ್ನು ಹೋಲುವಂತೆ ತೋರುತ್ತದೆ. ಚೆನ್ನಾಗಿ ಕಾಯಿಸಿದ ಅಥವಾ ಕುದಿಯುವ ತುಪ್ಪ ಮತ್ತು ಎಣ್ಣೆಗಳ ಮಿಶ್ರಣವಿರುವ ಪಾತ್ರೆಯಲ್ಲಿ ರಾವಾ (ಲೋಹದ ತುಂಡು) ಮುಳುಗಿಸಿ, ಪಂಚಾಯತರ ಎದುರಿನಲ್ಲಿ ಅದರಲ್ಲಿ ಕೈಯನ್ನು ಅದ್ದಿ ಲೋಹದ ತುಂಡುಗಳನ್ನು ಹೊರತೆಗೆದು ವ್ಯಾಜ್ಯವನ್ನು ಗೆಲ್ಲುವ ದಿವ್ಯವನ್ನು ಕುರಿತು ಇದು ಹೇಳುತ್ತದೆ. ಏನೇ ಇದ್ದರೂ, ಇಂಥ ದಿವ್ಯಗಳ ಹೋಲಿಕೆ-ಸಂಬಂಧಗಳನ್ನು ಕುರಿತು ಸ್ಪಷ್ಟವಾಗಿ ಹೇಳಲಾಗುವುದಿಲ್ಲ[೧೦೮] ಎಂದು ಅಭಿಪ್ರಾಯ ಪಡುತ್ತಾರೆ.

ಭೂವಿವಾದ, ವೃತ್ತಿಸ್ವಾಮ್ಯ ಹಕ್ಕುಗಳಿಗೆ ಮಾತ್ರವಲ್ಲದೆ, ಕುಲಾಚಾರಗಳಿಗೆ ಸಂಬಂಧಿಸಿದಂತೆ ಉದ್ಭವವಾಗುವ ವ್ಯಾಜ್ಯಗಳಿಗೂ ಸಹ ದಿವ್ಯ ಪದ್ಧತಿಯನ್ನು ಅವಲಂಬಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಅಗಸರಿಗೂ, ನಾಯಿಂದರಿಗೂ ಮತ್ತು ಕುಂಬಾರರಿಗೂ ವಿವಾದ ಉಂಟಾಗಿ,

ನಾಯಿಂದರು ಮತ್ತು ಅಗಸರೂ, ಕುಂಬಾರರಿಗೆ ಕಾಲುಗುರು ಮೇಲುಕಟ್ಟಿನ ಅಧಿಕಾರವಿಲ್ಲವೆಂದು ವಾದಿಸಿದಾಗ, ಕುಂಬಾರರು ತಮಗೆ ಆ ಹಕ್ಕು ಇದೆ ಎಂಬುದನ್ನು ಸಾಧಿಸಲು ಹರದನಹಳ್ಳಿನ ದಿವ್ಯಲಿಂಗೇಶ್ವರ ದೇವಾಲಯದಲ್ಲಿ ಕುದಿಯುವ ತುಪ್ಪದಲ್ಲಿ ಕೈಯನ್ನು ಅದ್ದಿ ಗೆಲ್ಲುತ್ತಾರೆ.[೧೦೯]

ಹದಿನೈದನೆಯ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ವೆನಿಸ್‌ನ ನಿಕೊಲೊ–ಡಿ–ಕೊಂತಿ ಸಹ ದಿವ್ಯಗಳು ನಡೆಯುತ್ತಿದ್ದ ಬಗ್ಗೆ ಪ್ರತ್ಯಕ್ಷದರ್ಶಿಯಾಗಿ ವರದಿ ನೀಡುತ್ತಾನೆ. “ಒಬ್ಬನ ಮೇಲೆ ದುಷ್ಕೃತ್ಯದ ಆರೋಪಣೆ ಬಂದರೆ, ಸಾಕ್ಷಿಗಳು ಇಲ್ಲದಿದ್ದಲ್ಲಿ ಅಪರಾಧಿ ಪ್ರಮಾಣ ಮಾಡುವುದಕ್ಕೆ ಅವಕಾಶ ಕೊಡುತ್ತಾರೆ. ಮೂರು ತರಹದ ಪ್ರಮಾಣಗಳಿವೆ. ಒಂದರಲ್ಲಿ ಅಪರಾಧಿ ದೇವರ ಮುಂದೆ ನಿಂತು ತಾನು ನಿರಪರಾಧಿಯೆಂದು ಹೇಳಿ ಕೆಂಪಗೆ ಕಾದ ಕಬ್ಬಿಣವನ್ನು ನಾಲಗೆಯಿಂದ ನೆಕ್ಕಬೇಕು. ಅವನಿಗೆ ಏನೂ ಅಪಾಯವಾಗದಿದ್ದರೆ, ನಿರಪರಾಧಿಯೆಂದು ತೀರ್ಮಾನಿಸುತ್ತಾರೆ. ಮತ್ತೊಂದು ವಿಧಾನದಲ್ಲಿ ದೇವರ ಮುಂದೆ ಕಾದ ಕಬ್ಬಿಣದ ತುಂಡನ್ನು ಅಥವಾ ಕಾದ ತಗಡನ್ನು ಕೈಯಲ್ಲಿ ಹಿಡಿದು ನಾಲ್ಕಾರು ಹೆಜ್ಜೆ ನಡೆದುಕೊಂಡು ಹೋಗಬೇಕು. ಅವನಿಗೆ ಏನೂ ಅಪಾಯವಾಗದಿದ್ದರೆ ಅವನು ನಿರಪರಾಧಿಯೆಂದು ತೀರ್ಮಾನಿಸುತ್ತಾರೆ. ಮೂರನೆಯದು ಸರ್ವೇ ಸಾಮಾನ್ಯ ವಿಧಾನ. ದೇವರ ಮುಂದೆ ಕುದಿಯುವ ತುಪ್ಪವನ್ನಿಟ್ಟು ಅದರೊಳಗೆ ಅಪರಾಧಿಯ ಎರಡು ಬೆರಳುಗಳನ್ನು ಅದ್ದುತ್ತಾರೆ. ತಕ್ಷಣವೇ ಬೆರಳುಗಳ ಸುತ್ತ ಬಟ್ಟೆ ಸುತ್ತಿ ಮುದ್ರೆ ಒತ್ತುತ್ತಾರೆ. ಮಾರನೆಯ ದಿವಸ ಬಟ್ಟೆ ಬಿಚ್ಚಿ ನೋಡುತ್ತಾರೆ. ಬೆರಳುಗಳು ಸುಟ್ಟಿದ್ದರೆ ಅಪರಾಧಿಯೆಂತಲೂ, ಸುಡದಿದ್ದರೆ ನಿರಪರಾಧಿ ಎಂತಲೂ ತೀರ್ಮಾನಿಸುತ್ತಾರೆ”.[೧೧೦]

ದುಅರ್ತೆ ಬಾರ್ಬೋಸಾನು ಸಹ ಇಂತಹ ದಿವ್ಯ ಪ್ರಮಾಣದ ಬಗ್ಗೆ ಮಾಹಿತಿ ನೀಡುತ್ತಾನೆ. “ಪ್ರಮಾಣ ಮಾಡುವ ರೀತಿ ಈ ರೀತಿ ಇದೆ. ಆರೋಪಿ ಜೆಂಟೈಲನಾದರೆ ದೇವಸ್ಥಾನಕ್ಕೆ ಕರೆದುಕೊಂಡು ಹೋಗುತ್ತಾರೆ. ಅಲ್ಲಿ ತಾಮ್ರದ ಪಾತ್ರೆಯಲ್ಲಿ ಎಣ್ಣೆಯನ್ನು ಕಾಯಿಸಿ ಪರೀಕ್ಷಿಸಲು ಒಂದು ಎಲೆ ಹಾಕುತ್ತಾರೆ. ನಂತರ ಇಬ್ಬರು ಕರಣಿಕರು ಅಪರಾಧಿಯ ಬಲಗೈಯನ್ನು ಗಾಯಗೀಯಗಳಾಗಿವೆಯೇ ಎಂದು ಪರೀಕ್ಷಿಸುತ್ತಾರೆ. ಅದನ್ನು ಪುಸ್ತಕದಲ್ಲಿ ಬರೆದು ಅಪರಾಧಿಗೆ ತೋರಿಸುತ್ತಾರೆ. ಅಪರಾಧಿ ತಾನು ತಪ್ಪು ಮಾಡಿಲ್ಲವೆಂದು ಬಲಗೈನ ಎರಡು ಬೆರಳುಗಳನ್ನು ಗಿಣ್ಣಿನವರೆಗೆ ಅದ್ದುತ್ತಾನೆ. ನಂತರ ಕಾರಕೂನ ಬೆರಳು ಯಾವ ಸ್ಥಿತಿಯಲ್ಲಿದೆ ಎಂದು ಪರೀಕ್ಷಿಸಿ ಬರೆದುಕೊಂಡು ಬಟ್ಟೆ ಸುತ್ತಿ ಮುದ್ರೆ ಹಾಕುತ್ತಾನೆ. ಮೂರು ದಿನದ ನಂತರ ಬಿಚ್ಚುತ್ತಾರೆ. ಬೆರಳು ಸುಟ್ಟುಹೋಗಿದ್ದರೆ ಅಪರಾಧಿ ಎಂದು ತೀರ್ಮಾನಿಸಲಾಗುತ್ತದೆ. ಈ ತರಹದ ಶಿಕ್ಷಾ ಕ್ರಮವನ್ನು ಪ್ರಾಣಹತ್ಯೆ ಮಾಡಿದವನಿಗೂ, ಹಸುವನ್ನು ಕೊಂದವನಿಗೂ, ಬ್ರಾಹ್ಮಣ ಅಥವಾ ದೊಡ್ಡ ಮನುಷ್ಯರ ಮೇಲೆ ಕೈ ಮಾಡಿದವನಿಗೂ ಅನುಸರಿಸುತ್ತಾರೆ”.[೧೧೧]

ದೇವಚಂದ್ರ ಶ್ರವಣಬೆಳಗೊಳದ ಬುಕ್ಕರಾಯನ ಶಾಸನವನ್ನು ಪ್ರಸ್ತಾಪಿಸುತ್ತಾ, ಅದರಲ್ಲಿ ಬಸವಿಶೆಟ್ಟಿಯು ಜೈನಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯಲು ಸಿಂಗಾಚಾರಿ ಎಂಬುವವನೊಂದಿಗೆ ವಾಗ್ವಾದಕ್ಕಿಳಿಯುತ್ತಾನೆ. ನಂತರ ಬುಕ್ಕರಾಯನ ಆಸ್ಥಾನಕ್ಕೆ ಹೋಗಿ 'ಭಾಷಾಪತ್ರ' ಬರೆದುಕೊಟ್ಟು ಉರಿಯುತ್ತಿದ್ದ ಲೋಹದ ಗುಂಡುಗಳನ್ನು ಎರಡೂ ಕೈಯಿಂದ ಎತ್ತಿ ಹೆಗಲಮೇಲಿಟ್ಟುಕೊಂಡು ಎರಡು ಗಂಟೆಗಳ ಕಾಲ ಮೈಮೇಲೆ ಆಡಿಸಿ ನೆಲಕ್ಕೆ ಇಟ್ಟಾಗಲೂ ಅದು ನೆಲದ ಮೇಲೂ ಉರಿಯುತ್ತಿತ್ತೆಂದು ಹೇಳಿ ಎಲ್ಲರೂ ಆಶ್ಚರ್ಯಪಡುವಂತೆ ದಿವ್ಯ ಗೆದ್ದನೆಂದು (ತಪ್ತಮಪ್ಪ ಲೋಹದ ಗುಂಡಂ ಜಾಜ್ವಲಮಪ್ಪುದನೆರಡು ಕೈಯಿಂದೆತ್ತಿ ಪೆಗಲೊಳಿಟ್ಟುಕೊಂಡು ಎರಡು ಗಳಿಗೆವರಂ ಮೈಮೇಲಾಡಿಸಿ ನೆಲಕ್ಕಿಡಲು ಆ ಭೂಮಿಯೊಳು ಅದು ಉರಿಯುತ್ತಿತ್ತು) ಆಗ ಬುಕ್ಕರಾಯ ತಿರುಮಲೆ ತಾತಯ್ಯ ಮುಂತಾದ ವೈಷ್ಣವರನ್ನು ಕರೆಸಿ ಶಿಲಾಶಾಸನ ಹಾಕಿಸಿದನೆಂದು ಹೇಳುತ್ತಾನೆ.[೧೧೨]

ಪ್ರಾಚೀನ ಜನಪದ ಕಥನಗಳಲ್ಲೂ, ಕಾವ್ಯಗಳಲ್ಲೂ ದಿವ್ಯದ ಪ್ರಸಂಗಗಳು ಸರ್ವೇ ಸಾಧಾರಣವೆಂಬಂತೆ ಕಂಡುಬರುತ್ತವೆ. ಅದರಲ್ಲೂ ಸ್ತ್ರೀಯರು ಪಾತಿವ್ರತ್ಯವನ್ನು ಸ್ಥಾಪಿಸಿಕೊಳ್ಳುವಂತಹ ಸಂದರ್ಭಗಳಲ್ಲಿ ಇಂಥ ದಿವ್ಯಗಳಿಗೆ ಅವರನ್ನು ಒಳಗು ಮಾಡಲಾಗುತ್ತಿತ್ತು. ಜುಂಜಪ್ಪ ತನ್ನ ತಾಯಿ ಸಿನ್ನಮ್ಮನ ಶೀಲವನ್ನು ಲೋಕಕ್ಕೆ ಸಿದ್ಧಪಡಿಸಲು ಎಂಟುಘೋರ ಭೀಕರ ದಿವ್ಯಗಳಿಗೆ ಒಳಗು ಮಾಡುತ್ತಾನೆ. ತನ್ನ ಸಹೋದರರ ಕುತಂತ್ರದಿಂದ ಸಿನ್ನಮ್ಮ ಒಂದು ರಾತ್ರಿಯನ್ನು ಪಕ್ಕದ ಊರಿನ ಶೆಟ್ಟಿಯ ಮನೆಯಲ್ಲಿ ಕಳೆಯಬೇಕಾಗುತ್ತದೆ. ಪೋಡಿಗೆ ಬಂದಾಗ ತಾನು ಇನ್ನು ಪತಿವ್ರತೆಯಾಗಿರುವುದನ್ನು ಸಿದ್ಧಮಾಡಲು ಮಗ ಒಂದಕ್ಕಿಂತ ಒಂದು ಕ್ರೂರವಾದ ಎಂಟು ದಿವ್ಯಗಳನ್ನು ಒಡ್ಡುತ್ತಾನೆ. ಒನಕೆಯನ್ನು ಬರಿಯ ಕೈಯಿಂದ ಸಿಗಿದು ನಾರು ತೆಗೆಯುವುದು; ಜರಡಿಯಲ್ಲಿ ನೀರು ತುಂಬುವುದು; ಸಮುದ್ರಕ್ಕೆ ಎಸೆದ ಮುತ್ತಿನುಂಗುರವನ್ನು ಹುಡುಕಿ ತರುವುದು; ಸೀಗೆ ಎಲೆಯಿಂದ ಊಟದೆಲೆ ತಯಾರು ಮಾಡುವುದು, ಅಗ್ನಿಪ್ರವೇಶ ಮಾಡಿ ಉಟ್ಟ ಬಿಳಿಯ ಸೀರೆ ಕಪ್ಪಾಗದಂತೆ ಹೊರಬರುವುದು ಆ ಎಂಟು ದಿವ್ಯಗಳಾಗಿವೆ.[೧೧೩] ಹಾಗೆಯೇ ಮಲೆಮಹದೇಶ್ವರ ಕಾವ್ಯದಲ್ಲಿ, ಸಂಕಮ್ಮನ ಗಂಡ ನೀಲಯ್ಯ ಶೀಲ ಪ್ರಶ್ನಿಸಿ ಒಂಭತ್ತು ಬಗೆಯ ದಿವ್ಯಗಳ ಮೂಲಕ ಪಾತಿವ್ರತ್ಯವನ್ನು ಸಿದ್ಧಪಡಿಸುವಂತೆ ಬಲಾತ್ಕರಿಸುತ್ತಾನೆ. ಮಾದೇಶ್ವರನ ದಯೆಯಿಂದ ಸಂಕಮ್ಮ, ಅಗ್ನಿ ದಿವ್ಯ, ಜಲದಿವ್ಯ ಇತ್ಯಾದಿ ಎಲ್ಲ ದಿವ್ಯಗಳನ್ನು ಗೆದ್ದು ಬರುತ್ತಾಳೆ.[೧೧೪] ಇವಲ್ಲದೆ ನಾಗಮಂಡಲ ಮುಂತಾದ ಹಲವಾರು ಜನಪದ ಕಥನಗಳಲ್ಲಿ ಇಂಥ ದಿವ್ಯ ಪ್ರಪಂಚವನ್ನು ಕಾಣಬಹುದು. ಆದರೆ ಧರ್ಮಶಾಸ್ತ್ರಗಳ ದಿವ್ಯಗಳಿಗಿಂತ ಇವು ಭಿನ್ನವಾಗಿವೆ. ಶಿಷ್ಟ ಪ್ರಪಂಚದಲ್ಲಿ ಕಷ್ಟಪಟ್ಟು ಅಥವಾ ತಂತ್ರಗಾರಿಕೆಯಿಂದ ಸಾಧಿಸಬಹುದಾಗಿರುವಂತಹ ದಿವ್ಯಗಳು, ಜನಪದ ಸಮೂಹಗಳಲ್ಲಿ ಅಸಾಧಾರಣ ಸ್ವರೂಪ ಹೊಂದಿರುತ್ತವೆ. ಒಂದು ಕಡ್ಡಿಯನ್ನು ತೂರಿಸುವಷ್ಟು ದೊಡ್ಡದಿರದ ಸೀಗೆ ಎಲೆಯಂತಹ ಸಣ್ಣ ಎಲೆಗಳನ್ನು ಊಟದ ಎಲೆಯನ್ನಾಗಿ ಕೋದು ಸಿದ್ಧ ಮಾಡುವುದಾಗಲೀ ಅಥವಾ ಜರಡಿಯಲ್ಲಿ ನೀರು ಹಿಡಿದಿಟ್ಟುಕೊಳ್ಳುವುದಾಗಲೀ ಸಾಧ್ಯವಾಗದ ಸಂಗತಿ. ಆದರೆ ಜನಪದರು ಇಂಥ ಅಸಾಧಾರಣ

ಸಂಗತಿಗಳನ್ನು ಸಾಧ್ಯವಾಗಿಸುವ ಮೂಲಕ, ಅಂಥ ಪಾತ್ರೆಗಳನ್ನು ಔನ್ನತ್ಯೀಕರಿಸುವ ಆಶಯ ಹೊಂದಿರುವುದು ಕಂಡುಬರುತ್ತದೆ.

ದಿವ್ಯ ವಿಧಾನವನ್ನು ಅನುಸರಿಸುವ ಬಗ್ಗೆ ಸ್ವತಃ ಸ್ಮೃತಿಕಾರರೇ ಟೀಕಿಸಿದ್ದಾರೆ. ಮೇದಾತಿಥಿಯು ಸತ್ಯಶೋಧನೆಗೆ ದಿವ್ಯಗಳನ್ನು ಅವಲಂಬಿಸಬಹುದೇ ಎಂಬ ಪ್ರಶ್ನೆಯನ್ನು ಎತ್ತುತ್ತಾನೆ. ಅವನ ಪ್ರಕಾರ "ಜಲ ಮತ್ತು ಅಗ್ನಿ ಒಂದೇ ರೂಪದಲ್ಲಿ ಕಾರ್ಯನಿರ್ವಹಿಸುವ ಸ್ವಾಭಾವಿಕ ಶಕ್ತಿಗಳಾಗಿವೆಯೇ ಹೊರತು ಅವುಗಳಿಗೆ ಮನವಿ ಮಾಡಿದಾಕ್ಷಣ ತಮ್ಮ ಮನಸ್ಸನ್ನು ಬದಲಾಯಿಸಿಕೊಳ್ಳುವ ಬುದ್ಧಿವಂತ ಕಾರಕಗಳಲ್ಲ. ಆದ್ದರಿಂದ ದಿವ್ಯಗಳು ಮನುಷ್ಯರು ಭೀತಿಯ ಮೂಲಕ ಸತ್ಯವನ್ನು ಹೇಳುವಂತೆ ಪ್ರಚೋದಿಸುವ ಮಾರ್ಗಗಳಾಗಿವೆ. ಅಲ್ಲದೆ ಕಳ್ಳರು ತಂತ್ರಗಳನ್ನು ಬಳಸಿ ಅಗ್ನಿ ದಿವ್ಯಗಳಲ್ಲಿ ಸುಡದಂತೆ ಪಾರಾಗಬಹುದು ಮತ್ತು ಅಮಾಯಕರು ಸುಟ್ಟ ಗಾಯಗಳಿಗೆ ಒಳಗಾಗಬಹುದು".[೧೧೫]

ಭಾರತೀಯ ನ್ಯಾಯ ವ್ಯವಸ್ಥೆಯಲ್ಲಿ ದಿವ್ಯ ಪರೀಕ್ಷಾ ವಿಧಾನವು ಆತ್ಯಂತಿಕ ಮಾರ್ಗವಾಗಿದ್ದು, ನ್ಯಾಯ ನಿರ್ಣಯದ ಎಲ್ಲ ಮಾರ್ಗಗಳೂ ಮುಚ್ಚಿದಾಗ, ಅನಿವಾರ್ಯವೆನಿಸುವ ಸಂದರ್ಭಗಳಲ್ಲಿ ಮಾತ್ರ ಅನುಸರಿಸಲಾಗುತ್ತಿತ್ತು. ಈ ದಿವ್ಯಗಳು ಉಂಟುಮಾಡಬಹುದಾದ ಭೀತಿಯಿಂದಲೇ ಬಹುಶಃ ಅಪರಾಧಿಗಳು ತಮ್ಮ ತಪ್ಪುಗಳನ್ನು ಒಪ್ಪಿಕೊಂಡು ಬಿಡುತ್ತಿದ್ದರು. ಈ ಕಾರಣಕ್ಕಾಗಿಯೇ ದಿವ್ಯಗಳ ಬಳಕೆ ಹೆಚ್ಚು ಪ್ರಚಲಿತದಲ್ಲಿರಲಿಲ್ಲವೆಂಬುದನ್ನು ಸೀಮಿತ ಸಂಖ್ಯೆಯ ಶಾಸನೋಲ್ಲೇಖಗಳಿಂದ ಊಹಿಸಬಹುದಾಗಿದೆ.

ಜಯರೇಖೆಗಳಲ್ಲಿ ಪ್ರತಿಫಲಿತವಾಗಿರುವಂತೆ ಪ್ರಾಚೀನ ಸಂದರ್ಭದಲ್ಲಿ ಧರ್ಮಾಧಾರಿತವಾಗಿದ್ದ ಮತ್ತು ಶಾಸ್ತ್ರಗ್ರಂಥಗಳನ್ನು ಆಧರಿಸಿದ್ದ ನ್ಯಾಯ ವ್ಯವಸ್ಥೆ ಒಂದೆಡೆ ಪ್ರಚಲಿತವಾಗಿದ್ದರೆ, ಅದಕ್ಕೆ ಪರ್ಯಾಯವಾಗಿ ವಿವಿಧ ಸಮುದಾಯಗಳ ನಡುವೆ ತಮ್ಮ ತಮ್ಮ ಸಮುದಾಯ ಹಾಗೂ ಕುಲ–ಕಟ್ಟಳೆಗಳಿಗನುಸಾರವಾಗಿ, ತಮತಮಗೆ ಅನುಕೂಲಕರವಾಗಿ ನ್ಯಾಯನಿರ್ಣಯವನ್ನು ರೂಪಿಸಿಕೊಂಡಿದ್ದ ಕುಲಾಚಾರ ಪದ್ಧತಿಯೂ ಅಸ್ತಿತ್ವದಲ್ಲಿತ್ತು. ನ್ಯಾಯ ನಿರ್ಣಯ ಹಲವಾರು ಹಂತಗಳಲ್ಲಿ ಮತ್ತು ನೆಲೆಗಳಲ್ಲಿ ಬಳಕೆಯಲ್ಲಿದ್ದರೂ, ಅವು ಮಾನವೀಯತೆಯ ನೆಲೆಗಟ್ಟಿನಲ್ಲಿ ರೂಪಿತವಾಗಿ ವರ್ತಿಸುತ್ತಿದ್ದವು. ಮಾನವೀಯತೆಗೆ ಧರ್ಮ ಮುಖಾಮುಖಿಯಾದಾಗ, ಧರ್ಮವನ್ನು ಬದಿಗಿಟ್ಟು ಮಾನವೀಯ ಚೌಕಟ್ಟಿನಲ್ಲಿಯೇ ನ್ಯಾಯ ವಿತರಣೆ ಮಾಡುತ್ತಿದ್ದುದನ್ನು ಜಯರೇಖೆಗಳು ಚಿತ್ರಿಸುತ್ತವೆ.

**ಅಡಿಟಿಪ್ಪಣಿಗಳು:**

೧. ಎ.ಇಂ–೫: ಜೆ.ಎಫ್. ಫ್ಲೀಟ್, ಪು. ೨೪೫–೨೫೨, ಕ್ರಿ.ಶ. ೧೨೦೦

೨. Rama Jois: Legal and Constitutional History of India, P. 555-556

೩. ಅದೇ, ಪು. ೫೫೬

೪. ಅದೇ, ಪು. ೫೫೬

೫. Amareshwar Thakur M.A: Shasana and Jayapatra, Sir Asuthosh Memorial Volume, P. 85

೬. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂ. I, ಭಾಗ–I, ಅದೇ, ಪು. 384

೭. Rama Jois: Legal and Constitutional History of India, P. 555

೮. Maheshkumar Sharan: Court Procedure in Ancient India, On the basis of Dharmashastra Literature, P. 173

೯. ಎ.ಇಂ–೫: ಜೆ.ಎಫ್. ಫ್ಲೀಟ್, ಪು. ೨೪೫–೨೫೨, ಕ್ರಿ.ಶ. ೧೨೦೦

೧೦. ದೇವರಕೊಂಡಾರೆಡ್ಡಿ, ಗಣೇಶ್ ಕೆ.ಆರ್: ಲಕ್ಷ್ಮೇಶ್ವರದ ಶಾಸನಗಳು, ಸಂ. ೪೮

೧೧. ಕ.ವಿ.ವಿ.ಶಾ.ಸಂ.–೨, ಗಿಣಿಗೇರಿ–೧೩೯

೧೨. ಗುಂಡಾಜೋಯಿಸ ಕೆಳದಿ: ಧರ್ಮಸ್ಥಳದ ತಾಮ್ರಶಾಸನ ಲೋಚನ ಸಂ. ೧, ಸಂ. ೧, ಪು. ೫೫–೬೪

೧೩. ಎಕ–೯ (ರೈಸ್): ಕಾನಕಾನಹಳ್ಳಿ ೯೦

೧೪. ಲಕ್ಷ್ಮಣ್ ತೆಲಗಾವಿ: ಕರ್ನಾಟಕದ ಪಾಳೆಯಗಾರರ ನ್ಯಾಯಾಡಳಿತ, ಪು. ೧೭೬–೧೯೦

೧೫. ಶಾಸ್ತ್ರೀ ಎ.ಕೆ: ಶೃಂಗೇರಿ ಮಠದ ಕಡಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು, ಸಂ. ೨೦೩, ಪು. ೩೭೩–೩೮೪

೧೬. ಜಾನಕಲ್ ರಾಜಣ್ಣ ಎಂ: ದಕ್ಕಲಿಗ, ಪು. ೨೧–೩೨

೧೭. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂ. ೩, ಭಾಗ–೨, ಪು. ೧೮

೧೮. ಅದೇ, ಪು. ೩೧೬

೧೯. ಅದೇ, ಪು. ೩೧೭

೨೦. ಅದೇ, ಪು. ೩೧೭

೨೧. ದೇವರಕೊಂಡಾ ರೆಡ್ಡಿ, ಗಣೇಶ್ ಕೆ.ಆರ್(ಸಂ): ಲಕ್ಷ್ಮೇಶ್ವರದ ಶಾಸನಗಳು: ಶಾ.ಸಂ. ೪೮

೨೨. ಅಣ್ಣಿಗೇರಿ ಎಂ.ಎಂ. ಶೇಷಶಾಸ್ತ್ರಿ ಆರ್ (ಸಂ): ಶಾಸನ ಸಂಗ್ರಹ, ಶಾ. ಸಂ. ೨೪

೨೩. ಕವಿವಿಶಾಸಂ–೨, ಗಿಣಿಗೇರಿ–೧೩೯

೨೪. ಲಕ್ಷ್ಮಣ್ ತೆಲಗಾವಿ: ಪಾಳೆಯಗಾರ ನ್ಯಾಯಾಡಳಿತ, ಪು. ೧೪೭

೨೫. ಕವಿವಿಶಾಸಂ-೨, ಗಿಣಿಗೇರಿ-೧೩೯

೨೬. ಸಂಪತ್ ಬಿ.ಎನ್: ಮಧ್ಯಯುಗದ ಕಾನೂನು ಕ್ಷೇತ್ರದ ಏಕಮೇವ ದ್ವಿತೀಯ ಟೀಕಾಕಾರ ವಿಜ್ಞಾನೇಶ್ವರ; ಲಕ್ಷ್ಮಣ್ ತೆಲಗಾವಿ (ಸಂ), ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು. ೬

೨೭. ದೇವರಕೊಂಡಾ ರೆಡ್ಡಿ, ಗಣೇಶ್ ಕೆ.ಆರ್(ಸಂ): ಲಕ್ಷ್ಮೇಶ್ವರದ ಶಾಸನಗಳು, ಶಾ.ಸಂ. ೫೮

೨೮. ಪರಮಶಿವಮೂರ್ತಿ ಡಿ.ವಿ(ಸಂ): ಪ್ರೌಢದೇವರಾಯನ ಶಾಸನಗಳು, ಬಾರಕೂರು ೫೯-೬೦

೨೯. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ ಸಂ. ೩, ಭಾಗ-೨, ಪು. ೩೮೧

೩೦. ಅದೇ, ಪು. ೩೮೧

೩೧. ಅದೇ, ಪು. ೩೮೧

೩೨. ಅದೇ, ಪು. ೩೨

೩೩. ಅದೇ, ಪು. ೩೨

೩೪. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು. ೧೫೦-೧೫೨

೩೫. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ ಸಂ.೩, ಭಾಗ-೨, ಪು. ೩೧೬

೩೬. ಅದೇ, ಪು. ೩೧೭

೩೭. ಅದೇ, ಪು. ೩೧೭

೩೮. ನಾಗೇಗೌಡ ಎಚ್.ಎಲ್: ಪ್ರವಾಸಿ ಕಂಡ ಇಂಡಿಯಾ, ಸಂ.೨, ಪು. ೩೧೩

೩೯. ರಾಜಶೇಖರಪ್ಪ ಬಿ: ಕುರುಬರಾವುತ ವೀರನೊಬ್ಬನಿಗೆ ನೀಡಿದವೆನ್ನಲಾದ ಮೂರು ನಿರೂಪಗಳು, ಇತಿಹಾಸ ದರ್ಶನ-೧೨, ಪು. ೧೮೨-೧೯೫

೪೦. ಕವಿವಿಶಾಸಂ-೨, ಗಂಗಾವತಿ-೨೬

೪೧. ದುರುಗಪ್ಪ ಎಂ.ಕೆ: ಆನೆಗೊಂದಿ ಬಡೇರಾಮರಾಯನ ಶಾಸನ, ವಿಜಯನಗರ ಅಧ್ಯಯನ-೧೯, ಪು. ೪೨-೪೮

೪೨. ರಾಜಶೇಖರಪ್ಪ ಬಿ: ವಿಜಯನಗರ ದೊರೆಗಳ ಪ್ರಸ್ತಾಪ ಬರುವ ಗೊಲ್ಲ ಜನಾಂಗದ ಒಂದು ದಾಖಲೆ, ವಿಜಯನಗರ ಅಧ್ಯಯನ-೧೨, ಪು. ೧೬೬-೧೮೧

೪೩. ಹಳ್ಳಿಕೇರಿ ಎಫ್.ಟಿ: ಅಮೋಘಸಿದ್ಧ ಪರಂಪರೆಯ ಹಾಲುಮತ ಮಠಗಳು, ಇತಿಹಾಸ ದರ್ಶನ-೨೧, ಪು. ೨೫೦-೨೫೭

೪೪. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು. ೧೩೨-೩೩

೪೫. ಹಳ್ಳಿಕೇರಿ ಎಫ್.ಟಿ: ದೇವಲಾಪುರದ ಅಪ್ರಕಟಿತ ನಾಲ್ಕು ತಾಮ್ರಪತ್ರಗಳು, ವಿಜಯನಗರ ಅಧ್ಯಯನ-೧೨, ಪು. ೩೦-೩೭

೪೬. ಎ.ಕ-೯ (ರೈಸ್): ಹೊಸಕೋಟೆ-೧೦೫

೪೭. ಕಲಬುರ್ಗಿ ಎಂ.ಎಂ: ಕರ್ನಾಟಕದ ಕೈಫಿಯತ್ತುಗಳು, ಸಂ. ೧೨೩, ಪು. ೫೮೨

೪೮. ಎ.ಕ.-೯ (ರೈಸ್): ಕಾನಕಾನಹಳ್ಳಿ-೯೦, ಕ್ರಿ.ಶ. ೧೭೦೦

೪೯. ಜಾನಕಲ್ ರಾಜಣ್ಣ: ದಕ್ಕಲಿಗರು, ಪು. ೨೧-೩೨
೫೦. ಅಮರೇಶ ಯತಗಲ್: ಗುಡುಗುಂಟಿ ಸಂಸ್ಥಾನಿಕರ ನ್ಯಾಯಾಡಳಿತ, (ಸಂ) ಲಕ್ಷ್ಮಣ್ ತೆಲಗಾವಿ, ಕರ್ನಾಟಕದ ಪಾಳೆಯಗಾರರ ನ್ಯಾಯಾಡಳಿತ, ಪು. ೨೪೮
೫೧. ಮಂಜುನಾಥನ್ ಜಿ.ಜಿ (ಸಂ): ೧೯೭೦, ಸನತ್ಕುಮಾರ ಕವಿ ವಿರಚಿತ ಜೀವಂಧರ ಚರಿತೆ, ಪು. ೧೪
೫೨. ಕೊಟ್ರೇಶ್ ಎಂ: ವಿಜಯನಗರ ಕಾಲದ ತಾಮ್ರ ಶಾಸನ, ವಿಜಯನಗರ ಅಧ್ಯಯನ-೧೬, ಪು. ೩೦-೩೧
೫೩. ಹಳ್ಳಿಕೇರಿ ಎಫ್.ಟಿ: ಕುರುಬರಿಗೆ ಸಂಬಂಧಿಸಿದ ವಿಜಯನಗರದ ಅಪ್ರಕಟಿತ ತಾಮ್ರಶಾಸನ, ವಿಜಯನಗರ ಅಧ್ಯಯನ- ೧೨. ಪು. ೭೬-೮೩
೫೪. ಎಸ್ಐಐ-೯-೧, ೧೬೯, ಕ್ರಿ ಶ. ೧೧೦೪
೫೫. ನಂಜುಂಡಸ್ವಾಮಿ ಬಿ: ಗುಬ್ಬಿ ಹೊಸಹಳ್ಳಿ ಅರಸು ಮನೆತನದಲ್ಲಿಯ ಒಡೆಯರ ನಿರೂಪ, ಇತಿಹಾಸ ದರ್ಶನ, ಪು. ೪೦೩-೪೦೭
೫೬. Rama Jois: Legal and Constitutinal History of India, P. 513-14
೫೭. ಅದೇ, ಪು. ೫೧೯
೫೮. ಅದೇ, ಪು. ೫೫೪
೫೯. ಅದೇ, ಪು. ೪೧೬
೬೦. ಅದೇ, ಪು. ೪೨೨-೨೩
೬೧. ಅದೇ, ಪು. ೪೨೩
೬೨. ಅದೇ, ಪು. ೪೨೧
೬೩. ಅದೇ, ಪು. ೪೨೧
೬೪. ಅದೇ, ಪು. ೪೨೫
೬೫. ಎ.ಕ.೨ (ರೈಸ್): ಶ್ರವಣ ಬೆಳಗೊಳ-೩೪೪
೬೬. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕದ ಪಾಳೆಯಗಾರರ ನ್ಯಾಯಾಡಳಿತ, ಪು. ೩೬೦
೬೭. ಮಲ್ಲಿಗವಾಡ ಕೆ.ಸಿ: ಇತಿಹಾಸ ದರ್ಶನ-೨೪, ಪು. ೧೫೯-೧೬೫
೬೮. Rama Jois: Legal and Constitutinal History of India, P. 417
೬೯. ಅದೇ, ಪು. ೪೨೦
೭೦. ಅದೇ, ಪು. ೪೨೦
೭೧. ಎ.ಇಂ-೫: ಜೆ.ಎಫ್. ಫ್ಲೀಟ್, ಪು. ೨೪೫-೨೫೨, ಕ್ರಿ.ಶ. ೧೨೦೦
೭೨. ಗಣೇಶ್ ಕೆ.ಆರ್: ಶೇಷಶಾಸ್ತ್ರೀ ಆರ್ (ಸಂ): ಕ.ವಿ.ವಿ.ಶಾ.ಸಂ-೫. ಪು. ೧೪೩
೭೩. ದೇವರಕೊಂಡಾ ರೆಡ್ಡಿ, ಗಣೇಶ್ ಕೆ.ಆರ್ (ಸಂ): ಲಕ್ಷ್ಮೇಶ್ವರದ ಶಾಸನಗಳು, ಶಾ.ಸಂ. ೫೮

೭೪. ಶಾಸ್ತ್ರಿ ಎ.ಕೆ: ಶೃಂಗೇರಿ ಮಠದ ಆಯ್ದ ಚಾರಿತ್ರಿಕ ದಾಖಲೆಗಳು, ಸಂ. ೨೦೩-೧೩೨
೭೫. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕದ ಪಾಳೆಯಗಾರರ ನ್ಯಾಯಾಡಳಿತ, ಪು. ೧೫೦
೭೬. ನಂಜುಂಡಸ್ವಾಮಿ ಬಿ: ಶ್ರೀ ಶಿವಗಂಗಾ ಶ್ರೀಮಠಕ್ಕೆ ಕೊಡಲ್ಪಟ್ಟ ಸನ್ನದುಗಳು ಮತ್ತು ಕೆಲವು ಕಾಗದ ಪತ್ರಗಳು, ಇತಿಹಾಸ ದರ್ಶನ-೨೮, ಪು. ೭೫-೮೪
೭೭. ದೇವರಕೊಂಡಾರೆಡ್ಡಿ ಮತ್ತು ಗಣೇಶ್ ಕೆ.ಆರ್(ಸಂ): ಲಕ್ಷ್ಮೇಶ್ವರದ ಶಾಸನಗಳು, ಸಂಖ್ಯೆ ೪೮
೭೮. ಅಪ್ಪಾಜಿ ಎಸ್ ಸಿಂಧೆ, ಚಾವಡಿ ಲೋಕೇಶ್ ಕೆ: ಗೋಸಂಗಿ, ಪು. ೧೧೭-೧೩೬
೭೯. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂ.೧, ಭಾಗ-೨, ಪು. ೨೮೪
೮೦. ಅದೇ, ಪು. ೨೮೪
೮೧. ದೇವರಕೊಂಡಾರೆಡ್ಡಿ ಮತ್ತು ಗಣೇಶ್ ಕೆ.ಆರ್(ಸಂ): ಲಕ್ಷ್ಮೇಶ್ವರದ ಶಾಸನಗಳು, ಸಂಖ್ಯೆ ೪೮
೮೨. ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ ಸಂ.೧, ಭಾಗ-೨, ಪು. ೨೮೪ (ದೇಶಪತ್ತನ ಗೋಷ್ಠೇಷು ಪುರಗ್ರಾಮೇಷಂವಾಸಿನಾಮ್। ಶೇಷಾಂಸ್ವಸಮಯೈರ್ಧರ್ಮಂ ಶಾಸ್ತ್ರ ತೋನ್ಯೇಷುತೈಃ ಸಹ)
೮೩. ಅದೇ, ಪು. ೩೩೧
೮೪. ಅದೇ, ಪು. ೩೩೦
೮೫. ಜಾನಕಲ್ ರಾಜಣ್ಣ: ದಕ್ಕಲಿಗ, ಪು. ೧೭
೮೬. ಕೆಳದಿ ಗುಂಡಾಜೋಯಿಸ್: ಧರ್ಮಸ್ಥಳದಲ್ಲಿರುವ ತಾಮ್ರಶಾಸನ, ಲೋಚನ-ಸಂ.೧, ಸಂ.೧, ಪು. ೫೭
೮೭. Rama Jois: Legal and Constitutinal History of India, P. 523
೮೮. ಕ.ವಿ.ವಿ.ಶಾ.ಸಂ.೨, ಗಿಣಿಗೇರಿ-೧೩೯
೮೯. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು ೩೭೧-೩೭೫
೯೦. ರಾಮಚಂದ್ರ ಚರಿತ ಪುರಾಣ ೯/೧೦೧
೯೧. ಅನಂತರಂಗಾಚಾರ್ ಎನ್ (ಗದ್ಯಾನುವಾದ), ಪಂಪಭಾರತಂ, ೧/೭೦, ಪು. ೮೮
೯೨. Rama Jois: Legal and Constitutinal History of India: P. 416
೯೩. Jolly. J: Hindu Law and Customs, P. 313-314
೯೪. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೧೯
೯೫. ಎಸ್ಐಐ-೯-೧: ೧೪೩, ಕ್ರಿ.ಶ. ೧೦೭೯
೯೬. ಎ.ಕ-೭ (ರೈಸ್): ಶಿಕಾರಿಪುರ ೧೮೫, ಕ್ರಿ.ಶ. ೧೧೫೮
೯೭. ಎಕ-೪ (ರೈಸ್): ಯಳಂದೂರು-೨, ಕ್ರಿ.ಶ. ೧೫೮೦
೯೮. Rama Jois: Legal and Constitutinal History of India, P. 567
೯೯. ಚಿದಾನಂದಮೂರ್ತಿ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೨೧೯

೧೦೦. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು. ೧೫೫
೧೦೧. ಅದೇ, ಪು. ೧೫೮
೧೦೨. Rama Jois: Legal and Constitutinal History of India, P. 417
೧೦೩. ಎ.ಕ–೭ (ಪರಿಷ್ಕೃತ): ಮಂಡ್ಯ ೨೫
೧೦೪. ಎ.ಕ–೩ (ರೈಸ್): ಮಂಡ್ಯ ೭೯, ಕ್ರಿ.ಶ. ೧೧೨೫
೧೦೫. ಎ.ಕ–೭ (ಪರಿಷ್ಕೃತ): ಮಂಡ್ಯ ೨೫
೧೦೬. ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ಪು. ೧೮೫–೧೮೮
೧೦೭. ಅದೇ, ಪು. ೧೫೫–೧೫೬
೧೦೮. ಅದೇ, ಪು. ೧೫೮–೧೫೯
೧೦೯. ಎ.ಕ–೪ (ರೈಸ್): ಯಳಂದೂರು ೨, ಕ್ರಿ.ಶ. ಸುಮಾರು ೧೫೮೦
೧೧೦. ನಾಗೇಗೌಡ ಎಚ್.ಎಲ್: ಪ್ರವಾಸಿ ಕಂಡ ಇಂಡಿಯಾ, ಸಂ. ೨, ಪು. ೧೪೨–೪೩
೧೧೧. ಅದೇ, ಪು. ೩೧೨
೧೧೨. ಸಣ್ಣಯ್ಯ ಬಿ.ಎಸ್: ರಾಜಾವಳಿ ಕಥಾಸಾರ, ಪು. ೧೯೮
೧೧೩. ರಾಮಚಂದ್ರನ್ ಸಿ.ಎನ್: ಹೊಸ ಮಡಿಯ ಮೇಲೆ ಚದುರಂಗ, ಪು. ೧೪೫
೧೧೪. ಅದೇ, ಪು. ೧೧೨
೧೧೫. Rama Jois: Legal and Constitutinal History of India: P. 565

* * *

# ಅಧ್ಯಾಯ–೭

## ಉಪಸಂಹಾರ

೭.೧ ಅಧ್ಯಯನದ ಸಾರಸಂಗ್ರಹ

೭.೨ ಅಧ್ಯಯನದ ಫಲಿತಗಳು

೭.೩ ಅಧ್ಯಯನದ ಹೊಸ ಸಾಧ್ಯತೆಗಳು

# ಅಧ್ಯಾಯ-೭

## ಉಪಸಂಹಾರ

### ೭.೧ ಅಧ್ಯಯನದ ಸಾರಸಂಗ್ರಹ

ಜಯರೇಖೆಗಳ ಕಥನವು ಮಧ್ಯಕಾಲೀನ ಸಮುದಾಯಗಳ ಜೀವನ್ಮುಖಿ ಹೋರಾಟದ ಸಂಕಥನವೇ ಆಗಿದೆ. ಸಮುದಾಯಗಳು ಬಾಳ್ವೆ ನಡೆಸುವುದಕ್ಕಾಗಿ, ಸಮಾಜದಲ್ಲಿ ತಮ್ಮ ಅಸ್ತಿತ್ವ ಉಳಿಸಿಕೊಳ್ಳುವುದಕ್ಕಾಗಿ, ಸಮುದಾಯಗಳ ನಡುವೆ ತಮ್ಮ ಛಾಪನ್ನು, ಅನನ್ಯತೆಯನ್ನು ಮೂಡಿಸುವುದಕ್ಕಾಗಿ ನಡೆಸಿದ ಹೋರಾಟದ ರೀತಿ, ಸಾಧಿಸಿದ ಗೆಲುಮೆ, ಗೆಲುಮೆಯ ದಾಖಲೀಕರಣ, ಲಿಖಿತ ದಾಖಲೆಗಳನ್ನು ಭದ್ರವಾಗಿ ತಮ್ಮತಮ್ಮ ಸಮುದಾಯಗಳ ಜನಪದರ ಸ್ಮೃತಿಕೋಶದಲ್ಲಿ ಸಾಂಸ್ಕೃತಿಕವಾಗಿ ಕಟ್ಟಿಕೊಡಲು ಪ್ರಯತ್ನಿಸಿದ ಬಗೆ ಮುಂತಾದ ಅಂಶಗಳು ಇಲ್ಲಿ ಮುನ್ನೆಲೆಯಲ್ಲಿ ನಿಲ್ಲುತ್ತವೆ.

ಜಯರೇಖೆಗಳ ಅಧ್ಯಯನದಿಂದ ಅವುಗಳಲ್ಲಿ ಅಡಕವಾದ ಘಟಕಗಳ ಗ್ರಹಿಕೆಗಳನ್ನು ಪದರು ಪದರುಗಳಾಗಿ ಬಿಡಿಸಿ ನೋಡಿದಾಗ ಅವುಗಳ ಗ್ರಹಿಕೆಯ ನೆಲೆಗಳೂ ವಿಭಿನ್ನಾರ್ಥಗಳನ್ನು ಪಡೆದುಕೊಳ್ಳುತ್ತವೆ. ಅರ್ಥಗಳನ್ನು ಅಧ್ಯಾರೋಹಣ ಮಾಡಿಕೊಂಡಂತೆ ಅವುಗಳ ಅಂತರ್‌ದನಿ ಅನುರಣಗೊಳ್ಳುತ್ತಾ ಸಾಗುತ್ತದೆ.

ಪ್ರಸ್ತುತ ಮಹಾಪ್ರಬಂಧವನ್ನು ಏಳು ಅಧ್ಯಾಯಗಳಲ್ಲಿ ವಿಸ್ತರಿಸಲಾಗಿದೆ. ಮೊದಲ ಅಧ್ಯಾಯದ ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈದಾನಿಕತೆ ಹಾಗೂ ಕೊನೆಯ ಉಪಸಂಹಾರ-ಈ ತಾಂತ್ರಿಕ ಅಧ್ಯಾಯಗಳನ್ನು ಹೊರತುಪಡಿಸಿ, ಉಳಿದ ಎರಡರಿಂದ ಆರನೆಯ ಅಧ್ಯಾಯಗಳಲ್ಲಿ ಜಯರೇಖೆ ಶಾಸನಗಳ ತಾತ್ವಿಕ ವಿವೇಚನೆಯ ಜೊತೆಗೆ ಮಧ್ಯಕಾಲೀನ ಸಮುದಾಯಗಳ ಸಾಂಸ್ಕೃತಿಕ ಜೀವನದ ಏರುಪೇರುಗಳನ್ನು, ಮೇಲಾಟಗಳನ್ನು, ಜೀವನಕ್ರಮವನ್ನು, ನ್ಯಾಯವಿಧಾನವನ್ನು ಕುರಿತಂತೆ ಹೊಸ ವಿಚಾರಗಳನ್ನು ಹೇಳಲಾಗಿದೆ. ಈ ಹಿನ್ನೆಲೆಯಲ್ಲಿ ಇದು ಮುಂದಿನ ಹಲವಾರು ಅಧ್ಯಯನಗಳಿಗೆ ಮಾರ್ಗಸೂಚಿ ಆಕರ ಕೃತಿಯಾಗಬಹುದೆಂಬ ಆಶಯವಿದೆ.

**ಅಧ್ಯಾಯ-೧: ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ**

ಜಯರೇಖೆಗಳೆಂದರೆ ಮೊದಲಿನಿಂದಲೂ ವಾದ ವಿವಾದಗಳಲ್ಲಿ ಗೆದ್ದವರಿಗೆ ನೀಡುವ ಪತ್ರಗಳೆಂಬ ಸರಳೀಕೃತ ವ್ಯಾಖ್ಯಾನಕ್ಕೆ ಒಳಗು ಮಾಡಲಾಗಿದೆ ಹಾಗೂ ಗಂಭೀರ ಅಧ್ಯಯನದ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಇವುಗಳ ಬಗ್ಗೆ ಒಂದು ಸೂಕ್ತವಾದ ಪರಿಚಯಾತ್ಮಕ ಲೇಖನವೂ ಸಹ ಪ್ರಕಟವಾಗದಿರುವುದು ಈ ಅಂಶವನ್ನು ಪುಷ್ಟೀಕರಿಸುತ್ತದೆ. ನನ್ನ ಅಧ್ಯಯನದ ಪ್ರಧಾನ ಉದ್ದೇಶ,

ಜಯರೇಖೆ ಶಾಸನಗಳ ಮೂಲಕ ಕರ್ನಾಟಕದ ಮಧ್ಯಕಾಲೀನ ಹಾಗೂ ಮಧ್ಯಕಾಲೀನೋತ್ತರ ಸಮುದಾಯಗಳು ಹಾಗೂ ಅವುಗಳ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಪಲ್ಲಟಗಳನ್ನು ಹಾಗೂ ಚಿಂತನೆಗಳನ್ನು ಕಾಲಾನುಕ್ರಮವಾಗಿ ಹಂತ ಹಂತವಾಗಿ ಅನಾವರಣಗೊಳಿಸುವುದಾಗಿದೆ.

ಅಧ್ಯಯನದ ವ್ಯಾಪ್ತಿಯನ್ನು ಕಾಲವ್ಯಾಪ್ತಿ ಹಾಗೂ ಆಕರವ್ಯಾಪ್ತಿಯ ಚೌಕಟ್ಟಿನಲ್ಲಿ ನಿಗದಿಪಡಿಸಿಕೊಳ್ಳಲಾಗಿದೆ. ಮೊಟ್ಟಮೊದಲ ಜಯರೇಖೆ ಪ್ರಕಟವಾದ ಕ್ರಿ.ಶ. ೧೨೦೦ ರಿಂದ ೨೦ನೆಯ ಶತಮಾನದಲ್ಲಿ ಕಂಡುಬರುವ ಕಂಚಿನ ಪತ್ರಗಳವರೆಗೆ ಕಾಲವ್ಯಾಪ್ತಿ ಇರಿಸಿಕೊಳ್ಳಲಾಗಿದೆ. ಈಗಾಗಲೇ ವಿವರಿಸಲಾದಂತೆ ಜಯರೇಖೆಗಳ ಪ್ರಕಟಣಾ ಕಾರ್ಯವೇ ಇತ್ತೀಚೆಗೆ ನಡೆಯುತ್ತಿರುವುದರಿಂದ ಇತ್ತೀಚಿನವರೆಗೆ ಪ್ರಕಟವಾದ ಎಲ್ಲ ಜಯರೇಖೆಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಪ್ರಧಾನವಾಗಿ ಆಕರಗಳಿಗೂ ವ್ಯಾಪ್ತಿ ಇಟ್ಟುಕೊಳ್ಳಲಾಗಿದೆ. ಸಾಮಾನ್ಯವಾಗಿ ಶಾಸನಗಳನ್ನೇ ಪ್ರಧಾನ ಆಕರಗಳನ್ನಾಗಿ ಬಳಸಿಕೊಳ್ಳಲಾಗುತ್ತದೆ. ಆದರೆ, ನನ್ನ ಅಧ್ಯಯನದ ಕಾಲವ್ಯಾಪ್ತಿ ಇಪ್ಪತ್ತನೆಯ ಶತಮಾನದವರೆಗೆ ವಿಸ್ತರಿಸುವುದರಿಂದ, ಬರಹ ಮಾಧ್ಯಮದಲ್ಲಾದ ಬದಲಾವಣೆಯನ್ನು ಪರಿಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ಹಿನ್ನಲೆಯಲ್ಲಿ ಹದಿನೆಂಟನೆಯ ಶತಮಾನಾನಂತರ ಪ್ರಕಟವಾದ ಹಲವಾರು ಜಯರೇಖೆಗಳು ಕೈಫಿಯತ್ತು, ಕಾಗದ, ದಫ್ತರಗಳಲ್ಲಿ, ತಾಮ್ರದ ತಗಡುಗಳಲ್ಲಿ ದೊರೆಯುತ್ತದೆ. ಈ ಹಿನ್ನಲೆಯಲ್ಲಿ ನನ್ನ ಅಧ್ಯಯನದ ಆಕರವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲಾಗಿದೆ.

ಇದರ ಜೊತೆಗೆ ಅಧ್ಯಯನ ನಡೆಸುವಾಗ ಎದುರಾದ ತೊಡಕುಗಳನ್ನು ಅವುಗಳನ್ನು ಪರಿಹರಿಸಿಕೊಂಡ ಪರಿಯನ್ನು ಸಹ ಚರ್ಚಿಸಲಾಗಿದೆ. ಈ ಅಧ್ಯಯನವು ಹಲವಾರು ಶಿಸ್ತುಗಳ ವ್ಯಾಪ್ತಿಯಲ್ಲಿ ಬರುವುದರಿಂದ ಆಕರಗಳನ್ನು ಸ್ವೀಕರಿಸುವಾಗ ಉಂಟಾದ ತೊಡಕುಗಳ ಬಗ್ಗೆ, ಅವುಗಳನ್ನು ಸಮುಚಿತವಾಗಿ ಪರಿಹರಿಸಿಕೊಂಡ ಬಗ್ಗೆ ಚರ್ಚಿಸುವುದು ಸಮುಚಿತ ಕ್ರಮವೆಂದು ಭಾವಿಸಲಾಗಿದೆ.

ಈ ಅಧ್ಯಯನದ ವೈಧಾನಿಕತೆಯು ಜಯರೇಖೆ ಶಾಸನಗಳ ಸಾಂಸ್ಕೃತಿಕ ಸ್ವರೂಪ ಕುರಿತ ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಸ್ವರೂಪದ್ದಾಗಿದೆ. ಅಲ್ಲದೆ, ಈ ಅಧ್ಯಯನವು ಪ್ರಧಾನವಾಗಿ ಶಾಸನಗಳನ್ನು ಆಕರಗಳನ್ನಾಗಿ ಪರಿಗ್ರಹಿಸಿದರೂ ಸಹ, ಬಹುಪದರೀಯತೆ ಸ್ವರೂಪದಲ್ಲಿರುವ ಈ ವಿಷಯವು ಅಂತರಶಿಸ್ತೀಯ ಅಧ್ಯಯನವನ್ನು ಅಪೇಕ್ಷಿಸುವ ವಿಷಯವಾಗಿದೆ. ಹಾಗಾಗಿ ಶಾಸನಗಳ ಜೊತೆಗೆ ಪೂರಕವಾಗುವಂತೆ ಸಾಹಿತ್ಯ, ಜಾನಪದ, ಹಸ್ತಪ್ರತಿ, ಸಂಸ್ಕೃತಿ, ಚರಿತ್ರೆ ಅಧ್ಯಯನಗಳನ್ನು ಹಾಗು ಕ್ವಚಿತ್ತಾಗಿ ಸಮಾಜಶಾಸ್ತ್ರ ಹಾಗೂ ಮಾನವಶಾಸ್ತ್ರಗಳ ಕೃತಿಗಳನ್ನು ಸಹ ಸಾಂದರ್ಭಿಕವಾಗಿ ಪೂರಕ ವಿಷಯವನ್ನಾಗಿ ಬಳಸಿಕೊಳ್ಳಲಾಗಿದೆ. ಆದರೂ ಅದು ಅತಿವ್ಯಾಪ್ತಿ ದೋಷವಾಗದಂತೆ ಎಚ್ಚರಿಕೆ ಸಹ ವಹಿಸಲಾಗಿದೆ. ಇಂಥ ಬಹುಶಿಸ್ತುಗಳ ನೆರವನ್ನು ಅಪೇಕ್ಷಿಸುವ ಹಾಗೂ ಸಂಕೀರ್ಣ ಚಾರಿತ್ರಿಕ, ಸಾಂಸ್ಕೃತಿಕ, ಧಾರ್ಮಿಕ ಸನ್ನಿವೇಶಗಳನ್ನೊಳಗೊಂಡ ವಿಷಯವನ್ನು ಅಧ್ಯಯನ ಮಾಡುವುದು ಶಾಸನಶಾಸ್ತ್ರ ಅಧ್ಯಯನಕಾರರಿಗೆ ಸವಾಲಿನ ವಿಷಯವೇ ಸರಿ. ಹಾಗಾಗಿ ಈ ಅಧ್ಯಯನವು ಆಕರಗಳ

ಸಂಗ್ರಹ, ಆಯ್ಕೆಯಿಂದ ಮೊದಲ್ಗೊಂಡು, ಆಕರಗಳ ವರ್ಗೀಕರಣ ಮತ್ತು ವಿಶ್ಲೇಷಣೆಯೂ ಸೇರಿದಂತೆ ಪ್ರೌಢ ನಿಬಂಧ ರಚನೆಗೆ ಅಗತ್ಯವಾದ ಅರ್ಥಪೂರ್ಣ ಗ್ರಹಿಕೆಯನ್ನು ರೂಪಿಸಿಕೊಳ್ಳುವವರೆಗೆ ವಿಸ್ತರಿಸಿದೆ.

**ಅಧ್ಯಾಯ–೨: ಜಯರೇಖೆ ಶಾಸನಗಳ ಸಾಂಸ್ಕೃತಿಕ ಸಂಕಥನದ ತಾತ್ವಿಕ ಚರ್ಚೆ**

ಜಯಪತ್ರ, ಜಯರೇಖೆ, ಜಯಲೇಖ, ರಾಯರೇಖೆ, ಸೋತಪತ್ರ, ಕಂಚಿನ ಪತ್ರ, ತಾಮ್ರಪತ್ರ, ಚಪ್ಪೋಡು ಹೀಗೆ ವಿಭಿನ್ನ ಹೆಸರುಗಳನ್ನು ಹೊಂದಿರುವ ಜಯರೇಖೆಗಳನ್ನು ಒಂದು ಕಾಲಘಟ್ಟಕ್ಕೆ ಅಥವಾ ಒಂದು ಪರಿಕಲ್ಪನೆಯ ಅರ್ಥವ್ಯಾಪ್ತಿಯೊಳಗೆ ಪರಿಮಿತಗೊಳಿಸಿ ಅಧ್ಯಯನ ಮಾಡುವುದು ಸಾಧ್ಯವಿಲ್ಲ. ಅವುಗಳ ಪರಿಕಲ್ಪನೆ ಮತ್ತು ಪ್ರಭೇಧಗಳ ನಿರ್ವಚನ ಹೆಚ್ಚು ಜಟಿಲವೆನಿಸುತ್ತದೆ. ಜಯರೇಖೆಗಳು ಒಳಗೊಂಡ ವಿಭಿನ್ನ ನಿರೂಪಣಾಕ್ರಮ ಹಾಗೂ ಕಥನಕ್ರಮಗಳಿಂದಾಗಿ ಇವುಗಳನ್ನು ಏಕರೇಖಾತ್ಮಕ ಅಧ್ಯಯನ ವ್ಯಾಪ್ತಿಗೆ ಒಳಪಡಿಸಲು ಸಾಧ್ಯವಾಗುವುದಿಲ್ಲ. ಕ್ರಿ.ಶ. ಹನ್ನೆರಡನೆಯ ಶತಮಾನದಿಂದ ಕ್ರಿ.ಶ. ಇಪ್ಪತ್ತನೆಯ ಶತಮಾನದವರೆಗಿನ ದೀರ್ಘಕಾಲಾವಧಿಯಲ್ಲಿ ಬೇರೆ ಬೇರೆ ಒತ್ತಾಸೆ ಮತ್ತು ಪ್ರೇರಣೆಗಳ ಹಿನ್ನಲೆಯಲ್ಲಿ ಹುಟ್ಟಿಕೊಂಡ ಜಯಪತ್ರಗಳು ಒಳಗೊಂಡ ವಿಷಯ ಕಾಲಕ್ಕೆ ತಕ್ಕಂತೆ ಹಲವು ಮಜಲುಗಳನ್ನು ಪಡೆದುಕೊಂಡಿದೆ. ನನ್ನ ಅಧ್ಯಯನದಲ್ಲಿ ನಾನು ಗಮನಿಸಿರುವ ಪ್ರಕಾರ ಕರ್ನಾಟಕದಲ್ಲಿ ಅಷ್ಟೇ ಅಲ್ಲ ಭಾರತದಲ್ಲಿಯೂ ಜಯಪತ್ರಗಳ ಬಗ್ಗೆ ವಿಸ್ತೃತಅಧ್ಯಯನ ನಡೆದಿಲ್ಲವೆಂದು ಗ್ರಹಿಸಲಾಗಿದೆ. ಈ ಹಿನ್ನಲೆಯಲ್ಲಿ ಜಯಪತ್ರಗಳಿಗೆ ವಿವಿಧ ವಿದ್ವಾಂಸರು ನೀಡಿದ ನಿರ್ವಚನಗಳ ಬಗ್ಗೆ ಚರ್ಚಿಸಲಾಗಿದೆ.

ಕರ್ನಾಟಕದಲ್ಲಿ 'ಜಯಪತ್ರ'ದ ಉಲ್ಲೇಖ ಶಾಸನಕ್ಕಿಂತ ಮೊದಲೇ ಪಂಪನ ಆದಿಪುರಾಣದಲ್ಲಿ ದೊರೆಯುತ್ತದೆ. ನಂತರ ಹನ್ನೆರಡನೆಯ ಶತಮಾನದಲ್ಲಿ ಅಬ್ಬಲೂರಿನ ಶಾಸನದಲ್ಲಿ ಮೊಟ್ಟಮೊದಲ ಉಲ್ಲೇಖ ಕಂಡುಬರುತ್ತದೆ. ಹಾಗಿದ್ದರೆ ಜಯರೇಖೆಗಳು ಏಕಾಏಕಿ ಒಮ್ಮೆಲೆ ಕರ್ನಾಟಕದಲ್ಲಿ ಕಾಣಿಸಿಕೊಂಡವೇ? ಕನ್ನಡಿಗರೇ ಆ ಪರಿಕಲ್ಪನೆಯನ್ನು ಹುಟ್ಟುಹಾಕಿದರೇ? ಅಥವಾ ಬೇರೆಲ್ಲಾದರೂ ಇವು ಕಂಡುಬರುತ್ತವೆಯೇ ಎಂಬ ಪ್ರಶ್ನೆಗಳನ್ನು ಹಾಕಿಕೊಂಡು ಅಧ್ಯಯನ ಪ್ರಾರಂಭಿಸಿದಾಗ, ಅವುಗಳ ಬೀಜರೂಪಿ ಚಿಂತನೆಗಳು ಸಂಸ್ಕೃತ ವಾಙ್ಮಯದಲ್ಲಿರುವುದು ತಿಳಿದುಬಂತು. ಸಂಸ್ಕೃತದ ಧರ್ಮಶಾಸ್ತ್ರಗಳಲ್ಲಿ ಜಯಪತ್ರಗಳಿಗೆ ನೀಡಲಾಗಿರುವ ಮಹತ್ವವನ್ನು, ಲಕ್ಷಣಗಳನ್ನು ವಿಶ್ಲೇಷಿಸುತ್ತಾ ಜಯರೇಖೆಗಳ ಮೂಲ ಮಾದರಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಲ್ಲೇಖಗೊಂಡ 'ಪಶ್ಚಾಕಾರ' ಎಂಬ ಪದವಾಗಿರುವುದರ ಬಗ್ಗೆ ಚರ್ಚಿಸಲಾಗಿದೆ.

ಕರ್ನಾಟಕಕ್ಕೆ ಜಯರೇಖೆಗಳು ಪರಿಚಯವಾಗುವುದಕ್ಕೆ ಕಾರಣವೇನಿರಬೇಕೆಂಬುದನ್ನು ವಿವೇಚಿಸಲಾಗಿದೆ. ಕಲ್ಯಾಣ ಚಾಲುಕ್ಯ ಅರಸು ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ವಿಜ್ಞಾನೇಶ್ವರನು ಮಿತಾಕ್ಷರ ಸಂಹಿತೆಯನ್ನು ರಚಿಸಿದ್ದಾನೆ. ಈ ಕೃತಿಯು ಪ್ರಾಚೀನ ಭಾರತೀಯ ಜೀವನ ಕ್ರಮವನ್ನು ಅಗಾಧ ಪ್ರಮಾಣದಲ್ಲಿ ಪ್ರಭಾವಿಸಿದ ಕೃತಿ. ಭಾರತದ ನ್ಯಾಯಿಕ ಚರಿತ್ರೆಯಲ್ಲಿ ಈ ಕೃತಿಗೆ ತುಂಬಾ

ಪ್ರಾಮುಖ್ಯತೆಯನ್ನು ನೀಡಲಾಗಿದೆ. ಹಲವಾರು ನ್ಯಾಯನಿರ್ಣಯ ಸಂದರ್ಭಗಳಲ್ಲಿ ಪ್ರಾಚೀನ ಭಾರತೀಯರು ಇದನ್ನು ಪರಾಮರ್ಶನ ಗ್ರಂಥವಾಗಿ ಬಳಸಿರುವುದನ್ನು ಜಯರೇಖೆಗಳ ಹಿನ್ನೆಲೆಯಲ್ಲಿ ಗಮನಿಸಬಹುದಾಗಿದೆ. ಬಹುಶಃ ಆ ಕೃತಿಯ ಪ್ರಭಾವದಿಂದ ಮೊದಲಿಗೆ ಕರ್ನಾಟಕದಲ್ಲಿ ಜಯಪತ್ರಗಳ ಪರಿಚಯವಾಗಿದೆಯೆಂಬ ಅಭಿಪ್ರಾಯಕ್ಕೆ ಬರಲಾಗಿದೆ.

ಕರ್ನಾಟಕದ ಶಾಸನೋಕ್ತ ಜಯರೇಖೆಗಳು ಭಾರತೀಯ ಸಂಸ್ಕೃತ ಗ್ರಂಥಗಳಲ್ಲಿ ಕಂಡುಬರುವ ಜಯಪತ್ರಗಳಿಗಿಂತ ಭಿನ್ನವಾಗಿವೆ. ಕರ್ನಾಟಕದಲ್ಲಿ ಆರಂಭದಲ್ಲಿ ತಾತ್ವಿಕವಾಗಿ ಗೆದ್ದಂತಹ ಸಂದರ್ಭಗಳಲ್ಲಿ, ಧರ್ಮಸಂಘರ್ಷಗಳ ಸಂಬಂಧದಲ್ಲಿ ನೀಡಲಾಗಿದ್ದು, ನಂತರ ವಿಭಿನ್ನ ಕ್ಷೇತ್ರಗಳಿಗೆ ವಿಸ್ತರಿಸಿವೆ. ಕರ್ನಾಟಕದ ಸಂದರ್ಭದಲ್ಲಿ ಕಂಡುಬರುವ ಜಯರೇಖೆಗಳ ಪರಿಕಲ್ಪನೆಗಳು ಭಾರತದ ಇತರ ಕಡೆ ಪ್ರಚಲಿತದಲ್ಲಿರಲಿಲ್ಲ. ಹಾಗಾಗಿ, ಇವು ಕರ್ನಾಟಕದ ವೈಶಿಷ್ಟ್ಯಗಳು ಎಂಬ ಅಭಿಪ್ರಾಯಕ್ಕೆ ಬರಲಾಗಿದೆ.

ಇದಲ್ಲದೆ, ಜಯರೇಖೆಗಳು ಕಾಲಾನುಕ್ರಮದಲ್ಲಿ ತಾಳಿದ ವಿಭಿನ್ನ ಹೆಸರುಗಳು ಮತ್ತು ಅರ್ಥವ್ಯಾಪ್ತಿಯ ಆಧಾರದ ಮೇಲೆ ಅವುಗಳನ್ನು ಪ್ರತ್ಯೇಕವಾಗಿ (೧) ಜಯಪತ್ರಗಳು, (೨) ಸೋತಪತ್ರಗಳು, ತೊರೆಪತ್ರಗಳು (೩) ಜಯರೇಖೆಗಳು, ಜಯಲೇಖೆಗಳು, ಜಯಪಟ್ಟಿಕಾ ಕ್ರಮ (೪) ಕಂಚಿಪತ್ರಗಳು, ಕಂಚಿನ ಸನದು, ತಾಮ್ರದ ನಕಲು, ಚಪ್ಪೋಡು (೫) ಕುಲಕಥನಗಳು (೬) ಜಯಪತ್ರಗಳ ಸಾಹಿತ್ಯಕ ಮಾದರಿಗಳು- ಎಂಬುದಾಗಿ ಗುರುತಿಸಿ, ಅವೆಲ್ಲವುಗಳನ್ನೂ ಪ್ರತ್ಯೇಕವಾಗಿ ಚರ್ಚೆಗೆ ಒಳಪಡಿಸಲಾಗಿದೆ. ಚರ್ಚೆ ನಡೆಸುವಾಗ ಪ್ರತಿಯೊಂದು ಪ್ರಕಾರವೂ ಹುಟ್ಟಿಕೊಳ್ಳುವುದಕ್ಕೆ ಕಾರಣವಾಗಿರಬಹುದಾದಂತಹ ಕರ್ನಾಟಕದ ಚಾರಿತ್ರಿಕ ಒತ್ತಾಸೆಗಳನ್ನು, ಪ್ರೇರಣೆ-ಪ್ರಭಾವಗಳನ್ನು ಗುರುತಿಸಿ ತಾತ್ವಿಕ ಕಾರಣಗಳನ್ನು ತಾರ್ಕಿಕವಾಗಿ ನೀಡಲಾಗಿದೆ.

**ಅಧ್ಯಾಯ-೩: ಜಯರೇಖೆ ಶಾಸನಗಳ ಆರ್ಥಿಕ ಲೋಕದೃಷ್ಟಿ**

ಮೂರನೆಯ ಅಧ್ಯಾಯದಲ್ಲಿ ಜಯರೇಖೆಗಳು ಬಿಂಬಿಸುವ ಆರ್ಥಿಕ ಲೋಕದೃಷ್ಟಿಯ ಬಗ್ಗೆ ಚರ್ಚಿಸಲಾಗಿದೆ. ಮಧ್ಯಕಾಲೀನ ಕರ್ನಾಟಕದ ಅರ್ಥಮುಖಿ ಸಮಾಜದ ಚಿತ್ರಣವನ್ನು ಜಯರೇಖೆಗಳು ಅದ್ಭುತವಾಗಿ ಕಟ್ಟಿಕೊಡುತ್ತವೆ. ಜಯರೇಖೆಗಳ ಆತ್ಯಂತಿಕ ಗುರಿ ಅಧಿಕಾರ ಗಳಿಕೆ ಮತ್ತು ಯಜಮಾನ್ಯತೆಯ ಸುಸ್ಥಾಪನೆ. ಒಂದು ರಾಜ್ಯದ ಬಲಾಢ್ಯ ಧಾರ್ಮಿಕ ಮತ್ತು ಆರ್ಥಿಕ ಘಟಕಗಳಾದ ನಾಡಿನ ಮೇಲೆ, ಗ್ರಾಮದ ಮೇಲೆ, ದೇವಾಲಯಗಳ ಮೇಲೆ, ನ್ಯಾಯಾಸ್ಥಾನಗಳ ಮೇಲೆ ಯಜಮಾನ್ಯತೆಯನ್ನು ಸ್ಥಾಪಿಸುವ ಮೂಲಕ ಸಮಾಜವನ್ನು ನಿಯಂತ್ರಿಸುವುದು ಅವುಗಳ ಉದ್ದೇಶವಾಗಿದೆ. ಅಧಿಕಾರ ಗಳಿಕೆಯ ಮೂಲಕ ಸಾಮಾಜಿಕವಾಗಿ ಮೇಲ್‌ಸ್ತರದಲ್ಲಿ ಸ್ಥಾನಮಾನಗಳಿಸಿಕೊಳ್ಳುವ ಹುನ್ನಾರಗಳು ಜಯರೇಖೆಗಳ ಹಿಂದಿರುವ ಅರ್ಥಮುಖಿ ದೃಷ್ಟಿಕೋನಗಳಾಗಿವೆ.

ಜಯರೇಖೆಗಳ ಅರ್ಥಮುಖಿ ಆಶಯಗಳನ್ನು ತಾತ್ವೀಕರಿಸಿ ಹೇಳುವುದಾದರೆ ಸಮುದಾಯಗಳ ನೆಲೆಗೊಳ್ಳುವಿಕೆ (settlement), ಸ್ಥಿರಗೊಳ್ಳುವಿಕೆ (establishment) ಮತ್ತು ಸಾಂಸ್ಕೃತಿಕ ಆಧಿಪತ್ಯದ ಸ್ಥಾಪನೆ (cultural domination) ಜಯಪತ್ರಗಳ ಹುಟ್ಟಿನ ಆಂತರಿಕ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಜಯರೇಖೆಗಳಲ್ಲಿ ಕಂಡುಬರುವ ಧಾರ್ಮಿಕ ಆಧಿಪತ್ಯ ಹಾಗೂ ಪೌರೋಹಿತ್ಯದ ಹಕ್ಕು, ಪಾಳೆಯಗಾರಿಕೆ ಹಕ್ಕು, ಗ್ರಾಮಸ್ಥಾಪನೆ, ಗೌಡಿಕೆ ಹಕ್ಕು, ಗ್ರಾಮಗೌಡಿಕೆ, ನಾಡಗೌಡಿಕೆ, ದೇಶಗತಿ ಗೌಡಿಕೆ ಹಕ್ಕುಗಳು, ಕುಲಾಚಾರ ಗೌಡಿಕೆ ಹಾಗೂ ವಿಶೇಷ ಹಕ್ಕುಗಳನ್ನು ಹೊಂದಲು ನಡೆಸುತ್ತಿದ್ದ ಹೋರಾಟಗಳನ್ನು ಆರ್ಥಿಕ ಆಯಾಮದ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಧರ್ಮಸಂಘರ್ಷದ ಬೀಜವಿರುವುದು ಆರ್ಥಿಕ ವ್ಯವಸ್ಥೆಯಲ್ಲಿ ಎಂದು ವಿದ್ವಾಂಸರು ಪ್ರತಿಪಾದಿಸಿದ್ದಾರೆ. ಧರ್ಮ, ಅಲೌಕಿಕ ನೆಲೆಯಿಂದ ಲೌಕಿಕವಾಗುವ ಪ್ರಕ್ರಿಯೆಯಲ್ಲಿ ಹೇಗೆ ಅರ್ಥಮುಖಿಯಾಗುವತ್ತ ಸಾಗುತ್ತದೆ ಎಂಬುದನ್ನು ಜಯರೇಖೆಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

ಗ್ರಾಮಸ್ಥಾಪನೆ, ಗೌಡಿಕೆ, ಶಾನಭೋಗಿಕೆ, ಮುಂತಾದ ವೃತ್ತಿಗಳ ಹಿನ್ನೆಲೆಯಲ್ಲಿ ಮಧ್ಯಕಾಲೀನ ಕರ್ನಾಟಕದಲ್ಲಿ ಆಗುತ್ತಿದ್ದ ವೃತ್ತಿಪಲ್ಲಟಗಳ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ–೪: ಜಯರೇಖೆ ಶಾಸನಗಳ ಸಾಮಾಜಿಕ ಲೋಕದೃಷ್ಟಿ**

ಜಯರೇಖೆ ಶಾಸನಗಳು ಈವರೆಗೆ ಶಾಸನಗಳ ಆಧಾರದ ಮೇಲೆ ಇತಿಹಾಸಕಾರರು ಕಟ್ಟಿಕೊಟ್ಟ ಸಮಾಜಕ್ಕಿಂತ ಭಿನ್ನ ಸಮಾಜವನ್ನು ಕಟ್ಟಿಕೊಡುತ್ತವೆ. ಜಯರೇಖೆಗಳಲ್ಲಿನ ಸಮುದಾಯಗಳು ಸಮಾಜ ತನಗೆ ಮಾಡಿದ ತಾರತಮ್ಯಗಳ ಬಗ್ಗೆ ವಿವರಿಸುವುದಿಲ್ಲ. ಬದಲಾಗಿ ಸಮಾಜದ ಏಣಿ–ಶ್ರೇಣಿಗಳಿಗೆ ಕಾರಣಗಳನ್ನು ತಮ್ಮದೇ ಕುಲಗಳಿಗೆ ಸಂಬಂಧಿಸಿದಂತೆ ವಿಶಿಷ್ಟ ಕಥನಗಳನ್ನು ಕಟ್ಟಿಕೊಡುವ ಮೂಲಕ ತಾತ್ವೀಕರಿಸಿಕೊಳ್ಳುವುದನ್ನು ಕಾಣಬಹುದು. ಇಂಥ ತಾತ್ವೀಕರಣದ ನೆಲೆಗಳಲ್ಲಿ ಸಮಾಜದ ಉಳಿದ ವರ್ಗಗಳೊಡನೆ ಸಂಘರ್ಷಗಳು ಉಂಟಾಗುವುದು ಸಹಜವೂ, ಅನಿವಾರ್ಯವೂ ಆಗಿದ್ದು ಅವುಗಳನ್ನು ಸಹಜ ಪ್ರಕ್ರಿಯೆಗಳೆಂಬಂತೆ ಸ್ವೀಕರಿಸಲಾಗಿದೆ.

ಜಯರೇಖೆಗಳಲ್ಲಿ ಎಲ್ಲ ಸಮುದಾಯಗಳೂ ಲಂಬಾಂತರ ಚಲನಶೀಲತೆಯನ್ನು ಪಡೆದುಕೊಳ್ಳಲು ನಡೆಸುವ ಹಪಹಪಿಕೆಯನ್ನು ಗುರುತಿಸಲಾಗಿದೆ. ಜೀವನೋಪಾಯಕ್ಕೆ ಕಂಡುಕೊಂಡ ಲೌಕಿಕ, ವ್ಯವಹಾರಿಕ ವೃತ್ತಿಗೆ ಅಲೌಕಿಕ ಚೌಕಟ್ಟನ್ನು ನಿರ್ಮಿಸಿಕೊಡುತ್ತವೆ. ಈ ಹಿನ್ನೆಲೆಯಲ್ಲಿ ಜಯರೇಖೆ ಮತ್ತು ಕಂಚಿಪತ್ರಗಳಲ್ಲಿ ಪ್ರತಿಫಲಿತವಾದ ಕೆಲವು ಸಮುದಾಯಗಳನ್ನು ಗುರುತಿಸಿ, ಅಂಥ ಸಮುದಾಯಗಳ ಕುಲಮೂಲಗಳಿಗೆ ಸಂಬಂಧಿಸಿದಂತೆ ಹುಟ್ಟಿಕೊಂಡ ಕುಲಪುರಾಣಗಳು, ಕಥನಗಳು, ಐತಿಹ್ಯಗಳ ಹಿನ್ನೆಲೆಯಲ್ಲಿ ಅಂಥ ಸಮುದಾಯಗಳ ಸ್ಥೂಲ ಚಿತ್ರಣವನ್ನು ಮೊದಲ ಬಾರಿಗೆ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಜಯರೇಖೆ ಶಾಸನಗಳಲ್ಲಿ ಕಂಡುಬರುವ ಮತ್ತೊಂದು ವಿಶಿಷ್ಟ ಸಮಾಜವೆಂದರೆ, ಪಣಕಟ್ಟು ಸಮಾಜ. ಪಣಕಟ್ಟು ಸಮಾಜದ ಬಗ್ಗೆ ತಮಿಳುನಾಡಿನಲ್ಲಿ ಸಾಕಷ್ಟು ಕೆಲಸಗಳು ನಡೆದಿವೆ. ಆದರೆ ಕರ್ನಾಟಕದಲ್ಲಿ ಹಯವದನರಾವ್‌ರವರು ತಮ್ಮ ಗೆಝೆಟಿಯರ್ ಕೃತಿಯಲ್ಲಿ ಮೊದಲ ಬಾರಿಗೆ ಚರ್ಚೆಗೆ ತೆಗೆದುಕೊಂಡಿದ್ದಾರೆ. ಲಕ್ಷ್ಮೀಪತಿ ಕೋಲಾರ್‌ರವರು ಹಾಗೂ ಕೋಟಗಾನಹಳ್ಳಿ ರಾಮಯ್ಯನವರು ಕರ್ನಾಟಕದ ಪಣವ್ಯವಸ್ಥೆ ಬಗ್ಗೆ ಸ್ವಲ್ಪಮಟ್ಟಿನ ಚರ್ಚೆಗೆ ನಾಂದಿಯಾಡಿದ್ದಾರೆ. ಆದರೆ ಪೂರ್ಣಪ್ರಮಾಣದಲ್ಲಿ ಹಾಗೂ ಆಳವಾಗಿ ಕರ್ನಾಟಕದ ಪಣಕಟ್ಟು ಸಮಾಜದ ಬಗ್ಗೆ ಅಧ್ಯಯನಗಳು ನಡೆದಿಲ್ಲ.

ನನ್ನ ಅಧ್ಯಯನದಲ್ಲಿ ಜಯರೇಖೆ ಶಾಸನಗಳು ಮತ್ತು ಕಂಚಿಪತ್ರಗಳಲ್ಲಿ ಕಂಡುಬಂದ ಪಣವ್ಯಾಜ್ಯಗಳ ಹಿನ್ನಲೆಯಲ್ಲಿ ಪಣಕಟ್ಟು ಸಮಾಜದ ಮೂಲ, ರೂಪುರೇಷೆಗಳ ಬಗ್ಗೆ ಮೊದಲ ಬಾರಿಗೆ ವಿಸ್ತೃತವಾಗಿ ಚರ್ಚೆ ನಡೆಸಿರುತ್ತೇನೆ.

ಚಾರಿತ್ರಿಕವಾಗಿ ಭಾರತದಲ್ಲೆಲ್ಲೂ ಕಂಡುಬರದ, ದಕ್ಷಿಣ ಭಾರತದಲ್ಲಿ ಮಾತ್ರ ಕಂಡುಬರುವ ಪಣಕಟ್ಟು ವ್ಯವಸ್ಥೆ ಯಾವ ಕಾಲಘಟ್ಟದಲ್ಲಿ ಪ್ರಾರಂಭವಾಯಿತು? ಪಣಕಟ್ಟುಗಳ ವಿಂಗಡಣೆಯನ್ನು ಯಾರು ರೂಪಿಸಿದರು? ಯಾವ ಮಾನದಂಡವನ್ನು ಅನುಸರಿಸಿ ವಿಂಗಡಣೆ ಮಾಡಲಾಯಿತು? ಎಂಬ ಪ್ರಶ್ನೆಗೆ ಇತಿಹಾಸದಲ್ಲೂ ಮತ್ತು ಈಗಾಗಲೇ ದಕ್ಷಿಣ ಭಾರತದಾದ್ಯಂತ ನಡೆದ ಅಧ್ಯಯನಗಳಲ್ಲೂ ಸ್ಪಷ್ಟಆಧಾರ ಹಾಗೂ ನಿಖರ ಉತ್ತರಗಳು ಲಭ್ಯವಾಗುವುದಿಲ್ಲ. ಹಿಂದೆ ನಡೆದ ಚರ್ಚೆಗಳ ಹಿನ್ನೆಲೆಯಲ್ಲಿ ಕರ್ನಾಟಕದ ಪಣಕಟ್ಟು ಸಮಾಜದ ಬಗ್ಗೆ ಚರ್ಚಿಸಲಾಗಿದೆ.

ಅಂತಿಮವಾಗಿ ದಕ್ಷಿಣ ಭಾರತದಾದ್ಯಂತ ಪ್ರಚಲಿತದಲ್ಲಿರಬಹುದಾದ ಎಂಟು ಹಿಟ್ಟುಗಳು, ಹದಿನೆಂಟು ಪ್ರಕೃತಿ, ಜಾತಿ, ಕುಲಗಳು, ಸುಮಾರು ಒಂಭತ್ತು-ಹತ್ತನೆಯ ಶತಮಾನದ ವೇಳೆಗೆ ಚೋಳರಾಜ್ಯದಲ್ಲಿ ಲೋಹಗಳ ಮೇಲೆ ವಿಧಿಸಿದ ಸುಂಕದ ಸಂಬಂಧದಲ್ಲಿ ಉಂಟಾದ ಗಲಭೆಗಳಲ್ಲಿ ಎರಡು ಬಣಗಳಾಗಿ ಇಬ್ಭಾಗಗೊಂಡು ಪಣಕಟ್ಟು ಸಮಾಜವೊಂದು ರೂಪುಗೊಂಡಿರಬಹುದೆಂದು ಮೊಟ್ಟಮೊದಲ ಬಾರಿಗೆ ಅಭಿಪ್ರಾಯಪಟ್ಟಿರುತ್ತದೆ. ಈ ಅಭಿಪ್ರಾಯವನ್ನು ದಕ್ಷಿಣ ಭಾರತದ ಪಣಕಟ್ಟು ವ್ಯವಸ್ಥೆಯ ಬಗ್ಗೆ ಸಾಕಷ್ಟು ಚರ್ಚೆಗಳನ್ನು ನಡೆಸಿರುವ ವಿದ್ವಾಂಸರೂ ಸಹ ತಾರ್ಕಿಕವಾಗಿ ಕಂಡುಕೊಳ್ಳದಿರುವುದರಿಂದ, ನನ್ನ ಅಧ್ಯಯನದ ಸಂದರ್ಭದಲ್ಲಿ ಪಣಕಟ್ಟು ಸಮಾಜದ ಉಗಮಕ್ಕೆ ಕಾರಣವಾದ ಸಂಗತಿಗಳನ್ನು ನಾನು ಇಲ್ಲಿ ಕಂಡುಕೊಳ್ಳಲು ಪ್ರಯತ್ನಿಸಿರುತ್ತೇನೆ. ನಂತರ ಕರ್ನಾಟಕದ ಉತ್ತರ ಭಾಗದಲ್ಲಿ ಈ ವ್ಯವಸ್ಥೆ ಇವು ಆಯಗಾರ ವ್ಯವಸ್ಥೆಯ ಭಾಗವಾಗಿ ಮುಂದುವರಿದರೆ, ಕರ್ನಾಟಕದ ದಕ್ಷಿಣ ಭಾಗದಲ್ಲಿ ಚೋಳರ ಆಕ್ರಮಣ, ತಮಿಳು ಅಧಿಕಾರಿಗಳ ವರ್ಗಾವಣೆ, ರಾಮಾನುಜರ ಪ್ರವೇಶ, ಶ್ರೀವೈಷ್ಣವ ಧರ್ಮದ ತಿರುಮಲೆ ತಾತಾಚಾರ್ಯ ಪರಂಪರೆಯ ಪ್ರಭಾವ,

ಮುಂತಾದ ಕಾರಣಗಳಿಂದ ಪಣಕಟ್ಟು ವ್ಯವಸ್ಥೆ ಕರ್ನಾಟಕಕ್ಕೆ ಪ್ರವೇಶಿಸಿತೆಂಬ ಸಂಗತಿಯನ್ನು ಈ ಅಧ್ಯಾಯದಲ್ಲಿ ಗುರುತಿಸಿರುತ್ತೇನೆ.

ಇದಲ್ಲದೆ, ಜಯರೇಖೆ ಸಮಾಜದ ಕಲಹಗಳ ಸ್ವರೂಪಗಳನ್ನು ಕಾರ್ಯಕಾರಣ ಸಂಬಂಧವನ್ನು ಚರ್ಚಿಸಲಾಗಿದೆ. ಕಲಹಗಳ ಕಾರಣಗಳು ತುಂಬಾ ಜಟಿಲ ಹಾಗೂ ಸಂಕೀರ್ಣವಾಗಿರುವುದಲ್ಲದೆ, ವಿಶಿಷ್ಟ ಆಯಾಮಗಳನ್ನು ಹೊಂದಿವೆ. ಕಲಹಗಳ ಭಾಗೀದಾರರು ಸಮಾಜದ ಕೆಳಶ್ರೇಣಿಯಲ್ಲಿ ಬರುವ ತಳಸಮುದಾಯಗಳೆಂಬುದು ವಿಶೇಷ. ಮೇಲ್‌ಸ್ತರದ ಸಮುದಾಯಗಳು ಇಲ್ಲಿ ತಟಸ್ಥವಾಗಿವೆ. ಈವರೆಗೆ ಗುರುತಿಸಿರುವಂತೆ ಕಲಹಗಳು ಸಾಮಾನ್ಯವಾಗಿ ಆರ್ಥಿಕ, ಸಾಮಾಜಿಕ, ಧಾರ್ಮಿಕ ಸ್ಥಾನಮಾನಗಳಿಗಾಗಿ ನಡೆಯುವುದನ್ನು ಗಮನಿಸಿದ್ದೇವೆ. ಆದರೆ, ಜಯರೇಖೆಗಳಲ್ಲಿನ ಕಲಹಗಳು ತುಂಬಾ ವಿಕ್ಷಿಪ್ತವಾಗಿರುವುದನ್ನು ಗುರುತಿಸಲಾಗಿದೆ. ಎಂದರೆ, ವಿಶಿಷ್ಟ ಲಾಂಛನಗಳನ್ನು ಹೊಂದುವುದು; ಪಂಜುಗಳನ್ನು, ಧ್ವಜಗಳನ್ನು ಒಯ್ಯುವ ಹಕ್ಕು; ನಿರ್ದಿಷ್ಟ ರೀತಿಯ ವಸ್ತ್ರಗಳ ಧರಿಸುವಿಕೆ; ಡೋಲಿನ ಮೇಲೆ ಬಿಳಿ ಬಟ್ಟೆ ಹಾಕುವುದು; ವಾಲಗಕ್ಕೆ ಮಲ್ಲಿಗೆ ಸುತ್ತುವುದು; ಮದುವೆ ಮನೆಯಲ್ಲಿ ಹನ್ನೆರಡು ಕಲಶ, ಹನ್ನೆರಡು ಕಂಬ, ಹನ್ನೆರಡು ಕುಂಭ ಇಡುವುದು; ಕೆಲವು ನಿರ್ದಿಷ್ಟ ಬೀದಿಗಳಲ್ಲಿ ಕುದುರೆ ಮೇಲೆ ಮದುವೆ ಮೆರವಣಿಗೆ ಬರುವುದು; ಮುಂತಾದ ಕುಲ ವಿಶಿಷ್ಟ ಚಹರೆಗಳಿಗಾಗಿ, ಕುಲ ಸಂಕೇತಗಳಿಗಾಗಿ ಹೆಚ್ಚಿನ ಜಗಳಗಳಾಗಿರುವುದನ್ನು ಗುರುತಿಸಲಾಗಿದೆ.

ಇದಲ್ಲದೆ, ಜಯರೇಖೆಗಳು ಕಟ್ಟಿಕೊಡುವ ಮೂವರು ವಿಭಿನ್ನ ಮಹಿಳೆಯರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಜಿರ್ಲೆ ಮಲ್ಲಮ್ಮ ಎಂಬ ಮಹಿಳೆಯಿಂದಲೇ ಬರೆಯಲಾದ ಕಾವೇರಿ ಎಂಬ ಹೆಣ್ಣಿನ ಸುತ್ತಲೂ ಪರಿಭ್ರಮಿಸುವ, ತನ್ನ ಪ್ರತಿಷ್ಠೆ ಪರಾಕ್ರಮಗಳನ್ನು ಮೆರೆಸುವುದಕ್ಕಾಗಿ ಹೆಣ್ಣನ್ನು ವಸ್ತುವಾಗಿ ಪರಿಗ್ರಹಿಸುವ, ಅಮ್ಮಯ್ಯನ ಮೊಮ್ಮಗಳಾದ 'ಅನಾಮಧೇಯ' ಹೆಣ್ಣು ಮಗಳಿಗೆ ಜಯರೇಖೆ ನೀಡಿದ ಕಥನವನ್ನೊಳಗೊಂಡ ಪರಸ್ಪರ ತದ್ವಿರುದ್ಧ ನೆಲೆಗಳಲ್ಲಿ ನಿಲ್ಲುವ ಮೂರು ಜಯರೇಖೆಗಳ ಹಿನ್ನೆಲೆಯಲ್ಲಿ ಹೆಣ್ಣಿನ ನೆಲೆಗಳನ್ನು ಗುರುತಿಸಲಾಗಿದೆ. ಶಿಷ್ಟ ಶಾಸನಗಳ ಪ್ರತಿಷ್ಠಿತ ಹೆಣ್ಣು ಮಕ್ಕಳ ಚಿತ್ರಣಕ್ಕಿಂತ ಭಿನ್ನವಾಗಿ ಸಮಕಾಲೀನ ಸಮಾಜದ ಹೆಣ್ಣುಮಕ್ಕಳ ನೈಜ ಚಿತ್ರಣವನ್ನು ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ–೫: ಜಯರೇಖೆ ಶಾಸನಗಳ ಧಾರ್ಮಿಕ ಲೋಕದೃಷ್ಟಿ**

ಆರಂಭದ ಜಯರೇಖೆಗಳು ಧಾರ್ಮಿಕ ಸಂಘರ್ಷದ ಫಲಿತಗಳಾಗಿ ಮೂಡಿಬಂದಿವೆ. ಅಬ್ಬಲೂರಿನ ಶಾಸನ, ಬುಕ್ಕರಾಯನ ಶಾಸನ, ಲಕ್ಷ್ಮೇಶ್ವರದ ಶಾಸನಗಳನ್ನು ಧಾರ್ಮಿಕ ಪರಿಪ್ರೇಕ್ಷ್ಯದ ಒಳಗಿಟ್ಟು ನೋಡಿದಾಗ, ಜಯರೇಖೆಗಳಿಗೂ, ಧರ್ಮಗಳಿಗೂ ಇರುವ ಸಂಬಂಧವೇನು? ಕರ್ನಾಟಕದಲ್ಲಿ ಜಯರೇಖೆಗಳ ರಚನೆಗೆ ಧರ್ಮಗಳು ಹೇಗೆ ಭೂಮಿಕೆ ಒದಗಿಸಿವೆ? ಯಾವ ರೀತಿಯ ಪ್ರಚೋದನೆಗಳನ್ನು ಒದಗಿಸಿವೆ. ಹಾಗಿದ್ದರೆ, ಧಾರ್ಮಿಕ ಸಂಘರ್ಷದ ಫಲಿತಗಳಾಗಿ ಜಯರೇಖೆಗಳು

ಹುಟ್ಟಿಕೊಂಡಿವೆಯೇ? ಅಂಥ ಸಂಘರ್ಷಗಳ ಹಿಂದೆ ಮನೆ ಮಾಡಿರುವ ಮನೋಧರ್ಮಗಳೇನು? ಚಾರಿತ್ರಿಕ ವಾಸ್ತವಗಳೇನು? ಮುಂತಾದ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಈ ಹಿನ್ನಲೆಯಲ್ಲಿ ಕರ್ನಾಟಕದಲ್ಲಿ ಧರ್ಮಗಳಲ್ಲಿನ ಏಳು-ಬೀಳುಗಳ ಬಗ್ಗೆ ಸ್ಥೂಲವಾಗಿ ಚರ್ಚಿಸಲಾಗಿದೆ.

ಮಧ್ಯಕಾಲೀನ ಕರ್ನಾಟಕದ ರಾಜಮಾನ್ಯತೆ ಹಾಗೆಯೇ ಜನಮಾನ್ಯತೆ ಪಡೆದ ಮತ-ಧರ್ಮಗಳು ತಮ್ಮ ಅಸ್ತಿತ್ವ ಸ್ಥಾಪಿಸಿಕೊಳ್ಳುವುದಕ್ಕೋ ಅಥವಾ ಉಳಿಸಿಕೊಳ್ಳುವುದಕ್ಕೋ ಅಥವಾ ಏಕಸ್ವಾಮ್ಯತೆ ಸಾಧಿಸುವುದಕ್ಕೋ ಪ್ರಜ್ಞಾಪೂರ್ವಕವಾಗಿ ಅನ್ಯಾಕ್ರಮಣಗಳಿಗೆ ಅಥವಾ ಅತಿಕ್ರಮಣಗಳಿಗೆ ಮುಂದಾದುದು ಶಾಸನಗಳಲ್ಲಿ ಕಾಣಬಹುದು. ಕೆಲವೊಮ್ಮೆ ಇಂಥ ಅನ್ಯಾಕ್ರಮಣಗಳಿಗೆ ಆರಾಧನಾ ನೆಲೆಗಳಾಗಿದ್ದ ದೇವಾಲಯಗಳು ಸಾಂಸ್ಥಿಕ ಸ್ವರೂಪವನ್ನು ಪಡೆದು ಹೇಗೆ ವೇದಿಕೆಯನ್ನು ಕಲ್ಪಿಸಿಕೊಟ್ಟವು ಎಂಬುದನ್ನುಚರ್ಚಿಸಲಾಗಿದೆ.

ಕರ್ನಾಟಕದಲ್ಲಿ ಧಾರ್ಮಿಕ ಸಂಘರ್ಷದ ಬಗ್ಗೆ ವ್ಯಾಖ್ಯಾನಿಸುವಾಗ ಅಬ್ಬಲೂರಿನ ಜಯಪತ್ರವನ್ನು ಧಾರ್ಮಿಕ ಸಂಘರ್ಷದ ಫಲಿತವೆಂಬಂತೆಯೇ ಇಲ್ಲಿಯವರೆಗೆ ವ್ಯಾಖ್ಯಾನಿಸಲಾಗಿದೆ. ಕರ್ನಾಟಕದಲ್ಲಿನ ಆರಂಭಿಕ ಜಯರೇಖೆಗಳ ವಿಷಯ, ಕಥಾಹಂದರ, ಅಂತಹ ವ್ಯಾಖ್ಯಾನಗಳನ್ನು ಪುಷ್ಟೀಕರಿಸುತ್ತವೆ. ಈ ಹಿನ್ನಲೆಯಲ್ಲಿ ಧಾರ್ಮಿಕ ಸಂಘರ್ಷದ ನೆಲೆಗಳನ್ನು ಮತ್ತು ಕಾರಣವಾಗಿರಬಹುದಾದಂತಹ ಆಯಾಮಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಧರ್ಮ ಸಂಘರ್ಷಕ್ಕೆ ಹತ್ತಾರು ಆಯಾಮಗಳಿವೆ. ಅವುಗಳನ್ನೆಲ್ಲ ವಿಭಿನ್ನ ತಾತ್ವಿಕ ಹಿನ್ನೆಲೆಯಲ್ಲಿ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಬಹುದಾಗಿದೆ. ಜಯರೇಖೆಗಳ ಹಿನ್ನಲೆಯಲ್ಲಿ ಮಧ್ಯಕಾಲೀನ ಕರ್ನಾಟಕದಲ್ಲಿ ನಡೆದ ಸಂಘರ್ಷಗಳಿಗೆ ಪ್ರಧಾನವಾಗಿ (i) ರಾಜಾಶ್ರಯ ಮತ್ತು ಅಧಿಕಾರ; (ii) ಧರ್ಮಗಳ ಸಾಂಘೀಕರಣ ಪ್ರಕ್ರಿಯೆ; (iii) ಉಗ್ರ ಶೈವಭಕ್ತಿ ಮತ್ತು (iv) ಧರ್ಮ ಸಂಘರ್ಷ ಮತ್ತು ಪ್ರಭುತ್ವ- ಕಾರಣವೆಂದು ಗುರುತಿಸಿ ಚರ್ಚಿಸಲಾಗಿದೆ.

ಕರ್ನಾಟಕದಲ್ಲಿ ಧರ್ಮ-ಧರ್ಮಗಳ ನಡುವೆ ಸಂಘರ್ಷಗಳು ಉದ್ಭವವಾದಾಗ, ಅಂಥ ಸಂಘರ್ಷಗಳಿಗೆ ಮುಖಾಮುಖಿಯಾಗುತ್ತಲೇ ಅವುಗಳೊಂದಿಗೆ ಅನುಸಂಧಾನ ಮಾಡಿಕೊಂಡಿರುವುದನ್ನು ಹಾಗೀ ಅನುಸಂಧಾನ ಏರ್ಪಟ್ಟಿರುವುದನ್ನು ಕಾಣಬಹುದಾಗಿದೆ. ಮಧ್ಯಕಾಲೀನ ಕರ್ನಾಟಕದಲ್ಲಿ ಪರಸ್ಪರ ಮತದರ್ಶನಗಳ ನಡುವೆ ಆಗಿರುವ ಹೊಂದಾಣಿಕೆ, ಅನುಸಂಧಾನದ ಪ್ರಕ್ರಿಯೆಗಳನ್ನು ಜಯರೇಖೆಗಳ ಹಿನ್ನೆಲೆಯಲ್ಲಿ (i) ಭೂದಾನ ಸ್ವೀಕಾರ; (ii) ಬಸದಿಗಳ ನಿರ್ಮಾಣ; (iii) ಪೂಜಾ ವಿಧಾನದಲ್ಲಿ ಬದಲಾವಣೆ; (iv) ಮತಾಂತರ ಮುಂತಾದ ಕ್ರಿಯೆಗಳ ಮೂಲಕ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಇದಲ್ಲದೆ, ಕರ್ನಾಟಕದ ಆಳರಸರು ಅನುಸರಿಸಿದ ಧಾರ್ಮಿಕ ಸಮನ್ವಯತೆಯ ಸ್ವರೂಪವನ್ನು ಹರಿಹರಪುರ ಸ್ಥಾಪನೆ/ಹರಿಹರ ದೇವಾಲಯಗಳ ರಚನೆ, ಬಹುಕೂಟ ದೇವಾಲಯಗಳ ನಿರ್ಮಾಣ, ಬುದ್ಧ ಮತ್ತು ಜಿನನನ್ನು ವೈದಿಕ ದೇವತೆಗಳ ಅವತಾರವಾಗಿ ಪರಿಗ್ರಹಿಸುವುದು, ಪ್ರಭುತ್ವವರ್ಗದಿಂದ ಜಿನಾಲಯಗಳ ನಿರ್ಮಾಣ ಮತ್ತು ಪೋಷಣೆ ಮುಂತಾದ ಅಂಶಗಳ ಹಿನ್ನೆಲೆಯಲ್ಲಿ 'ಸಾಮರಸ್ಯ'ವನ್ನು ಸಂಪೂರ್ಣವಾಗಿ ನಿರಾಕರಿಸದೆ, ಸಾಮರಸ್ಯದ ಹಿಂದಿರುವ ತಾತ್ವಿಕ ಕಾರಣಗಳನ್ನು, ಚಾರಿತ್ರಿಕ ಒತ್ತಡಗಳನ್ನು ವಿಶ್ಲೇಷಿಸಲಾಗಿದೆ. ಇಂತಹ ಧರ್ಮಗಳೆಡೆಗೆ ಪ್ರಭುತ್ವಕ್ಕಿದ್ದ ಉದಾರವಾದಿ ಮನೋಧರ್ಮವನ್ನು, ಮಾನವೀಯ ಅಂತಃಕರಣವನ್ನು ಅನಾವರಣಗೊಳಿಸುವ ಪ್ರಯತ್ನ ಮಾಡಲಾಗಿದೆ.

**ಅಧ್ಯಾಯ-೬: ಜಯರೇಖೆ ಶಾಸನಗಳಲ್ಲಿ ನ್ಯಾಯಲೋಕ**

ಪ್ರಾಚೀನ ಭಾರತದಲ್ಲಿ ಜಯರೇಖೆ ಶಾಸನಗಳಿಗೆ ಆಡಳಿತ ಘಟಕದಲ್ಲಿ ಶಾಸನದ ನಂತರ ಎರಡನೆಯ ಸ್ಥಾನ ನೀಡಲಾಗಿತ್ತು. ಶಾಸನಗಳು ಕಾರ್ಯಾಂಗದ ಪಾತ್ರ ನಿರ್ವಹಿಸಿದರೆ, ಜಯರೇಖೆಗಳು ಅಥವಾ ಜಯಪತ್ರಗಳು ನ್ಯಾಯಾಂಗದ ಪಾತ್ರವನ್ನು ವಹಿಸಿದ್ದರು. ಹೀಗಾಗಿ ಪ್ರಾಚೀನ ಭಾರತದ ಬಹುತೇಕ ಸ್ಮೃತಿಕಾರರು ಜಯಪತ್ರಗಳ ಬಗ್ಗೆ ಚರ್ಚಿಸಿದ್ದಾರೆ. ಅಲ್ಲದೆ, ಜಯಪತ್ರಗಳ ಹೊರತಾಗಿ ಪ್ರಾಚೀನ ಭಾರತದ ನ್ಯಾಯಿಕ ಇತಿಹಾಸ ರಚಿಸುವುದನ್ನು ಊಹಿಸಲೂ ಸಾಧ್ಯವಿಲ್ಲ. ಆ ಮಟ್ಟಿಗೆ ಜಯಪತ್ರ ಹಾಗೂ ನ್ಯಾಯವ್ಯವಸ್ಥೆಗೆ ಅವಿನಾಭಾವ ಸಂಬಂಧವಿದೆ.

ಪ್ರಸಕ್ತ ಅಧ್ಯಾಯದಲ್ಲಿ ಪ್ರಾಚೀನ ಸ್ಮೃತಿಕಾರರು ಜಯಪತ್ರಗಳಿಗೆ ನೀಡಿದ ವ್ಯಾಖ್ಯಾನ, ಲಕ್ಷಣ, ಸ್ವರೂಪಗಳ ಬಗ್ಗೆ ಚರ್ಚಿಸಲಾಗಿದೆ. ಇದಲ್ಲದೆ, ಕರ್ನಾಟಕದ ಸಂದರ್ಭದಲ್ಲಿ ಇವು ರೂಪುಗೊಂಡ ಬಗೆಯನ್ನು ಸಹ ಚರ್ಚಿಸಲಾಗಿದೆ.

ಭಾರತೀಯ ನ್ಯಾಯಿಕ ಇತಿಹಾಸದಲ್ಲಿ ಕೇವಲ ನ್ಯಾಯ ವಿತರಣಾ ವ್ಯವಸ್ಥೆಗೆ ಮಾತ್ರ ಸೀಮಿತವಾಗಿದ್ದ ಜಯಪತ್ರಗಳು ಕರ್ನಾಟಕದಲ್ಲಿ ತಾತ್ವಿಕ ಪಂಥಗಳಲ್ಲಿ ಗೆದ್ದಂತಹವರಿಗೆ ನೀಡಲಾಗಿದೆ. ನಂತರದ ಅವಧಿಯಲ್ಲಿ ಜಯರೇಖೆ, ಜಯಪಟ್ಟಿಕೆ, ಕಂಚಿಪತ್ರ, ಚಪ್ಪೋಡು, ಮುಂತಾದ ವಿಭಿನ್ನ ಹೆಸರುಗಳಿಂದ ಬೇರೆ ಬೇರೆ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಕರ್ನಾಟಕದ ತಳಸಮುದಾಯಗಳ ಬದುಕಿನ ಭಾಗವಾಗಿ ಹೇಗೆ ರೂಪುಗೊಂಡವೆಂಬುದರ ಬಗ್ಗೆ ಪ್ರತಿಪಾದಿಸಲಾಗಿದೆ.

ಕೆಲವು ಜಯರೇಖೆ ಶಾಸನಗಳನ್ನು ನ್ಯಾಯಿಕ ಪ್ರಕ್ರಿಯೆಯ ಚೌಕಟ್ಟಿನಲ್ಲಿ ವಿನ್ಯಾಸಗೊಳಿಸಿ, ಒಂದು ನ್ಯಾಯಾಂಗ ವ್ಯವಸ್ಥೆಯ ಮಾದರಿಯನ್ನೂ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಎಂದರೆ, ನ್ಯಾಯಾಂಗದ ಘಟಕಗಳಾದ ಮೊಕದ್ದಮೆ, ವಾದಿ-ಪ್ರತಿವಾದಿ, ಸಾಕ್ಷಿಗಳು/ಸಾಕ್ಷ್ಯಗಳು, ತೀರ್ಪು,

ಮುಂತಾದ ಅಂಶಗಳ ಹಿನ್ನೆಲೆಯಲ್ಲಿ ಜಯರೇಖೆಗಳಲ್ಲಿ ಅಡಕಗೊಂಡಿರುವ ನ್ಯಾಯ ಸ್ವರೂಪವನ್ನು ಪ್ರಪ್ರಥಮ ಬಾರಿಗೆ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಜಯರೇಖೆಗಳ ಹಿನ್ನೆಲೆಯಲ್ಲಿ ಸ್ಮೃತಿ ವ್ಯಾಖ್ಯಾನಗಳನ್ನನುಸರಿಸಿ ಕರ್ನಾಟಕದಲ್ಲಿ ಪ್ರಚಲಿತದಲ್ಲಿದ್ದ ದೇಶಾಚಾರ ಆಧರಿತ ನ್ಯಾಯ ವ್ಯವಸ್ಥೆಯನ್ನು, ಕುಲಾಚಾರ ಆಧರಿತ ನ್ಯಾಯ ವ್ಯವಸ್ಥೆಯನ್ನು ಹಾಗೂ ಪ್ರಭುತ್ವ ಪ್ರಾಯೋಜಿತ ನ್ಯಾಯ ವ್ಯವಸ್ಥೆಯ ಬಗ್ಗೆ ಮೊದಲ ಬಾರಿಕೆ ಚರ್ಚೆ ನಡೆಸಲಾಗಿದೆ.

ಕರ್ನಾಟಕದ ತಳಸಮುದಾಯಗಳ ನ್ಯಾಯ ಪ್ರಕ್ರಿಯೆಯಲ್ಲಿ ಬಳಸುತ್ತಿದ್ದ ನ್ಯಾಯ ನಿರ್ಣಯದ ಪ್ರಾಮಾಣ್ಯಗಳಾದ ಸಾಕ್ಷಿ, ಸಾಕ್ಷ್ಯ, ದಿವ್ಯಗಳ ಬಗ್ಗೆಯೂ ಪ್ರಸಕ್ತ ಅಧ್ಯಾಯದಲ್ಲಿ ವಿಸ್ತೃತವಾಗಿ ವಿವೇಚಿಸಲಾಗಿದೆ.

**ಅಧ್ಯಾಯ–೭: ಉಪಸಂಹಾರ**

ಏಳನೆಯ ಅಧ್ಯಾಯದಲ್ಲಿ ನನ್ನ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಕರ್ನಾಟಕದಲ್ಲಿ 'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ' ಕುರಿತ ಅಧ್ಯಯನ ಇದೇ ಪ್ರಥಮ ಪ್ರಯತ್ನವಾಗಿರುವುದರಿಂದ, ಇಡೀ ಸಂಪ್ರಬಂಧದ ಘಟಕವೇ ಒಂದು ಸಾಂಧ್ರವಾದ ಫಲಿತವಾಗುತ್ತದೆಂದು ಪರಿಭಾವಿಸಲಾಗಿದೆ. ಆದರೂ, ಅಧ್ಯಯನದ ಸಂದರ್ಭದಲ್ಲಿ ಕಂಡುಕೊಂಡ ಕೆಲವು ಫಲಿತಗಳನ್ನು ನೀಡಿರುತ್ತೇನೆ.

ಇದಲ್ಲದೆ, ನನ್ನ ಅಧ್ಯಯನದ ಪರಿಮಿತಿಯಲ್ಲಿಯೇ ಇನ್ನೂ ನಡೆಸಬೇಕಾದ ಹೊಸ ಹೊಸ ಸಂಶೋಧನೆಗಳ ಸಾಧ್ಯತೆಯನ್ನು ಸಹ ಚರ್ಚಿಸಲಾಗಿದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ 'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ' ಅಧ್ಯಯನವು ಕರ್ನಾಟಕದ ಮತ್ತು ದಕ್ಷಿಣ ಭಾರತದ ಶಾಸನ ಕ್ಷೇತ್ರ ಹಾಗೂ ತಳಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯಲ್ಲಿ ಮಹತ್ವದ ಮೊದಲ ಸಂಶೋಧನೆಯಾಗಿದೆ ಎಂಬುದು ಈ ಅಧ್ಯಯನಕಾರರ ಗ್ರಹಿಕೆಯಾಗಿದೆ.

**೭.೨ ಅಧ್ಯಯನದ ಫಲಿತಗಳು**

ಮೊದಲನೆಯದಾಗಿ ಜಯರೇಖೆಗಳ ವಿಷಯವನ್ನು ಪ್ರಪ್ರಥಮ ಬಾರಿಗೆ ಅಧ್ಯಯನ ನಡೆಸುತ್ತಿರುವುದರಿಂದ ಕರ್ನಾಟಕದ ಮಟ್ಟಿಗೆ ಹಲವಾರು ವಿಷಯಗಳನ್ನು ಇಲ್ಲಿ ಪ್ರಪ್ರಥಮ ಬಾರಿಗೆ ಹೇಳಲಾಗುತ್ತಿವೆ. ಹಾಗಾಗಿ ಸಂಪ್ರಬಂಧದ ಘಟಕವೇ ಒಂದು ಸಾಂಧ್ರವಾದ ಫಲಿತವೆಂದು ಭಾವಿಸಲಾಗಿದೆ. ಆ ದೃಷ್ಟಿಯಿಂದ ಇಲ್ಲಿ ಹೇಳಲಾದ ಎಲ್ಲಾ ವಿಷಯಗಳು ಹೊಸವೆಂದೇ ಈ

ಅಧ್ಯಯನಕಾರಳ ವಿನಮ್ರ ಗ್ರಹಿಕೆಯಾಗಿದೆ. ಆದರೂ ಅಧ್ಯಯನದಲ್ಲಿ ಸಂದರ್ಭದಲ್ಲಿ ಕಂಡು ಬಂದ ಫಲಿತಗಳನ್ನು ಇಲ್ಲಿ ಬಿಡಿ ಘಟಕಗಳಾಗಿ ನೀಡಲಾಗಿದೆ.

೧. ಕ್ರಿಪೂ. ಮೂರನೆಯ ಶತಮಾನದಿಂದಲೇ ಭಾರತದಲ್ಲಿ ಅಸ್ತಿತ್ವದಲ್ಲಿರುವ ಜಯರೇಖೆಗಳು, ಕರ್ನಾಟಕದಲ್ಲಿ ಕ್ರಿಶ. ಸು. ೧೨೦೦ರಲ್ಲಿ ಎಂದರೆ ಅವು ಅಸ್ತಿತ್ವಕ್ಕೆ ಬಂದ ೧೫೦೦ ವರ್ಷಗಳ ನಂತರ ಮೊದಲಿಗೆ ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಜಯರೇಖೆಗಳ ರಚನೆಗೆ ಕಾರಣವಾದ, ಪ್ರಚೋದಕವಾದ ತಾತ್ಕಾಲೀನ ಒತ್ತಡಗಳು ಏನಾಗಿದ್ದವು? ಅವು ಕಾಲಾನುಸಂಧಾನ ಮಾಡಿಕೊಂಡು ವಿವಿಧ ನಾಮಾಂತರಗಳನ್ನು ಪಡೆಯಲು ಕಾರಣಗಳೇನು? ಎಂಬುದನ್ನು ಶೋಧಿಸಲಾಗಿದೆ.

೨. ಜಯರೇಖೆಗಳನ್ನು ಈವರೆಗೆ ಸಾರ್ವತ್ರಿಕವಾಗಿ ಪ್ರಚಲಿತದಲ್ಲಿದ್ದ 'ಜಯಪತ್ರ' ಎಂಬ ಪ್ರಭೇದಕ್ಕಿಂತ ಭಿನ್ನವಾದ ಪರಿಕಲ್ಪನೆಗಳನ್ನು ಮೊದಲಿಗೆ ಗುರುತಿಸಿ, ವಿಶ್ಲೇಷಿಸಿ, ಅವುಗಳ ಚಾರಿತ್ರಿಕ ಒತ್ತಾಸೆಗಳನ್ನು ಪ್ರಥಮ ಭಾರಿಗೆ ಗುರುತಿಸಲಾಗಿದೆ.

೩. ಕ್ರಿಶ. ಹನ್ನೊಂದರಿಂದ ಹದಿಮೂರನೆಯ ಶತಮಾನ ಕರ್ನಾಟಕದಲ್ಲಿ ಜಯರೇಖೆಗಳು ರೂಪುಗೊಳ್ಳುವಿಕೆಯ ಕಾಲಾವಧಿಯಾಗಿತ್ತು ಹಾಗೂ ಕ್ರಿಶ. ಹದಿಮೂರನೆಯ ಶತಮಾನದಿಂದ ಹದಿನಾರನೆಯ ಶತಮಾನ ಅವುಗಳ ಸದೃಢೀಕರಣಗೊಳ್ಳುವ ಅವಧಿ ಎಂದು ಗುರುತಿಸಲಾಗಿದೆ.

೪. ಆರಂಭಿಕ ಜಯರೇಖೆಗಳು ಧಾರ್ಮಿಕ ಮೇಲಾಟ ಹಾಗೂ ಆರ್ಥಿಕ ಸವಲತ್ತುಗಳ ಆರ್ಜನೆಯ ಹೋರಾಟದ ಸಂಬಂಧದಲ್ಲಿ ರಚನೆಯಾಗಿದ್ದರೆ, ಹದಿನೈದನೆಯ ಶತಮಾನದ ನಂತರದ ಜಯರೇಖೆಗಳು ಸಮುದಾಯಗಳ ಜೀವನ್ಮುಖಿ ಹೋರಾಟದ ಸಂಕಥನಗಳಾಗಿರುವುದನ್ನು ಗುರುತಿಸಲಾಗಿದೆ.

೫. ಜಯರೇಖೆಗಳು ಸಮುದಾಯಗಳ ನೆಲೆಗೊಳ್ಳುವಿಕೆ, ಸ್ಥಿರಗೊಳ್ಳುವಿಕೆ ಮತ್ತು ಸಾಂಸ್ಕೃತಿಕ ಆಧಿಪತ್ಯ ಸ್ಥಾಪನೆಯ ಅರ್ಥಮುಖಿ ಆಶಯದೊಂದಿಗೆ ರಚನೆಯಾಗಿರುವುದನ್ನು ಗುರುತಿಸಲಾಗಿದೆ.

೬. ಜಯರೇಖೆಗಳು ಕರ್ನಾಟಕಕ್ಕೆ ವಿಶಿಷ್ಟವಾದ ಶಾಸನ ಪ್ರಕಾರವಾಗಿರುವುದನ್ನು ಕಂಡುಕೊಳ್ಳಲಾಗಿದೆ. ಇದರಿಂದಾಗಿ ಜಯರೇಖೆಗಳ ಬಗ್ಗೆ ಕರ್ನಾಟಕದಲ್ಲಿ ಅಷ್ಟೇ ಅಲ್ಲ, ಭಾರತದಲ್ಲಿಯೂ ವಿಸ್ತೃತ ಅಧ್ಯಯನಗಳು ನಡೆದಿಲ್ಲವೆಂಬುದನ್ನು ಗುರುತಿಸಲಾಗಿದೆ.

೭. ಗ್ರಾಮಸ್ಥಾಪನೆ ಕಾರ್ಯವು ವಲಸೆ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿ ಜಯಪತ್ರಗಳಲ್ಲಿ ಕಂಡುಬರುತ್ತದೆ. ಯಾವುವೋ ತಾತ್ವಿಕ ಅಥವಾ ಭೌತಿಕ ಕಾರಣಗಳಿಗಾಗಿ ವಲಸೆ ಬರುತ್ತಿದ್ದ ಸಮುದಾಯಗಳು ಕಾಡುಗಳನ್ನು ಕಡಿದು, ಗ್ರಾಮಸ್ಥಾಪನೆ ಮಾಡಿ ಗೌಡಿಕೆ ಪಡೆಯುತ್ತಿದ್ದರು. ಇನ್ನು ಕೆಲವು ಸಂದರ್ಭಗಳಲ್ಲಿ ದಾಳಿಗಳು ನಡೆದು ಗ್ರಾಮಗಳು ನಿರ್ಜನವಾದಾಗ ಮತ್ತೆ ಅವುಗಳನ್ನು

'ಆಬಾದು' ಮಾಡಿ ನೆಲೆಗೊಳ್ಳುವುದಕ್ಕೆ ಅಣಿಗೊಳಿಸಲಾಗುತ್ತಿದ್ದ ಅಂಶಗಳನ್ನು ಪ್ರಸಕ್ತ ಅಧ್ಯಯನದಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

೮. ಜಯಪತ್ರಗಳ ವಿಭಿನ್ನ ಮಾದರಿಗಳಾದ ಕಂಚಿಪತ್ರಗಳು, ಪಣಕಟ್ಟು ವ್ಯಾಜ್ಯಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದ್ದು, ಅವು ತಮಿಳುನಾಡಿನ ರಾಮಾನುಜಾಚಾರ್ಯ ಪರಂಪರೆಯ ಪ್ರಭಾವವಿರುವ ಕರ್ನಾಟಕದ ಭಾಗಗಳಲ್ಲಿ ಮಾತ್ರ ಇವು ಕಂಡುಬರುತ್ತವೆ.

೯. ಪಣವ್ಯಾಜ್ಯಗಳು ಕಂಚಿಯನ್ನು ಕೇಂದ್ರೀಕರಿಸಿಕೊಂಡು ತಮಿಳುನಾಡಿನಲ್ಲಿ ನಡೆದಿವೆ. ಪಣವ್ಯಾಜ್ಯಗಳ ಮೂಲ ಕಾರಣಗಳ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆಗಳು ನಡೆದಿವೆ. ನನ್ನ ಅಧ್ಯಯನದಲ್ಲಿ ದಕ್ಷಿಣ ಭಾರತದಾದ್ಯಂತ ಪ್ರಚಲಿತದಲ್ಲಿದ್ದಿರಬಹುದಾದ ಎಂಟು ಹಿಟ್ಟುಗಳು, ಹದಿನೆಂಟು ಪ್ರಕೃತಿ, ಜಾತಿ, ಕುಲಗಳು, ಸುಮಾರು ಒಂಭತ್ತು-ಹತ್ತನೆಯ ಶತಮಾನದ ವೇಳೆಗೆ ಚೋಳರಾಜ್ಯದಲ್ಲಿ ಲೋಹಗಳ ಮೇಲೆ ವಿಧಿಸಿದ ಸುಂಕದ ಸಂಬಂಧದಲ್ಲಿ ಉಂಟಾದ ಗಲಭೆಗಳಲ್ಲಿ ಎರಡು ಬಣಗಳಾಗಿ ಇಬ್ಬಾಗಗೊಂಡು ಪಣಕಟ್ಟು ಸಮಾಜ ರೂಪುಗೊಂಡಿರಬಹುದೆಂಬ ಆತ್ಯಂತಿಕ ಅಭಿಪ್ರಾಯಕ್ಕೆ ಬಂದಿರುತ್ತೇನೆ.

೧೦. ಅಲ್ಲದೆ, ಅವು ಕರ್ನಾಟಕದ ಉತ್ತರ ಭಾಗದಲ್ಲಿ ಆಯಗಾರ ವ್ಯವಸ್ಥೆಯ ಮೂಲಕ ಮುಂದುವರೆದರೆ, ದಕ್ಷಿಣ ಭಾಗದಲ್ಲಿ ಚೋಳರ ಆಕ್ರಮಣ, ತಮಿಳು ಅಧಿಕಾರಿಗಳ ವರ್ಗಾವಣೆ, ಕರ್ನಾಟಕಕ್ಕೆ ರಾಮಾನುಜರ ಆಗಮನ, ಶ್ರೀವೈಷ್ಣವ ಧರ್ಮದ ತಿರುಮಲೆ ತಾತಾಚಾರ್ಯರ ಪ್ರಭಾವದಿಂದ ಪಣಕಟ್ಟು ವ್ಯವಸ್ಥೆ ಕರ್ನಾಟಕಕ್ಕೆ ಪ್ರವೇಶಿಸಿತ್ತೆಂಬ ಸಂಗತಿಯನ್ನು ಮೊದಲ ಬಾರಿಗೆ ಗುರುತಿಸಲಾಗಿದೆ.

೧೧. ಪ್ರಾಚೀನ ಕರ್ನಾಟಕದ ನ್ಯಾಯ ವ್ಯವಸ್ಥೆಯ ಬಗ್ಗೆ ಈವರೆಗೆ ಸ್ಪಷ್ಟವಾದ ಚಿತ್ರಣ ದೊರೆತಿರಲಿಲ್ಲ. ಪ್ರಸ್ತುತ ಜಯರೇಖೆ ಶಾಸನಗಳ ಅಧ್ಯಯನದ ಮೂಲಕ ನ್ಯಾಯವ್ಯವಸ್ಥೆಯು ಕೇವಲ ದೇಶಾಚಾರ ವ್ಯವಸ್ಥೆಯ ಮೂಲಕ ಮಾತ್ರವಲ್ಲದೆ, ಕುಲಗುರುಗಳ ಮೂಲಕ ಕುಲಾಚಾರ ಪದ್ಧತಿಗಳಿಗನುಸಾರವಾಗಿ, ಕುಲಕಟ್ಟಳೆಗಳಿಗನುಸಾರವಾಗಿ ತೀರ್ಮಾನ ಮಾಡಲಾಗುತ್ತಿತ್ತೆಂಬ ಅಂಶವನ್ನು ಗುರುತಿಸಲಾಗಿದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ 'ಜಯರೇಖೆಗಳು: ಸಾಂಸ್ಕೃತಿಕ ಸಂಕಥನ' ಅಧ್ಯಯನವು ಕರ್ನಾಟಕದ ಮತ್ತು ದಕ್ಷಿಣ ಭಾರತದ ಶಾಸನ ಕ್ಷೇತ್ರ ಹಾಗೂ ಕರ್ನಾಟಕದ ತಳಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯಲ್ಲಿ ಹಾಗೂ ಕರ್ನಾಟಕದ ಶಾಸನಗಳ ಸಾಂಸ್ಕೃತಿಕ ಚರಿತ್ರೆಯ ವಿಮರ್ಶಾ ಕ್ಷೇತ್ರದಲ್ಲೂ ಮಹತ್ವದ ಮೊದಲ ಸಂಶೋಧನೆಯಾಗಿದೆ ಎಂಬುದು ನನ್ನ ಗ್ರಹಿಕೆಯಾಗಿದೆ.

## ೭.೩. ಅಧ್ಯಯನದ ಹೊಸ ಸಾಧ್ಯತೆಗಳು

ಜಯರೇಖೆಗಳ ಕುರಿತ ನನ್ನ ಅಧ್ಯಯನವು ಮೊದಲ ಪ್ರಯತ್ನವಾಗಿದ್ದು, ಇದು ಪರಿಪೂರ್ಣ ಅಧ್ಯಯನವೆಂದು ಹೇಳುವ ದ್ರಾಷ್ಟತನ ಇಲ್ಲ. ಹಾಗಾಗಿ ಇದೊಂದು ಅಪರಿಪೂರ್ಣ ಅಧ್ಯಯನವೆಂಬುದನ್ನು ನಮ್ರತೆಯಿಂದ ಒಪ್ಪಿಕೊಳ್ಳುತ್ತೇನೆ. ಹಾಗಾಗಿ ನನ್ನ ಅಧ್ಯಯನದ ಪ್ರತಿಯೊಂದು ಅಧ್ಯಾಯವನ್ನು ಒಂದೊಂದು ಪ್ರತ್ಯೇಕ ಘಟಕವನ್ನಾಗಿ ಪರಿಗ್ರಹಿಸಿ, ಅಧ್ಯಯನ ಮಾಡಲು ಅವಕಾಶಗಳಿವೆ. ಇದಲ್ಲದೆ, ಜಯರೇಖೆಗಳ ಹಿನ್ನೆಲೆಯಲ್ಲಿ ಈ ಮುಂದಿನ ವಿಷಯಗಳ ಬಗ್ಗೆ ಹೆಚ್ಚಿನ ಅಧ್ಯಯನಗಳನ್ನು ಕೈಗೊಳ್ಳಲು ಅವಕಾಶಗಳು ಮುಕ್ತವಾಗಿವೆ.

**ಭಾಷೆ–** ಜಯರೇಖೆಗಳು ಪ್ರಧಾನವಾಗಿ ಕನ್ನಡ ಭಾಷೆಯಲ್ಲಿ ಕಂಡುಬರುತ್ತವೆ. ಕುಲಕಟ್ಟಳೆಗಳನ್ನು, ಕುಲಾಚಾರಗಳನ್ನು ಒಳಗೊಂಡ ಜಯರೇಖೆಗಳು ವೈಯಕ್ತಿಕ ಸಂಗ್ರಹಾಗಾರಗಳಲ್ಲಿ ಕಾಲಾಂತರಗಳನ್ನು ದಾಟಿ ಬರುವಾಗ ಮತ್ತು ಅವುಗಳನ್ನು ನಕಲು ಮಾಡಿಕೊಳ್ಳುತ್ತಾ ಬಂದಾಗ, ಅವುಗಳ ಭಾಷೆಯೂ ಪ್ರಚಲಿತದಲ್ಲಿರುವ ಭಾಷಾ ಪ್ರಯೋಗಗಳಿಗನುಗುಣವಾಗಿ ಮಾರ್ಪಾಡುಗೊಂಡಿವೆ. ಅಲ್ಲದೆ, ವಸಾಹತು ಶಾಹಿ ಕಾಲಘಟ್ಟದಲ್ಲಿ ದಾಖಲಿಸಲ್ಪಟ್ಟ ಈ ಬರಹಗಳಲ್ಲಿ ಅಸಂಖ್ಯ ರಾಜಸ್ವ ಪದಗಳ ಸೇರ್ಪಡೆಯೂ ಆಗಿದೆ. ಆಂಧ್ರದ ಗಡಿಭಾಗಗಳಲ್ಲಿ ಕಂಡುಬರುವ ಜಯರೇಖೆಗಳ ಮಧ್ಯಭಾಗದಲ್ಲಿ ತೆಲುಗು ಭಾಷೆಯಲ್ಲಿಯೂ ವಿವರಗಳನ್ನು ದಾಖಲಿಸಲಾಗಿದೆ. ಕೆಲವು ಶಾಸನಗಳು ಕನ್ನಡ, ಸಂಸ್ಕೃತದಲ್ಲಿಯೂ ಇವೆ. ಈ ಹಿನ್ನೆಲೆಯಲ್ಲಿ ಕನ್ನಡ, ತೆಲುಗು, ಉರ್ದು, ಪರ್ಷಿಯನ್, ಸಂಸ್ಕೃತ ಕೆಲವೆಡೆ ಇಂಗ್ಲೀಷ್ ಭಾಷೆಗಳ ಪದಗಳನ್ನೊಳಗೊಂಡ ಸಂಕರಗೊಂಡ ಜಯರೇಖೆಗಳನ್ನು, ಅವುಗಳಿಗೆ ಪ್ರೇರಕವಾದ ಅಂಶಗಳ ಹಿನ್ನಲೆಯಲ್ಲಿ ಹಾಗೂ ಭಾಷಾವಿಜ್ಞಾನದ ದೃಷ್ಟಿಯಿಂದ ಅಧ್ಯಯನ ಮಾಡಲು ಅವಕಾಶವಿದೆ.

**ಅಖಿಲ ಭಾರತ ವ್ಯಾಪ್ತಿಯ ಅಧ್ಯಯನ–** ಜಯಪತ್ರ ಅಥವಾ ಜಯರೇಖೆ ಶಾಸನಗಳ ಅಧ್ಯಯನವನ್ನು ನನ್ನ ಗ್ರಹಿಕೆಯ ಮಟ್ಟಿಗೆ ಅಖಂಡ ಭಾರತದಲ್ಲಿ ಲಭ್ಯವಾಗುವ ಶಾಸನಗಳ ಹಿನ್ನೆಲೆಯಲ್ಲಿ ಮಾಡಿದಂತೆ ಕಂಡುಬರುವುದಿಲ್ಲ. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾರತವನ್ನು ಕೇಂದ್ರವಾಗಿರಿಸಿಕೊಂಡು ಅಥವಾ ಇಡೀ ಭಾರತದಾದ್ಯಂತ ದೊರೆಯುವ ಜಯಪತ್ರ ಶಾಸನಗಳನ್ನಾಧರಿಸಿ ಒಂದು ವಿಸ್ತೃತ ಅಧ್ಯಯನ ನಡೆಸಬಹುದಾಗಿದೆ.

**ಸಾಮುದಾಯಿಕ ಸಂಕಥನ–** ಜಯರೇಖೆಗಳಲ್ಲಿ ಅಡಕವಾಗಿರುವ ಪ್ರತಿಯೊಂದು ಸಮುದಾಯಗಳ ಬಗ್ಗೆಯೂ ಪ್ರತ್ಯೇಕವಾಗಿ ಸಾಂಸ್ಕೃತಿಕ ಅಧ್ಯಯನ ಕೈಗೊಳ್ಳಬಹುದಾಗಿದೆ ಅಥವಾ ಶಾಸನದಾಚೆಗಿನ ಇತರ ಶಿಸ್ತುಗಳ ವ್ಯಾಪ್ತಿಯಲ್ಲೂ ಎಂದರೆ ಮಾನವಶಾಸ್ತ್ರ, ಸಮಾಜಶಾಸ್ತ್ರದ ವ್ಯಾಪ್ತಿಯಲ್ಲೂ ಇವುಗಳ ಬಗ್ಗೆ ಅಧ್ಯಯನ ಮಾಡಬಹುದಾಗಿದೆ.

**ಕುಲಸಂಬಂಧೀ ಚಹರೆಗಳು, ಬಿರುದಾವಳಿಗಳ ಅಧ್ಯಯನ–** ಜಯರೇಖೆ ಶಾಸನಗಳಲ್ಲಿ ಬರುವ ಕೆಲವು ಕುಲಸಂಬಂಧಿ ಚಹರೆಗಳು, ಬಿರುದಾವಳಿಗಳು ಹಾಗೂ ಸಂಕೇತಗಳ ತಾಂತ್ರಿಕ ಹಾಗೂ ಪರಿಭಾಷಿಕ ಪದಗಳನ್ನು ಸಹ ಅಧ್ಯಯನಕ್ಕೊಳಪಡಿಸಬಹುದು. ಭಾಷೆಯಲ್ಲಿ ಒಂದು ಶಬ್ದ ಪರಿಭಾಷಿಕ ಪದವಾಗಿ ರೂಪುಗೊಳ್ಳಬೇಕಾದರೆ ಅದರ ಹಿನ್ನೆಲೆಯಲ್ಲಿ ಎಷ್ಟೋ ಕಾಲಗಳ ಸಾಂಸ್ಕೃತಿಕ ಅನುಭವ ಕೆಲಸ ಮಾಡಿರುತ್ತದೆ. ಹಾಗಾಗಿ ಇಲ್ಲಿನ ಪಾರಿಭಾಷಿಕ ಪದಗಳನ್ನು ಕ್ಷೇತ್ರಕಾರ್ಯ ಕೈಗೊಳ್ಳುವ ಮೂಲಕ ಹಾಗೂ ಆಚರಣೆಗಳ ಮುಖೇನ ಸಾಂಸ್ಕೃತಿಕವಾಗಿ ಅವುಗಳಿಗಿರುವ ಅರ್ಥವ್ಯಾಪ್ತಿಯನ್ನು ಗುರುತಿಸಬಹುದು.

ಒಟ್ಟಾರೆಯಾಗಿ ಹೇಳುವುದಾದರೆ, ಜಯರೇಖೆ ಶಾಸನಗಳ ಅಧ್ಯಯನವು, ಹಲವಾರು ಆಯಾಮಗಳಲ್ಲಿ ಸೂಕ್ಷ್ಮಾತಿಸೂಕ್ಷ್ಮ ಒಳನೋಟಗಳನ್ನು ಒದಗಿಸಿಕೊಡುತ್ತದೆ. ಕನ್ನಡ ಅಭಿವ್ಯಕ್ತಿ ಪರಂಪರೆಯಲ್ಲಿ ರಾಜಕೀಯ, ಸಂಸ್ಕೃತಿ, ಧಾರ್ಮಿಕತೆ, ಆರ್ಥಿಕ ಅಂಶಗಳು ಮತ್ತು ಸಾಮಾಜಿಕ ಚಲನಶೀಲತೆಯನ್ನು ಅಭಿವ್ಯಕ್ತಗೊಳಿಸಿರುವ ಬಗ್ಗೆ ಚರಿತ್ರೆಯನ್ನು ಮತ್ತೆ ಕಟ್ಟಿಕೊಡುವಲ್ಲಿ ಎಷ್ಟು ಪರಿಣಾಮಕಾರಿಯಾದ ಪಾತ್ರವನ್ನು ವಹಿಸಿವೆ ಎಂಬುದು ಜಯರೇಖೆ ಶಾಸನಗಳ ಅಧ್ಯಯನದಿಂದ ಕಂಡುಕೊಳ್ಳಬಹುದಾಗಿದೆ. ಜೊತೆಗೆ ಕರ್ನಾಟಕದ ಸಾಂಸ್ಕೃತಿಕ ಜಗತ್ತಿನ ನೆಲ ಪರಂಪರೆಯ ಅಭಿವ್ಯಕ್ತಿಯನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ ಹೊಸ ನಿರ್ವಚನವನ್ನು ಕಟ್ಟಿಕೊಳ್ಳುವ ಹಾಗೂ ಸಾಂಸ್ಕೃತಿಕ ಅಧ್ಯಯನದಲ್ಲಿ ಮಹತ್ತರವಾದ ಹೊಸ ದೃಷ್ಟಿಕೋನವೊಂದನ್ನು ಈ ಅಧ್ಯಯನದ ಮೂಲಕ ಸಾಧ್ಯವಾಗಿಸಲು ಪ್ರಯತ್ನಿಸಲಾಗಿದೆ.

* * *

# ಆಕರ ಗ್ರಂಥಸೂಚಿ


**(i) ಶಾಸನ ಸಂಪುಟಗಳು**

- ಆ್ಯನ್ಯುಯಲ್ ರಿಪೋರ್ಟ್ ಆನ್ (ಸೌತ್) ಇಂಡಿಯನ್ ಎಪಿಗ್ರಫಿ
- ಇಂಡಿಯನ್ ಆ್ಯಂಟಿಕ್ವೆರಿ ಸಂಪುಟಗಳು
- ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ ೧-೧೨: (ಸಂ) ರೈಸ್ ಬಿ.ಎಲ್, ಮೈಸೂರು ಪುರಾತತ್ತ್ವ ಇಲಾಖೆ
- ಎಪಿಗ್ರಾಫಿಯ ಕರ್ನಾಟಿಕ ಪರಿಷ್ಕೃತ ಸಂಪುಟಗಳು: ಮೈಸೂರು ವಿಶ್ವವಿದ್ಯಾನಿಲಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
- ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು: ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ, ನ್ಯೂ ಡೆಲ್ಲಿ
- ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
- ಕರ್ನಾಟಕ ಇನ್ಸ್ಕ್ರಿಪ್ಷನ್ಸ್, ಸಂಪುಟ ೧-೬
- ಮೈಸೂರು ಆರ್ಕಿಯಾಲಾಜಿಕಲ್ ಡಿಪಾರ್ಟ್‌ಮೆಂಟ್ ಆನ್ಯುಯಲ್ ರಿಪೋರ್ಟ್ಸ್,
- ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ ಸಂಪುಟಗಳು: ಗವರ್ನಮೆಂಟ್ ಆಫ್ ಇಂಡಿಯಾ, ಸೆಂಟ್ರಲ್ ಪಬ್ಲಿಕೇಷನ್ ಬ್ರಾಂಚ್, ಕೊಲ್ಕತ್ತಾ, ನವದೆಹಲಿ
- ಸೌತ್ ಇಂಡಿಯನ್ ಟೆಂಪಲ್ ಇನ್‌ಸ್ಕ್ರಿಪ್ಷನ್ಸ್, ಮದ್ರಾಸ್ ವಿಶ್ವವಿದ್ಯಾನಿಲಯ, ಮದ್ರಾಸ್

**(ii) ಕನ್ನಡ ಆಕರ ಗ್ರಂಥಗಳು:**

- ಅಣ್ಣಿಗೇರಿ ಎ.ಎಂ., ಶೇಷಶಾಸ್ತ್ರಿ ಆರ್ (ಸಂ): ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯
- ಅಪ್ಪಾಜಿ ಎಸ್. ಸಿಂಧೆ, ಚಾವಡೆ ಲೋಕೇಶ್ ಕೆ: ಗೋಸಂಗಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮
- ಆದಿನಾರಾಯಣ ಶಾಸ್ತ್ರಿ ಯಂ: ರಾಯಲಸೀಮ ತೆಲುಗು ಶಾಸನಾಲ ಸಾಂಸ್ಕೃತಿಕ ಅಧ್ಯಯನಂ, ಆದಿತ್ಯ ಪಬ್ಲಿಕೇಷನ್ಸ್, ಅನಂತಪುರಂ, ೧೯೯೫ (ತೆಲುಗು)

- ಉಪಾಧ್ಯ ಜಿ.ಎನ್, ದೇವರಕೊಂಡಾರೆಡ್ಡಿ (ಸಂ): ಮಹಾರಾಷ್ಟ್ರದ ಕನ್ನಡ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
- ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು (೮ ಸಂಪುಟಗಳು), ಬೆಂಗಳೂರು ೧೯೭೧–೧೯೯೪
- ಕಪಟರಾಳ ಕೃಷ್ಣರಾವ್: ಕರ್ನಾಟಕ ಸಂಸ್ಕೃತಿ ಸಂಶೋಧನೆ, ಉಷಾ ಸಾಹಿತ್ಯಮಾಲೆ, ಮೈಸೂರು, ೧೯೭೦
- ಕಲಬುರ್ಗಿ ಎಂ.ಎಂ, ರಾಮಭಟ್ಟ ಬಿ.ಎಸ್ (ಸಂ): ಕೆಳದಿ ಸಂಸ್ಥಾನದ ಸಾಂಸ್ಕೃತಿಕ ಅಧ್ಯಯನ, ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ೧೯೯೪
- ಕಲಬುರ್ಗಿ ಎಂ.ಎಂ (ಸಂ): ಹರಿಹರನ ರಗಳೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯
- ಕಲಬುರ್ಗಿ ಎಂ.ಎಂ (ಸಂ): ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮
- ಕಲಬುರ್ಗಿ ಎಂ.ಎಂ: ಸಂಸ್ಕೃತಿ–ವಿಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬
- ಕಲಬುರ್ಗಿ ಎಂ.ಎಂ: ಮಾರ್ಗ–೩, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೮
- ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂಪುಟ ೧, ಭಾಗ–೧, (ಅನು) ಎಸ್.ಕೆ. ರಾಮಚಂದ್ರರಾವ್, ಕೆ. ಕೃಷ್ಣಮೂರ್ತಿ: ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೨, ಮರುಮುದ್ರಣ
- ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂಪುಟ–೧, ಭಾಗ–೨, (ಅನು) ರಾಮಚಂದ್ರರಾವ್ ಎಸ್.ಕೆ, ಶಾರದಾ ಪ್ರಸಾದ್ ಎನ್.ಎಸ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೩
- ಕಾಣೆ ಪಿ.ವಿ: ಧರ್ಮಶಾಸ್ತ್ರದ ಇತಿಹಾಸ, ಸಂಪುಟ–೩, ಭಾಗ–೧, (ಅನು) ಎನ್. ಎಸ್. ಅನಂತರಂಗಾಚಾರ್, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೨
- ಕುಲಕರ್ಣಿ ಬಿ.ಎಸ್. (ಸಂ): ಸಮಯ ಪರೀಕ್ಷೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೫೮
- ಕೃಷ್ಣಮೂರ್ತಿ ಪಿ.ವಿ.: ಸುಗಟೂರು ವೀರಶೈವ ಅರಸುಮನೆತನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪

- ಕೃಷ್ಣಮೂರ್ತಿ ಪಿ.ವಿ ಮತ್ತು ಇತರರು (ಸಂ): ಗುಣಮಧುರ, ಡಾ॥ ದೇವರಕೊಂಡಾರೆಡ್ಡಿ ಅಭಿನಂದನಾ ಸಮಿತಿ, ಬೆಂಗಳೂರು-೨೦೧೦
- ಕೃಷ್ಣಾನಂದ ಕಾಮತ್: ನಾ ಕಂಡ ಕರ್ನಾಟಕ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲಿ, ಧಾರವಾಡ, ೨೦೦೮
- ಕೆಳದಿ ವೆಂಕಟೇಶ್ ಜೋಯಿಸ್: ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬
- ಕೇಶವನ್ ಪ್ರಸಾದ್ ಕೆ (ಸಂ): ಮಲೆ ಮಾದೇಶ್ವರ ಮಹಾಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭
- ಕೈದಾಳ ರಾಮಸ್ವಾಮಿ ಗಣೇಶ: ಶಾಸನ ಸರಸ್ವತಿ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, ೨೦೦೮
- ಕೋಟಗಾನಹಳ್ಳಿ ರಾಮಯ್ಯ: ಸಿಂದ್ ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೧೧
- ಗಂಗಾಧರ ದೈವಜ್ಞ: ಬುಡಕಟ್ಟು ಸಮಾಜ- ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦
- ಗಣೇಶ್ ಕೆ.ಆರ್, ಶೇಷಶಾಸ್ತ್ರಿ ಆರ್ (ಸಂ): ಆಂಧ್ರಪ್ರದೇಶದ ಕನ್ನಡ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
- ಗುಂಡಪ್ಪ ಡಿ.ವಿ.: ಡಿ.ವಿ.ಜಿ. ಕೃತಿ ಶ್ರೇಣಿ ಸಂ. ೬, ಜ್ಞಾಪಕ ಚಿತ್ರಶಾಲೆ-೨, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೫
- ಗುರುಲಿಂಗ ಕಾಪಸೆ (ಸಂ): ರಮ್ಯ ಜೀವನ-ಮಧುರಚೆನ್ನರ ಲೇಖನಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೩
- ಗೋಪಾಲ ಬಾ.ರಾ: ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೮೪
- ಚಂದ್ರಶೇಖರ್ (ಸಂ + ಹೊಸಗನ್ನಡ ಗದ್ಯಾನುವಾದ): ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೯
- ಚಂದ್ರಶೇಖರ ಕಂಬಾರ: ಕನ್ನಡ ಜಾನಪದ ವಿಶ್ವಕೋಶ, ಸಂ. ೧-೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫

- ಚಂದ್ರಶೇಖರ್ ಎಸ್, ಸುರೇಂದ್ರರಾವ್ ಬಿ. (ಸಂ): ಕರ್ನಾಟಕ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂ. ೧–೧೨, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೬
- ಚಕ್ಕರೆ ಶಿವಶಂಕರ್: ಗೊರವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
- ಚನ್ನಕ್ಕ ಎಲಿಗಾರ: ಕನ್ನಡ ಶಾಸನಗಳಲ್ಲಿ ಸ್ತ್ರೀ ಸಮಾಜ ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಹಂಪಿ, ೨೦೦೪
- ಚನ್ನಕ್ಕ ಪಾವಟೆ: ಕರ್ನಾಟಕ ಶಾಸನೋಕ್ತ ಮಹಿಳೆ, ಕರ್ನಾಟಕ ಇತಿಹಾಸ ಸಂಶೋಧನಾ ಮಂಡಲ, ಧಾರವಾಡ, ೨೦೦೮
- ಚಿಕ್ಕಣ್ಣ ಯೆಣ್ಣೆಕಟ್ಟೆ (ಸಂ): ರಾಮಧಾನ್ಯ ಚರಿತ್ರೆ, ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು, ೧೯೯೭
- ಚಿದಾನಂದಮೂರ್ತಿ ಎಂ: ಹೊಸತು ಹೊಸತು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨
- ಚಿದಾನಂದಮೂರ್ತಿ ಎಂ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೪
- ಚಿದಾನಂದಮೂರ್ತಿ ಎಂ: ಸಂಶೋಧನ ತರಂಗ, ಸರಸ ಸಾಹಿತ್ಯ ಪ್ರಕಾಶನ, ಮೈಸೂರು, ೧೯೬೬
- ಚಿದಾನಂದಮೂರ್ತಿ ಎಂ: ಸಂಶೋಧನ ತರಂಗ (ಭಾಗ–೨), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೦
- ಚಿದಾನಂದಮೂರ್ತಿ: ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೪
- ಚಿದಾನಂದಮೂರ್ತಿ ಎಂ: ಪೂರ್ಣ ಸೂರ್ಯಗ್ರಹಣ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧
- ಜಾನಕಲ್ ರಾಜಣ್ಣ ಎಂ: ದಕ್ಕಲಿಗ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮
- ಜ್ಞಾನಾನಂದ ಜಿ (ಸಂ): ನಿರಂಜನ ಕವಿ ವಿರಚಿತ ಕಂಚೀಪುರಾಣ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭
- ಜೀವಣ್ಣ ಮಸಳಿ: ಶ್ರೀ ಬಸವಣ್ಣವರ ಪೂರ್ವಾಶ್ರಮ, ವಿಶ್ವದರ್ಶನ ಪ್ರಕಾಶನ, ಬಾಗಲಕೋಟೆ, ೧೯೯೮

- ತಾರಾನಾಥ ಎನ್.ಎಸ್ (ಸಂ): ಶತಮಾನದ ಸಂಶೋಧನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧
- ದೇವರಕೊಂಡಾರೆಡ್ಡಿ, ಗಣೇಶ್ ಕೆ.ಆರ್ (ಸಂ): ಲಕ್ಷ್ಮೇಶ್ವರದ ಶಾಸನಗಳು, ಇನ್ಫೋಸಿಸ್ ಫೌಂಡೇಷನ್, ೨೦೧೪
- ದೇವರಕೊಂಡಾರೆಡ್ಡಿ, ಜಯಪ್ರಕಾಶ ಮಾವಿನಕುಳಿ (ಸಂ): ತುಳುನಾಡಿನ ಜೈನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪
- ದೇವರಕೊಂಡಾರೆಡ್ಡಿ: ಕರ್ನಾಟಕದ ಶಾಸನಗಳಲ್ಲಿ ಶಾಪಾಶಯಗಳು, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮
- ದೇವೀರಪ್ಪ ಎಚ್: ಶಿವಶರಣ ಸಂಪುಟ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೩
- ನರಸಿಂಹಶಾಸ್ತ್ರಿ ಕೆ.ಎಲ್. (ಸಂ + ಹೊಸಗನ್ನಡ ಗದ್ಯಾನುವಾದ): ಪಂಪ ಮಹಾಕವಿ ವಿರಚಿತ ಆದಿಪುರಾಣಂ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯
- ನಾಗರಾಜ್ ಡಿ.ಆರ್: ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೧೦
- ನಾಗರಾಜ ಎಂ.ಜಿ: ಕೆಂಬಟ್ಟೆ ಹೊಲೆಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು, ೧೯೯೩
- ನಾಗೇಗೌಡ ಎಚ್ ಎಲ್ (ಸಂ): ಪ್ರವಾಸಿ ಕಂಡ ಇಂಡಿಯಾ, ಸಂ.೧, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೫
- ನಾಗೇಗೌಡ ಎಚ್.ಎಲ್: ಪ್ರವಾಸಿ ಕಂಡ ಇಂಡಿಯಾ, ಸಂ.೨, ಮೈಸೂರು ವಿಶ್ವವಿದ್ಯಾಲಯ, ೧೯೬೬
- ನಾಯಕ್ ಎಸ್.ಆರ್: ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
- ನಾರಾಯಣ ಪಿ.ವಿ: ಕನ್ನಡ ಚಂಪೂ ನುಡಿಗನ್ನಡಿ, ಸಪ್ನಬುಕ್ ಹೌಸ್, ಬೆಂಗಳೂರು, ೨೦೧೧
- ನಿಂಗಪ್ಪ ಮುದೇನೂರು: ಜನಪದ ಮಹಾಕಾವ್ಯಗಳಲ್ಲಿ ಸಾಂಸ್ಕೃತಿಕ ವೀರರು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪
- ಪಣೀಂದಂದೇವ್, ಇಶಿತ ಬ್ಯಾನರ್ಜಿ, ಸೌರಭ್ ದುಬೆ: ದಾರು ಪ್ರತಿಮಾ ನ ಪೂಜಿವೇ, (ಅನು) ರಾಜಶೇಖರ್ ಜಿ, ಅಕ್ಷರ ಪ್ರಕಾಶನ, ೧೯೯೩

- ಪರಮಶಿವಮೂರ್ತಿ ಡಿ.ವಿ. (ಸಂ): ಪ್ರೌಢದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭
- ಪರಮಶಿವಮೂರ್ತಿ ಡಿ.ವಿ. (ಸಂ): ಕೃಷ್ಣದೇವರಾಯನ ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦
- ಪರಮಶಿವಯ್ಯ ಜೀ.ಶಂ: ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಸಂಪ್ರದಾಯಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯
- ಪಾಪಣ್ಣ ನಂಜಪ್ಪ ಕಾಯಂಗಡಿ: ಶ್ರೀ ಯಾಗಕ್ಷತ್ರಿಯ ಸಾಧುಶೆಟ್ಟರ ಚರಿತ್ರೆ, ಮಾಡೆಲ್ ಮುದ್ರಾಕ್ಷರ ಶಾಲಾ, ಬೆಂಗಳೂರು, ೧೯೩೦
- ಪುಟ್ಟಯ್ಯ ಎಂ: ಕುಂಚಿಟಗರ ಸಮಾಜದ ಚರಿತ್ರೆ, ಬೆಂಗಳೂರು, ೨೦೦೨
- ಪುಟ್ಟಯ್ಯ ಬಿ.ಎಂ (ಸಂ): ವಡ್ಡಾರಾಧನೆ- ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
- ಪುರುಷೋತ್ತಮ ಬಿಳಿಮಲೆ: ದಲಿತ ಜಗತ್ತು, ಹೊಸ ದಿಕ್ಕು ಪ್ರಕಾಶನ, ಬೆಂಗಳೂರು, ೧೯೮೯
- ಬಸವರಾಜ ಕಲ್ಗುಡಿ: ಅನುಭಾವ-ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ (ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ೧೯೯೭
- ಬಸವರಾಜ ಕಲ್ಗುಡಿ: ನಕ್ಷೆ-ನಕ್ಷತ್ರ, ಅಭಿನವ, ಬೆಂಗಳೂರು ೨೦೧೮
- ಬಸವರಾಜ ಕುಂಚೂರು: ಕುಂಬಾರ ಜನಾಂಗ, ಶ್ರೀ ಚಕ್ರ ಪ್ರಕಾಶನ, ದಾವಣಗೆರೆ, ೨೦೦೩
- ಬಸವರಾಜ ಸಬರದ: ವಚನಕಾರರು ಮತ್ತು ದಲಿತ ಸಂವೇದನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪
- ಬಸವಾರಾಧ್ಯ ಎನ್ (ಸಂ): ಶಾಂತನಿರಂಜನ ವಿರಚಿತ ಅಬ್ಬಲೂರು ಚರಿತ್ರೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೩
- ಬೋರಟ್ಟಿ ವಿಜಯಕುಮಾರ್: ಹಿರಿಯರ ಹಿರಿತನ ಇಂದೇನಾಯಿತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧
- ಬೋರಲಿಂಗಯ್ಯ ಹೀ.ಚಿ: ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು, ೨೦೦೧
- ಮಂಜುನಾಥ ಎಂ.ಜಿ (ಸಂ): ಯಲಹಂಕ ನಾಡಪ್ರಭುಗಳ ಶಾಸನಸಂಪುಟ, ಬೆಂಗಳೂರು ವಿಶ್ವವಿದ್ಯಾಲಯ, ೨೦೦೬
- ಮಂಜುನಾಥ್ ಸಿ.ಯು: ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ಚಿತ್ಕಲಾ ಪ್ರಕಾಶನ, ಕುಪ್ಪಂ, ೨೦೧೨

- ಮಲ್ಲಿಕಾರ್ಜುನ ಬಿ ಮಾನ್ಪಡೆ: ಕೊರಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮
- ಮಲ್ಲೇಪುರಂ ಜಿ ವೆಂಕಟೇಶ (ಸಂ): ಶಂಬಾ ಕೃತಿ ಸಂಪುಟ, ಸಂ. ೧–೬, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೯
- ಮಹದೇವ ಶಂಕರಪುರ: ಮಲೆಯ ಮಾದಯ್ಯನ ಸಾಂಸ್ಕೃತಿಕ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧
- ಮುರಿಗೆಪ್ಪ ಎ (ಪ್ರ.ಸಂ): ದಕ್ಷಿಣ ಭಾರತೀಯ ಜಾನಪದ ಕೋಶ–ಸಂ. ೧, ೨, ಕನ್ನಡ ವಿಶ್ವವಿದ್ಯಾಲಯ, ೨೦೧೧
- ಮೋಹನ್ ಕೃಷ್ಣ ರೈ: ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪
- ಮೋಹನ್‌ರಾಂ. ಎನ್.ಕೆ: ದಲಿತರ ದೇವಸ್ಥಾನ ಪ್ರವೇಶದ ಸಾವಿರ ವರ್ಷ: ದಲಿತರು ಮರೆತ ರಾಮಾನುಜ, ಐಬಿಎಚ್ ಪ್ರಕಾಶನ, ಬೆಂಗಳೂರು, ೨೦೧೭
- ಯೋಗೀಶ್ವರಪ್ಪ ಡಿ.ಎನ್: ನಾಯಕತನ ಪದ್ಧತಿ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೬
- ರಹಮತ್ ತರೀಕೆರೆ: ಪ್ರತಿ ಸಂಸ್ಕೃತಿ, ಅಭಿನವ, ಬೆಂಗಳೂರು, ೨೦೧೩
- ರಹಮತ್ ತರೀಕೆರೆ: ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮
- ರಾಜಾರಾಮ ಹೆಗಡೆ: ಲೌಕಿಕ–ಅಲೌಕಿಕ, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ೨೦೦೧
- ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್ (ಸಂ): ಮಲೆ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
- ರಾಮಚಂದ್ರನ್ ಸಿ.ಎನ್: ಆಶಯ–ಆಕೃತಿ, ಅಭಿನವ, ಬೆಂಗಳೂರು, ೧೯೯೫
- ರಾಮಚಂದ್ರನ್ ಸಿ.ಎನ್: ಹೊಸ ಮಡಿಯ ಮೇಲೆ ಚದುರಂಗ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦
- ರಾಮಚಂದ್ರನ್ ಸಿ.ಎನ್: ವಸಾಹತೋತ್ತರ ಚಿಂತನೆ, ಅಂಕಿತ ಪ್ರಕಾಶನ, ಬೆಂಗಳೂರು, ೨೦೧೩
- ರಾಮೇಗೌಡ: ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು, ಚಿತ್ರಕೂಟ, ಮೈಸೂರು, ೧೯೯೨
- ಲಕ್ಷ್ಮಣ್ ತೆಲಗಾವಿ (ಸಂ): ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೇರಿ, ೨೦೦೮
- ಲಕ್ಷ್ಮೀದೇವಿ ಎಲ್: ಅವಿಭಜಿತ ಕೋಲಾರ ಜಿಲ್ಲೆಯ ಐತಿಹ್ಯಗಳು, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೇರಿ, ೨೦೧೧

- ಲಕ್ಷ್ಮೀಪತಿ ಕೋಲಾರ: ಮಾಸ್ಪೀಕರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
- ಲಲಿತಾಂಬ ಎನ್.ಆರ್: ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ, ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು, ೨೦೧೧
- ವರದರಾಜರಾವ್ ಜಿ. (ಸಂ): ಕುಮಾರರಾಮನ ಸಾಂಗತ್ಯಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೬
- ವಸಂತಕುಮಾರಿ: ಮೈಸೂರು ಅರಸರ ಕಾಲದಲ್ಲಿ ಜೈನರ ಸಮಾಜೋ-ಧಾರ್ಮಿಕ ಜೀವನ, ಜೈನ ಅಧ್ಯಯನ ಕೇಂದ್ರ, ಶ್ರವಣಬೆಳಗೊಳ, ೨೦೧೨
- ವಸು ಎಂ.ವಿ: ಮೌಖಿಕ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪
- ವಸು ಎಂ.ವಿ: ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧
- ವಸುಂಧರಾ ಫಿಲಿಯೋಜಾ: ಧಾರವಾಡ ಜಿಲ್ಲೆಯ ಕಾಳಾಮುಖ ಮತ್ತು ಪಾಶುಪತ ದೇವಾಲಯಗಳು, ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭
- ವಿಜಯ್ ಪೂಣಚ್ಚ ತಂಬಂಡ: ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯
- ವಿಜಯ್ ಪೂಣಚ್ಚ ತಂಬಂಡ: ಪಳಮೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.
- ವಿರೂಪಾಕ್ಷಿ ಪೂಜಾರಹಳ್ಳಿ: ಕರ್ನಾಟಕದಲ್ಲಿ ತಳವಾರಿಕೆ, ಕನ್ನಡ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
- ವಿವೇಕ ರೈ ಬಿ.ಎ: ಪ್ರವಾಸಿ ಕಂಡ ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫
- ವೀರಕ್ಯಾತಯ್ಯ ವಿ.ಡಿ: ಕುಂಚಿಟಿಗ ಜನಾಂಗ-ಇತಿಹಾಸ ಮತ್ತು ಸಂಪ್ರದಾಯಗಳು, ಅಖಿಲ ಕುಂಚಿಟಿಗರ ಮಹಾಮಂಡಲ, ಬೆಂಗಳೂರು, ೧೯೯೪
- ವೀರಣ್ಣ ಸಿ: ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ-೨, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೧
- ವೀರೇಶ ಬಡಿಗೇರ: ಶಾಸನಗಳಲ್ಲಿ ಆಯಗಾರಿಕೆ ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

- ವೆಂಕಟೇಶ ಇಂದ್ವಾಡಿ (ಸಂ): ದೇವಚಂದ್ರನ ರಾಜಾವಳಿ ಕಥೆ–ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩
- ಶಂಬಾ ಜೋಶಿ: ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ, ಮಾನವಧರ್ಮ ಪ್ರತಿಷ್ಠಾನ, ಧಾರವಾಡ, ೨೦೦೮
- ಶರ್ಮ ಆರ್.ಎಸ್. ಪ್ರಾಚೀನ ಭಾರತದಲ್ಲಿ ಶೂದ್ರರು {(ಅನು) ಶ್ರೀನಿವಾಸ ಮೂರ್ತಿ} ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨
- ಶಾಸ್ತ್ರಿ ಎ.ಕೆ (ಸಂ): ಶೃಂಗೇರಿ ಮಠದ ಕಡತಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೩
- ಶಾಂತಿನಾಥ ದಿಬ್ಬದ (ಸಂ): ಚಿದಾನಂದ ಕವಿಯ ಮುನಿವಂಶಾಭ್ಯುದಯ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭
- ಶಾಂತಿನಾಥ ದಿಬ್ಬದ: ಜೈನ ಸಂಸ್ಕೃತಿ ಸಮೀಕ್ಷೆ, ರತ್ನತ್ರಯ ಪ್ರಕಾಶನ, ಗುಲ್ಬರ್ಗಾ, ೨೦೦೭
- ಶಿವರುದ್ರಪ್ಪ ಜಿ.ಎಸ್ (ಪ್ರ.ಸಂ): ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೬
- ಶಿವಾನಂದ ಎಸ್. ವಿರಕ್ತ ಮಠ (ಸಂ): ಹರಿಹರನ ರಗಳೆಗಳು– ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪
- ಶ್ರೀಕಂಠಯ್ಯ ಕೆ: ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರಣ, ಗೀತಾ ಬುಕ್ ಹೌಸ್, ಬೆಂಗಳೂರು, ೧೯೮೩
- ಶ್ರೀನಿವಾಸರಾಘವಾಚಾರ್, ನರಸಿಂಹಾಚಾರ್ ಡಿ.ಎಲ್ (ಸಂ): ಪಂಪ ರಾಮಾಯಣ ಸಂಗ್ರಹ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೩೬
- ಶ್ರೀನಿವಾಸ ರಿತ್ತಿ (ಸಂ): ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶ, ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೦
- ಶ್ರೀನಿವಾಸ ಹಾವನೂರ (ಸಂ): ಮಧ್ಯಕಾಲೀನ ಕರ್ನಾಟಕ (ಪ್ರೊ. ಜಿ.ಎಸ್. ದೀಕ್ಷಿತ್ ಅವರ ಕನ್ನಡ ಬರಹಗಳು), ಪ್ರಸಾರಾಂಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು, ೨೦೦೮
- ಶ್ರೀವತ್ಸ, ಅನಂತಪದ್ಮನಾಭನ್ (ಸಂ): ಆಸ್ವಾದ (ಪ್ರೊ. ಎಂ.ವಿ. ಸೀತಾರಾಮಯ್ಯ ಅಭಿನಂದನ ಗ್ರಂಥ), ಉದಯಭಾನು ಕಲಾ ಸಂಘ, ಬೆಂಗಳೂರು, ೧೯೮೩
- ಷೇಕ್ ಆಲಿ ಬಿ (ಪ್ರ.ಸಂ): ಕರ್ನಾಟಕ ಚರಿತ್ರೆ ಸಂ. ೧–೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮

- ಸಣ್ಣಯ್ಯ ಬಿ.ಎಸ್. (ಸಂ): ರಾಜಾವಳಿ ಕಥಾಸಾರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೮
- ಸದಾನಂದ ಕನವಳ್ಳಿ, ಕೆರಿಮನಿ ಸಿ.ವಿ.: ಪುಲಿಗೆರೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೦
- ಸದಾನಂದ ಕನವಳ್ಳಿ, ವೀರಣ್ಣ ರಾಜೂರ (ಸಂ): ಮಹಾಮಾರ್ಗ, ವೀರಶೈವ ಅಧ್ಯಯನ, ಅಕಾಡೆಮಿ, ಬೆಳಗಾವಿ, ೧೯೯೮
- ಸುರವರಮು ಪ್ರತಾಪರೆಡ್ಡಿ: ಆಂಧ್ರುಲ ಸಾಂಘಿಕ ಚರಿತ್ರೆ, ಸಾಹಿತ್ಯ ವೈಜಯಂತಿ ಪ್ರಚುರಣ, ಹೈದರಾಬಾದ್ (ತೆಲುಗು), ೧೯೮೨
- ಸುರೇಶ ನಾಗಲಮಡಿಕೆ: ಕನಕ ಸಾಹಿತ್ಯ ಅಧ್ಯಯನ, ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು, ೨೦೧೬.
- ಹರಿಲಾಲ್ ಕೆ. ಪವಾರ್: ಹೆಳವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩
- ಹಳ್ಳಿಕೇರಿ ಎಫ್.ಟಿ. (ಸಂ) ಹಾಲುಮತ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.


(iii) ಇಂಗ್ಲಿಷ್ ಆಕರ ಗ್ರಂಥಗಳು


- Amitav Acharya: Civilization in Embrace- Institute of South East Asian Studies, Singapore, 2013
- Arjun Appadurai: Worship and conflict under colonial rule, Orient Longman, 1981.
- Appadorai A: Economic conditions of Southern India, Vol. 2, University of Madras, Madras,1936
- Bakshi B.E (Ed): Early Aryans to Swaraj, Vol-3, Indian Education and Rajputs, Sarup and Sons, New Delhi, 2005
- Batia (Ed): Society, Law and Administration in Ancient India, Deep and Deep Publications, New Delhi, 2001
- Burton Stein: Peasant State and Society in Medieval South India, Oxford University Press, New Delhi, 1980

- Desai P.B: Jainism in South India and Some Jaina Epigraphs, Jaina Samskruti Samrakshana Sangha, Sholapur, 1957
- Edgar Thurston and Rangachari K: Castes and Tribes of Southern India Volumes, Asian Educational Service, New Delhi, 1987, Reprint
- Elizabeth Law bourn, Cornel Symes (Ed): Legal Encounters on the Medieval Globe, Are Humanities Press, 2016
- Francis Buchanan: A Journey From Madras, Through the Countries of Mysore, Canara and Malabar, Vol-I-IV: Asian Educational Services, New Delhi, 1988
- Gopal, B.R: Corpus of Kadamba inscriptions, Vo. 1, Kadamba Institute of Cultural Studies, Sirsi, 1985
- Gupta R.K. Bhakshi S.R (Ed): Studies in Indian History, Rajastan through ages, Sarup and Sons, New Delhi, 2008
- Gururajchar S: Some Aspects of Economic and Social Life in Karnataka, Mysore University, Mysore, 1974
- Hayavadana Rao C., Mysore Gazetter, 1927.
- Henry Davison Love: Indian Records Series, Vestiges of Old Madras (4 Volumes) (1040-1800), London, 1913
- Iyer L.K: The Mysore Tribes and Castes Volumes, Mittal Publication, Delhi, 1988
- Krishnaswamy A: The Tamil Country under Vijaynagar, Annamalai University, Annamalai Nagar, 1964
- Kuppuswamy G.R: Economic Conditions in Karnataka, Karnatak University, Dharwar, 1975
- Mahalingam T.V: The Administration and Social Life under Vijayanagar, University of Madras, Madras, 1940
- Mahesh Kumar Sharan: Court Procedure in Ancient India on the basis of Dharma Shastra Literatures: (Ed) Elizabeth Law Bourn, Cornel Symes
- Mittison Mins: The Warrior Merchants (Textile, Trade and Territory in South India, Cambridge University Press, 1984).

- Nanjundaiah H.V , Anantha Krishna Iyer,: The Mysore Tribes and Castes, University of Mysore, Mysore
- Nilakanta Sastri K.A: Colas, University of Madras, Madras, 2000
- Nilakanta Sastri K.A: A History of South India, Oxford University Press, Madras, 1991
- Rama Jois: Legal and Constitutional History of India, Universal Law Publishing Company, New Delhi, 2015
- Raman K.V: Sri Varadaraja Swamy Temple- Kanchi, A study of its History, Arts and Architecture, Abhinav Publication, New Delhi, 1975
- Ramaswami Ayyangar M.S, B. Seshagiri Rao,: Studies in South India Jainism, Sri Sadguru publication, 1982, Reprint
- Rice B L: Mysore : A Gazetteer compiled for Government, 1897
- Samaddar (Ed) : Sir Asutosh Memorial Volume, Patna, 1926
- Sarkar V.C.: Epochs in Hindu Legal History, Vishveshvaranand Vedic Research Institute, 1958
- Sircar D.C: Indian Epigraphical glossary, Motilal Banarsidas Publications, Delhi, 1966
- Sircar D.C: Indian Epigraphy, Motilal Banarsidas Publications, Delhi, 1965
- Srinivasan C.R: Kanchipuram through the ages, Agamakala Prakashana, New Delhi, 1979
- Venkataraman K.R: Devi Kamakshi in Kanchi, Sri Vanivilas Press, Srirangam, 1973


## (iv) ಸಂಶೋಧನಾ ನಿಯತಕಾಲಿಕೆಗಳು


- ಇತಿಹಾಸ ದರ್ಶನ: ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು
- ಶಾಸನ ಅಧ್ಯಯನ: ಶಾಸನಶಾಸ್ತ್ರ ವಿಭಾಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

- ಕನ್ನಡ ಅಧ್ಯಯನ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
- ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
- ಚರಿತ್ರೆ ಅಧ್ಯಯನ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
- ಪ್ರೊಸೀಡಿಂಗ್ಸ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್
- ಪ್ರೋಸೀಡಿಂಗ್ಸ್ ಆಫ್ ದಿ ಕರ್ನಾಟಕ ಹಿಸ್ಟರಿ ಕಾಂಗ್ರೆಸ್, ಭಾರತಿ ಪ್ರಕಾಶನ, ಮೈಸೂರು
- ಪ್ರೊಸೀಡಿಂಗ್ಸ್ ಆಫ್ ದಿ ಸೌತ್ ಇಂಡಿಯನ್ ಹಿಸ್ಟರಿ ಕಾಂಗ್ರೆಸ್
- ದಿ ಕ್ವಾರ್ಟರ್ಲಿ ಜನರಲ್ ಆಫ್ ದಿ ಮಿಥಿಕ್ ಸೊಸೈಟಿ, ಮಿಥಿಕ್ ಸೊಸೈಟಿ, ಬೆಂಗಳೂರು
- ವಿಜಯನಗರ ಅಧ್ಯಯನ ಸಂಪುಟಗಳು: ಕರ್ನಾಟಕ ಪ್ರಾಚ್ಯವಸ್ತು, ಪರಂಪರೆ ಮತ್ತು ಪುರಾತತ್ವ ಇಲಾಖೆ
- ಲೋಚನ: ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
- ಸಾಧನೆ: ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
- ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
- ಜರ್ನಲ್ಸ್ ಆಫ್ ದಿ ಬಿಹಾರ್ ಅಂಡ್ ಒರಿಸ್ಸಾ ರಿಸರ್ಚ್ ಸೊಸೈಟಿ: (JBORS) ಬಿಹಾರ್ ಅಂಡ್ ಒರಿಸ್ಸಾ ರಿಸರ್ಚ್ ಸೊಸೈಟಿಸ್, ಪಟ್ನಾ
- ಜರ್ನಲ್ಸ್ ಆಫ್ ದಿ ಆಂಧ್ರ ಹಿಸ್ಟಾರಿಕಲ್ ರಿಸರ್ಚ್ ಸೊಸೈಟಿ, ಕಾಕಿನಾಡ (JAHRS)

*****